# ಶ್ರೀ ಮಧ್ವಾಚಾರ್ಯರು

( ಜೀವನಚರಿತ್ರೆ )



ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥



ಲೇಖಕ :
ಕೊರಟಿ ಶ್ರೀನಿವಾಸರಾವ್, ಎಂ.ಎ., ಬಿ.ಕಾಂ.



ಆನಂದನಿಲಯ ಪ್ರಕಾಶನ
ಸಮೀರಪುರ ವಿಸ್ತರಣ–ಚಾಮರಾಜಪೇಟೆ ಪಶ್ಚಿಮ
ಬೆಂಗಳೂರು–೫೬೦೦೧೮

*Name of the Book* : SRI MADHVACHARYA

*Author* : Korati Srinivasa Rao, M.A.,B.COM.

*Publisher* : Anandanilaya Prakashana
Samirapuram Extn., Chamarajpet West
Bangalore-560 018

*Year of Publication* : Aug.1982.

*Concession Paper for this book is made available by the Govt. of India*

*"This book is Published with the financial assistance of Tirumala Tirupati Devasthanam, Under the Scheme Aid to Publish Religious Books."*

**Price: Rs. 15-00**

*Printer* :
**M/s. Anandanilaya Printers**
No. 2, Vinayaka Extn., Gavipuram Road,
Kempegowdanagar,
BANGALORE - 19.

# ಕಂದುಕ ಸ್ತುತಿ

ಅಂಬರಗಂಗಾಚುಂಬಿತಪಾದಃ
ಪದತಲವಿದಲಿತಗುರುತರಶಕಟಃ ।
ಕಾಲಿಯನಾಗಕ್ಷ್ವೇಲನಿಹಂತಾ
ಸರಸಿಜನವದಲವಿಕಸಿತನಯನಃ ॥
ಕಾಲಘನಾಲೀಕರ್ಬುರಕಾಯಃ
ಶರಶತಶಕಲಿತಸುರರಿಪುನಿವಹಃ ।
ಸಂತತಮಸ್ಮಾನ್ ಪಾತು ಮುರಾರಿಃ
ಸತತಗಸಮಜವಖಗಪತಿನಿರತಃ ॥

(ಶ್ರೀಮದಾನಂದತೀರ್ಥಭಗವತ್ಪಾದರು)

ಆಕಾಶಗಂಗೆಯಿಂದ ವಂದಿತಪಾದಪದ್ಮವುಳ್ಳವನೂ (ದೇವಗಂಗಾ ಜನಕನೂ), ಬಾಲಪಾದದಿಂದ ನಾಶವಾದ ಭಾರವಾದ ಭಂಡಿ ರೂಪದಲ್ಲಿ ಬಂದಿದ್ದ ಶಕಟಾಸುರ ಮರ್ದನನೂ, ದರ್ಪದಿಂದ ಮೆರೆಯುತ್ತಿದ್ದ ಕಾಲೀಯಸರ್ಪದ ಹೆಡೆಯ ಮೇಲೆ ನರ್ತಿಸಿ ಅವನ ವಿಷವನ್ನು ನಾಶಪಡಿಸಿ ಗರ್ವವನ್ನು ಭಂಗಪಡಿಸಿದವನೂ, ಆಗ ತಾನೆ ಅರಳಿದ ಕಮಲ ಪುಷ್ಪದಂತೆ ವಿಶಾಲನೇತ್ರವುಳ್ಳವನೂ (ಪುಂಡರೀಕಾಕ್ಷನೂ) ನೀಲಮೇಘಶ್ಯಾಮವರ್ಣವಾದ ಶರೀರವುಳ್ಳವನೂ, ಸಾವಿರಾರು ಬಾಣಗಳಿಂದ ತುಂಡರಿಸಲ್ಪಟ್ಟ ಶರೀರಗಳುಳ್ಳ ದೈತ್ಯರ ಸಮೂಹವುಳ್ಳವನೂ, (ಅಸುರಾಂತಕನೂ) ವಾಯುವೇಗಕ್ಕೆ ಸಮಾನ ವಾದ ವೇಗವುಳ್ಳ ಗರುಡನಲ್ಲಿ ಆಸಕ್ತಿಉಳ್ಳವನೂ (ಗರುಡಾರೂಢನೂ) ಆದ ಮುರಧ್ವಂಸಿಯಾದ ಶ್ರೀಕೃಷ್ಣನು ನಮ್ಮನ್ನು ಸರ್ವದಾ ಕಾಪಾಡಲಿ.



# ಶ್ರೀಮಧ್ವಮುನಿಸ್ಮರಣೆ

ಶ್ರೀಮದಾನಂದತೀರ್ಥಾಖ್ಯಾ ಗುರೂನ್ವಿದ್ಯಾದಿವಾಕರಾನ್ ।
ವಂದೇ ಕುದೃಷ್ಟಿದುರ್ಭೋಧವ್ಯಾಸಸಿದ್ಧಾಂತದೀಪಕಾನ್ ॥

(ಪದ್ಮನಾಭತೀರ್ಥರು–ಸನ್ನ್ಯಾಯರತ್ನಾವಲಿ)

ಸೋಽಯಂ ಗುಣಾಮೃತಮಹಾಬ್ಧಿರಿಹಾವತೀರ್ಣ
ಆನಂದತೀರ್ಥಭಗವಾನ್ ಪರಮೋ ಗುರುರ್ಮೇ ।
ಯತ್ಪಾದಪದ್ಮ ರಜಸಾ ಶಿರಸಾಧೃತೇನ
ಸದ್ಯಃ ಪ್ರಯಾಂತಿ ಪರಿಶುದ್ಧಿಮಶೇಷಲೋಕಾಃ ॥

(ತ್ರಿವಿಕ್ರಮಪಂಡಿತಾಚಾರ್ಯರು- ತತ್ತ್ವಪ್ರದೀಪ)

ಶ್ರೀಶಪಾದಾಂಬುಜಾಸಕ್ತಃ ಕರುಣಾಪೂರ್ಣಶೀತಲಃ ।
ಮಧ್ವಾಖ್ಯೋ ಮರುದಂಶೋ ಮೇ ಸಂತಾಪಾನ್ ಹಂತು ಸಂತತಮ್ ॥

(ವ್ಯಾಸರಾಜರು— ತರ್ಕತಾಂಡವ)

ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥

(ವ್ಯಾಸರಾಜರು—ನ್ಯಾಯಾಮೃತ)

ಶ್ರೀಮದಾನಂದತೀರ್ಥಾರ್ಯಪಾದಪಂಕಜರೇಣವಃ ।
ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ ॥

(ವ್ಯಾಸರಾಜರು—ತಾತ್ಪರ್ಯಚಂದ್ರಿಕಾ)

ತಂ ಪಾಣಿಪಲ್ಲವಂ ಬಾಹುಶಾಖಂ ಸದ್ವಿಜಸೇವಿತಂ ।
ವಿದ್ಯಾಹಾಸಲತಾಪುಷ್ಪಂ ಮಧ್ವಕಲ್ಪದ್ರುಮಂ ಭಜೇ ॥

(ವಿಜಯೀಂದ್ರರು—ನ್ಯಾಯಾಮೃತಾಮೋದ)

ವಿಶ್ವಂ ಯಸ್ಯ ವಶೇ ಸರ್ವಮನಿಶಂ ಶಂಕರಾದಿಕಂ ।
ತಸ್ಯ ವ್ಯಾಯೋಸ್ತ್ರುತಿಯಾಂಶಮಾಶ್ರಯೇ ಶಮವಾಪ್ತಯೇ ॥

(ರಾಘವೇಂದ್ರರು— ಶ್ರೀಮನ್ನ್ಯಾಯಸುಧಾ ಪರಿಮಳ)

(ಗೌಡಗೆರಿ ಗೋಪಾಲಕೃಷ್ಣಾಚಾರ್ಯರ ಗ್ರಂಥಮಾಲಿಕಾ ಪ್ರಸರದಿಂದ)

# ಶ್ರೀಪೇಜಾವರ ಮಠದ ಶ್ರೀಪಾದಂಗಳವರ
# ಅನುಗ್ರಹಸಂದೇಶ

**H. H. Vishweshathirtha Swamiji,**
SRI PEJAVARA MATH
Jagadguru Madhwacharya Samsthana
UDUPI–576101, South Kanara.

ಜಗದ್ಗುರು ಶ್ರೀಮಧ್ವಾಚಾರ್ಯರು ಪ್ರಪಂಚಕ್ಕೆ ಸರಳವೂ ವ್ಯವಹಾರ್ಯವೂ ಆದ ಸತ್ಯಸಂದೇಶವನ್ನು ಬೀರಿದ ಮಹಾ ಪ್ರವಾದಿಗಳು. ವಿವಿಧ ಮತೀಯ ವಾದ ವಿವಾದಗಳ ಗೊಂದಲದಲ್ಲಿ ಸತ್ಯಪಥವನ್ನು ಅರಿಯದೆ ಕಂಗೆಟ್ಟ ಜನತೆಗೆ ಜ್ಞಾನದ ಕೈದೀವಿಗೆಯಿಂದ ಸತ್ಯದ ದಾರಿಯನ್ನು ತೋರಿದ ಮಹಾಪುರುಷರು. ಇಂದ್ರಿಯಗೋಚರವಾದ ಭೌತಿಕ ಪ್ರಪಂಚ ಮಾತ್ರ ಸತ್ಯ. ಆತ್ಮ ಪರಮಾತ್ಮ ಮುಂತಾದ ಅತೀಂದ್ರಿಯಪ್ರಪಂಚವೆಲ್ಲಾ ಕಲ್ಪನಾಜಾಲವೆನ್ನುವ ಭೌತಿಕ ವಾದ. ಆತ್ಮವೊಂದೇ ಸತ್ಯ, ದೃಶ್ಯ ಪ್ರಪಂಚವೆಲ್ಲಾ ಬರೀ ಭ್ರಮೆಯೆನ್ನುವ ನಿರ್ಗುಣಾತ್ಮವಾದ. ಹೀಗೆ ಸಾಮಾನ್ಯವಾಗಿ ಈ ಎರಡು ವಿಚಾರಗಳು ಜಗತ್ತಿನಲ್ಲಿ ಪ್ರಚಲಿತವಾಗಿವೆಯೆನ್ನಬಹುದು. ಇವೆರಡೂ ಅಪೂರ್ಣ ಸತ್ಯಗಳಾಗಿವೆ ಮತ್ತು ಜನತೆಯನ್ನು ತಪ್ಪು ದಾರಿಗೆ ಎಳೆಯುತ್ತವೆ.

ಜಗತ್ತು ಮಾತ್ರ ಸತ್ಯವೆಂದು ಭಾವಿಸಿ ಅಧ್ಯಾತ್ಮ ಮತ್ತು ಭಗವಂತನನ್ನು ಮರೆಯುವುದರಿಂದ ಯಾವ ನಿರ್ಬಂಧಗಳಿಲ್ಲದ ಅನೀತಿಮಯ ಸ್ವಚ್ಛಂದ ಜೀವನವನ್ನು ನಡೆಸುವ ಪ್ರವೃತ್ತಿಯು ಜನರಲ್ಲಿ ತೋರಲು ಅವಕಾಶವಾಗುವುದು. ಜಗತ್ತೆನ್ನುವುದು ಬರೀ ಭ್ರಮೆ, ಆತ್ಮ ಮಾತ್ರ ಸತ್ಯವೆನ್ನುವ ವಾದವೂ ಜನರನ್ನು ಜಗತ್ತಿನಿಂದ ಮತ್ತು ಪ್ರತ್ಯಕ್ಷ ಜೀವನದಿಂದ ವಿಮುಖಗೊಳಿಸುವುದು.

ಜಗತ್ತೇ ಸುಳ್ಳೆನಿಸಿದರೆ ತನ್ನ ಮುಂದಿರುವ ದೀನ, ದರಿದ್ರ, ದುಃಖಿ ಜನರ ಕಷ್ಟ ಕಾರ್ಪಣ್ಯಗಳನ್ನು ಪರಿಹರಿಸುವ ಸೇವಾ ಭಾವನೆಯು ಮಾನವನಲ್ಲಿ ಹೇಗೆ ಜಾಗೃತವಾಗುತ್ತದೆ? ಹೀಗೆ ಒಂದು ಸಮಾಜದಲ್ಲಿ ಅಹಂಕಾರ, ಸ್ವಚ್ಛಂದ ಪ್ರವೃತ್ತಿಯನ್ನು ಬೆಳೆಸಿದರೆ ಇನ್ನೊಂದು ಅಕರ್ಮಣ್ಯತೆಯನ್ನು ನಿರ್ಮಿಸುವುದು. ಶ್ರೀಮಧ್ವಾಚಾರ್ಯರು ಇವೆರಡೂ ಅಪೂರ್ಣ ವಿಚಾರಗಳ ಸಮನ್ವಯದ ವಿಶ್ವ ಸಂದೇಶವನ್ನು ನಮಗೆ ನೀಡಿದ್ದಾರೆ. ಜಗತ್ತು ಕಲ್ಪನೆಯಲ್ಲ. ಜಗತ್ತಿನ ಕರ್ತಾರನೂ ಸರ್ವಗುಣಶಾಲಿಯೂ ಆದ ಭಗವಂತನು ಕಲ್ಪನೆಯಲ್ಲ. ಸ್ವತಂತ್ರನಾದ ಈಶ್ವರ, ಅಸ್ವತಂತ್ರವಾದ ಜಗತ್ತು—ಇವೆರಡೂ ಸತ್ಯ. ಆದ್ದರಿಂದ ಭಗವಂತನಲ್ಲಿ ಭಕ್ತಿಯನ್ನೂ ಜಗತ್ತಿನಲ್ಲಿ ತನ್ನ ಕರ್ತವ್ಯವನ್ನೂ ನಿಷ್ಠೆಯಿಂದ ನಾವು ನಡೆಸಬೇಕು.

ಕರ್ತವ್ಯವೆಂದರೆ ಬರೀ ಪೂಜೆ, ಜಪ, ವ್ರತ, ಅನುಷ್ಠಾನಗಳು ಮಾತ್ರವಲ್ಲ. ಕಷ್ಟಕಾರ್ಪಣ್ಯಗಳಿಗೆ ಒಳಗಾದ ಜನರ ಸೇವೆಯೂ ನಮ್ಮ ಪವಿತ್ರ ಕರ್ತವ್ಯ. ಇದನ್ನು ಕಡ್ಡಾಯವಾಗಿ ಮಾಡಬೇಕು ಎನ್ನುವ ವಿಶ್ವಧರ್ಮದ ಪವಿತ್ರಸಂದೇಶವನ್ನು ಆಚಾರ್ಯರು ನಮಗೆ ಕರುಣಿಸಿದ್ದಾರೆ. ಆಧ್ಯಾತ್ಮ-ವಿಜ್ಞಾನಗಳ, ಜಡವಾದ-ಈಶ್ವರ ವಾದಗಳ, ದೈವ-ಪೌರುಷಗಳ ಸಮನ್ವಯದ ತತ್ತ್ವಜ್ಞಾನವು ಇಂದು ಜಗತ್ತಿಗೆ ಅವಶ್ಯವಿದೆ. ಇದೇ ಸತ್ಯವೂ ವ್ಯವಹಾರ್ಯವೂ ಆಗಬಲ್ಲದು. ಇಂತಹ ಧೀರಸಂದೇಶವನ್ನು ಜಗತ್ತಿಗೆ ಸ್ಪಷ್ಟವಾಣಿಯಿಂದ ಸಾರಿದ ಮಹಾಪುರುಷರೆಂದೂ ವಿಶ್ವದ ಮಹಾ ಪ್ರವಾದಿಯೆಂದೂ ಎಂದೆಂದಿಗೂ ನಾವು ಶ್ರೀಮದಾಚಾರ್ಯರಿಗೆ ಕೃತಜ್ಞತೆ, ಭಕ್ತಿ, ಗೌರವಗಳಿಂದ ತಲೆ ಬಾಗಿಸಬೇಕಾಗಿದೆ.

ಶ್ರೀಮದಾಚಾರ್ಯರ ಜೀವನವನ್ನು ಜನತೆಗೆ ಪರಿಚಯ ಮಾಡಿಸುವ ಅನೇಕ ಕೃತಿಗಳು ಪ್ರಕಟವಾಗಿದ್ದರೂ ಈ ಕೃತಿಯು ಹೊಸ ಮಾದರಿಯಿಂದ ಆಚಾರ್ಯರ ಜೀವನವನ್ನು ಸಮಾಜದ ಮುಂದಿಡಲು ಪ್ರಯತ್ನಿಸಿದೆ.

ಭಕ್ತರೂ, ಉತ್ತಮ ಲೇಖಕರೂ ಆದ ಕೊರಟಿ ಶ್ರೀನಿವಾಸ ರಾಯರ ಈ ಪ್ರಯತ್ನವನ್ನು ನಾವು ಬಹಳವಾಗಿ ಮೆಚ್ಚಿದ್ದೇವೆ. ಸುಮಧ್ವವಿಜಯದ

ಆಧಾರದಲ್ಲಿ ಅನೇಕ ಐತಿಹಾಸಿಕಸಂಗತಿಗಳನ್ನು ಅಳವಡಿಸಿಕೊಂಡು ಒಂದು ರಮ್ಯ ಕಥೆಯಂತೆ ಶ್ರೀಆಚಾರ್ಯರ ಜೀವನ ಚರಿತ್ರೆಯನ್ನು ಬರೆದಿರುವ ಶ್ರೀನಿವಾಸರಾಯರನ್ನು ನಾವು ಅಭಿನಂದಿಸದಿರಲಾರೆವು. ಐತಿಹಾಸಿಕಸಂಗತಿಗಳನ್ನು ಬರೆಯುವಾಗ ಸಹಜವಾಗಿರುವ ಭಿನ್ನಾಭಿಪ್ರಾಯಗಳು ಹಾಗೂ ಕೆಲವು ವ್ಯತ್ಯಾಸಗಳೂ ಈ ಕೃತಿಯಲ್ಲಿ ಕಂಡುಬರಬಹುದಾದರೂ ಆಚಾರ್ಯರ ಚರಿತ್ರೆಯ ಮೂಲಭೂತ ಸತ್ಯ ಸತ್ವಗಳಿಗೆ ಅಪಚಾರವಾಗದಂತೆ ಬಹಳ ಚೆನ್ನಾಗಿ ರಚಿತವಾಗಿರುವ ಈ ಕೃತಿಯನ್ನು ಸಹಾನುಭೂತಿ ಮತ್ತು ವಿಮರ್ಶಕ ದೃಷ್ಟಿಯಿಂದ ಜನತೆ ಸ್ವಾಗತಿಸುವುದೆಂದು ಭಾವಿಸುತ್ತೇವೆ.

ಈ ಕೃತಿಯ ಲೇಖಕರಾದ ಶ್ರೀ ಕೊರಟಿ ಶ್ರೀನಿವಾಸರಾಯರಿಗೂ ಭಗವಾನ್ ಶ್ರೀಕೃಷ್ಣನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ವಿಶ್ವೇಶತೀರ್ಥಸ್ವಾಮೀಜಿ

# ಅರಿಕೆ

೧೯೭೬ನೆಯ ಇಸವಿ ನನ್ನ ಜೀವನದಲ್ಲಿ ಒಂದು ಮಹತ್ವದ ವರ್ಷ. ಆ ವರ್ಷ ವ್ಯಾಧಿಯಿಂದ ಚೇತರಿಸಿಕೊಂಡ ನಾನು ಶ್ರೀಮಧ್ವಾಚಾರ್ಯರು ಎಂಬ ಕಾದಂಬರೀ ರೂಪದ ಜೀವನಚರಿತ್ರೆಯನ್ನು ಶ್ರೀಮದಾನಂದತೀರ್ಥ ಭಗವತ್ಪಾದರ ಬಗ್ಗೆ ರಚಿಸಿ, ಶ್ರೀ ಬಿ. ಎನ್. ಗುಪ್ತ ಅವರ ಪ್ರೋತ್ಸಾಹ ಹಾಗೂ ಆರ್ಥಿಕನೆರವಿನಿಂದ ಪ್ರಕಟಿಸಿದೆ. ಇದನ್ನು ನನ್ನ ಗುರುಗಳಾದ ಶ್ರೀಗೌಡಗೆರೆ ಗೋಪಾಲಕೃಷ್ಣಾಚಾರ್ಯರು ಪರಿಶೀಲಿಸಿ, ಗ್ರಂಥದ ಬಗ್ಗೆ ಅಮೂಲ್ಯ ಸಲಹೆಗಳನ್ನು ಇತ್ತರು. ಈ ಎಲ್ಲ ಸಲಹೆ, ಸೂಚನೆಗಳನ್ನು ಉಪಯೋಗಿಸಿಕೊಂಡು ಸಂಸ್ಕರಿಸಿ ವಿಸ್ತರಿಸಿದ "ಶ್ರೀಮಧ್ವಾಚಾರ್ಯರು" ಗ್ರಂಥವನ್ನು ಆಸ್ತಿಕರಾದ ಓದುಗರಿಗೆ ಅರ್ಪಿಸಿದ್ದೇನೆ.

ಈ ಕೃತಿ ಈ ರೂಪದಲ್ಲಿ ಪ್ರಕಟವಾಗಲು ನೆರವಾದ ಶ್ರೀಗೌಡಗೆರೆ ಗೋಪಾಲಕೃಷ್ಣಾಚಾರ್ಯರಿಗೆ ನಾನು ಅತ್ಯಂತ ಕೃತಜ್ಞತಾಪೂರ್ವಕವಾದ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

"ಶ್ರೀಮಧ್ವಾಚಾರ್ಯರು" ಗ್ರಂಥವನ್ನು ಓದಿ ನನ್ನ ಮೇಲೆ ಅಪಾರ ಕರುಣೆಯಿಂದ ಆಶೀರ್ವದಿಸಿರುವ ಶ್ರೀಪೇಜಾವರ ಮಠಾಧೀಶ್ವರರಾದ ಶ್ರೀವಿಶ್ವೇಶ್ವರತೀರ್ಥಶ್ರೀಪಾದಂಗಳವರಿಗೆ ನಾನು ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಶ್ರೀಮಧ್ವಾಚಾರ್ಯರು ಜಗತ್ತಿನಲ್ಲಿ ಆಗಿ ಹೋದ ಶ್ರೇಷ್ಠ ದಾರ್ಶನಿಕರಲ್ಲಿ ಅಗ್ರಪಂಕ್ತಿಗೆ ಸೇರಿರುತ್ತಾರೆ. ಆದರೆ ಇವರ ಗ್ರಂಥಗಳು ಜಗತ್ತಿನ ಬೇರೆಬೇರೆ ಭಾಷೆಗಳಿಗೆ ತರ್ಜುಮೆ ಇಲ್ಲವೇ ಅನುವಾದವಾಗದೆ ಇರುವುದು ಒಂದು

ಆಶ್ಚರ್ಯದ ಸಂಗತಿ. ಶ್ರೀಮಧ್ವಾಚಾರ್ಯರ ಮಹಿಮೆ ಏನು ? ಈ ಪ್ರಶ್ನೆಗೆ ಉದ್ದಾಮ ವಿದ್ವಾಂಸರಾದ ಶ್ರೀ ಬಿ. ಎನ್. ಕೆ. ಶರ್ಮರು 'ಶ್ರೀಮಧ್ವಾಚಾರ್ಯರ ಬೋಧೆ—ತಮ್ಮ ಮಾತುಗಳಲ್ಲಿ' ಎಂಬ ಇಂಗ್ಲೀಷ್ ಗ್ರಂಥದಲ್ಲಿ ಹೀಗೆ ತಿಳಿಸಿದ್ದಾರೆ ;

The thirteenth century, which saw the birth of Madhva, was a period of grave cultural unrest and political turmoil in Indian history. The Hindu Kingdoms and the people were passing through a catastrophic period, faced with the grim prospect of loss of political sovereignty and religious freedom. Disunity was rampant amoung the Hindu Kingdoms. They were torn by internecine wars, even in the face of common danger to their collective security. Destruction of temples and monasterics and forcible conversions to an invading faith were going on. Higher philosophy among the Hindus was dominated by a philosophical creed which with its emphasis on the self as an essentially inactive being and its extolling of Karma-Sannyasa was leading the nation to an unconscious pessimism of spirit ; which he felt to be highly detrimental to the social and political future of his countrymen. Mayavada could not give the people the dynamic urge to unite to resist external aggression at the most critical juncture in the country's history. Acosmism and indulgence in hair-splitting logic of Anirvacaniyata or Saptabhangi were not the need of the times. The Hindu community has to be roused to a sense of reality of the world and the stability of Drama, which were at stake. The people had to be awakened from the soporific effects of a world negating philosophy, which in one form or another was devitalizing the nation

from the intelligentsia to the masses, slowly, but steadily. In earlier times, Hinduism had absorbed many an idvading race that had entered the country; but in the medieval period it felt baffied and powerless against the powerful influx of the invasion of Islam. It coult not absorb these warlike tribes advancing through the conntry with a new militant monotheism.

Madhva felt strongly that Mayavada was a source of inner weakness to the country as a whole, in the socio-political climate of the times, apart from its philosophical untenability. With a prophetic vision he rose to strengthen the national conscience by turning it once more towards the buoyant realism of the Vedas, the transcedental Theism of the Upanishads and the emotional Theism of the Epics and Puranas. He wanted to give his countrymen a renewed faith in Theism which would rouse the people to a sense of the dignity of man as a real agent in the world and as the architect of his own future. He wanted men to respect the deliverances of their Saksi in respect of the reality of the world and its values of good and evil and pin their faith to a vigorous Hindu Monotheism which would keep intact the transcedence and immanence of the Upanishdic Brahman and fuse them, with the concept of the "Bhagavan" of the Epics and Puranas—or the "God" who is the object of our love ond affection in virtue of the interest He takes in us and in the world that are His creation. With a possinate emhasis on ethical menotheism, Madhva counselled righteous war on all forces of evil and *Adharma* tyranizing over the people: There is no

mistaking the earnestness of purpose behind this well-timed message to his country-men.

ಧೀರೇಂದ್ರ ಮೋಹನ ದತ್ತರು ಈ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಬರೆದಿದ್ದಾರೆ :

"We see here Madhva not merely as an opponent of *Samkara* and *Ramanuja* and as a commentator of the major works of Vedanta, but also as a constructive exponent of the entire spiritual classics of India and as an initiator of socio-politicol and religious movements calculated to check disruptive foreign influences and specially as the dynamic founder of the surging devotional movement (e. g. of the *Dasa Kuta*) of the Deccan with its spreading offshoots in the South and the North.

ಇಂಥ ಮಹಾನುಭಾವರು ಮಾಡಿದ ಕಾರ್ಯವನ್ನು ಕನ್ನಡ ನಾಡಿನಲ್ಲಿ ವಿದ್ಯಾವಂತ, ಬುದ್ಧಿವಂತರೆನಿಸಿಕೊಂಡ ಕೆಲವು ಮಹನೀಯರು ತಪ್ಪು ತಿಳುವಳಿಕೆಯಿಂದ ಅಪಪ್ರಚಾರ ಮಾಡುತ್ತಿರುವುದು ದುರದೃಷ್ಟಕರ. ಅಂಥವರನ್ನು ಕುರಿತು ಕರ್ನಾಟಕ ಕುಲಪಿತಾಮಹರೆನಿಸಿದ ದಿವಂಗತ ಆಲೂರು ವೆಂಕಟರಾಯರು 'ಶ್ರೀಮಧ್ವಾಚಾರ್ಯರ ಪೂರ್ಣಪ್ರಜ್ಞವೇದಾಂತ' ಎಂಬ ಇಂಗ್ಲೀಷ್ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ :

"Sri Madhwacharya is one of those greatest world teachers of our Sacred land, who have moulded the religious philosophy and culture and who have held a sway over the minds of numerons followers to this day. He is almost the last of all, and as such has given to

Indian Philosophy, a finishing touch and has brought it, in line with the true and authoratative teachings of *Srt Veda Vyasa.* But unfortunately, Madhwa has been most neglected by the modern worlb (perhaps owing to some peculiar difficulties in the way). But, most unfortunate and unpardonable thing is, that he is mis-understood, misinterpreted and misrepresented by his own followers "

ಇಂಥ ತಪ್ಪು ಕಲ್ಪನೆಗಳನ್ನು ದೂರ ಮಾಡುವ ಉದ್ದಿಶ್ಯದಿಂದಲೇ ಶ್ರೀಮಧ್ವಾಚಾರ್ಯರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಸಾಮಾನ್ಯ ಜನರ ಸಲುವಾಗಿ ಇಲ್ಲಿ ತಿಳಿಸಲಾಗಿದೆ.

ಈ ಗ್ರಂಥವನ್ನು ಬರೆಯುವಾಗ ನಾನು ಅನೇಕ ಗ್ರಂಥಗಳ ಸಹಾಯ ವನ್ನು ಪಡೆದಿದ್ದೇನೆ. ಇವುಗಳಲ್ಲಿ ಮುಖ್ಯವಾಗಿ ದಿವಂಗತ ಕೆ. ಶ್ರೀನರಸಿಂಹಾ ಚಾರ್ಯರ ಅವರ ಸುಮಧ್ವವಿಜಯದ ಕನ್ನಡ ಅನುವಾದವು ನನಗೆ ಆಕರ ಗ್ರಂಥವಾಗಿದೆ. ಶ್ರೀ ಎನ್. ಕೆ. ನರಸಿಂಹಮೂರ್ತಿ ಅವರ ಮಧ್ವಮತ ಪ್ರಸಾರ ಮತ್ತು ಪೂರ್ಣಪ್ರಜ್ಞ ಉಪನ್ಯಾಸ ಗ್ರಂಥಗಳಿಂದ ನನಗೆ ಲಾಭವಾಗಿದೆ. ಪ್ರೊ|| ಎಸ್. ಕೆ. ರಾಮಚಂದ್ರರಾಯರ ಪೂರ್ಣಪ್ರಜ್ಞಪ್ರಶಸ್ತಿ ಗ್ರಂಥವು ಪುಟ್ಟದಾದರೂ ಉತ್ಕೃಷ್ಟ ಸಂಶೋಧನ ಗ್ರಂಥ. ನನಗೆ ಇದು ಅಪಾರ ಸಾಮಗ್ರಿಯನ್ನು ಒದಗಿಸಿದೆ. ಶ್ರೀ ಕೆ. ಎಂ. ಕೃಷ್ಣರಾಯರು ಮತ್ತು ರಾಘವಾ ಚಾರ್ಯರು ಅವರ ವಿಷ್ಣು ತತ್ತ್ವನಿರ್ಣಯದಿಂದಲೂ ನಾನು ಉಪಕೃತನಾಗಿದ್ದೇನೆ. ಇವರೆಲ್ಲರಿಗೆ ನಾನು ಚಿರಋಣಿಯಾಗಿದ್ದೇನೆ.

ಈ ಗ್ರಂಥವು ಪಂಡಿತರ ಮತ್ತು ಪಾಮರರಿಗೆ ಅರ್ಥವಾಗುವಂತೆ ಗ್ರಂಥ ಶೋಧನೆ, ಸರ್ವಮೂಲ ಗ್ರಂಥಗಳ ಆದ್ಯಂತ ಶ್ಲೋಕಗಳು, ಕರಡು ತಿದ್ದುವಿಕೆ ಹೀಗೆ ಹಲವು ರೀತಿಯಲ್ಲಿ ನಿಂತು, ಈ ಗ್ರಂಥವು ತಮ್ಮದೇ ಎಂಬಂತೆ ಸಹಕಾರ ನೀಡಿದವರು ಪೂಜ್ಯರಾದ ಗೌಡಗೆರಿ ಗೋಪಾಲಕೃಷ್ಣಾಚಾರ್ಯರು

ಚಲಿಸುವ ದ್ವೈತತತ್ತ್ವಜ್ಞಾನದ ವಿಶ್ವಕೋಶದಂತೆ ಇರುವ ಇವರು ನನ್ನ ಧಾರ್ಮಿಕಗ್ರಂಥರಚನೆಗೆ ಸ್ಫೂರ್ತಿಯ ಚಿಲುಮೆಯಾಗಿದ್ದಾರೆ; ಮಾರ್ಗ ದರ್ಶನ ಮಾಡಿದ ಗುರುಗಳಾಗಿದ್ದಾರೆ. ಇವರಿಗೆ ಬಾಯಿ ಮಾತಿನ ಕೃತಜ್ಞತೆ ಗಿಂತಲೂ, ಮೌನದ ಮಹಾಸ್ತುತಿ ಪ್ರಿಯವಾಗುವುದರಿಂದ ಈ ಬಗ್ಗೆ ಏನನ್ನೂ ಬರೆಯದೆ ಶೇಷಾದ್ರಿವಾಸಶ್ರೀನಿವಾಸನು ಅವರಿಗೆ ಆಯುರಾರೋಗ್ಯಭಾಗ್ಯ ಗಳನ್ನು ಇತ್ತು ಕಾಪಾಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಮುದ್ರಣ ಕಲೆಯಲ್ಲಿ ಇದೀಗ ತಾನೇ ಪರಿಶ್ರಮಗಳಿಸುತ್ತಿರುವ ನನ್ನ ಚಿ. ಆನಂದನು, ಈ ಗ್ರಂಥವನ್ನು ಸುಂದರವಾಗಿ ಅಚ್ಚು ಮಾಡಲು ಶಕ್ತಿಮೀರಿ ಶ್ರಮಿಸಿದ್ದಾನೆ ಅವನ ಭವಿಷ್ಯ ಉಜ್ವಲವಾಗಲೆಂದು ಹಾರೈಸುತ್ತೇನೆ. ಎಷ್ಟು ಶೋಧಿಸಿದರೂ ಕೆಲವು ಮುದ್ರಣ ದೋಷಗಳು ಅಲ್ಲಲ್ಲಿವೆ. ಈ ಗ್ರಂಥದ ಕೊನೆಯಲ್ಲಿ ಶುದ್ಧಾ ಶುದ್ಧ ಪತ್ರಿಕೆಯು ಕೊಡಲ್ಪಟ್ಟಿದೆ. ಓದುಗರು ಅದರಂತೆ ತಮ್ಮ ಪ್ರತಿಯನ್ನು ತಿದ್ದಿಕೊಳ್ಳಬೇಕಾಗಿ ಕೋರಿದೆ.

"ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ"

ಇಂತು,
ಕೊರಟಿ ಶ್ರೀನಿವಾಸರಾವ್

6–8–1982
ಶ್ರೀ ರಾಘವೇಂದ್ರ ಸ್ವಾಮಿಗಳ ಆರಾಧನೆ

# ಮುನ್ನುಡಿ

ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ವಿಪಕ್ಷೇ ಸ್ಥಿತಿಃ
ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೋ ಸಕ್ತಿರ್ನ ವೈ ಬಾಧಿತೇ ।
ನೈವಾಸ್ತಿ ಪ್ರತಿಪಕ್ಷಮತುಲಂ ಶುದ್ಧಂ ಪ್ರಮಾಣಂ ಸ ಮೇ
ಭೂಯಾತ್ತತ್ತ್ವವಿನಿರ್ಣಯಾಯ ಭಗವಾನಾನಂದತೀರ್ಥೋ ಮುನಿಃ ॥

ಈ ಸಂಸಾರ ಸಾಗರವು ಅಪಾರ, ದುಸ್ತರ, ದುಃಖಮಯ ಮತ್ತು ಜಿಗುಪ್ಸಿತವಾದುದು. ಇಂಥ ಭವಸಾಗರವನ್ನು ದಾಟಲು ಅನೇಕ ಸಾಧನಗಳಿವೆ. ಅವುಗಳಲ್ಲಿ ಸಾಧು ಸಜ್ಜನರ ಚರಿತಾನುವಾದವೂ ಒಂದು ಮುಖ್ಯವಾದ ಸಾಧನೆ. ಈ ವಿಷಯದಲ್ಲಿ ಭಗವಾನ್ ವೇದವ್ಯಾಸರು ಶ್ರೀಮದ್ಭಾಗವತದಲ್ಲಿ (12-3-14, 15) ಮತ್ತು (12-4-40) ರಲ್ಲಿ ಹೀಗೆ ತಿಳಿಸಿದ್ದಾರೆ.

ಕಥಾ ಇಮಾಸ್ತೇ ಕಥಿತಾ ಮಹೀಯಸಾಂ
ವಿತಾಯ ಲೋಕೇಷು ಯಶಃ ಪರೇಯುಷಾಮ್ ।
ವಿಜ್ಞಾನವೈರಾಗ್ಯವಿವಕ್ಷಯಾ ವಿಭೋ
ವಚೋ ವಿಭೂತೀರ್ನ ತು ಪಾರಮಾರ್ಥ್ಯಮ್ ॥
ಯಸ್ತೂತ್ತಮಶ್ಲೋಕಗುಣಾನುವಾದಃ
ಸಂಗೀಯತೇಽಭೀಕ್ಷ್ಣಮಮಂಗಲಘ್ನಃ ।
ತಮೇವ ನಿತ್ಯಂ ಶೃಣುಯಾದಭೀಕ್ಷ್ಣಂ
ಕೃಷ್ಣೇಽಮಲಾಂ ಭಕ್ತಿಮಭೀಪ್ಸಮಾನಃ ॥
ಸಂಸಾರಸಿಂಧುಮತಿದುಸ್ತರಮುತ್ತಿತೀರ್ಷೋಃ
ನಾನ್ಯಃ ಪ್ಲವೋ ಭಗವತಃ ಪುರುಷೋತ್ತಮಸ್ಯ ।
ಲೀಲಾಕಥಾರಸನಿಷೇವಣಮಂತರೇಣ
ಪುಂಸೋ ಭವೇದ್ವಿವಿಧದುಃಖದವಾರ್ದಿತಸ್ಯ ॥

ಶ್ರೀಮತ್ಸುಮಧ್ವವಿಜಯದಲ್ಲಿ (ಸರ್ಗ-1 ಶ್ಲೋಕ-7) ನಾರಾಯಣ ಪಂಡಿತಾಚಾರ್ಯರೂ ಸಹ ಹೀಗೆ ಹೇಳಿದ್ದಾರೆ—

ಉಚ್ಚಾವಚಾ ಯೇನ ಸಮಸ್ತಚೇಷ್ಟಾಃ
ಕಿಂ ತತ್ರ ಚಿತ್ರಂ ಚರಿತಂ ನಿವೇದ್ಯಮ್ ।
ಕಿಂತೂತ್ತಮಶ್ಲೋಕಶಿಖಾಮಣೀನಾಂ
ಮನೋ ವಿಶುದ್ಧ್ಯೈ ಚರಿತಾನುವಾದಃ ॥

ಪ್ರಾಯಃ ಎಲ್ಲ ಗ್ರಂಥಕಾರರೂ ಆರಂಭದಲ್ಲಿ ದೇವತಾ ಗುರು ಹಿರಿಯರ ಗುಣ ಗಾನವನ್ನು ಮಾಡುತ್ತಾರೆ. ಪುಣ್ಯಕರವಾದ ಯಶಸ್ಸುಳ್ಳ ಮಹಾನುಭಾವರ ಚರಿತ್ರೆಯ ಅನುವಾದವು, ರಾಗ ದ್ವೇಷಾದಿ ದೋಷಪರಿಹಾರ ಮಾಡೋಣದ ರಿಂದ ಅತ್ಯವಶ್ಯಕವಾಗಿ ಅದನ್ನು ಮಾಡಲೇಬೇಕು.

ಶ್ರೀಮನ್ಮಧ್ವಾಚಾರ್ಯರ ಜೀವನಚರಿತ್ರೆಯನ್ನು ಯಥಾವತ್ತಾಗಿ ತಿಳಿಸುವ ಗ್ರಂಥಗಳು ಎರಡು ಮಾತ್ರ. ಮೊದಲನೆಯದು ಶ್ರೀಮದಾ ಚಾರ್ಯರ ಸಾಕ್ಷಾಚ್ಛಿಷ್ಯರೂ, ಉತ್ತರಾಧಿಕಾರಿಗಳೂ ಆದ ಪದ್ಮನಾಭತೀರ್ಥರಿಂದ ರಚಿತವಾದ "ವಾಯುಲೀಲಾ ವಿಸ್ತರಣ". ಇದರಲ್ಲಿ 8 ಸರ್ಗಗಳೂ 1001 ಶ್ಲೋಕಗಳೂ ಇವೆ. ಇದು ಮುದ್ರಿತವಾಗಿಲ್ಲ. ಹಸ್ತಲಿಖಿತಪ್ರತಿಗಳೂ ಅತಿ ವಿರಳ, ಅತ್ಯಂತ ವಿಶ್ವಸನೀಯವಾದುದು. ಎರಡನೆಯದೇ ನಾರಾಯಣ್ ಪಂಡಿತಾಚಾರ್ಯರಿಂದ ರಚಿತವಾದ ಶ್ರೀಮತ್ಸುಮಧ್ವವಿಜಯ ಮಹಾಕಾವ್ಯ. ಇದರಲ್ಲಿ 16 ಸರ್ಗಗಳೂ 1008 ಶ್ಲೋಕಗಳೂ ಇವೆ ಈ ಗ್ರಂಥಕಾರರೂ ಸಹ ಶ್ರೀಮದಾಚಾರ್ಯರ ಕಿರಿಯ ವಯಸ್ಸಿನ ಸಮಕಾಲೀನರು ಮತ್ತು ಆಚಾರ್ಯರ ಸಮಕಾಲೀನರೂ, ಶಿಷ್ಯರೂ ಆದ ತ್ರಿವಿಕ್ರಮಪಂಡಿತಾಚಾರ್ಯರ ಪುತ್ರರು. ಇದೂ ಅಷ್ಟೇ ವಿಶ್ವಸನೀಯ ಗ್ರಂಥ.

ಶ್ರೀಮದಾಚಾರ್ಯರು ಕ್ರಿ. ಶ. 1237 ರಲ್ಲಿ ಉಡುಪಿ ಸಮೀಪದ ಪಾಜಕ ಕ್ಷೇತ್ರದಲ್ಲಿ ಜನಿಸಿ, ದ್ವೈತಮತವನ್ನು ಪ್ರತಿಷ್ಠಾಪಿಸಿ ಕ್ರಿ. ಶ. 1317 ರಲ್ಲಿ ಅದೃಶ್ಯರಾಗಿ ವಿಶಾಲ ಬದರಿಗೆ ಪ್ರಯಾಣ ಮಾಡಿದರು. ಅಧ್ಯಾಪಿ ಅಲ್ಲಿ

ಶ್ರೀಬಾದರಾಯಣರಲ್ಲಿ ಶಾಸ್ತ್ರಾಧ್ಯಯನ ಮಾಡುತ್ತಿದ್ದಾರೆ. ಇವರು ಈ 79 ವರ್ಷಗಳಲ್ಲಿ ಅಚಿಂತ್ಯಾದ್ಭುತಕಾರ್ಯಗಳನ್ನು ಸಾಧಿಸಿದ್ದಾರೆ. ಇವು ಸುಮಧ್ವ ವಿಜಯದಲ್ಲಿ ವಿವೃತವಾಗಿವೆ.

ಶ್ರೀಮದಾಚಾರ್ಯರು ಸರ್ವಮೂಲವೆಂಬ 37 ಗ್ರಂಥಗಳನ್ನು ರಚಿಸಿದ್ದಾರೆ. ಇವು ಶ್ರೀವ್ಯಾಸರಾಜರಚಿತ 'ಗ್ರಂಥಮಾಲಿಕಾ ಸ್ತೋತ್ರ'ದಲ್ಲಿ ವಿವೃತವಾಗಿವೆ. ಒಟ್ಟು 32000 ಗ್ರಂಥ ಸಂಖ್ಯೆಯಿಂದ ಕೂಡಿದೆ. ಒಂದು ಗ್ರಂಥಕ್ಕೆ 32 ಅಕ್ಷರಗಳು.

ಈ ಸರ್ವಮೂಲ ಗ್ರಂಥಗಳಿಗೆ ಪ್ರಾಚೀನ, ಜಯತೀರ್ಥೀಯ ಮತ್ತು ಅರ್ವಾಚೀನ ಟೀಕೆಗಳಿವೆ. ಕ್ರಿ. ಶ. 1318–1365 ರವರೆಗೆ ರಚಿತವಾಗಿರುವ ಟೀಕೆಗಳಿಗೆ ಪ್ರಾಚೀನ ಟೀಕೆಗಳೆಂದು ಪ್ರಸಿದ್ಧಿ. ಇವುಗಳಲ್ಲಿ ಕೆಲವು ಇಲ್ಲಿ ಸೂಚಿತವಾಗಿವೆ.

1) ಪದ್ಮನಾಭತೀರ್ಥರಿಂದ ರಚಿತವಾದ ಸೂತ್ರಭಾಷ್ಯದ ಆದಿ ಟೀಕಾ ಸತ್ತರ್ಕದೀಪಾವಲೀ, ಅನುವ್ಯಾಖ್ಯಾನದ ಟೀಕೆಯೆಂಬ ಸಂನ್ಯಾಯರತ್ನಾವಲೀ ಮತ್ತು ದಶಪ್ರಕರಣಗಳ ಟೀಕೆಗಳು.

2) ತ್ರಿವಿಕ್ರಮಪಂಡಿತಾಚಾರ್ಯರಿಂದ ರಚಿತವಾದ ಸೂತ್ರಭಾಷ್ಯದ ಟೀಕೆ ತತ್ತ್ವಪ್ರದೀಪ.

3) ನರಹರಿತೀರ್ಥರ ಯಮಕಭಾರತದ, ಶ್ಲೋಕರೂಪ ಮತ್ತು ವಾಕ್ಯರೂಪ ಟೀಕೆಗಳು ಮತ್ತು ದಶಪ್ರಕರಣಗಳ ಟೀಕೆಗಳು.

4) ನಾರಾಯಣ ಪಂಡಿತಾಚಾರ್ಯರ ಅನುವ್ಯಾಖ್ಯಾನ ಟೀಕೆ ನಯಚಂದ್ರಿಕಾ ಮತ್ತು ಅಣುಭಾಷ್ಯದೀಪಿಕೆ.

5) ತ್ರೈವಿಕ್ರಮಾರ್ಯದಾಸ ರಚಿತ ಅಣುಭಾಷ್ಯದ ಟೀಕೆ ಆನಂದಮಾಲಾ, ಕಠೋಪನಿಷದ್ಭಾಷ್ಯ ಟೀಕೆ ಮತ್ತು ಮಾಂಡೂಕ್ಯೋಪನಿಷದ್ಭಾಷ್ಯ.

ಅನುಭವೀಲೇಖಕರಾದ ಶ್ರೀಮಾನ್ ಕೊರಟಿ ಶ್ರೀನಿವಾಸರಾಯರು ಪ್ರೌಢವೂ,ಲಲಿತವೂ,ಆದರಣೀಯವೂ ಆದ ಶೈಲಿಯಲ್ಲಿ "ಶ್ರೀಮಧ್ವಾಚಾರ್ಯರು"

ಎಂಬ ಕೃತಿರತ್ನವನ್ನು ರಚಿಸಿ ಆಸ್ತಿಕ ಜನರ ಮುಂದೆ ಇಟ್ಟಿದ್ದಾರೆ. ಇವರು "ವ್ಯಾಸರಾಯರು", "ಜಯತೀರ್ಥರು", "ವಾದಿರಾಜರು" ಮತ್ತು "ರಾಘವೇಂದ್ರರು" ಎಂಬ ಉತ್ಕೃಷ್ಟವೂ, ಪಂಡಿತಪಾಮರಜನಮನೋರಂಜಕವೂ ಆದ ಸದ್ಗ್ರಂಥಗಳನ್ನೂ ರಚಿಸಿದ್ದಾರೆ. ಇವನ್ನು ಜನತೆಯು ಆದರದಿಂದ ಸ್ವೀಕರಿಸಿದೆ. ಅತ್ಯಲ್ಪ ಕಾಲದಲ್ಲಿಯೇ ಕೆಲವು ಗ್ರಂಥಗಳು ದ್ವಿತೀಯ ಮುದ್ರಣವನ್ನೂ ಕಂಡಿರುವುದೇ ಜನಾದರಣೆಗೆ ಸಾಕ್ಷಿಯಾಗಿದೆ. ದ್ವೈತಮತದ ತಿರುಳೇನು ?

ಅಶೇಷತಾರ್ಕಿಕವಿದ್ವಚ್ಚಕ್ರವರ್ತಿ ಚೂಡಾಮಣಿ ರಾಜೇಂದ್ರತೀರ್ಥ ಶ್ರೀ ಚರಣ ಕಮಲ ಚಂಚರೀಕ ಷಡ್ದರ್ಶನೀ ವಲ್ಲಭ ವಿಷ್ಣುದಾಸಾಚಾರ್ಯರು, ತಮ್ಮಿಂದ ರಚಿತವಾದ "ವಾದರತ್ನಾವಲಿ" ಗ್ರಂಥದಲ್ಲಿ ಮಧ್ವಮತತತ್ತ್ವಗಳನ್ನು ಹೀಗೆ ಕ್ರೋಡೀಕರಿಸಿದ್ದಾರೆ.

ವಿಶ್ವಂ ಸತ್ಯಂ ಹರಿಃ ಕರ್ತಾ ಜೀವೋऽನ್ಯಃ ಪರಮಾರ್ಥತಃ ।
ವೇದಃ ಸತ್ಯಃ ಪ್ರಮಾಣಂ ಚೇತ್ಯೇವಂ ವ್ಯಾಸಮತಸ್ಥಿತಿಃ ॥

ಶ್ರೀಕೊರಟಿ ಶ್ರೀನಿವಾಸರಾಯರ ಈ ಗ್ರಂಥದ ವೈಶಿಷ್ಟ್ಯವೆಂದರೆ ಕನ್ನಡ ಮತ್ತು ಸಂಸ್ಕೃತ ಭಾಷಾ ಸಾಮರಸ್ಯ ಮೇಳನ. ಇದು ಸಾಮಾನ್ಯ ಓದುಗರಿಗೂ ಮತ್ತು ಪ್ರೌಢರಿಗೂ ಉಪಯುಕ್ತವಾಗಿದೆ. ಇವರು ಇನ್ನೂ ಅನೇಕ ಸಾಧು ಸಜ್ಜನರ ಜೀವನ ಚರಿತ್ರೆಗಳನ್ನು ರಚಿಸಿ ಆಸ್ತಿಕ ಜನರ ಮನಸ್ಸಂತೋಷಪಡಿಸಲಿ ಎಂದು ಶ್ರೀಕೃಷ್ಣಸ್ವಾಮಿಯನ್ನು ಪ್ರಾರ್ಥಿಸುತ್ತೇನೆ.

ಶ್ರೀನಿವಾಸೇನ ರಚಿತಂ ಬಾಲಕೃಷ್ಣಪದಾರ್ಪಿತಮ್ ।
ಪೂರ್ಣಬೋಧಾರ್ಯಚರಿತಂ ಭವತಾತ್ಕೃಷ್ಣತುಷ್ಟಯೇ ॥

ಬೆಂಗಳೂರು
8–8–82

ಗೌಡಗೆರೆ ಗೋಪಾಲಕೃಷ್ಣಾಚಾರ್ಯ

# ಗ್ರಂಥಋಣ

1. **ಸರ್ವಮೂಲಗ್ರಂಥಗಳ ಕನ್ನಡ ಅನುವಾದ** ಪ್ರಕಾಶಕರು : ಶ್ರೀಮಧ್ವಮುನಿಸೇವಾಸಂಘ ಉಡುಪಿ, ಅನುವಾದಕರು: ಅಗ್ನಿಹೋತ್ರಿ, ನಾರಾಯಣ ತಂತ್ರಿಗಳು.
2. ಶ್ರೀನಾರಾಯಣಪಂಡಿತಾಚಾರ್ಯರ ಶ್ರೀಸುಮಧ್ವವಿಜಯ — ಕನ್ನಡ ಅನುವಾದ—(4 ಭಾಗಗಳು) ಲೇ : ಸಾಹಿತ್ಯ ವಿದ್ವಾನ್, ಶಿರೋಮಣಿ ಕೆ. ನರಸಿಂಹಾಚಾರ್ಯ.
3. ವಾಯುಸ್ತುತಿ : ಅನುವಾದಕರು—ಶ್ರೀ ಬಿ. ಶ್ರೀನಿವಾಸಭಟ್ಟ.
4. ಶ್ರೀವಿಷ್ಣುಸಹಸ್ರನಾಮ : ಲೇ : ಸ್ವಾಮಿ ವಿಜ್ಞಾನಾನಂದ.
5. ವಿಷ್ಣುತತ್ವನಿರ್ಣಯ : ಕನ್ನಡ ಅನುವಾದ— ಅನು : ಎಸ್. ಎಸ್. ರಾಘವಾಚಾರ್ ಮತ್ತು ಕೆ. ಎಂ. ಕೃಷ್ಣರಾವ್.
6. ಶ್ರೀಮದಣುಮಧ್ವವಿಜಯ : ಕನ್ನಡ ಅನುವಾದ— ಪುರಾಣ ಭಾಸ್ಕರ ಆರ್. ಎಸ್. ಶೇಷಗಿರಿರಾವ್.
7. ಮಧ್ವರಾಮಾಯಣ : ಕನ್ನಡಿಸಿದವರು—ಬನ್ನಂಜೆ ಗೋವಿಂದಾಚಾರ್ಯ.
8. ಉಪನ್ಯಾಸಭಾರತೀ : ಲೇ : ದಾವಣಗೆರೆ ಭೀಮರಾಯರು.
9. ಹರಿದಾಸಸಾಹಿತ್ಯ : ಲೇ : ಆರ್. ಎಸ್. ಪಂಚಮುಖಿ.
10. ಚತುಸ್ಸೂತ್ರೀ ಭಾಷ್ಯ : (ಇಂಗ್ಲಿಷ್) ಬಿ. ಎನ್. ಕೆ. ಶರ್ಮ.
11. ಭಾರತೀಯತತ್ತ್ವಶಾಸ್ತ್ರಸಂಗ್ರಹ : ಲೇ ; ಹೆಚ್. ಎನ್. ರಾಘವೇಂದ್ರಾಚಾರ್ಯ.

12. ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ : (ವಾದಿರಾಜ ಕೃತ ಕನ್ನಡ ಭಾಷೆಯ ಕೃತಿ) ಪ್ರಕಾಶಕರು : ಎಂ. ಮೂರ್ತಿರಾವ್.
13. ಶ್ರೀಮಧ್ವಶಾಸ್ತ್ರ (ಇಂಗ್ಲಿಷ್) ಲೇ : ಡಿ. ಕೆ. ರಾಮರಾವ್.
14. ವೈದಿಕಸಾಹಿತ್ಯಚರಿತ್ರೆ : ಲೇ : ಡಾ॥ ಎನ್.ಎಸ್. ಅನಂತರಂಗಾಚಾರ್
15. ಕರ್ನಾಟಕಭಕ್ತ ವಿಜಯ : ಲೇ : ಬೇಲೂರು ಕೇಶವದಾಸರು.
16 ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ (ಇಂಗ್ಲಿಷ್) : ಲೇ : ಬಿ. ಗುರುರಾಜಾರಾವ್.
17. ತತ್ತ್ವಮಸಿ ವಿಮರ್ಶೆ : ಲೇ : ಪಂಡಿತ ಚೀಮನಹಳ್ಳಿ ರಘುನಾಥಾಚಾರ್ಯ.
18. ಶ್ರೀಪೂರ್ಣಪ್ರಜ್ಞರ ಉಪನ್ಯಾಸ : ಲೇ : ಎನ್. ಕೆ. ನರಸಿಂಹ ಮೂರ್ತಿ.
19. ಮಧ್ವರ ತರ್ಕ (Madhva Logic) ಇಂಗ್ಲಿಷ್ : ಸುಶೀಲ ಕುಮಾರ ಮಿತ್ರ.
20. ಶ್ರೀಜಯತೀರ್ಥಚರಿತಾಮೃತಂ : ಲೇ ; ಪಂಡಿತ ಚಿಕ್ಕೇರೂರು ಗೋವಿಂದಾಚಾರ್ಯರು.
21. ಶ್ರೀಟೀಕಾಚಾರ್ಯರ ಚರಿತ್ರೆ : ಲೇ : ಆನವಟ್ಟಿ ರಾಮರಾಯರು,
22. ಸಭಾಸಾರಸಂಗ್ರಹ : ಶ್ರೀಮತ್ಸತ್ಯಧ್ಯಾನತೀರ್ಥರ ಸನ್ನಿಧಾನದಲ್ಲಿ ಜರುಗಿದ ಚರ್ಚಾ ಸಂಗ್ರಹ.
23. ಶ್ರೀಮಧ್ವಾಚಾರ್ಯರ ಉಪದೇಶ : (ಇಂಗ್ಲಿಷ್) ಸಂಪಾದಕರು ;— ಬಿ. ಎನ್. ಕೆ. ಶರ್ಮ.
24. ಶ್ರೀಮನ್ಮಧ್ವಮತ ಪ್ರಸಾರ : ಲೇ ; ಎನ್, ಕೆ ನರಸಿಂಹಮೂರ್ತಿ.
25. ಪೂರ್ಣಪ್ರಜ್ಞಪ್ರಶಸ್ತಿ : ಲೇ : ಪ್ರೊ. ಎಸ್. ಕೆ. ರಾಮಚಂದ್ರರಾವ್.
26. ರಜತಪೀಠ : ಸಂಪಾದಕರು — ಆರ್. ನರಸಿಂಹಾಚಾರ್ಯ.

27. ಉಪನಿಷತ್ ದರ್ಶನ : (2 ಭಾಗಗಳು) ಲೇ : ಪ್ರೊ|| ಕೆ. ಟಿ. ಪಾಂಡುರಂಗಿ.
28. ದ್ವೈತ ವೇದಾಂತ : ಲೇ : ಹೆಚ್. ಎನ್. ರಾಘವೇಂದ್ರಾಚಾರ್.
29. ಮಧ್ವ ನಾಮಾವಲಿ ; ಸಂಪಾದಕರು—ಪ್ರಭಂಜನ.
30. ಮಧ್ವಾಚಾರ್ಯರು : ಲೇ : ಡಿ. ಎ. ರಾಘವೇಂದ್ರ.
31. ದಾಸ ಸಾಹಿತ್ಯ : ದ್ವಿತೀಯ ಘಟ್ಟ ಉಪನ್ಯಾಸಗಳು, ಕರ್ನಾಟಕ ವಿಶ್ವ ವಿದ್ಯಾನಿಲಯದ ಪ್ರಕಟಣೆ.
32. ಸತ್ಕಥಾ : ಲೇ : ಭೀಮರಾವ ಸ್ವಾಮಿರಾವ ಕಮಲಾಪುರ.
33. ಶ್ರೀಮಧ್ವಾಚಾರ್ಯರು : ಲೇ : ಪ್ರೊ|| ಎಸ್. ಕೆ. ರಾಮಚಂದ್ರ ರಾವ್.
34. ಉಡುಪಿ ಇತಿಹಾಸ : ಲೇ : ಡಾ|| ಪಿ. ಗುರುರಾಜಭಟ್ಟ.
35. ಮಧ್ವಮುನಿ ವಿಜಯ : ಮಿಂಚಿನಬಳ್ಳಿ ಪ್ರಕಾಶನ.
36. ಶ್ರೀಮಧ್ವಾಚಾರ್ಯರ ಪೂರ್ಣಪ್ರಜ್ಞ ವೇದಾಂತ (ಇಂಗ್ಲೀಷ್) : ಲೇ : ಆಲೂರ ವೆಂಕಟರಾವ್.
37. ಶ್ರೀಮನ್ಮಧ್ವಕಥಾಮೃತ ; ಲೇ : ಎನ್. ಕೆ. ನರಸಿಂಹಮೂರ್ತಿ.

—ಇತ್ಯಾದಿ

—o—

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 6 | 1 | ಭೂಮಿಂತು | ಭೂಮಿಯು |
| 53 | 12 | ಕುಮಾರಿಂದ್ರಿಯು | ಕುಮಾರಾದ್ರಿಯು |
| 42 | 11 | ಇದ್ದಲು | ಇದ್ದರು |
| 49 | 5 | ಜೀವೀಶ | ಜೀವೇಶ |
| 65 | 5 | ಸೃಹೃತ್ಪ್ರಿಯಂ | ಸುಹೃತ್ಪ್ರಿಯಂ |
| 74 | 20 | ಶಿಶುವೇ | ಶಿಶವೇ |
| 92 | 18 | ಪರಶ್ವಧ | ಪರತ್ವದ |
| 110 | 13ನೇ ಸಾಲಿನ ನಂತರದ ಸಾಲು— | | |
| | | | “ಈ ಉಪನಿಷತ್ತಿನ ಸಂದೇಶವೇನು ?” |
| 166 | 15 | ಸಜ್ಜನಾನಾಂ | ರಸಜ್ಜನಾನಾಂ |
| 172 | 25 | ಸ ದರ್ಶ | ಸದದರ್ಶ |
| 174 | 22 | ಸೂತಾರ್ಥೋ | ಸೂತ್ರಾರ್ಥೋ |
| 177 | 6 | ಗುಶಿಷ್ಯರು | ಗುರುಶಿಷ್ಯರು |
| 180 | 7 | ಶಾರೀರಿಯೊಗಿ | ಶಾಶೀರಿಯಾಗಿ |
| 182 | 28 | ತೋಬಿಸು | ಶೋಭಿಸು |
| 217 | 22 | ವಿದಾ | ವಿದ್ಯಾ |
| 240 | 22 | ಶಿಷ್ಯೋಣಾ | ಶಿಷ್ಯೇಣಾ |
| 243 | 6 | 98–96 | 98–99 |
| 243 | 11 | ರಾಮಾಯುವೂ | ರಾಮಾಯಣವೂ |
| 248 | 18 | ಇಕ್ಷುಪಾತ | ಇಷುಪಾತ |
| 256 | 6 | ಸಿದ್ಧರಾದಲು | ಸಿದ್ಧರಾಗಲು |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 256 | 22 | ಜ್ಞಾನ | ಜ್ಞಾನ |
| 256 | 23 | ದೃಷ್ಟಾಂತರ | ದೃಷ್ಟಾಂತ |
| 268 | 15 | ಕವಿರಾಖ್ಯಾಂ | ಕವಿರಾಖ್ಯಾಂ |
| 312 | 20 | ಗ್ರಾಮಕ್ಕೆ | ಗ್ರಾಮಕ್ಕೆ ಬಂದರು. |
| 316 | 2 | ಯುಕ್ತ | ಯುಕ್ತಿ |
| 316 | 16 | ಪುಷ್ಪಿತೋಮಂ | ಪುಷ್ಪಿತೋಽಯಂ |
| 340 | 3 | ತ್ಯದಾಕಾಂ | ತ್ಯದಾರಾಂ |
| 340 | 21 | ಉಪಾಧಿ | ಉಪಾಧಿ |
| 343 | 6 | ಅಶೇಪೇತಿ | ಅಶೇಷೇತಿ |
| 345 | 1 | ಮಾರ್ಗಶಿರ | ಕಾರ್ತೀಕ |
| 345 | 1 | ಅಮಾವಾಸ್ಯ | ಚತುರ್ದಶಿ |
| 350 | 23 | ಕರ್ಣಾಟಕಂ ಮಿತಿ | ಕರ್ಣಾಟಕಮಿತಿ |
| 352 | 17 | ಅಕ್ಷೋಭ್ಯತೀರ್ಣರು | ಅಕ್ಷೋಭ್ಯತೀರ್ಥರು |
| 353 | 3 | ಶೋಭಿಸ | ಶೋಧಿಸು |
| 354 | 17 | ಶ್ರುತೇಸತಂ | ಶ್ರುತೇಸ್ತತಃ |
| 354 | 18 | ಕುರ್ವಂತು | ಕುರ್ವಂತು |
| 360 | 17 | ಸಂಸ್ಕೃತಿವಿದೇ | ಸಂಸ್ಕೃತಿಳಿದೇ |
| 367 | 21 | ಸ್ವಸತ್ತ್ಯತಿಂ | ಸ್ವಸತ್ಕೃತಿಂ |
| 374 | 5 | ಉಚ್ಚಭೂತಿ | ಉಚ್ಚಭೂತಿಗೆ |
| 375 | 22 | ವಿಸಕ್ಷಸಂಘ | ವಿಪಕ್ಷಸಂಘಃ |
| 379 | 23 | ಪದಾಶ್ರಮಾಃ | ಪದಾಶ್ರಯಾಃ |



# ವಿಷಯ ಸೂಚಿ

## ಶ್ರೀಮನ್ಮಧ್ವಾಚಾರ್ಯರು

ತಸ್ಯಾಂಗಂ ಪ್ರಥಮೋ ವಾಯುಃ ಪ್ರಾದುರ್ಭಾವತ್ರಯಾತ್ಮಕಃ ||
ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವ ಚ |
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ||
ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರೀಯಃ ಪತಿಃ |
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ||
ಆಚಾರ್ಯಃ ಪವನೋಽಸ್ಮಾಕಮಾಚಾರ್ಯಾಣೀ ಚ ಭಾರತೀ |
ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಳದೇವತಾ ||

## ಪರಮಪವಿತ್ರಕ್ಷೇತ್ರ ಉಡುಪಿ (ರಜತಪೀಠಪುರ)

ಉಡುಪಿ[1] ಕ್ಷೇತ್ರವು ಭಾರತದೇಶದ ಪುಣ್ಯಕ್ಷೇತ್ರಗಳಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದಿದೆ. ಇಲ್ಲಿ ಸುಮಾರು ಏಳುನೂರು ವರ್ಷಗಳ ಹಿಂದೆ ದ್ವೈತ ಮತಪ್ರತಿಷ್ಠಾಪನಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಶ್ರೀಕೃಷ್ಣನ ಸುಂದರವಿಗ್ರಹವಿದೆ. ಶಾಲಗ್ರಾಮಶಿಲೆಯಿಂದ ನಿರ್ಮಿತವಾಗಿ, ಕೈಯಲ್ಲಿ ಕಡಗೋಲು ನೇಣು ಹಿಡಿದಿರುವ ಶ್ರೀಕೃಷ್ಣನ ಈ ಮೂರ್ತಿಯು

---

1) ಕಾಶೀತಲೇ ಕೃತಪದಾಪಿ ಸರಿತ್ಸುರಾಣಾ-
ಮಾಯಾತಿ ಯದ್ಗತಪವಿತ್ರಸರೋಽಧುನ್ಯಾಪಿ |
ರುದ್ರಾದಿದೇವಗಣಸೇವಿತಸರ್ವಭಾಗಂ
ತದ್ರೌಪ್ಯಪೀಠಪುರಮಪ್ರತಿಮಂ ತ್ರಿಲೋಕ್ಯಾಂ ||
ದ್ವಾರಾವತೀಂ ಸಕಲಭಾಗ್ಯವತೀಮುಪೇಕ್ಷ್ಯ
ಗೋಪಾಲಬಾಲಲಲನಾಕರಪೂಜನಂ ಚ |
ವಾರ್ಧಿಂ ವಧೂಗೃಹಮತೀತ್ಯ ಸ ಮಧ್ವನಾಥೋ
ಯತ್ರಾಸ್ತಿ ತದ್ರಜತಪೀಠಪುರಂ ಗರೀಯಃ ||
(ತೀರ್ಥಪ್ರಬಂಧ–ಪಶ್ಚಿಮಪ್ರಬಂಧ ಶ್ಲೋಕ 7, 9.)

ಅತ್ಯಂತ ಮನಮೋಹಕವಾದದು.1 ಇದಕ್ಕೆ ಸುಮಾರು ಸಾಟಿಯಾದ ಇನ್ನೊಂದು ವಿಗ್ರಹವು ಗುರುವಾಯೂರು ಕ್ಷೇತ್ರ ಬಿಟ್ಟರೆ ಬೇರೆಡೆಯಲ್ಲಿಲ್ಲ. ಈ ವಿಗ್ರಹವನ್ನು ಶ್ರೀಮಧ್ವಾಚಾರ್ಯರು, ದ್ವಾರಕೆಯಿಂದ ಬಂದ, ಉಡುಪಿ ಸಮೀಪದ ಮಲ್ಪೆ ತೀರದಲ್ಲಿ ಬಿರುಗಾಳಿಗೆ ಸಿಕ್ಕಿ ತತ್ತರಿಸುತ್ತಿದ್ದ, ಒಬ್ಬ ಹಡಗಿನ ಒಡೆಯನಿಂದ ಪಡೆದರೆಂದು ಪ್ರತೀತಿ ಇದೆ. ಶ್ರೀಮದಾಚಾರ್ಯರು ಮಾಡಿದ ಉಪಕಾರಕ್ಕೆ ಪ್ರತಿಯಾಗಿ, ಆ ನೌಕೆಯ ಕರ್ಣಧಾರನು ಹಡಗಿನಲ್ಲಿ ಸಮತೋಲನಕ್ಕಾಗಿ ಇರಿಸಿದ್ದ ಎರಡು ಗೋಪೀಚಂದನದ ದೊಡ್ಡಗಡ್ಡೆಗಳನ್ನು ಅವರಿಗೆ ಕಾಣಿಕೆಯಾಗಿತ್ತನು. ಆ ಗೋಪಿಚಂದನದ ಎರಡು ದೊಡ್ಡಗಡ್ಡೆಗಳನ್ನು ಅವರೇ ಹೊತ್ತು ತರುತ್ತಿದ್ದರು. ಮೊದಲನೆಯ ಗಡ್ಡೆಯು ಸಮೀಪದಲ್ಲಿಯೇ ಒಡೆದು ಹೋಯಿತೆಂದೂ, ಅದು ಒಡೆದ ಸ್ಥಳದಲ್ಲಿ, ಇಂದಿನ ವಡಭಾಂಡೇಶ್ವರದಲ್ಲಿ–ಬಲರಾಮದೇವರ ವಿಗ್ರಹವನ್ನು ಪ್ರತಿಷ್ಠಿಸಿ ಇನ್ನೊಂದು ಗಡ್ಡೆ ಸಹಿತ ಶ್ರೀಕೃಷ್ಣನ ವಿಗ್ರಹವನ್ನು ಉಡುಪಿಗೆ ತಂದು, ಇಂದಿನ ಮಧ್ವಸರೋವರದ ದಂಡೆಯಲ್ಲಿ ಪ್ರತಿಷ್ಠಿಸಿ ದೇವಾಲಯವನ್ನು ನಿರ್ಮಿಸಿದ ಐತಿಹ್ಯವಿದೆ.

ಪ್ರತಿವರ್ಷ ಮಕರಸಂಕ್ರಮಣದಲ್ಲಿ ಈ ಸ್ವಾಮಿಗೆ ವಿಶೇಷ ಪೂಜೆ ಹಾಗೂ ಉತ್ಸವಗಳು ನಡೆಯುತ್ತವೆ. ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನ ಪೂಜೆಗೆಂದು ವ್ಯವಸ್ಥೆ ಮಾಡಿದ ಅಷ್ಟಮಠಗಳ ಯತಿಗಳಲ್ಲಿ ಒಬ್ಬರು ಪರ್ಯಾಯ ಸ್ವಾಮಿಗಳಾಗಿ ಆ ದಿನ ಅಧಿಕಾರಕ್ಕೆ ಬರುತ್ತಾರೆ. ಅವರು ಎರಡು ವರ್ಷಗಳ ಕಾಲ ಉಡುಪಿಯಿಂದ ಕದಲದೆ ಸ್ವಾಮಿಯನ್ನು ಪೂಜಿಸುತ್ತಾರೆ. ಇದಕ್ಕೆ ಪರ್ಯಾಯವೆಂದು ಹೆಸರು. ಈ ಪರ್ಯಾಯಮಹೋತ್ಸವದಲ್ಲಿ ಲಕ್ಷಾಂತರ ಜನ ಆಸ್ತಿಕರೂ, ಭಗವದ್ಭಕ್ತರೂ ಭಾಗವಹಿಸುತ್ತಾರೆ.

---

1) ನಿರ್ಮಗ್ನೋಗ್ರಭವಾರ್ಣವೇ ನಿಜಮನೋಭೀಷ್ಟಂ ದಿಶಾಮೀತಿ ಯಃ
ಸಮ್ಯಕ್‌ಜ್ಞಾಪಯಿತುಂ ಕರೇಣ ವಿಲಸನ್ಮಂಥಾನಮನ್ಯೇನ ಚ ।
ರಮ್ಯಂ ದಾಮ ದಧನ್ಮಹೇಶರಜತಗ್ರಾಮಶ್ರಿಯೋಲಂಕೃತಿಃ
ಕರ್ಮಂದೀಶ್ವರಭಕ್ತಿಬಂಧನವಶಃ ಪ್ರೀತೋಽಸ್ತು ಕೃಷ್ಣಃ ಪ್ರಭುಃ ॥
(ತಿರ್ಥಪ್ರಬಂಧ–ಪಶ್ಚಿಮಪ್ರಬಂಧ–ಶ್ಲೋಕ 11)

ಶ್ರೀಮಧ್ವಾಚಾರ್ಯರು ಪ್ರತಿಷ್ಠಿಸಿದ ಶ್ರೀಕೃಷ್ಣವಿಗ್ರಹದಿಂದಾಗಿ ಉಡುಪಿ ಇಂದು ಹೆಚ್ಚು ಮಹತ್ವವನ್ನು ಪಡೆದಿದೆ. ಶ್ರೀಮಧ್ವಾಚಾರ್ಯರು ಅವತರಿಸುವುದಕ್ಕಿಂತ ಮೊದಲೂ ಉಡುಪಿಯು ಪ್ರಸಿದ್ಧಿ ಪಡೆದಿ ದೆ. ಇಲ್ಲಿನ ಅನಂತೇಶ್ವರದೇವಾಲಯವೂ, ಚಂದ್ರಮೌಳೀಶ್ವರದೇವಾಲಯವೂ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಪಡೆದಿದ್ದುವು.

ಈ ಕ್ಷೇತ್ರಕ್ಕೆ1 ಉಡುಪಿ ಎಂದು ಹೆಸರು ಬರಲು ಈ ದೇವಾಲಯಗಳೇ ಕಾರಣವೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

---

ಈ ರೌಪ್ಯಪೀಠಪುರದ ಮಹಾತ್ಮ್ಯೆಯ ಆದಿಭಾಗ—

ಶೌನಕಃ— ಶ್ರುತಂ ಮೇ ಪುಣ್ಯಚರಿತಂ ಕ್ಷೇತ್ರಾಣಾಂ ಚೈವ ಸರ್ವಶಃ ।
ತೀರ್ಥಾನಾಂ ಭುವಿ ಮುಖ್ಯಾನಾಂ ಚರಿತಂ ಮಹದದ್ಭುತಮ್ ॥
ವೈಷ್ಣವಾನಾಂ ವಿಶೇಷೇಣ ಮಾಹಾತ್ಮ್ಯಂ ಖಲು ಮಾನದ ।
ಕಥಿತಂ ಭವತಾ ಶ್ರುತ್ವಾ ನ ತೃಪ್ಯತಿ ಮನೋ ಮಮ ॥
ಸಾರಾತ್ಸಾರತಮಂ ಭೂಯೋ ಕ್ಷೇತ್ರಂ ಶ್ರೇಯಸ್ಕರಂ ನೃಣಾಂ ।
ಬ್ರೂಹಿ ತ್ವಂ ವೇತ್ಸಿ ಸಕಲಂ ಗುಹ್ಯಂ ವ್ಯಾಸಕೃಪಾಶ್ರಯಾತ್ ॥

ಶ್ರೀಸೂತಃ— ಶೃಣು ಶೌನಕ ವಕ್ಷ್ಯಾಮಿ ಕ್ಷೇತ್ರಂ ಪರಮಪಾವನಂ ।
ಯಸ್ಯ ಸ್ಮರಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥
ಪುಣ್ಯೇ ಭಾರತವರ್ಷೇಽಸ್ಮಿನ್ಕರ್ಮಭೂಮಾವಘಚ್ಛಿದಿ ।
ಕ್ಷೇತ್ರೇ ಪರಶುರಾಮಸ್ಯ ಪಶ್ಚಿಮಾಬ್ಧಿತಟೇ ಶುಭೇ ॥
ನಾತಿದೂರೆ ರೌಪ್ಯಪೀಠಮಿತಿ ಖ್ಯಾತಂ ದ್ವಿಜೋತ್ತಮ ।
ತಸ್ಯ ನಾಮ್ನೋ ನಿಮಿತ್ತಂ ಚ ಕಥ್ಯಮಾನಂ ನಿಬೋಧ ಮೇ ॥

ಅಂತ್ಯಭಾಗ:—

ಸೋಽವತೀರ್ಣಃ ಪುಣ್ಯತಮಂ ಕರಿಷ್ಯತಿ ಮಹಾಮುನಿಃ ।
ತತ್ರ ಸ್ನಾತ್ವಾ ಜ್ಞಾನಯುತಾಃ ಭವಿಷ್ಯಂತಿ ನರಾಃ ಕಲೌ ॥
ಇತಿ ತೇ ಕಥಿತಂ ಸರ್ವಂ ಕೃಷ್ಣದೇವಸ್ಯ ವೈಭವಂ ।
ಶೃಣುಯಾತ್ ಕೃಷ್ಣಭಕ್ತೋ ಯಃ ಸ ಲಭೇತ್ಪರಮಂ ಪದಮ್ ॥
ಇತಿ ಸ್ಕಾಂದ ಪುರಾಣೇ ರಜತಪೀಠಪುರಮಾಹಾತ್ಮ್ಯೇ ಸಪ್ತಮೋಽಧ್ಯಾಯಃ

ಉಡುಪಿಯ ಪುರಾತನ ದೇವಾಲಯವಾದ ಅನಂತಾಸನ (ಅನಂತೇಶ್ವರ) ಕ್ಷೇತ್ರದಲ್ಲಿ ರಾಮಭೋಜರಾಜನಿಗೆ ವರವಿತ್ತಂತೆ ಪರಶುರಾಮನು ಪದ್ಮನಾಭ ಸ್ವರೂಪದಲ್ಲಿ ಸನ್ನಿಹಿತನಾಗಿದ್ದಾನೆ. ಪದ್ಮನಾಭದೇವನು ಭಕ್ತರ ಕಾಮ ಧೇನುವಾಗಿ ಈ ಸ್ಥಳದಲ್ಲಿ ನೆಲೆಸಿದ್ದಾನೆ. ಸ್ಥಲಪುರಾಣ ಕಥೆಯು ಹೀಗಿದೆ:—

ಪೂರ್ವದಲ್ಲಿ ವೇದಾರಣ್ಯವೆಂಬ ಪುಣ್ಯಸ್ಥಳದಲ್ಲಿ ಭಾರದ್ವಾಜಗೋತ್ರದ ವಿಪ್ರಶ್ರೇಷ್ಠನೊಬ್ಬನು ತನ್ನ ಪತ್ನಿಯೊಡನೆ ವಾಸವಾಗಿದ್ದನು. ಪುತ್ರಲಾಭವಾಗ ಬೇಕೆಂಬ ಆಸೆಯಿಂದ ಆ ಬ್ರಾಹ್ಮಣನು ಚಿರಕಾಲ ವೇದಪ್ರತಿಪಾದ್ಯನಾದ ನಾರಾ ಯಣನನ್ನು ಸೇವಿಸುತ್ತಿದ್ದನು. ಒಂದು ದಿನ ಅವನು ಸ್ವಪ್ನದಲ್ಲಿ, ಸೂರ್ಯ ಕೋಟಿಪ್ರಕಾಶನಾಗಿ ಕಾಣಿಸಿಕೊಂಡನು. ಬಲತೊಡೆಯ ಮೇಲೆ ಅಭಯ ಹಸ್ತವನ್ನೂ ಎಡ ತೊಡೆಯ ಮೇಲೆ ಎಡಗೈಯನ್ನೂ ಇಟ್ಟು ಆದಿಶೇಷನಮೇಲೆ ಅನಂತಾಸನರೂಪದಿಂದ ಕುಳಿತಿರುವ ಸ್ವಾಮಿಯು ಬ್ರಾಹ್ಮಣನೊಡನೆ "ಬ್ರಾಹ್ಮಣಶ್ರೇಷ್ಠನೆ ! ಇಲ್ಲಿಂದ ಎರಡು ಹರಿದಾರಿ ದೂರದಲ್ಲಿ ಪಶ್ಚಿಮ ಸಮುದ್ರ ತೀರದಲ್ಲಿ ರೂಪ್ಯಪೀಠವೆಂಬ ಕ್ಷೇತ್ರವೊಂದಿದೆ. ಮೋಕ್ಷಪ್ರದವಾದ ಆ ಕ್ಷೇತ್ರಕ್ಕೆ ನೀನು ಪತ್ನೀಶಿಷ್ಯರಿಂದೊಡಗೂಡಿದವನಾಗಿ ಹೋಗಿ ಅಲ್ಲಿರುವ ತೀರ್ಥದಲ್ಲಿ ಸ್ನಾನವನ್ನು ಮಾಡಿ ಹಿರಣ್ಯಶ್ರಾದ್ಧವನ್ನು ಮಾಡು. ಚಂದ್ರಮೌಳೀಶ್ವರನನ್ನು ಆರಾಧಿಸು ಮತ್ತು ಆತನ ಹಿಂಬದಿಯಲ್ಲಿರುವ ಯಜ್ಞಕುಂಡವಾಗಿದ್ದ ನಾಗ ಪೀಠದಲ್ಲಿ ಕ್ಷೀರದಿಂದ ಅಭಿಷೇಕ ಮಾಡು. ಅಲ್ಲಿ ನಾನು ಲಿಂಗಾಕಾರದಿಂದ ಆವಿರ್ಭವಿಸುವೆನು. ನಾನು ಪರಶುರಾಮನಾಗಿದ್ದಾಗ ನನ್ನ ಅಂಶವನ್ನೇ ಮಹಾರುದ್ರನಲ್ಲಿರಿಸಿ ಆತನಿಂದ ಧನುರ್ವಿದ್ಯೆಯನ್ನು ಕಲಿತೆನು. ಆಗ ಮಹಾ ರುದ್ರನು 'ನೀನು ನನ್ನಂತರ್ಯಾಮಿಯಾಗಿದ್ದುದರ ಜ್ಞಾಪಕಾರ್ಥವಾಗಿ ಲಿಂಗಾ ಕಾರದಲ್ಲಿರುವ ನಿನ್ನ ಅಂಶರೂಪವನ್ನು ಪೂಜಿಸುವಂತಾಗಬೇಕೆಂದು' ಪ್ರಾರ್ಥಿಸಿ ಕೊಂಡ ಮೇರೆಗೆ ನಾನು ಆತನ ಅಭಿಲಾಷೆಯನ್ನು ಮನ್ನಿಸುವುದಾಗಿ ವರವಿತ್ತಿ ರುವೆನು. ಆ ವರದಂತೆ ನಾನು ಲಿಂಗಾಕಾರದಲ್ಲಿ ಪ್ರಕಟನಾಗಿ ನಿನಗೆ ಪುತ್ರ ಲಾಭನ್ನು ಕರುಣಿಸುವೆನು" ಎಂದು ಆಜ್ಞಾಪಿಸಿದನು. ಆ ಬ್ರಾಹ್ಮಣ ನಿಗೆ ಎಚ್ಚರವಾಗಿ ಆನಂದ ಪುಲಕಿತನಾದನು. ಲಿಂಗಾಕಾರದಲ್ಲಿ ಸ್ವಾಮಿಯು ಕಾಣಿಸಿಕೊಂಡು ಆ ವಿಪ್ರನಿಗೆ ಪುತ್ರಲಾಭವನ್ನು ಕರುಣಿಸಿ ದನು, ಮಹಾರುದ್ರನ ಅಪೇಕ್ಷೆಯಂತೆಯೇ ಶ್ರೀಮನ್ನಾರಾಯಣನು

ಲಿಂಗಾಕಾರದಲ್ಲಿ ಪ್ರಕಟನಾಗಿ ಅರ್ಚಿತನಾಗಿರುವುದರಿಂದ ಮೊದಲು ಚಂದ್ರ ಮೌಳೀಶ್ವರನದರ್ಶನ ಮಾಡಿ ಆನಂತರ ಅನಂತೇಶ್ವರನ ದರ್ಶನ ಪಡೆಯ ಬೇಕೆಂಬ ಪದ್ಧತಿಯುಂಟಾಗಿದೆ. ಅನಂತನೆಂದರೆ ಶೇಷನೆಂದರ್ಥ. ಆತನೇ ಆಸನವಾಗುಳ್ಳವನು ಎಂಬುದರಿಂದ ಅನಂತಾಸನನೆಂದೂ, ಅನಂತನಿಗೆ ಸ್ವಾಮಿ ಅದ್ದರಿಂದ ಅನಂತೇಶ್ವರನೆಂದೂ ಪ್ರಖ್ಯಾತನಾಗಿರುವ ಈ ಸ್ವಾಮಿಯು ಅನಂತಪದ್ಮನಾಭನೆಂದೂ ಸೇವಿಸಲ್ಪಡುತ್ತಿದ್ದಾನೆ.

ತುಳುದೇಶದ ರಾಮಭೋಜರಾಜನು ಸುವರ್ಣ ತುಲಾಭಾರವನ್ನು ಮಾಡಿಸಿಕೊಂಡುದ್ದರಿಂದ ಈ ದೇಶಕ್ಕೆ ತೌಳವದೇಶವೆಂದು ಹೆಸರಾಯಿತು. ಇಷ್ಟು ಈ ಸ್ಥಳವನ್ನು ಕುರಿತು ದೊರೆಯುವ ಪ್ರಾಚೀನ ಚರಿತ್ರೆ.

ಇನ್ನೊಂದು ಹೇಳಿಕೆಯಂತೆ ಉಡುಪಿ ಎಂಬ ಹೆಸರು ತುಳುನಾಡಿನ ವೈಶಿಷ್ಟ್ಯವಾದ ನಾಗಪೂಜೆಯಿಂದ ಬಂದಿದೆ. ಉಡು ಶಬ್ದಕ್ಕೆ ಸರ್ಪವೆಂಬ ಅರ್ಥವೂ ಇದೆ. ಇಂದಿಗೂ ಸರ್ಪಾರಾಧನೆ ಮತ್ತು ನಾಗಬನಗಳನ್ನು ವಿಶೇಷ ವಾಗಿ ಹೊಂದಿರುವ ಈ ಊರಿಗೆ ನಾಗಪೂಜೆಯ ಸಂಬಂಧದಿಂದ ಈ ಹೆಸರು ಬಂದಿರಬಹುದೆಂದು ಹೇಳುತ್ತಾರೆ. ಇಂಥ ನಾಗಕ್ಷೇತ್ರಗಳಲ್ಲಿ ಕುಕ್ಕೆಸುಬ್ರಹ್ಮಣ್ಯವು ಅತ್ಯಂತ ಪ್ರಸಿದ್ಧವಾದುದು. ಶ್ರೀಕೃಷ್ಣನನ್ನು ಕುಲದೇವತೆಯಾಗುಳ್ಳ ಅನೇಕ ಕುಟುಂಬಗಳು ತುಳುನಾಡಿನಲ್ಲಿ ಇವೆ. ಇವುಗಳಲ್ಲಿ ಉಡುಪ ಎಂಬ ಕುಲ ನಾಮವಿರುವ ಬ್ರಾಹ್ಮಣಕುಟುಂಬವೂ ಒಂದಿದೆ.

ರಾಮಭೋಜರಾಜನು ಅಶ್ವಮೇಧಯಾಗವನ್ನು ಮಾಡಬೇಕೆಂದು ಬಯಸಿ ಯಾಗಭೂಮಿಯನ್ನು ಉಳುತ್ತಿದ್ದಾಗ, ನೇಗಿಲಿಗೆ ಸಿಕ್ಕಿ ಒಂದು ಸರ್ಪವು ಮೃತವಾಯಿತು. ಅದು ವಸ್ತುತಃ ಸರ್ಪವಾಗಿರದೆ ಯಾಗಕ್ಕೆ ವಿಘ್ನವನ್ನುಂಟು ಮಾಡಲು ಸರ್ಪದ ಆಕಾರದಲ್ಲಿ ಅಲ್ಲಿ ಅಡಗಿ ಕುಳಿತಿದ್ದ ಒಬ್ಬ ಅಸುರನೇ ಆಗಿದ್ದರೂ ರಾಮಭೋಜನಿಗೆ ಸರ್ಪಹತ್ಯೆಯನ್ನು ಕುರಿತು ಯೋಚನೆಯಾಯಿತು. ಇದರ ಪರಿ ಹಾರಕ್ಕಾಗಿ ವಿಶಾಲವಾದ ರಜತಪೀಠವನ್ನು ಮಾಡಿಸಿ ಅದರ ನಾಲ್ಕು ಮೂಲೆಗಳಲ್ಲಿ ಸರ್ಪಾಕೃತಿಗಳನ್ನಿರಿಸಿ ಪೂಜಿಸುವಂತೆಯೂ, ಮಧ್ಯದಲ್ಲಿ ತಾನೇ ಆವಿರ್ಭವಿಸುವೆ ನೆಂದೂ, ಆತನ ತೂಕದಷ್ಟು ಭಂಗಾರವನ್ನು ತುಲಾಭಾರಮಾಡಿ ದಾನಮೀಯು ವಂತೆಯೂ ಪರಶುರಾಮನು ಸೂಚಿಸಲು ಅರಸನು ಅದರಂತೆ ಮಾಡಿದನು.

ಯಾಗಾಂತ್ಯದಲ್ಲಿ ಪರಶುರಾಮನು ಪ್ರತ್ಯಕ್ಷನಾಗಿ "ಈ ಯಾಗಭೂಮಿಯು ರೌಪ್ಯಪೀಠವೆಂಬ ಪುಣ್ಯಕ್ಷೇತ್ರವಾಗಿ ಪ್ರಖ್ಯಾತವಾಗಲಿ" ಎಂದು ಹರಸಿದನು. ಆದ್ದರಿಂದ ಆ ಪ್ರಾಂತ್ಯದಲ್ಲಿ ಸರ್ಪಪೂಜೆ–ಬಲಿಗಳು ಈಗಲೂ ಬಳಕೆಯಲ್ಲಿವೆ.

ಪ್ರಾಚೀನಸಂಸ್ಕೃತಶಾಸನಗಳಲ್ಲಿ ಉಡುಪಿಯನ್ನು ರಜತಪೀಠವೆಂದೂ, ರೌಪ್ಯಪೀಠವೆಂದೂ ಕರೆದಿದ್ದಾರೆ. ರಾಮಭೋಜನೆಂಬ ದೊರೆಯು ಅಶ್ವಮೇಧಯಾಗದಲ್ಲಿ ಪರಶುರಾಮನಿಗೆ ಕೂಡಲು ರಜತಪೀಠ ನೀಡಿದ್ದನೆಂದೂ, ಯಜ್ಞಮಾಡಿದ ಸ್ಥಳಕ್ಕೆ ರಜತಪೀಠವೆಂದು ಹೆಸರಾಯಿತೆಂದೂ, ಶ್ರೀ ಅನಂತೇಶ್ವರಸ್ವಾಮಿಯ ಪೀಠವು ಬೆಳ್ಳಿಯಿಂದ ನಿರ್ಮಿತವಾಗಿದ್ದುದರಿಂದ ಶಿವಬೆಳ್ಳಿ ಎಂದೂ ಈ ಕ್ಷೇತ್ರಕ್ಕೆ ಹೆಸರು ಬಂದಿರಬೇಕೆಂದು ಕೆಲವರ ತರ್ಕ. ಈ ವಾದವೇನೇ ಇರಲಿ, ಉಡುಪಿಯು ಶ್ರೀಮಧ್ವಾಚಾರ್ಯರ ಮೂಲ ಕಾರ್ಯಕ್ಷೇತ್ರವಾಗಿ ಲೋಕ ಪ್ರಸಿದ್ಧಿ ಪಡೆಯಿತು.

ಇನ್ನೊಂದು ಕಥೆಯಪ್ರಕಾರ ರೂಪ್ಯಪೀಠಕ್ಕೆ ಉಡುಪಿ ಎಂದು ಹೆಸರು ಬರಲು ಚಂದ್ರನು, ಕಾರಣನಂತೆ. ದಕ್ಷಪ್ರಜಾಪತಿಯ ಶಾಪಕ್ಕೊಳಗಾದ ಚಂದ್ರನು, ಶಾಪ ವಿಮೋಚನೆಗಾಗಿ ಈ ಕ್ಷೇತ್ರದ ಅರಣ್ಯದಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸನ್ನು ಆಚರಿಸಿದನು. ತಪಸ್ಸಿಗೆ ಒಲಿದ ಪರಮೇಶ್ವರನು ಆತನ ಶಾಪವಿಮೋಚನೆಗೊಳಿಸಿದನು. ಈ ಸ್ಥಳವೇ ಚಂದ್ರಮೌಳೀಶ್ವರದೇವಾಲಯುವೆಂದು ಪ್ರಸಿದ್ಧವಾಗಿದೆ. ಚಂದ್ರನು ತಪಸ್ಸು ಮಾಡಿದ ಸ್ಥಳವೇ ಅಬ್ಜಾರಣ್ಯವೆಂದು ಹೆಸರು ಪಡೆದಿದೆ. ಅಲ್ಲಿ ಚಂದ್ರಪುಷ್ಕರಿಣಿ ಎಂಬ ಪವಿತ್ರ ತೀರ್ಥ ಇದೆ. ಉಡುಪ (ಉಡು ಎಂದರೆ ನಕ್ಷತ್ರಗಳಿಗೆ ಪ–ಎಂದರೆ ಸ್ವಾಮಿ) ಎಂದರೆ ಚಂದ್ರನೆಂದರ್ಥ. ಉಡುಪನು ತಪಸ್ಸು ಮಾಡಿ ಸಿದ್ಧಿಯನ್ನು ಹೊಂದುದರಿಂದ ಈ ಸ್ಥಳವು ಉಡುಪಿ ಎಂದು ಹೆಸರು ಪಡೆಯಿತು.

ಇಂಥ ಪವಿತ್ರವಾದ ಉಡುಪಿ (ರಜತಪೀಠಪುರ) ಕ್ಷೇತ್ರದ ಮಹಿಮೆಯು ಸ್ಕಾಂದಪುರಾಣದಲ್ಲಿ ರಜತಪೀಠಪುರ ಮಹಾತ್ಮ್ಯೆಯಲ್ಲಿ ಏಳು ಅಧ್ಯಾಯಗಳಲ್ಲಿ ವರ್ಣಿತವಾಗಿದೆ. ಸೂತಶೌನಕಾದಿಗಳಿಗೆ ನಡೆಯುವ ಸಂವಾದವೇ ಈ ಮಾಹಾತ್ಮ್ಯ ರೂಪವಾಗಿದೆ.

ತುಳುನಾಡನ್ನಾಳಿದ ಮಯೂರವರ್ಮ ಹಾಗೂ ಶಿವಳ್ಳಿಬ್ರಾಹ್ಮಣರ ಬಗ್ಗೆ ಪ್ರಚಲಿತ ಕಥೆ ಹೀಗಿದೆ;—

ರಾಮಭೋಜನ ಅನಂತರ, ಕದಂಬರಾಜನು ಒಂದು ಪರ್ವತ ಪ್ರದೇಶದಲ್ಲಿ ರಾಜ್ಯವಾಳುತ್ತಿದ್ದನು. ಪರಮೇಶ್ವರನ ಅನುಗ್ರಹ ದಿಂದ ಹುಟ್ಟಿದ ವಸುರಾಜನೆಂಬುವನು, ತನ್ನ ಪುತ್ರಿಯಾದ ಸುಶೀಲೆಗೆ ಸೂರ್ಯವಂಶೋತ್ಪನ್ನನಾದ ಹೇಮಾಂಗದನೆಂಬುವನೊಡನೆ ವಿವಾಹ ಮಾಡಿ ದ್ದನು. ಈತನು ಪಿತ್ರರಿಷ್ಟಯೋಗದಲ್ಲಿ ಹುಟ್ಟಿದುದರಿಂದ ಯುದ್ಧವು ಸಂಭವಿಸಿ ಹೇಮಾಂಗದನು ಮೃತನಾದನು. ಆಗ ರಾಣಿ ಸುಶೀಲೆಯು ತನ್ನ ಕುಮಾರ ನೊಡನೆ ಶುಕ್ತಿಮತೀತೀರಕ್ಕೆ ಬಂದು ಬಹು ಕಷ್ಟದಿಂದ ಜೀವನ ಮಾಡುತ್ತಿ ದ್ದಳು. ಆಗ ವಸಿಷ್ಠಮಹರ್ಷಿಗಳು ಅಲ್ಲಿಗೆ ಬಂದು, ಕೋಟೇಶ್ವರನನ್ನು ಆರಾಧಿಸಿದರೆ ಅವಳ ಸಂಕಷ್ಟ ಪರಿಹಾರವಾಗುವುದೆಂದು ಸೂಚಿಸಿದರು. ಅದರಂತೆಯೇ ಆಕೆಯು ಕೋಟೇಶ್ವರನನ್ನು ಆರಾಧಿಸುತ್ತಿದ್ದಳು. ಆ ಮಹೇಶ್ವ ರನ ಅನುಗ್ರಹದಿಂದಲೇ ಮಯೂರವರ್ಮನು ತೌಳವರಾಜ್ಯಕ್ಕೆ ಅರಸನಾ ದನು. ರೂಪ್ಯಪೀಠವೆಂಬ ಈ ಸ್ಥಳಕ್ಕೆ ಶಿವಳ್ಳಿ ಎಂಬ ಹೆಸರೂ ಇದೆ. ಉತ್ತರಪಾಂಚಾಲದೇಶದಲ್ಲಿ ಗೋಮತೀ ನದಿಯ ಉತ್ತರ ತೀರದಲ್ಲಿರುವ ರೋಹಿಲಖಂಡದಲ್ಲಿ ಅಹಿಚ್ಛತ್ರ ಎಂಬ ಊರು ಇತ್ತು. ಅಲ್ಲಿಂದ ಬ್ರಾಹ್ಮಣರು ಬಂದು ಉಡುಪಿಯಲ್ಲಿ ನೆಲೆಸಿದುದರಿಂದಲೇ ಅವರು ಶಿವಳ್ಳಿ ಬ್ರಾಹ್ಮಣರು ಎಂದು ಪ್ರಸಿದ್ಧರಾದರು. ಈ ದೇಶವು ತೌಳವ ದೇಶವೆನ್ನಿಸಿದುದರಿಂದ ಅವರು ತೌಳವ ಬ್ರಾಹ್ಮಣರೆಂದೂ ಅನ್ನಿಸಿಕೊಂಡರು.

## ಅವತಾರತ್ರಯ

ಶ್ರೀಮಧ್ವಾಚಾರ್ಯರು[1] ಮಹಾಭಾರತತಾತ್ಪರ್ಯನಿರ್ಣಯವೆಂಬ ಗ್ರಂಥದಲ್ಲಿ ತಮ್ಮ ಬಗೆಗೆ ಕುತೂಹಲಕಾರಿ ಎನಿಸುವ ಕೆಲವು ಸಂಗತಿಗಳನ್ನು

---

ಶ್ರೀರಾಮಂ ಹನುಮತ್ಸೇವ್ಯಂ ಶ್ರೀಕೃಷ್ಣಂ ಭೀಮಸೇವಿತಮ್ ।
ಶ್ರೀವ್ಯಾಸಂ ಶ್ರೀಮದಾನಂದತೀರ್ಥಾರ್ಯಮುನಿಸೇವಿತಮ್ ॥

ಹೇಳಿಕೊಂಡಿದ್ದಾರೆ. ಇವುಗಳಲ್ಲಿ ತಮ್ಮ ಅವತಾರದ ವಿಷಯವೂ ಒಂದು. ತಾವು ರಾಮಾವತಾರದಲ್ಲಿ ಹನುಮಂತರಾಗಿಯೂ, ಕೃಷ್ಣಾವತಾರದಲ್ಲಿ ಭೀಮ ಸೇನರಾಗಿಯೂ, ಕಲಿಯುಗದಲ್ಲಿ ಪೂರ್ಣಪ್ರಜ್ಞರಾಗಿಯೂ ಭಗವಂತನ ದುಷ್ಟ ಶಿಕ್ಷಣ, ಶಿಷ್ಟಪರಿಪಾಲನೆಯ ಧರ್ಮೋದ್ಧಾರದ ಕಾರ್ಯದಲ್ಲಿ ಸಾಧಕರಾಗಿ ಕೆಲಸ ಮಾಡುವುದಾಗಿ ತಿಳಿಸಿದ್ದಾರೆ।

ಈ ಹೇಳಿಕೆಗೆ ಆಧಾರವಾಗಿ ಬಳಿತ್ಥಾಸೂಕ್ತದಲ್ಲಿ ವಾಯುದೇವರ ಮೂರು ಅವತಾರಗಳ ಬಗೆಗೆ ಸ್ಪಷ್ಟವಾದ ಉಲ್ಲೇಖನವಿದೆ. ವಾಯುದೇವರು, ತ್ರೇತಾಯುಗದಲ್ಲಿ ಹನುಮಂತರಾಗಿಯೂ, ದ್ವಾಪರಯುಗದಲ್ಲಿ ಭೀಮಸೇನ

---

1) ಚತುಃಸಹಸ್ರಂ ತ್ರಿಶತೋತ್ತರಂ ತೇ ಸಂವತ್ಸರಾಣಾಮನುಭೂಯ ದಿವ್ಯಾನ್।
ಭೋಗಾನ್ನರತ್ವೇಽಪಿ ಸದೇಶ್ವರೋಹಮುಸಜ್ಜಗಚ್ಛೇತಿ ಧಿಯಾಽಪ್ಯುಪಾಂಸ್ತ ಮಃ ॥

ಚತುಃಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂ ತು ಕಲೌ ಪೃಥಿವ್ಯಾಂ।
ಜಾತಃ ಪುನಃ ವಿಪ್ರತನುಃ ಸ ಭೀಮೋ ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥

ತದೈವ ಕೃಷ್ಣಾಪಿ ಭುವಿ ಪ್ರಜಾತಾ ಸ್ತ್ರೀತ್ವೇ ಹರೇರಂಧತಮಸ್ಯಪಾತಯತ್।
ಮಹಾಸುರಾನ್ವಿಷ್ಣುಪರಾರ್ಜುನಾದ್ಯಾಃ ಕೃತೇ ಪ್ರಜಾತಾ ಹರಿತೋಷಣಾಯ ॥

ಪುನಶ್ಚ ತೇ ಸ್ಥಾನಮವಾಪ್ಯ ಸರ್ವೇ ಸ್ವೀಯಂ ಪರಾಂತೇ ತು ವಿಮುಕ್ತಿಮಾಪ್ನುಯುಃ ॥

ವಾಯುತ್ವಮಾಪ್ತಃ ಸ ಹನೂಮದಂಶೋ ಬ್ರಾಹ್ಮಂ ಪದಂ ಪ್ರಾಪ್ಯ ವೃಕೋದರಶ್ಚ ।

ವಾಗೀಶ್ವರೀತ್ವಂ ಗತಯೈವ ಕೃಷ್ಣಯಾ ಸಹೈವ ಮುಕ್ತಿಂ ಗಮಿತಾಖಿಲೋತ್ತಮಾಂ ॥

ಭೂಷನ್ನಯೋಧಿ ಬಭ್ರುಷು ಸಮ್ರತೇ ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ।
ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವೇತ್ಯಾದಿಸೂಕ್ತಾನಿ ಚ ತತ್ಪ್ರಮಾಣಂ॥

(ಮ॥ ಭಾ॥ ತಾ॥ ನಿ॥ ಸರ್ಗ 32 ಶ್ಲೋಕ 218–135)

ರಾಗಿಯೂ, ಕಲಿಯುಗದಲ್ಲಿ ಖಿಲವಾಗುತ್ತಿದ್ದ ವೈದಿಕಧರ್ಮವನ್ನು ಯತಿ ರೂಪದಿಂದ ಅವತರಿಸಿ ಪುನರುದ್ಧಾರ ಮಾಡುವುದಾಗಿ ಅಲ್ಲಿ ಸೂಚಿಸಲಾಗಿದೆ.

ಈ ಬಗೆಗೆ ಪ್ರಚಲಿತವಾದ ಕಥೆ ಹೀಗಿದೆ:—

ರೌಪ್ಯಪೀಠಪುರದಲ್ಲಿ ಶ್ರೀಮಧ್ವಾಚಾರ್ಯರು ಗರ್ಭಗುಡಿ ಬಾಗಿಲು ಹಾಕಿಕೊಂಡು ಪ್ರತಿದಿನ ಶ್ರೀಕೃಷ್ಣನನ್ನು ಪೂಜಿಸುವ ಸಮಯದಲ್ಲಿ, ಶಿಷ್ಯ ರಾದ ತ್ರಿವಿಕ್ರಮಪಂಡಿತಾಚಾರ್ಯರು ಹೊರಗೆ ಇದ್ದು ದ್ವಾದಶಸ್ತೋತ್ರ ಪಠಿಸುತ್ತಿದ್ದರಂತೆ. ನೈವೇದ್ಯಸಮರ್ಪಣೆ ಅಂತ್ಯಸೂಚಕವಾಗಿ ಘಂಟಾನಾದ ವಾಗುತ್ತಿತ್ತು. ಒಂದು ದಿನ ಶ್ರೀಮಧ್ವಾಚಾರ್ಯರು ಸ್ವಾಮಿಯ ಪೂಜೆ ಮಾಡುತ್ತಿದ್ದವರು ಎಷ್ಟು ಸಮಯವಾದರೂ ನೈವೇದ್ಯಪೂರ್ಣಸೂಚಕದ ಘಂಟನಾದ ಮಾಡದಿರುವುದನ್ನು ನೋಡಿ ಪಂಡಿತಾಚಾರ್ಯರು ಗವಾಕ್ಷ ದಿಂದ ಇಣಕಿ ನೋಡಿದರಂತೆ! ಈಗ ಶ್ರೀಮಧ್ವಾಚಾರ್ಯರು[1] ಹನು ಮಂತನಾಗಿ ಶ್ರೀರಾಮನನ್ನೂ, ಭೀಮನಾಗಿ ಶ್ರೀಕೃಷ್ಣನನ್ನೂ, ಶ್ರೀಮಧ್ವಾ ಚಾರ್ಯರಾಗಿ ಶ್ರೀವೇದವ್ಯಾಸರನ್ನೂ ಪೂಜಿಸುತ್ತಿರುವುದನ್ನು ನೋಡಿ ಚಕಿತ ರಾದರಂತೆ, ಅವರು ಭಕ್ತಿಯ ಆವೇಶಭರದಲ್ಲಿ ಹನುಮದ್ಭೀಮಮಧ್ವಾವತಾರಾ ತ್ಮಕವಾಯುಸ್ತುತಿಯನ್ನು ರಚಿಸಿ ಆಚಾರ್ಯರಿಗೆ ಸಮರ್ಪಿಸಿದರಂತೆ.

ಶ್ರೀಮಧ್ವಾಚಾರ್ಯರು ಈ ಸ್ತೋತ್ರದಿಂದ ಸುಪ್ರೀತರಾಗಿ ಅದರ ಒಂದೊಂದು ಶ್ಲೋಕ ಪಠಣಕ್ಕೂ ಒಂದೊಂದು ಫಲ ದೊರಕುವುದೆಂದು ವರ ವಿತ್ತರಂತೆ. ಅಲ್ಲದೆ ಈ ವಾಯುಸ್ತುತಿಗೆ ಪ್ರಾರಂಭದಲ್ಲಿ, ತಾವೇ ರಚಿಸಿದ ಶ್ರೀನರಸಿಂಹನಖಸ್ತುತಿಯನ್ನು ಸೇರಿಸಿದರಂತೆ. ಇದನ್ನು ಭಕ್ತಿಪೂರ್ವಕವಾಗಿ ಪಠಿಸುವವರಿಗೆ ಸಕಲ ಇಷ್ಟಾರ್ಥಗಳು ಸಿದ್ಧಿಸುವುವೆಂದು ಹೇಳುತ್ತಾರೆ.

---

1) ಅದ್ರಾಕ್ಷೀತ್ತ್ರೀಣಿ ರೂಪಾಣಿ ಕದಾಚಿದ್ಬಹುಭಾಗ್ಯವಾನ್ ।
ಶ್ರೀಮದಾಚಾರ್ಯವರ್ಯಾಣಾಂ ತಥಾ ರಾಮಸ್ಯ ಕೃಷ್ಣಯೋಃ ॥
ತತ್ರಾಪಿ ಗುರುಭಿಃ ಸೇವ್ಯಮಾನಾನಿ ಪರಮಾದರಾತ್ ।
ಪರಮಾನಂದಮಗ್ನೋಽಸೌ ಚಕ್ರೇ ವಾಯುಸ್ತುತಿಂ ಸುಧೀಃ ॥

ಶ್ರೀಮಧ್ವಾಚಾರ್ಯರು ಪೂರ್ವಾವತಾರಗಳಲ್ಲಿ ಮಾಡಿದ್ದ ಕಾರ್ಯಗಳನ್ನು ವಿಚಾರ ಮಾಡೋಣ.

ಶ್ರೀರಾಮಾಯಣವು ಆದಿಕವಿ ಶ್ರೀವಾಲ್ಮೀಕಿಮಹರ್ಷಿಗಳಿಂದ ರಚಿತವಾಗಿ ಲೋಕವಂದಿತವಾಗಿದೆ. ಲೋಕಕಂಟಕರಾದ ರಾವಣ, ಕುಂಭಕರ್ಣಾದಿ ದೈತ್ಯರನ್ನು ನಾಶಮಾಡಲು ಶ್ರೀರಾಮರೂಪಿಯಾದ ಶ್ರೀಮನ್ನಾರಾಯಣನು ಮಾನವನಾಗಿ ಅವತರಿಸಿ ಮಾನವನಂತೆಯೇ ನಡೆದುಕೊಳ್ಳುತ್ತಾನೆ, ರಾವಣನು ಪುಷ್ಪಕ ವಿಮಾನದಲ್ಲಿ ಸೀತಾದೇವಿಯನ್ನು ಕದ್ದೊಯ್ದ ಮೇಲೆ ಅವಳನ್ನು ಹುಡುಕಿಕೊಂಡು ಸಾಮಾನ್ಯ ಮನುಷ್ಯನಂತೆ ವಿಡಂಬನೆ ಮಾಡುತ್ತಾ ಕಿಷ್ಕಿಂಧೆಯ ಕಾಡುಮೇಡುಗಳಲ್ಲಿ ಸುತ್ತಾಡುತ್ತಾನೆ. ಆಗ ಅಂಜನಾಸುತನಾದ ಆಂಜನೇಯನ ಪರಿಚಯ ವಾಗುತ್ತದೆ. ಅವನ ಮೂಲಕ ಸುಗ್ರೀವಸಖ್ಯ ಮತ್ತು ವಾಲಿವಧೆಗಳು ನಡೆದು, ಜಾನಕಿಯ ವೃತ್ತಾಂತವನ್ನು ತಿಳಿದು ಬರಲು ಕಪಿರಾಜ ಸುಗ್ರೀವನ ಆಜ್ಞೆಯಂತೆ ಕಪಿವೀರರೆಲ್ಲರೂ ದಿಕ್ಕುದಿಕ್ಕುಗಳಿಗೆ ತೆರಳುತ್ತಾರೆ ।

---

1) ಪ್ರಭಂಜನಸುತಃ ಶ್ರೀಮಾನಾಂಜನೇಯೋ ನಿರಂಜನಃ ।
ನನಾಮ ಭಕ್ತಿಭರಿತೋ ರಾಮಂ ರಾಜೀವಲೋಚನಮ್ ॥
ಸ ವನಾಂತರಮಾಸಾದ್ಯ ರಾಮಃ ಸುಗ್ರೀವಮೈಕ್ಷತ ।
ತೇನ ಸಖ್ಯಂ ಸಮಾಸಾದ್ಯ ನಿಜಘಾನ ತದಗ್ರಜಮ್ ॥
ತತಃ ಸುಗ್ರೀವಸಂದಿಷ್ಟಾ ವಾನರಾ ದಿಕ್ಷು ಸರ್ವಶಃ ।
ಪ್ರಸಸ್ರುರ್ನಿಪುಣಾ ವೀರಾಸ್ಸೀತಾಮಾರ್ಗಣತತ್ಪರಾಃ ॥
ದಕ್ಷಿಣಾಂ ಕಕುಭಾಂ ಗತ್ವಾ ಹನೂಮಾನಂಭಸಾಂ ನಿಧಿಮ್ ।
ಅತಿಲಂಘ್ಯ ತತೋ ಲಂಕಾಂ ಸೀತಾಕೃತಿಮವೈಕ್ಷತ ॥
ರಾಮಾಂಗುಲೀಯಕಂ ದೇವ್ಯೈ ದತ್ವಾ ಚೂಡಾಮಣಿಂ ತತಃ ।
ಸಂಗೃಹ್ಯ ಜಾನಕೀಂ ಭಕ್ತ್ಯಾ ನತ್ವಾ ಸಾವಾರುಹತ್ತರೂಮ್ ॥
ತೇಷಾಂ ಮೋಕ್ಷಪದಂ ದತ್ವಾ ಹ್ಯನುಜ್ಞಾಪ್ಯ ಮರುತ್ಸುತಮ್ ।
ರಾಘವಃ ಸೀತಯಾ ಸಾರ್ಧಂ ವಿವೇಶ ಸ್ವಂ ಪರಂ ಪದಮ್ ॥

ಮಣಿಮಂಜರಿ ಸರ್ಗ 2-ಶ್ಲೋಕ 3-32

ಸೀತಾದೇವಿಯನ್ನು ಹುಡುಕಲು ದಕ್ಷಿಣದಿಕ್ಕಿಗೆ ಹೊರಟ ಹನುಮಂತನು ಶ್ರೀರಾಮನ ವಿಶೇಷ ಕೃಪೆಗೆ ಪಾತ್ರನಾಗಿ, ಅವನ ಮುದ್ರಿಕೆಯ ಉಂಗುರವನ್ನು ಲಂಕೆಯ ಅಶೋಕವನದಲ್ಲಿದ್ದ ಸೀತಾದೇವಿಗೆ ಇತ್ತು, ರಾಮಚಂದ್ರನ ಕುಶಲ ವಾರ್ತೆಯನ್ನು ತಿಳಿಸುವನು. ಅವಳು ನೀಡಿದ ಚೂಡಾಮಣಿಯನ್ನು ತಂದು ಶ್ರೀ ರಾಮನಿಗೆ ಒಪ್ಪಿಸುವನು. ಈ ಉಪಕಾರಕ್ಕಾಗಿ ಶ್ರೀರಾಮನು ಭಕ್ತಶ್ರೇಷ್ಠನೂ ಕಾರ್ಯಸಾಧಕನೂ ಆಗಿದ್ದ ಮಾರುತಿಯನ್ನು[1] ಆಲಂಗಿಸಿಕೊಳ್ಳುವನು.

ಶ್ರೀರಾಮಾಯಣದಲ್ಲಿ ಈ ಕಥೆಯನ್ನು ವರ್ಣಿಸುವ ಭಾಗಕ್ಕೆ ಸುಂದರ ಕಾಂಡವೆಂದು ಹೆಸರು. ಇದೊಂದು ಅತ್ಯಂತ ರಮಣೀಯವಾದ ಭಾಗ.

---

1) ಮಹಾವ್ಯಾಕರಣಾಂಭೋಧಿಮಂಥಮಾನಸಮಂದರಮ್ ।
ಕವಯಂತಂ ರಾಮಕೀರ್ತ್ಯಾ ಹನೂಮಂತಮುಪಾಸ್ಮಹೇ ॥
ಮುಖ್ಯಪ್ರಾಣಾಯ ಭೀಮಾಯ ನಮೋ ಯಸ್ಯ ಭುಜಾಂತರಮ್ ।
ನಾನಾವೀರಸುವರ್ಣಾನಾಂ ನಿಕಷಾಶ್ಮಾಯಿತಂ ಬಭೌ ॥
ಸ್ವಾಂತಸ್ಥಾನಂತಶಯ್ಯಾಯ ಪೂರ್ಣಜ್ಞಾನರಸಾರ್ಣವೇ ।
ಉತ್ತುಂಗವಾಕ್ತರಂಗಾಯ ಮಧ್ವದುಗ್ಧಾಬ್ಧಯೇ ನಮಃ ॥
ಹನೂಮಾನಾಂಜನೀಸೂನುರ್ವಾಯುಪುತ್ರೋ ಮಹಾಬಲಃ ।
ರಾಮೇಷ್ಟಃ ಫಲ್ಗುನಸಖಃ ಪಿಂಗಾಕ್ಷೋಽಮಿತವಿಕ್ರಮಃ ॥
ಮನೋಜವಂ ಮಾರುತತುಲ್ಯವೇಗಂ
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ ।
ವಾತಾತ್ಮಜಂ ವಾನರಯೂಥಮುಖ್ಯಂ
ಶ್ರೀರಾಮದೂತಂ ಶಿರಸಾ ನಮಾಮಿ ॥
ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ ।
ಅಜಾಡ್ಯಂ ವಾಕ್ಪಟುತ್ವಂ ಚ ಹನುಮತ್ಸ್ಮರಣಾದ್ಭವೇತ್ ॥
ಮರ್ಕಟೇಶ ಮಹೋತ್ಸಾಹ ಸರ್ವಶೋಕವಿನಾಶಕ ।
ಶತ್ರೂನ್ ಸಂಹರ ಮಾಂ ರಕ್ಷ ಶ್ರಿಯಂ ದಾಸಾಯ ದೇಹಿ ಮೇ ॥

—ಲಘುವಾಯುಸ್ತುತಿ

ಶ್ರೀರಾಮದೂತನಾದ ಮಾರುತಿಯು ಮನೋಜವನು, ಮಾರುತತುಲ್ಯ ವೇಗನು, ಜಿತೇಂದ್ರಿಯನು, ಬುದ್ಧಿವಂತರಲ್ಲಿ ಶ್ರೇಷ್ಠನು, ವಾತಾತ್ಮಜನಾದ ಅವನು ವಾನರ ಸೈನ್ಯಕ್ಕೆ ಮುಖ್ಯಸ್ಥನು.

ಬುದ್ಧಿ, ಬಲ, ಯಶಸ್ಸು, ಧೈರ್ಯ, ನಿರ್ಭಯತ್ವ, ಆರೋಗತ, ಅಜಾಡ್ಯ, ವಾಕ್ಪಟುತ್ವ ಇವೆಲ್ಲ ಹನುಮಂತನ ಸ್ಮರಣೆ ಮಾತ್ರದಿಂದಲೇ ಉಂಟಾಗುವುವು.

ಅವನು ಇವೆಲ್ಲಾ ಗುಣಗಳಿಂದ ಕೂಡಿದ್ದರೂ ಏನೂ ತಿಳಿಯದವನಂತೆ ಶ್ರೀರಾಮನ ಸೇವೆಯಲ್ಲಿ ನಮ್ರನಾಗಿ ತೊಡಗಿರುತ್ತಿದ್ದ. ಶ್ರೀರಾಮನ ಸೇವೆಯೊಂದು ಉಳಿದು ಬೇರೆ ಹವ್ಯಾಸ ಅವನಿಗೆ ಇರಲೇ ಇಲ್ಲ.

ಮಾರುತಿಯು ಮಹಾಪರಾಕ್ರಮಿಯಾದರೂ ವಿನೀತ ಮಹಾಮೇಧಾವಿಯಾದರೂ ನಿಗರ್ವಿ. ತನ್ನ ಸಮಸ್ತ ಶಕ್ತಿಯನ್ನು ಶ್ರೀರಾಮನ ಸೇವೆಗೇ ಮೀಸಲಿಟ್ಟಿದ್ದ ಮಹಾಭಕ್ತಾಗ್ರಣಿ ಅವನು. |೨

ದ್ವಾಪರಯುಗದಲ್ಲಿ ಶ್ರೀಮನ್ನಾರಾಯಣನು ಜರಾಸಂಧ, ಕಂಸ, ಶಿಶುಪಾಲ, ದಂತವಕ್ತ್ರಾದಿ ದೈತ್ಯರನ್ನು ದಮನ ಮಾಡಲು ಶ್ರೀಕೃಷ್ಣರೂಪಿಯಾಗಿ ಅವತರಿಸಿದಾಗ ಈ ದುಷ್ಟಶಿಕ್ಷಣಕಾರ್ಯದಲ್ಲಿ ಅವನಿಗೆ ನೆರವಾದವನು ಪಾಂಡವರಲ್ಲಿ ಮಧ್ಯಮನಾದ ಭೀಮಸೇನ. ವಾಯ್ವಂಶದಿಂದ ಕುಂತೀದೇವಿಯ ಉದರದಲ್ಲಿ ಹುಟ್ಟಿದ ಇವನು ಬಾಲ್ಯಾವಸ್ಥೆಯಲ್ಲಿರುವಾಗಲೇ ವಿಷಮಿಶ್ರಿತ ಆಹಾರವನ್ನು ಉಂಡು ಜೀರ್ಣಿಸಿಕೊಂಡವನು. ಸರ್ಪದಂಷ್ಟ್ರವನ್ನು ನಿವಾರಿಸಿಕೊಂಡವನು. ಅರಗಿನ ಮನೆಯಲ್ಲಿ ಸುಟ್ಟು ಹೋಗಲಿದ್ದ ಧರ್ಮರಾಜಾದಿಗಳನ್ನು ರಕ್ಷಿಸಿದವನು. ಜನರಿಗೆ ಉಪಟಳ ಕೊಡುತ್ತಿದ್ದ ಹಿಡಿಂಬ ಬಕಾಸುರರೆಂಬ ರಾಕ್ಷಸರನ್ನು ಕೊಂದವನು. ಅಧರ್ಮಕ್ಕೂ ಅನ್ಯಾಯಕ್ಕೂ ಕಾರಣಪುರುಷರಂತಿದ್ದ ಜರಾಸಂಧ, ಮಣಿಮಂತ, ಕೀಚಕ ಮುಂತಾದವರನ್ನು ನಾಶಪಡಿಸಿದವನು, ಕುರುಕ್ಷೇತ್ರಯುದ್ಧದಲ್ಲಿ ರಾಜ್ಯಲೋಭಿಗಳಾದ ದುರ್ಯೋಧನ, ದುಶ್ಶಾಸನಾದಿಗಳನ್ನು ಕೊಂದವನು. ಹೀಗೆ ಧರ್ಮಸಂಸ್ಥಾಪನೆಗಾಗಿ ಅವತರಿಸಿದ್ದ ಶ್ರೀಕೃಷ್ಣನ ಸೇವೆಗೆ ತನ್ನನ್ನೇ ಅರ್ಪಿಸಿಕೊಂಡಿದ್ದ ಮಹಾನುಭಾವ ಭೀಮಸೇನ.

ಇಂಥ ಪರಾಕ್ರಮಿಯೂ ಮಹಾಜ್ಞಾನಿಯೂ ಆಗಿದ್ದ ಭೀಮಸೇನನು ಶ್ರೀಕೃಷ್ಣನ ಆಜ್ಞಾನುವರ್ತಿಯಾಗಿ ಅವನ ಕಿಂಕರನಂತೆ ನಡೆದುಕೊಂಡಿದ್ದನು. ಭೀಮಸೇನನಲ್ಲಿದ್ದ ಧೈರ್ಯ, ಸಾಹಸ, ಶ್ರದ್ಧಾಭಕ್ತಿಗಳು ಮುಂತಾದ ಗುಣಗಳು ಶ್ರೀಮಧ್ವಾಚಾರ್ಯರಲ್ಲೂ ಎದ್ದುಕಾಣುತ್ತಿದ್ದುವು.

ವಾಯುಪುರಾಣಾದಿ ಗ್ರಂಥಗಳಲ್ಲಿ ಶ್ರೀಮಧ್ವಾಚಾರ್ಯರ ಅವತಾರದ ಬಗೆಗೆ ಉಲ್ಲೇಖನಗಳಿವೆ. ಅವರು ಕಲಿಯುಗದಲ್ಲಿ ದ್ವೈಪಾಯನರ ಸೇವೆ ಸಲ್ಲಿಸಲೂ ಮತ್ತು ದುಃಶಾಸ್ತ್ರಖಂಡನ ಮಾಡಲೂ ಯತಿರೂಪದಲ್ಲಿ ಹುಟ್ಟುವರೆಂದು ಹೇಳಿದೆ.1

ಶ್ರೀಮನ್ಮಧ್ವಾಚಾರ್ಯರ ಜೀವನ ಚರಿತ್ರೆಯನ್ನು ರಚಿಸಿದವರೂ, ಲಿಕುಚ ವಂಶದವರೂ ಕವಿಕುಲತಿಲಕರೂ, ಪಂಡಿತೋತ್ತಮರೂ, ತ್ರಿವಿಕ್ರಮಪಂಡಿತಾಚಾರ್ಯರ ಸುಪುತ್ರರೂ ಆದ ನಾರಾಯಣಪಂಡಿತಾಚಾರ್ಯರು "ಸುಮಧ್ವ

---

(1) ಶ್ರೀಮಧ್ವಾಚಾರ್ಯರ ವಾಯ್ವವತಾರಕ್ಕೇ ಪ್ರಮಾಣಗಳು—
ಅದ್ವೈತಕಾಲಾನಲ—ವೈಶ್ವನಾಥೀ ನಾರಾಯಣಾಚಾರ್ಯರಚಿತ-
ಪುಟ-41 ಪಂಕ್ತಿ-5 – (ಉತ್ತರಾದಿ ಮಠ ಮುದ್ರಣ)
"ಜೇತುಂ ಚತುರ್ಗುಣಬಲೋ ಹಿ-ಪುಮಾನ್ಪ್ರಭುಃಸ್ಯಾ-
ದ್ಧಂತುಂ ಶತಾಧಿಕಬಲೋಧಿಬಲಂ ಸಮರ್ಥಃ" ಇತಿಹ್ಯುಕ್ತಂ. ತಚ್ಚಬಾಹುಯುದ್ಧೇ ಶರೀರಬಲಾಧಿಕ್ಯಂ. ವಾಗ್ಯುದ್ಧೇ ಚ ಜ್ಞಾನ ಬಲಾಧಿಕ್ಯಂ ಪ್ರಯೋಜನಂ ಏವಂ ಚ ಶಂಕರಾದಪ್ಯುತ್ತಮೋ ದೇವಾಧಿದೇವೋಽಯಮಾನಂದತೀರ್ಥಃ ಕಥಂ ಸರ್ವಜ್ಞೋ ನ ಭವೇದಿತಿ ಭವಾದೃಶೈರ್ವಿವೇಕಿಭಿಃ ಪರಿಭಾವನೀಯಂ.ಮುಖ್ಯಪ್ರಾಣಃ ರುದ್ರೋತ್ತಮಃ. ಅತ ಏವ ಅಯಂ ರುದ್ರಾವತಾರಂ ಭವದೀಯಶಂಕರಾಚಾರ್ಯಂ ಜಿತವಾನಸ್ಮದೀಯೋಽಚಾರ್ಯಃ ಮುಖ್ಯಪ್ರಾಣಾವತಾರ ಇತ್ಯುಪಪನ್ನತ್ವಾತ್.
ಮಧ್ವಾಧ್ವಕಂಟಕೋದ್ಧಾರ–ವಿಜಯೀಂದ್ರರಚಿತ ಧಾರವಾಡ ಮುದ್ರಣ-
ಪುಟ-4-ಪಂಕ್ತಿ 12ರಿಂದ ಕೊನೆಯವರಿಗೆ

ಮುಂದಿನ ಪುಟಕ್ಕೆ

ವಿಜಯ" ಗ್ರಂಥದಲ್ಲಿ ಶ್ರೀಮಧ್ವಾಚಾರ್ಯರ ಈ ಅವತಾರತ್ರಯದ ವಿಷಯ ವನ್ನು ಒಂದು ಸರ್ಗದಷ್ಟು ವಿಸ್ತಾರವಾಗಿ ವಿವರಿಸಿದ್ದಾರೆ. ಅದರ ಮೊದಲನೆಯ ಸರ್ಗದಲ್ಲಿ ಮುಖ್ಯಪ್ರಾಣದೇವರ, ಶ್ರೀಹನುಮಭೀಮಮಧ್ವರ ಮೂರು ಅವತಾರಗಳೂ ವರ್ಣಿತವಾಗಿವೆ. ಅಲ್ಲದೆ ಅವರೇ ರಚಿಸಿದ ಪ್ರಮೇಯ ನವಮಾಲಿಕಾ ಎಂಬ ಹೆಸರಿನ ಅಣುಮಧ್ವವಿಜಯದಲ್ಲೂ ಇದೇ ಸಂಗತಿಯನ್ನು ಸ್ರಗ್ಧರಾ ವೃತ್ತದ ಶ್ಲೋಕಗಳಿಂದ ವರ್ಣಿಸಿದ್ದಾರೆ,

---

ಶ್ರೀಮುಷ್ಣಮಾಹಾತ್ಮ್ಯೇ—ಪಂಚಮಾಧ್ಯಾಯೇ—
ಉದ್ಧರಸ್ವ ಮಹಾಬಾಹೋ ಮಮ ಧರ್ಮಾನ್ ಸನಾತನಾನ್ ।
ಇತ್ಯಾಜ್ಞಪ್ತೋ ಭಗವತಾ ಕಲೌ ವಾಯುರ್ಭವಿಷ್ಯತಿ ।
ಮಧ್ವನಾಮಾ ಯತಿರಸೌ ಸಚ್ಛಾಸ್ತ್ರಾಣಿ ಕರಿಷ್ಯತಿ ॥
ಪುಟ–5–ಪಂಕ್ತಿ 5 ಅಲಕಾಪುರೀ ಮಾಹಾತ್ಮ್ಯೇ—
ಉದ್ಧಾರಿಷ್ಯತಿ ಸಚ್ಛಾಸ್ತ್ರಂ ಕಶ್ಚಿತ್ಕಾಲಾಂತರೇ ಯತಿಃ ।
ರಾಜದ್ವಾರಂ ಸಮಾಶ್ರಿತ್ಯ ಪಾಷಂಡಾನ್ನಿರಸಿಷ್ಯತಿ ॥
ವ್ಯಾಕರಿಷ್ಯತಿ ಸಚ್ಛಾಸ್ತ್ರಂ ದೇವಬ್ರಾಹ್ಮಣತರ್ಪಕಃ ॥
ಪುಟ–5–ಪಂಕ್ತಿ–4. ಸ್ಕಾಂದಪುರಾಣೇ ಶ್ರೀಮುಷ್ಣಮಾಹಾತ್ಮ್ಯೇ ಸಪ್ತಮಾಧ್ಯಾಯೇ —
ತತ್ಕರ್ಮದಕ್ಷಂ ವಿನತಂ ಮಾತರಿಶ್ವಾನಮಾದಿಶತ್ ।
ವಾಯುಸ್ತು ಯತಿರೂಪೇಣ ಜನಿಷ್ಯತಿ ಕಲೌ ಯುಗೇ ॥
ಸ ದಶಪ್ರಮತಿರ್ಭೂತ್ವಾ ಕಲೌ ಧರ್ಮಾನ್ ವದಿಷ್ಯತಿ ॥
ಪುಟ–6–ಪಂಕ್ತಿ–8
ಯತಿರೂಪೋ ಮಾತರಿಶ್ವಾಽಷ್ಟಾವಿಂಶತಿತಮೇ ಕಲೌ ।
ಅವತೀರ್ಯ ವಸತ್ಯತ್ರ ಮಧ್ವನಾಮಾ ವರಂ ವಿಭೋಃ ॥
ಪುಟ–6–ಪಂಕ್ತಿ 18–ಬ್ರಹ್ಮಾಂಡಸ್ಮೃತಿ– ।
ವಿಂಶಲ್ಲಕ್ಷಣತೋಽನ್ಯೂನಸ್ತಪಸ್ವೀ ಬಹುವೇದವಿತ್ ।
ವೇದ ಇತ್ಯೇವ ಯಂ ಪಶ್ಯೇತ್ಸವೇದೋ ಜ್ಞಾನದರ್ಶನಾತ್ ॥

ಮುಂದಿನ ಪುಟಕ್ಕೆ

ಶ್ರೀಮಧ್ವಾಚಾರ್ಯರ ಅನಂತರ ಬಂದ. ಸೋದೆಮಠದ ಪೀಠವನ್ನು ಅಲಂಕರಿಸಿದ್ದವರೂ, ಉಡುಪಿಯ ಪರ್ಯಾಯಮಹೋತ್ಸವಕ್ರಮವನ್ನು ಪುನರ್ವ್ಯವಸ್ಥೆಗೊಳಿಸಿದ್ದವರೂ, ಶ್ರೀವ್ಯಾಸರಾಜರ ವಿದ್ಯಾಶಿಷ್ಯರಾಗಿದ್ದವರೂ ಆದ ಶ್ರೀವಾದಿರಾಜರು ಶ್ರೀಮನ್ಮಧ್ವಾಚಾರ್ಯರನ್ನು ಹೀಗೆ ಸ್ತುತಿಸಿದ್ದಾರೆ.

"ತಾವು ಮೊದಲನೆಯ ಮಾರುತಿ ಅವತಾರದಲ್ಲಿ ಶತಯೋಜನ ವಿಸ್ತಾರವಾದ ಸಮುದ್ರವನ್ನು ದಾಟಿದ್ದೀರಿ. ಈ ಅವತಾರದಲ್ಲಿ ಅಪಾರವಾದ ವೇದ ಸಮುದ್ರವನ್ನೇ ದಾಟಿ ಅಪೂರ್ವವಾದ ಚಮತ್ಕಾರ ತೋರಿಸಿರುವಿರಿ."

ಈ ಎಲ್ಲ ಉಲ್ಲೇಖನಗಳಿಂದ ಶ್ರೀಮಧ್ವಾಚಾರ್ಯರು ವಾಯುದೇವರ ಮೂರನೆಯ ಅವತಾರವೆಂದೂ ಅವರು ಸರ್ವಜ್ಞರಾದ, ಜೀವೋತ್ತಮರಾದ ವಾಯುದೇವರ-ಅವತಾರರಾದುದರಿಂದಲೇ ಹಿಂದಿನ ಇಪ್ಪತ್ತೊಂದು ಮತಾಚಾರ್ಯರ ಕುಸಿದ್ಧಾಂತಗಳನ್ನು ಖಂಡಿಸಿ, ಹರಿಸರ್ವೋತ್ತಮತ್ವದ ತತ್ತ್ವವಾದದ ದ್ವೈತಸಿದ್ಧಾಂತವನ್ನು ಜಗತ್ತಿಗೆ ನೀಡಲು ಸಾಧ್ಯವಾದಂದು-ಎಂದರೆ ಆಶ್ಚರ್ಯವೇನು ?

---

ತತ್ತ್ವಪ್ರದೀಪ-ಉಡುಪಿ ಮುದ್ರಣ-ಸಂಸ್ಕೃತ ಉಪೋದ್ಘಾತ ಪುಟ-33-ಪಂಕ್ತಿ 22

ಅಶ್ರುತಪ್ರತಿಭಾ ಯಸ್ಯ ಶ್ರುತಿಸ್ಮೃತ್ಯವಿರೋಧಿನೀ ।
ವಿಶ್ರುತಾ ನೃಷು ಜಾತಂ ಚ ತಂ ವಿದ್ಯಾದ್ದೇವಸತ್ತಮಮ್ ॥
ಇತಿ ನಾರಾಯಣ ಶ್ರುತಿಃ. ಪ್ರತ್ಯಕ್ಷಮೇವ ತಲ್ಲಕ್ಷಣಂ ದೃಶ್ಯತೇ
ಭಗವತಿ ಭಾಷ್ಯಕಾರೇ (ಆನಂದತೀರ್ಥೇ).

ಶ್ರೀರಾಘವೇಂದ್ರ ಸ್ವಾಮಿಗಳೂ ತಮ್ಮಿಂದ ರಚಿತವಾದ ಶ್ರೀಮನ್ನ್ಯಾಯಸುಧಾ ಟಿಪ್ಪಣಿ ಪರಿಮಳದಲ್ಲಿ ಹೀಗೆ ಹೇಳಿದ್ದಾರೆ.

(ಶ್ರೀಮನ್ನ್ಯಾಯಸುಧಾ ಟಿಪ್ಪಣಿ ಪರಿಮಳ)

ವಿಶ್ವಂ ಯಸ್ಯ ವಶೇ ಸರ್ವಮನಿಶಂ ಶಂಕರಾದಿಕಮ್ ।
ತಸ್ಯ ವಾಯೋಸ್ತೃತೀಯಾಂಶಮಾಶ್ರಯೇ ಶಮವಾಪ್ತಯೇ ॥

## ಧಾರ್ಮಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆ

ಶ್ರೀಮಧ್ವಾಚಾರ್ಯರು ತುಳುನಾಡಿನಲ್ಲಿ ಜನ್ಮ ತಾಳಿದರು. ಉತ್ತರ ದಕ್ಷಿಣವಾಗಿ ಹಬ್ಬಿರುವ ಸಹ್ಯಾದ್ರಿಯಪರ್ವತದ ತಪ್ಪಲಿನಲ್ಲಿ, ಗೋಕರ್ಣದಿಂದ ಕನ್ಯಾಕುಮಾರಿಯುವರೆಗೆ ಹರಡಿರುವ ಕರುನಾಡನ್ನು ಸ್ಥೂಲವಾಗಿ ತುಳುನಾಡೆಂದು ಕರೆಯುತ್ತಾರೆ. ಅರಬ್ಬೀಸಮುದ್ರವನ್ನೇ ಪಶ್ಚಿಮದ ಮೇರೆಯಾಗಿ ಉಳ್ಳ ಈ ಕಡಲುತೀರಪ್ರದೇಶವು ರಾಮಾಯಣ ಮತ್ತು ಮಹಾಭಾರತಗಳ ಕಾಲದಲ್ಲೂ ಪ್ರಸಿದ್ಧಿ ಪಡೆದಿತ್ತು.

ಶ್ರೀರಾಮನ ಮೊಮ್ಮಕ್ಕಳಲ್ಲಿ ಒಬ್ಬನಾದ ಸಹದೇವನು ತುಳುನಾಡು ಅರಸನ ಮಗಳನ್ನು ಮದುವೆಯಾಗಿ ಆ ನಾಡಿನ ಪ್ರಭುವಾದನೆಂದು ಆನಂದ ರಾಮಾಯಣದಲ್ಲಿ ಹೇಳಿದೆ.

ಮಹಾಭಾರತದ ಕಾಲದಲ್ಲೂ ಈ ನಾಡು ಪ್ರಸಿದ್ಧವಾಗಿತ್ತು; ಅರ್ಜುನನು ತನ್ನ ದಕ್ಷಿಣ ದೇಶಾಟನೆಯ ಕಾಲದಲ್ಲಿ, ಮದುವೆಯಾದ ಉಲೂಪಿಯು ಈ ನಾಡಿನ, ಅಲೂಪ ರಾಜಕುಮಾರಿ. ಆವಳು ಸರ್ಪರಾಜನಾದ ವಾಸುಕಿಯು ಮಗಳೆಂಬ ಸಂಗತಿ ತುಳುನಾಡಿನ ವೈಶಿಷ್ಟ್ಯಗಳಲ್ಲಿ ಒಂದಾದ ನಾಗಪೂಜೆಯುನ್ನು ಜ್ಞಾಪಿಸುತ್ತದೆ,

ಸ್ಕಾಂದಪುರಾಣದ ಸಹ್ಯಾದ್ರಿಖಂಡದಲ್ಲಿ ತುಳುನಾಡು ಹಾಗೂ ಅಲ್ಲಿನ ಜನಜೀವನ ಸಂಸ್ಕೃತಿಗಳ ಬಗ್ಗೆ ಅನೇಕ ಸಂಗತಿಗಳ ಉಲ್ಲೇಖನ ದೊರಕುತ್ತದೆ. ಇದರಲ್ಲಿ ತುಳುನಾಡನ್ನು ಪರಶುರಾಮಕ್ಷೇತ್ರವೆಂದು[1] ಕರೆಯಲಾಗಿದೆ.

---

1) ಕರ್ಣೇಪದನ್ಯಸ್ತರುಚೀರಿರಿಂಸು–
ವಾರ್ರಾಶಿವಸ್ತ್ರಂ ಜಘನಾದ್ಧಿ ಯಸ್ಯಾಃ ।
ಅಮೂಮುಚದ್ಬಾಣಕರೇಣ ಭೂಮ್ನೇಃ
ಶ್ರೀಭಾರ್ಗವಸ್ಸಾ ಜಯತಿ ಕ್ಷಿತಿರ್ನಃ ॥
(ತೀರ್ಥಪ್ರಬಂಧ–ಪಶ್ಚಿಮಪ್ರಬಂಧ)

ಹೈಹಯಾಧಿಪತಿಯೂ, ಕ್ಷತ್ರಿಯಶ್ರೇಷ್ಠನೂ, ನಾರಾಯಣನ ಅನುಗ್ರಹ ದಿಂದ ಹೊಂದಲ್ಪಟ್ಟ ಸಹಸ್ರ ಕೈಗಳುಳ್ಳವನೂ, ಶತ್ರುಗಳಿಂದ ದುರ್ಧಷನೂ, ಅಸ ಮಾನವಾದ ಇಂದ್ರಿಯ ಶಕ್ತಿ ತೇಜಸ್ಸು ಬಲ ಯಶಸ್ಸುಳ್ಳವನೂ, ಯೋಗೀಶ್ವರ ತ್ವವುಳ್ಳವನೂ, ಅಣಿಮಾದ್ಯಷ್ಟನಿಧಿಗಳುಳ್ಳವನೂ, ವಾಯುವಿನಂತೆ ಅಡೆತಡೆಗಳಿಲ್ಲದಗತಿವುಳ್ಳವನೂ, ರೇವಾತೀರದಲ್ಲಿ ನರ್ಮದಾನದಿಯನ್ನು ತನ್ನ ಸಹಸ್ರಬಾಹುಗಳಿಂದ ಅಡ್ಡಗಟ್ಟಿ ಸ್ತ್ರೀರತ್ನಗಳಿಂದ ಕೂಡಿ ಜಲಕ್ರೀಡಾ ಪರಾಯಣನೂ, ವೀರಮಾನಿಯಾದ ರಾವಣನನ್ನು ಲೀಲಾಮಾತ್ರದಿಂದ ಜಯಿಸಿ ದವನೂ ಆದ ಕಾರ್ತವೀರ್ಯಾರ್ಜುನನು, ಒಂದು ದಿನ ಬೇಟೆಯಾಡುತ್ತಾ ಮಧ್ಯಾಹ್ನಸಮಯದಲ್ಲಿ ಜಮದಗ್ನಿಋಷಿಗಳ ಆಶ್ರಮಕ್ಕೆ ಅಕಸ್ಮಾತ್ತಾಗಿ ಪರಿವಾರಸಮೇತನಾಗಿ ಬಂದನು. ಮಧ್ಯಾಹ್ನಸಮಯದಲ್ಲಿ ಬಂದ ಮಂತ್ರಿ, ಸೇನಾ, ಪರಿವಾರ ಸಹಿತನಾದ ರಾಜನನ್ನು ಋಷಿಯು ಸುರಭಿಧೇನುವಿನ ಸಹಾಯ ದಿಂದ ಆದರಿಂದ ಸತ್ಕರಿಸಿ ಉಪಚರಿಸಿದನು, ರಾಜನು, ಋಷಿಯನ್ನು, ಸುರಭಿ ಧೇನುವನ್ನು ತನಗೆ ಕೊಡುವಂತೆ ಬೇಡಿದನು. ಋಷಿಯು ಒಪ್ಪದಿದ್ದಾಗ, ಅರಚುತ್ತಿರುವ ಕರುಸಹಿತವಾದ ಆ ಧೇನುವನ್ನು ತನ್ನ ಸೈನಿಕರ ಮೂಲಕ, ಬಲವಂತದಿಂದ ರಾಜಧಾನಿಯಾದ ಮಾಹಿಷ್ಮತೀನಗರಕ್ಕೆ ಎಳೆಸಿಕೊಂಡು ಹೋದನು.1

---

1) ಸ ಏಕದಾ ತು ಮೃಗಯಾಂ ವಿಚರನ್ ವಿಪಿನೇ ವನೇ ।
ಯದೃಚ್ಛಯಾಽಽಶ್ರಮಪದಂ ಜಮದಗ್ನೇರುಪಾವಿಶತ್ ॥
ತಸ್ಮೈ ಸ ನರದೇವಾಯ ಮುನಿರರ್ಹಣಮಾಹರತ್ ।
ಸಸೈನ್ಯಾಮಾತ್ಯವಾಹಾಯ ಹವಿಷ್ಮತ್ಯಾ ತಪೋಧನಃ ॥
ಸ ವೀರಸ್ತತ್ರ ತದ್ದೃಷ್ಟ್ವಾ ಆತ್ಮೈಶ್ವರ್ಯಾತಿಶಾಯನಮ್ ।
ತನ್ನಾದ್ರಿಯತಾಗ್ನಿಹೋತ್ರ್ಯಾಂ ಸಾಭಿಲಾಷ ಸ ಹೈಹಯಃ ॥
ಹವಿರ್ಧಾನಾಮೃಷೇರ್ದರ್ಪಾನ್ನರಾನ್ ಹರ್ತುಮಚೋದಯತ್ ।
ತೇ ಚ ಮಾಹಿಷ್ಮತೀಂ ನಿನ್ಯುಃ ಸವತ್ಸಾಂ ಕ್ರಂದತಾಂ ಬಲಾತ್ ॥
(ಶ್ರೀಮದ್ಭಾಗವತಮ್ 9-15-21, 26)

ಮುಂದಿನ ಪುಟಕ್ಕೆ

ಆ ಸಮಯದಲ್ಲಿ ಪರಶುರಾಮನು ತಂದೆಯ ಆಶ್ರಮದಲ್ಲಿರಲಿಲ್ಲ. ಅವನು ಆಶ್ರಮಕ್ಕೆ ಹಿಂದಿರುಗಿದ ಮೇಲೆ, ಅಲ್ಲಿ ನಡೆದ ವಿಷಯವನ್ನು ತಂದೆಯಿಂದ ಕೇಳಿ ತಿಳಿದು, ಕೋಪವಿಷ್ಟನಾದನು.

ಅವನು ಮಾಹಿಷ್ಮತೀನಗರಕ್ಕೆ ಹೋಗಿ ಕಾರ್ತವೀರ್ಯಾರ್ಜುನನ್ನು ಕೊಂದು ಸುರಭಿಧೇನುವನ್ನು ಬಿಡಿಸಿಕೊಂಡು ಬಂದನು. ಇದರಿಂದ ಸಿಟ್ಟಿಗೆದ್ದ ಆ ರಾಜನ ಮಕ್ಕಳು ಪರಶುರಾಮನಿಲ್ಲದ ವೇಳೆಯನ್ನು ಸಾಧಿಸಿ, ಜಮದಗ್ನಿಯನ್ನು ಕೊಂದು ಸೇಡು ತೀರಿಸಿಕೊಂಡರು. ಇದರಿಂದ ಕುಪಿತನಾದ ಪರಶುರಾಮನು

---

ಅಥ ರಾಜನಿ ನಿರ್ಯಾತೇ ರಾಮ ಆಶ್ರಮ ಆಗತಃ ।
ಶ್ರುತ್ವಾ ತತ್ತಸ್ಯ ದೌರಾತ್ಮ್ಯಂ ಚುಕ್ರೋಧಾಹಿರಿವಾಹತಃ ॥
ಘೋರಮಾದಾಯ ಪರಶುಂ ಸತೂಣಂ ಚರ್ಮ ಕಾರ್ಮುಕಮ್ ।
ಅನ್ವಧಾವತ ದುರ್ಧರ್ಷೋ ಮೃಗೇಂದ್ರ ಇವ ಯೂಥಪಮ್ ॥
ಕೃತ್ತಬಾಹೋಃ ಶಿರಸ್ತಸ್ಯ ಗಿರೇಃ ಶೃಂಗಮಿವಾಹರತ್ ।
ಹತೇ ಪಿತರಿ ತಚ್ಛ್ರುತ್ವಾ ಅಯುತಂ ದುದ್ರುವುರ್ಭಯಾತ್ ॥
ಅಗ್ನಿಹೋತ್ರೀಮುಪಾವರ್ತ್ಯ ಸವತ್ಸಾಂ ಪರವೀರಹಾ ।
ಸಮುಪೇತ್ಯಾಶ್ರಮಂ ಪಿತ್ರೇ ಪರಿಕ್ಲಿಷ್ಟಾಂ ಸಮರ್ಪಯತ್ ॥
ದೃಷ್ಟ್ವಾಗ್ನ್ಯಗಾರ ಆಸೀನಮಾವೇಶಿತಧಿಯಂ ಮುನಿಮ್ ।
ಭಗವತ್ಯುತ್ತಮಶ್ಲೋಕೇ ಜಘ್ನುಸ್ತೇ ಪಾಪನಿಶ್ಚಯಾಃ ॥
ತ್ರಿಸ್ಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ ।
ಸಮಂತಪಂಚಕೇ ಚಕ್ರೇ ಶೋಣಿತೋದಾನ್ ಹ್ರದಾನ್ ನೃಪ ॥

(ಶ್ರೀಮದ್ಭಾಗವತಮ್-9-16-36, ಮತ್ತು-9-16-11, 19)

ದದೌ ಪ್ರಾಚೀಂ ದಿಶಂ ಹೋತ್ರೇ ಬ್ರಹ್ಮಣೇ ದಕ್ಷಿಣಾಂ ದಿಶಮ್
ಅಧ್ವರ್ಯವೇ ಪ್ರತೀಚೀಂ ವೈ ಉದ್ಗಾತ್ರೇ ಉತ್ತರಾಂ ದಿಶಮ್
ಅನ್ಯೇಭ್ಯೋಽವಾಂತರದಿಶಃ ಕಶ್ಯಪಾಯ ಚ ಮಧ್ಯತಃ
ಆರ್ಯಾವರ್ತಮುಪಾದಷ್ಟ್ರೇ ಸದಸ್ಯೇಭ್ಯಸ್ತತಃಪರಮ್ ॥

(ಶ್ರೀಮದ್ಭಾಗವತಮ್-9-16-21, 22)

ಕ್ಷತ್ರಿಯ ವಂಶವನ್ನೆಲ್ಲಾ ನಿರ್ಮೂಲಮಾಡಲು ಸಂಕಲ್ಪಿಸಿದನು. ಅವನು ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ, ಭಾರತ ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿದನು. ಹೀಗೆ ಪಡೆದ ಸಮಸ್ತ ರಾಜ್ಯವನ್ನು ಕಾಶ್ಯಪಾದಿಗಳಿಗೆ ದಾನ ಮಾಡಿದನು. ಆಗ ಪರಶುರಾಮನು ಪಶ್ಚಿಮ ಸಮುದ್ರ ತೀರಕ್ಕೆ ಬಂದು ಬಾಣವನ್ನು ಬಿಟ್ಟು 30 ಮೈಲಿ ಅಗಲದಷ್ಟು 700 ಮೈಲಿ ಉದ್ದದಷ್ಟು ಸಮುದ್ರವನ್ನು ಹಿಂದಕ್ಕೆ ತಳ್ಳಿ ಭೂಪ್ರದೇಶವನ್ನು ಸಮುದ್ರದಿಂದ ಪಡೆದನು. ಹೀಗೆ ಸಮುದ್ರವನ್ನು ಹಿಂದೆ ಸರಿಸಿ ಪಡೆದ ಈ ಪ್ರದೇಶವು ಪರಶುರಾಮಕ್ಷೇತ್ರವೆಂದು ಸಹ್ಯಾದ್ರಿ ಕಾಂಡದಲ್ಲಿ ಹೇಳಿದೆ.

ಈ ಭೂಪ್ರದೇಶಕ್ಕೆ ಪುರಾಣಗಳಲ್ಲಿ ಶೂರ್ಪಾರಕವೆಂದೂ ಹೆಸರಿದೆ.

ಪರಶುರಾಮನು ತಾನು ಸಮುದ್ರರಾಜನಿಂದ ಪಡೆದ ಭೂಮಿಯನ್ನು ಏಳು ಪ್ರದೇಶಗಳಾಗಿ ವಿಭಾಗಿಸಿ, ಅವನ್ನು ಸಪ್ತಕೊಂಕಣವೆಂದು ಕರೆದನು. ಅವು ಅನುಕ್ರಮವಾಗಿ ಕೇರಳ, ತೌಳವ, ಹೈವ, ಸುರಾಷ್ಟ್ರ, ಕೊಂಕಣ, ಕರಹಾಟ ಮತ್ತು ಕರ್ಣಾಟಗಳೆಂದು ಪ್ರಸಿದ್ಧಿ ಪಡೆದವು.

ಸ್ಕಾಂದಪುರಾಣದಲ್ಲಿ ತುಳುನಾಡಿನ, ಭೌಗೋಳಿಕ ವ್ಯಾಪ್ತಿಯನ್ನು ನಿರ್ದೇಶಿಸಿದ್ದರೂ ಐತಿಹಾಸಿಕವಾಗಿ ಉತ್ತರದಲ್ಲಿ ಗೋಕರ್ಣದಿಂದ ದಕ್ಷಿಣದಲ್ಲಿ ಕನ್ಯಾಕುಮಾರಿವರೆಗೆ ಇರುವ ಪ್ರದೇಶವನ್ನು ತುಳುನಾಡೆಂದು ಕರೆಯುತ್ತಾರೆ. ಇಲ್ಲಿನ ಆದಿವಾಸಿಗಳಾದ ಕೊರಗರೆಂಬ ಜನರು ಇನ್ನೂ ಅಲ್ಲಲ್ಲಿ ಉಳಿದಿದ್ದಾರೆ. ಇವರಲ್ಲದೆ ಬಂಟರೂ, ಬಿಲ್ಲವರೂ, ಮೊಗೇರರು. ಕೆಲಸಿಗಳು, ನಾಡವರೂ ತುಳು ಈ ಪ್ರದೇಶದಲ್ಲಿ ನೆಲೆಸಿರುವ ಮೂಲಜನಾಂಗದವರು. ಈ ಮೂಲನಿವಾಸಿಗಳ ಜೀವನಕ್ರಮವನ್ನೂ, ನಂಬಿಕೆಗಳನ್ನೂ, ಧಾರ್ಮಿಕ ಆಚರಣೆಗಳನ್ನೂ ಪ್ರತಿಬಿಂಬಿಸುವ ಸಾಹಿತ್ಯಕ್ಕೆ 'ಪಾಡ್ದನ'ವೆಂದು ಕರೆಯುತ್ತಾರೆ. ಅಂಥ ಒಂದು ಪಾಡ್ದನ "ನಾಗರಾಜು ಪಾಡ್ದನ" ಹಲ್ಲಿ ಚಂದ್ರವಂಶದ ನಹುಷಚಕ್ರವರ್ತಿಯ ಮಗ ಯಯಾತಿ ಮತ್ತು ಶುಕ್ರಾಚಾರ್ಯರ ಮಗಳು ದೇವಯಾನಿಯರ ಮಗ। ತುರ್ವಸು ಎಂಬುವನು ನಾಗಕನ್ಯೆಯನ್ನು ವಿವಾಹವಾಗಿ ತೌಳವರಾಜಪುತ್ರರನ್ನು ಪಡೆದನೆಂದು ಹೇಳಿದೆ.

---

1) ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ।
ದ್ರುಹ್ಯುಂ ಚಾನುಂಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ॥
(ಶ್ರೀ ಮದ್ಭಾಗವತ-9-18-13)

ಈಗ ತುಳುನಾಡಿನಲ್ಲಿ ನೆಲೆಸಿರುವ ಬ್ರಾಹ್ಮಣರು ಆ ಪ್ರದೇಶದ ಮೂಲ ನಿವಾಸಿಗಳಲ್ಲ. ಕದಂಬವಂಶದ ದೊರೆ ಲೋಕಾದಿತ್ಯ ಅಥವಾ ಮಯೂರ ವರ್ಮನೆಂಬುವನು ಕ್ರಿಸ್ತಶಕ ಮೂರನೆಯ ಶತಮಾನದಲ್ಲಿ ಆಳುತ್ತಿದ್ದಾಗ ಅಶ್ವ ಮೇಧಯಾಗ ಮಾಡಿದನಂತೆ. ಆ ಯಾಗದಲ್ಲಿ ಭಾಗವಹಿಸಲು ಉತ್ತರ ದೇಶದ ರೋಹಿಲಖಂಡದ ಅಹಿಚ್ಛತ್ರಪುರದಿಂದ ಅರವತ್ತುನಾಲ್ಕು ಮಂದಿ ವಿದ್ವಾಂಸ ರಾದ ಬ್ರಾಹ್ಮಣರ ಕುಟುಂಬಗಳನ್ನು 1 ಕರೆಸಿಕೊಂಡು ತನ್ನ ರಾಜ್ಯದಲ್ಲಿ ನೆಲೆಸು ವಂತೆ ಮಾಡಿದನೆಂದು ಹೇಳುತ್ತಾರೆ. ಇವರಲ್ಲಿ ಕೆಲವರು ಕದಂಬಕಾನನ, ಗೋಕರ್ಣ, ಸ್ಕಂದಪುರ, ಗಜಪುರ, ಅನಂತೇಶ, ಮುಂತಾದ ಮುವತ್ತೆರಡು ಗ್ರಾಮಗಳಲ್ಲಿ ನೆಲೆಸಿದರಂತೆ. ಮಯೂರವರ್ಮನ ಮಗ ಚಿತ್ರಾಂಗದನ ಕಾಲ ದಲ್ಲಿ ಮತ್ತೆ ಕೆಲವು ಬ್ರಾಹ್ಮಣ ಕುಟುಂಬಗಳು ಅಹಿಚ್ಛತ್ರಪುರದಿಂದ ಬಂದವಂತೆ, ಇವರೆಲ್ಲರೂ ಅಂದರೆ ಇನ್ನೂರ ಎಪ್ಪತ್ತೊಂಭತ್ತು ಬ್ರಾಹ್ಮಣಕುಟುಂಬಗಳು ಪೂರ್ವಪಶ್ಚಿಮವಾಗಿ ಮೂವತ್ತೆರಡು ಗ್ರಾಮಗಳಲ್ಲಿ ನೆಲೆಸಿ ಈಗ ಪ್ರಸಿದ್ಧ ವಾಗಿರುವ ತುಳುನಾಡಿನ ಗ್ರಾಮಪದ್ಧತಿ ಎಂಬ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡರು.

ಇವರು ತಮ್ಮತಮ್ಮಲ್ಲೇ ಅಗ್ನಿಹೋತ್ರಿ, ಸ್ಮಾರ್ತ, ಭಟ್ಟ, ತಂತ್ರಿ, ಪಂಡಿತ, ಪಕ್ಷನಾಥ, ಬಲ್ಲಾಳ, ಗ್ರಾಮಿಣಿ, ಆದಿವಾಸಿಗಳೆಂದು ನಿಯೋಜಿಸಿ ಕೊಂಡು ಗ್ರಾಮರಾಜ್ಯಕ್ಕೆ ತಳಹದಿ ಹಾಕಿದರು.

ಅಗ್ನಿಹೋತ್ರಿಗಳು ಹವನಹೋಮಗಳ ಮೇಲ್ವಿಚಾರಣೆ ಹೊತ್ತರು. ಸ್ಮಾರ್ತರು ವೈದಿಕಮಂತ್ರಗಳನ್ನು ಪಠಣಮಾಡುವವರಾದರು ; ಆಗಮೋಕ್ತ ನಿರ್ಣಯಿಸುವವರು ತಂತ್ರಿಗಳಾದರು ; ಭಟ್ಟರು ಪಂಚಾಯಿತಿಕೆ ನಡೆಸಿ, ಪುರಾಣ ಹೇಳಿದರು ; ಪಂಡಿತರು ನ್ಯಾಯತೀರ್ಮಾನಕ್ಕೆ ಒದಗಿದರು ; ರಕ್ಷಣೆ ಶಿಕ್ಷೆ ಗಳನ್ನು ನೀಡುವುದು ಪಕ್ಷನಾಥರ ಕಾರ್ಯವಾಯಿತು ; ಬಲ್ಲಾಳರು ಆಡಳಿತ

---

1) ಅರಸಕೇಳರವತ್ತು ನಾಲ್ಕು ದಂಪತಿಗಳ-
ಧ್ವರದ ಋತ್ವಿಕ್ಕುಗಳ್ವೆರಸಿವೇದವ್ಯಾಸ-
ಪರಮಋಷಿಗಂಗೆಯೊಳ್ಜಲದೇವತೆಯರ್ಚಿಸಿಮಂತ್ರೋದಕವನು ।
(ಲಕ್ಷ್ಮೀಶನ ಕನ್ನಡ ಜೈಮಿನಿಭಾರತ-34ನೆ ಸಂಧಿ)

ನಿರ್ವಹಿಸಿದರು ; ಗ್ರಾಮಿಣಿಗಳು ವಿಚಾರಣೆ ನಡೆಸಿದರು, ವಾರ್ತಾವಿತರಣೆ, ಉಪದೇಶಗಳು ಆದಿವಾಸಿಗಳ ಕಾರ್ಯವಾಯಿತು— ಹೀಗೆ ಬ್ರಾಹ್ಮಣರು ಗ್ರಾಮಪದ್ಧತಿಯನ್ನು ಏರ್ಪಡಿಸಿ, ನಾಡಿನ ಸಾಂಸ್ಕೃತಿಕ ಹಾಗೂ, ರಾಜಕೀಯ, ಸಾಮಾಜಿಕ ಜೀವನದಲ್ಲಿ ಕಟ್ಟುಕಟ್ಟಲೆಗಳನ್ನು ತಂದರು.

ಕಾಲಕಳೆದಂತೆ ಹೊರಗಿನಿಂದ ಬಂದ ಬ್ರಾಹ್ಮಣರು ತಮ್ಮ ಆರ್ಯ ಸಂಸ್ಕೃತಿಯೊಂದಿಗೆ ದ್ರಾವಿಡಸಂಸ್ಕೃತಿಯನ್ನೂ ಅಳವಡಿಸಿಕೊಳ್ಳಲೆತ್ನಿಸಿ ವೈದಿಕಧರ್ಮದಕಟ್ಟಿನಲ್ಲಿ ಇಲ್ಲಿನ ಭೂತಾರಾಧಾನೆ, ಮತ್ತು ನಾಗಾರಾಧಾನೆಗಳನ್ನು ಅಳವಡಿಸಿಕೊಂಡರು.

ಹೀಗೆ ಧಾರ್ಮಿಕ,ಶೈಕ್ಷಣಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣ ಗಳಿಗಾಗಿ ಉತ್ತರದಿಂದ ವಲಸೆ ಬರುವುದು ಕ್ರಿಸ್ತಶಕ ಹನ್ನೊಂದನೆಯ ಶತಮಾನದವರೆಗೂ ನಡೆದು ಬಂದಿತೆಂದು ಹೇಳುತ್ತಾರೆ. ಮುಂದೆ ಬಂದವರು ಬೇರೆ ಬೇರೆ ಊರುಗಳಲ್ಲಿ ನೆಲಸಿದರು. ಆ ಊರುಗಳ ಹೆಸರುಗಳಿಂದ ಅಂದರೆ ಶಿವಳ್ಳಿಯವರೂ, ಕೋಟದವರು, ಕೋಟೇಶ್ವರದವರು, ಕುಂದಾಪುರ ದವರು, ಪಂಚಗ್ರಾಮದವರೂ ಎಂದು ಪ್ರಸಿದ್ಧಿ ಪಡೆದಿದ್ದಾರೆ.

ಈ ತುಳುನಾಡನ್ನು ಐತಿಹಾಸಿಕಕಾಲದಲ್ಲಿ ಆಲುಪರೆಂಬ ನಾಗವಂಶದ ದೊರೆಗಳು ಆಳುತ್ತಿದ್ದರು. ಆಲುಪರನ್ನು ಆಲುಕರೆಂದೂ ಕರೆದಿದ್ದಾರೆ. ಇವರ ಆಳ್ವಿಕೆ ಹದಿನಾಲ್ಕನೆಯ ಶತಮಾನದವರೆಗೂ ನಡೆದಿತ್ತು. ಇವರ ರಾಜಧಾನಿ ಆಳ್ವಖೇಡ. ಇದನ್ನು ತಾಲಮಿ ಎಂಬ ಗ್ರೀಕ್ ಇತಿಹಾಸಕಾರನು "ಒಲೋಖೈರ" ಎಂದು ಹೆಸರಿಸಿದ್ದಾನೆ. ಆಲುಪರ ಕುಲದೈವ ಉದ್ಯಾವರದ ಭೈರವ. ಮುಂದೆ ಇವರು ಬಾರಹಕನ್ಯಾಪುರ (ಬಾರಹವೂರು) ಅಂದರೆ ಬಾರಕೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು.

ಆಲುಪರು ಶೈವರು ಮತ್ತು ಸರ್ಪಾರಾಧಕರು.

ಭೂತಳಪಾಂಡ್ಯನೆಂಬುವನು ಕಂಡೋದರವೆಂಬ ಭೂತವನ್ನು ಆರಾಧಿಸಿ ಬಾರಕೂರು ರಾಜ್ಯವನ್ನು ಪಡೆದನೆಂದು ಒಂದು ದಂತಕಥೆ ಹೇಳುತ್ತದೆ, ಇವನು ಹನ್ನೆರಡು ಜನ ಜೈನಕನ್ನಿಕೆಯರನ್ನು ವಿವಾಹವಾಗಿ ಅವರಿಂದ ಹನ್ನೆರಡು

ಮಂದಿ ಮಕ್ಕಳನ್ನು ಪಡೆದನಂತೆ. ತೋಲಾರ. ಚೌಟ, ಸಾವಂತ, ಬಂಗ, ಅಜಿಲ, ಕೋಂನ, ದಂಬಿ, ಕುಂಬಳ, ಬಿನ್ನಾಣ, ಹೆಗ್ಗಡೆ. ಮುದ್ಯ ಮತ್ತು ಕುಂದ ಎಂಬುವರೇ ಈ ಮಕ್ಕಳು. ಇವರು ಬೇರೆ ಬೇರೆ ಊರುಗಳಲ್ಲಿ ನೆಲೆಸಿ ಅರಸೊತ್ತಿಗೆ ನಡೆಸಿದರು. ಇವರಲ್ಲಿ ಕುಂಬಳೆಯವರೂ, ಅಜಿಲರೂ, ಚೌಟರೂ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ, ಈ ಹನ್ನೆರಡು ಜೈನ ಕನ್ನೆಯರಿಂದಾಗಿ ಬಂದ ಹೆಸರೇ ಬಾರಹವೂರು—ಬಾರಕೂರು

ಅವರು ಆರಂಭಿಸಿ ಪ್ರಚಾರಕ್ಕೆ ತಂದ ಗ್ರಾಮಪದ್ಧತಿ, ಪಾಡ್ದನಗಳು, ಅಳಿಯಸಂತಾನದ ಕಟ್ಟು, ದೈಯ್ಯ, ಭೂತಗಳ ಆರಾಧನೆ, ಸರ್ಪಾರಾಧನೆ ಇವುಗಳು ಈವರೆವಿಗೂ ಉಳಿದುಬಂದಿವೆ. ಇವು ತುಳುನಾಡಿನ ಸಾಂಸ್ಕೃತಿಕ ಜೀವನದ ವೈಶಿಷ್ಟ್ಯಗಳೆನಿಸಿವೆ. ಇಂದಿಗೂ ಕಲ್ಕುಡ, ಪೆಂಜುರ್ಲಿ, ಕಲ್ಲುರ್ಟಿ ಭೂತಗಳೂ ಕೋಟಿ-ಚನ್ನಯ್ಯ, ಕಾಂತಾಬಾರೆ-ಬೂದಾಬಾರೆ ಮೊದಲಾದ ವೀರರೂ, ಮಹಾಮಾಯೀ, ಭಗವತಿ, ವನದುರ್ಗಿ ಮೊದಲಾದ ದೈವೀಶಕ್ತಿಗಳೂ, ಸುಬ್ರಹ್ಮಣ್ಯ, ನಂದಿ, ಮಂಗಳಾದೇವಿ (ನಾಥಪಂಥ). ಅವಲೋಕಿತೇಶ್ವರ (ಬೌದ್ಧ) ಮುಂತಾದ ದೇವ ದೇವತೆಗಳೂ, ತುಳುನಾಡಿನ ಜನಜೀವನದ ಹಾಸು ಹೊಕ್ಕಾಗಿದ್ದಾರೆ. ನಾಡಿನ ಮೂಲೆ ಮೂಲೆಗಳಲ್ಲೂ ನಾಗಮಂದಿರ, ನಾಗಬನ, ಭೂತದ ಗರಡಿ, ಕೊಟ್ಟಿಗೆಗಳೂ ಇರುವಂತೆ ಶಿವ, ವಿಷ್ಣು ದೇವಾಲಯಗಳೂ, ಜಿನಮಂದಿರಗಳೂ ಇವೆ. ಅವುಗಳಿಗೆ ನೇಮ, ಕೋಲ ಕೊಡುವಂತೆ, ವೈದಿಕ ದೇವರುಗಳಿಗೂ ಬಲಿಕೊಡುವ ಪದ್ಧತಿ ಇದೆ.

ಹೊರಗಿನಿಂದ ತುಳುನಾಡಿಗೆ ಬಂದು ನೆಲೆಸಿದ ಬ್ರಾಹ್ಮಣರು ತಮ್ಮೊಡನೆ ತಂದ ಶೈವಧರ್ಮವನ್ನು ಸ್ಥಳಿಕಧರ್ಮ ಶ್ರದ್ಧೆಗಳೊಂದಿಗೆ ಸಮನ್ವಯಗೊಳಿಸಿದರು. ಆಲೂಪದೊರೆಗಳೂ ಆವರ ಪತ್ನಿಯರೂ ಧರ್ಮಶ್ರದ್ಧೆಯುಳ್ಳವರಾಗಿದ್ದು ದೇವಾಲಯಗಳಿಗೆ ದತ್ತಿಗಳನ್ನು ಹಾಕಿ ಕೊಟ್ಟರು ; ಬ್ರಾಹ್ಮಣರಿಗೆ ಆಶ್ರಯ ನೀಡಿದರು. ಹೀಗಾಗಿ ತುಳುನಾಡಿನಲ್ಲಿ ಸಪ್ತಶೈವಕ್ಷೇತ್ರಗಳು 1 ಪ್ರಸಿದ್ಧಿ

---

1) ಈಶಸ್ಯಾಹೀಶಪದವೀಂ ಭಾವಯನ್ನಿಹ ಬಾವಿನೀಮ್ ।
ಅಧ್ಯಾಸ್ತೇ ಶೇಷಶಯನಃ ಸ್ನಿಗ್ಧಾಂ ಲಿಂಗಶಿಲಾಂ ಹರಿಃ ॥
(ಉಡುಪಿಯ ಅನಂತೇಶ್ವರ ಲಿಂಗ)

ಮುಂದಿನ ಪುಟಕ್ಕೆ

ಪಡೆದವು. ಶಿವಳ್ಳಿಯ (ಉಡುಪಿ) ಅನಂತೇಶ್ವರ, ಕುಂಭಾಸಿಯ ಕುಂಭೇಶ್ವರ ಕುಮಾರಾದ್ರಿಯ (ಸುಬ್ರಹ್ಮಣ್ಯ) ಸುಬ್ರಹ್ಮಣ್ಯೇಶ್ವರ, ಧ್ವಜೇಶ್ವರದ ಕೋಟೇಶ್ವರ, ಕ್ರೋಢದ (ಕೋಡಂಗಿ) ಶಂಕರನಾರಾಯಣೇಶ್ವರ, ಕೊಟ್ಟಿ ಬೈಲದ(ಕೊಲ್ಲೂರು) ಮೂಕಾಂಬಿಕೆ ಮತ್ತು ಗೋಕರ್ಣದ ಮಹಾಬಲೇಶ್ವರ ಇವು ಶೈವರ ಆರಾಧ್ಯ ದೈವಗಳಾದವು.

ಇಂಥ ತುಳುನಾಡಿನಲ್ಲಿ—ಕೇರಳದ ಕಾಲಟಿಗ್ರಾಮದಲ್ಲಿ ಹುಟ್ಟಿದ ಶಂಕರಾಚಾರ್ಯರು ಬೌದ್ಧ-ಜೈನ ಮತಗಳ ಶೂನ್ಯವಾದವನ್ನು ನಿರಾಕರಿಸಿ ವೈದಿಕ ಅದ್ವೈತಧರ್ಮವನ್ನು ಅಥವಾ ಪ್ರಚ್ಛನ್ನಬೌದ್ಧಮತವನ್ನು ಪ್ರಚಾರಕ್ಕೆ ತಂದರು. ಇದಾದ ನಾಲ್ಕೂನೂರು ವರ್ಷಗಳ ನಂತರ ಇದೇ ತುಳುನಾಡಿನ

---

ಸುಬ್ರಹ್ಮಣ್ಯಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ ।
ಯತ್ರೋಚ್ಛಿಷ್ಟಮಪಿ ಸ್ಪಷ್ಟಂ ಶ್ವಿತ್ರಿಣಂ ಶೋಧಯತ್ಯಹೋ ॥
(ಕುಮಾರಿಂದ್ರಿಯ ಸುಬ್ರಹ್ಮಣ್ಯೇಶ್ವರ)

ಭಾಸಿ ಕುಂಭಾಸಿಸಂಜ್ಞ ತ್ವಂ ಕ್ಷೇತ್ರ ಶ್ರೀಶಗಿರೀಶಯೋಃ ।
ಯತ್ರ ಕುಂಭಾಸುರಸ್ಯಾಸಿರಭಾಸೀದ್ದ್ರೌಪದೀಪತಿಃ ॥
(ಕುಂಭಾಸಿಯ ಕುಂಭೇಶ್ವರ)

ಚಾರು ಕೋಟೇಶ್ವರಸ್ಥಾನಂ ಶೋಭತೇ ಯತ್ಪುರತ್ರಯಂ ।
ಪುರಾರಿರಿವ ನಿರ್ಜಿತ್ಯ ಧ್ವಜೇನಾದ್ಯಾಪಿ ಜೃಂಭತೇ ॥
(ಧ್ವಜೇಶ್ವರದ ಕೋಟೇಶ್ವರ)

ಕ್ರೋಡಯೋಗೀಶ್ವರಕ್ಷೇತ್ರಂ ಭಾತಿ ಶುಕ್ತಿಮತೀತಟೇ ।
ಸತಾಂ ಮತಾದ್ವಿತಾ ಯತ್ರ ಸ್ಪಷ್ಟೋಮೇಶರಮೇಶಯೋಃ ॥
(ಕ್ರೋಡಯೋಗೀಶ್ವರ—ಶಂಕರನಾರಾಯಣ)

ಮೂಕಾಂಬಿಕಾಕೃಪಾಲೋಕಾನಾಕಾಂಕ್ಷಿತಫಲಪ್ರದಾ ।
ಮೂಕಾನಕೃತ ಯೋ ಶತ್ರೂನ್ ಶಾಂತಿಕಜನಪ್ರಿಯಾ ॥
(ಕೊಲ್ಲೂರು ಮೂಕಾಂಬಿಕಾ)

ಮುಂದಿನ ಪುಟಕ್ಕೆ

ಪಾಜಕಕ್ಷೇತ್ರದಲ್ಲಿ 1 ಹುಟ್ಟಿದ ಶ್ರೀಮಧ್ವಾಚಾರ್ಯರು ಅದ್ವೈತಮತವನ್ನು ಖಂಡಿಸಿ ದ್ವೈತಮತವನ್ನು ಪ್ರತಿಷ್ಠಾಪಿಸಿದರು. ವೈದಿಕ ಧರ್ಮದ ಪುನರುದ್ಧಾರಕಾರ್ಯವನ್ನು ತಮ್ಮ ತತ್ತ್ವವಾದದಿಂದ ಸಾಧಿಸಿದರು.

## ಶ್ರೀಮಧ್ವಾಚಾರ್ಯರು ಅವತರಿಸಿದಾಗ ಇದ್ದ ಭಾರತದ ಧಾರ್ಮಿಕ ಸ್ಥಿತಿ

ಶ್ರೀಮಧ್ವಾಚಾರ್ಯರು ಅವತರಿಸಿದಾಗ ಇದ್ದ ಭಾರತದೇಶದ ರಾಜಕೀಯ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿಯಬೇಕಾಗಿದೆ ಅವರು ಅವತಾರ ಪುರುಷರೆನಿಸಿಕೊಳ್ಳಲು ಈ ಪರಿಸರವೂ ಒಂದು ಪ್ರಬಲ ಕಾರಣವಾಗಿತ್ತು.

ಮಧ್ವಾಚಾರ್ಯರ ಅವತಾರವಾಗುವುದಕ್ಕಿಂತ ಮುಂಚೆ ಶಂಕರಾಚಾರ್ಯರ ಅದ್ವೈತಮತವು ಎಲ್ಲೆಡೆ ಪ್ರಚಾರದಲ್ಲಿತ್ತು. ಆಗಲೂ ಎಷ್ಟೋ ಜನ ಸಜ್ಜನರು

---

ಗೋಕರ್ಣ ಭಾಸಿತಾಂಗಃ ಪ್ರತ್ಯುಪಕುರ್ವನ್ನಿವಾಂಬಿಕಾರಮಣಃ ।
ಗೋಕರ್ಣಸಂಜ್ಞಮಧುನಾ ಭಾಸಯತಿ ಕ್ಷೇತ್ರಮಂಬುಧೇಸ್ತೀರೇ ॥
(ಗೋಕರ್ಣೇಶ್ವರ–ಮಹಾಬಲೇಶ್ವರ)
(ತೀರ್ಥಪ್ರಬಂಧ–ಪಶ್ಚಿಮಪ್ರಬಂಧ–ಶ್ಲೋಕ–15, 47, 49, 51, 56, 81)

1) ಪವಿತ್ರಂ ಪಾಜಕಕ್ಷೇತ್ರಂ ಕೋ ನ ಸೇವೇತ ಕೋವಿದಃ ।
ಸತ್ಯಲೋಕೇಶ್ವರಃ ಪ್ರಾಣೋ ಯತ್ರಾವತರದುತ್ಸುಕಃ ॥
(ತೀರ್ಥಪ್ರಬಂಧ–ಪಶ್ಚಿಮಪ್ರಬಂಧ–ಶ್ಲೋಕ 16)
ರಾಮಾಧಿಮೋಶಿತಹರಿಸ್ಸ್ವಮೌಲಿಮಾಲಾ
ರಾಜದ್ವಿಮಾನಗಿರಿಶೋಭಿತಮಧ್ಯವಾಸ ।
ಕ್ಷೇತ್ರಂ ಸ ಪಾಜಕಪದಂ ತ್ರಿಕುಲ್ಯೈಕಕೇತುಃ
ಕಂ ಯದ್ದಧಾತಿ ಸತತಂ ಖಲು ವಿಶ್ವಪಾಜಾತ್ ॥
(ಮ॥ ವಿ॥ ಸರ್ಗ–2–ಶ್ಲೋಕ 11)



ಅದ್ವೈತಮತವನ್ನು ಪೂರ್ಣವಾಗಿ ನಂಬಿರಲಿಲ್ಲ; ಆದರೂ ಅನೇಕರು ಅನೇಕ ಸಲ ಅದ್ವೈತಮತವೇ ಸರಿ ಎಂದು ಹೇಳುತ್ತಿದ್ದುದರಿಂದ ಇಂಥ ಸಜ್ಜನರ ಮನಸ್ಸಿನಲ್ಲಿಯೂ ದ್ವೈತಮತದ ವಿಷಯದಲ್ಲಿ ಸಂಶಯವುಂಟಾಗಿತ್ತು.[1]

ಮಧ್ವಾಚಾರ್ಯರು ಪಾಜಕಕ್ಷೇತ್ರದಲ್ಲಿ ಜನಿಸಿದ ಸಮಯದಲ್ಲಿ ಭಾರತವು ರಾಜಕೀಯವಾಗಿಯೂ, ಧಾರ್ಮಿಕವಾಗಿಯೂ ಒಂದು ಸಂಧ್ಯಾಕಾಲವನ್ನು ಸಮೀಪಿಸುತ್ತಿತ್ತು. ಅವರು ಜನ್ಮತಾಳಿದ ದಿನಗಳಲ್ಲಿ ಅನೇಕ ರಾಜಶಕ್ತಿಗಳು ಉತ್ತರ ದಕ್ಷಿಣ ಪ್ರದೇಶಗಳಲ್ಲಿ ಅರಸೊತ್ತಿಗೆಗಾಗಿ ಸಮರಕ್ಕೆಳಸಿದ್ದವು.

ಮಧ್ವಾಚಾರ್ಯರು ಹುಟ್ಟಿದ ಸಮಯದಲ್ಲಿ (ಕ್ರಿ. ಶ. 1238) ಕರ್ನಾಟಕದ ದ್ವಾರಸಮುದ್ರದಲ್ಲಿ ಹೊಯ್ಸಳಸೋಮೇಶ್ವರ (ಕ್ರಿ. ಶ. 1233–1254) ಎಂಬುವನು ಗಂಗಾನದಿಯ ದಂಡೆಯಲ್ಲಿ ನಾಸಿರುದ್ದೀನ್ ಮಹಮದ್ (ಕ್ರಿ. ಶ. 1236–1256) ಎಂಬುವನೂ, ದೆಹಲಿಯಲ್ಲಿ ಗಿಯಾಸುದ್ದೀನ್ ಬಲ್ಬನ್ (ಕ್ರಿ. ಶ. 1267–1281) ಎಂಬುವನೂ ಆಳುತ್ತಿದ್ದರು. ಓರಂಗಲ್ಲಿನಲ್ಲಿ ಕಾಕತೀಯರ ರುದ್ರಮದೇವಿಯೂ, ದೇವಗಿರಿಯಲ್ಲಿ ಯಾದವದೊರೆ ಕೃಷ್ಣಕಾಂಧಾರನೂ ರಾಜ್ಯವಾಳುತ್ತಿದ್ದರು.

ತುಳುನಾಡಿನಲ್ಲಿ ಉಡುಪಿಯಲ್ಲಿ ಬಲ್ಲಾಳವಂಶದವರು ಆಳುತ್ತಿದ್ದರು. ಕುಂಬಳೆಸೀಮೆಯನ್ನು ಇಮ್ಮಡಿ ಜಯಸಿಂಹನೆಂಬ ದೊರೆಯು ಆಳುತ್ತಿದ್ದನು ಇವನು ಕದಂಬಕುಲಕ್ಕೆ ಸೇರಿದ್ದವನು. ಮಯೂರವರ್ಮನು ಇವರ ಮೂಲ ಪುರುಷ. ಇವನಿಗೆ ಬನವಸೆಯಪುರವರಾಧೀಶ್ವರ. ಸೂರ್ಯಕುಲತಿಲಕ,

---

1) ವಿಶ್ವಂ ಮಿಥ್ಯಾ ವಿಭುರಗುಣವಾನಾತ್ಮನಾಂ ನಾಸ್ತಿ ಭೇದೋ
ದೈತ್ಯಾ ಇತ್ಥಂ ವ್ಯದಧತ ಗಿರಾಂ ದಿಕ್ಷು ಭೂಯಃ ಪ್ರಸಿದ್ಧಿಮ್ ।
ಆನಂದಾದ್ಯೈರ್ಗುರುಗುಣಗಣೈಃ ಪೂರಿತೋ ಽ ವಾಸುದೇವೋ
ಮಂದಂ ಮಂದಂ ಮನಸಿ ಚ ಸತಾಂ ಹಂತ ನೂನಂ ತಿರೋಭೂತ್ ॥
ಮ॥-ವಿ॥ ಸರ್ಗ 1—ಶ್ಲೋಕ 55

ಸಾಹಸಸಂಜಯ, ಸತ್ಯರತ್ನಾಕರ, ಸರಸ್ವತೀಕರ್ಣಕುಂಡಲಾಭರಣ, ಶ್ರೀ ಮದನೇಶ್ವರಪಾದಪದ್ಮಾರಾಧಕ, ವೀರಪ್ರತಾಪ, ಧರ್ಮಸಿಂಹಾಸನಕವಿಸಿಂಹ ಇತ್ಯಾದಿ ಬಿರುದುಗಳು ಇದ್ದವು.

ಮಯೂರವರ್ಮನ ಮಗ ಚಿತ್ರಾಂಗದ. ಅವನು ತನ್ನ ಮಗಳು ಸಾಶೀಲೆ ಎಂಬುವಳಿಗೆ ಪಯಸ್ವಿನೀನದಿಯವರೆಗೆ ಮುವ್ವತ್ತೆರಡು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟಿದ್ದನು. ಅವಳು ಒಬ್ಬ ಬ್ರಾಹ್ಮಣನನ್ನು ವಿವಾಹವಾಗಿ ಮಕ್ಕಳನ್ನು ಪಡೆದಿದ್ದಳು.

ಈ ವಂಶದಲ್ಲಿ ರಾಮಾಂತರಸು, ಬೋಳದೇಸಿಂಗರಾಯ, ಪ್ರೌಢರಾಯ, ವೀರನರಸಿಂಹರಾಯ, ಜಯಸಿಂಹ ಮುಂತಾದವರು ಆಳಿ ಈಗ ಇಮ್ಮಡಿ ಜಯಸಿಂಹದೊರೆಯು ಆಳುತ್ತಿದ್ದನು. ಇವನು ಶ್ರೀಮಧ್ವಾಚಾರ್ಯರ ಶಿಷ್ಯ.

ಇವನು ಪಂಡಿತಪಕ್ಷಪಾತಿಯೂ, ಭಗವದ್ಭಕ್ತನೂ, ಪ್ರಜಾವತ್ಸಲನೂ ಆಗಿದ್ದನು. ಶ್ರೀಮಧ್ವಾಚಾರ್ಯರ ಸಮಕಾಲೀನರಾಗಿದ್ದ ಲಿಕುಚ ವಂಶದ, ಹರಿವಾಯುಸ್ತುತಿ ರಚಿಸಿದ ತ್ರಿವಿಕ್ರಮಪಂಡಿತಾಚಾರ್ಯರಿಗೂ ಹಾಗೂ ಅವರ ಮಕ್ಕಳು ಸುಮಧ್ವವಿಜಯವನ್ನು ರಚಿಸಿದ ನಾರಾಯಣಪಂಡಿತ ಚಾರ್ಯರಿಗೂ ಇವನು ಆಶ್ರಯ ನೀಡಿದ್ದನು.

ಈ ಹಿನ್ನೆಲೆಯಲ್ಲಿ ದಕ್ಷಿಣಾಪಥದ ದಿಗಂತದಲ್ಲಿ ಮುಸಲ್ಮಾನರ ದುರಾಕ್ರಮಣದ ಛಾಯೆ ಬೀಳಲಾರಂಭಿಸಿತ್ತು. ಮಲ್ಲಿಕಾಫರನ ದಕ್ಷಿಣ ಭಾರತದ ದಂಡಯಾತ್ರೆಗೆ ದೇಶ ಕಾಲಗಳು ಸನ್ನಿಹಿತವಾಗುತ್ತಿದ್ದುವು, ದೇವಗಿರಿ, ಓರಂಗಲ್, ಕುಮ್ಮಟದುರ್ಗ, ಆನೆಗೊಂದಿ, ದ್ವಾರಸಮುದ್ರ, ಮಧುರೆ ದೊರೆಗಳು ಮುಸಲ್ಮಾನರ ದಾಳಿಕಾರರಿಗೆ ಸಿಕ್ಕಿ ಊರ್ಧ್ವಸ್ಥಗೊಳ್ಳುವ ದಿನಗಳು ಹತ್ತಿರ ಬರುತ್ತಿದ್ದವು. ಹಿಂದೂ ಧರ್ಮ ಹಾಗೂ ಸಂಸ್ಕೃತಿಗಳಿಗೆ, ಯವನದಾಳಿಯು, ಮಾರಕವಾಗುವ ದುಃಸ್ಥಿತಿ ಪ್ರಾಪ್ತವಾಗಲಿತ್ತು.

ಧಾರ್ಮಿಕವಾಗಿ ಭಾರತದಲ್ಲೆಲ್ಲಾ ವೈದಿಕಮತವು ತನ್ನ ಹಿಂದಣ ವೈಭವವನ್ನು ಕಳೆದುಕೊಂಡು ರಿಕ್ತಾವಸ್ಥೆಗೆ ಬಂದಿತ್ತು. ಜೈನ ಬೌದ್ಧಮತಗಳು ಶಂಕರಾಚಾರ್ಯರ ಅದ್ವೈತಮತದ ಪ್ರಚಾರದ ಹೊಡೆತವನ್ನು ತಡೆದುಕೊಳ್ಳ

ಲಾರದೆ ನಿಶ್ಶೇಷವಾಗುವ ಸ್ಥಿತಿಗೆ ಬಂದಿದ್ದವು. ಈ ಸಮಯದಲ್ಲಿ ಶೃಂಗೇರಿಯ ಗುರುಪೀಠದಲ್ಲಿ ವಿದ್ಯಾಶಂಕರತೀರ್ಥರು (ಕ್ರಿ ಶ. 1228-1233?) ಶೋಭಾಯಮಾನರಾಗಿದ್ದರು.

ಶಂಕರಾಚಾರ್ಯರು ಅದ್ವೈತಮತವನ್ನು ಪ್ರಚಾರ ಮಾಡುವವರೆಗೆ ಭಾರತದಲ್ಲಿ ಬೌದ್ಧ ಜೈನಮತಗಳು ಉಚ್ಛ್ರಾಯಸ್ಥಿತಿಯಲ್ಲಿದ್ದವು. ಅವು ವೈದಿಕಮತವನ್ನು ಹಳಿದು, ಯಜ್ಞಯಾಗಾದಿಗಳಲ್ಲಿ ನಡೆಯುವ ಪಶುಬಲಿಯನ್ನು ಹಿಂಸೆ ಎಂದು ಖಂಡಿಸಿ, ಕರುಣೆಯ ಹೆಸರಿನಲ್ಲಿ, ಅಹಿಂಸೆಯ ಹೆಸರಿನಲ್ಲಿ ಜನಸಾಮಾನ್ಯರನ್ನು ಬೌದ್ಧಮತಕ್ಕೆ ಪರಿವರ್ತಿಸಿದ್ದವು.

ಬೌದ್ಧಮತವು ಅಶೋಕನ ಕಾಲಕ್ಕೇ ಕುಂತಳ ಹಾಗೂ ಮಹಿಷಮಂಡಲವೆನಿಸಿದ ಕರ್ನಾಟಕಕ್ಕೆ ಬಂದಿತ್ತು. ಇದಕ್ಕೆ ಮೊಳಕಾಲ್ಮೂರು ತಾಲ್ಲೂಕಿನ ಮಾಸ್ಕಿ, ಬ್ರಹ್ಮಗಿರಿಗಳಲ್ಲಿ ದೊರೆತಿರುವ ಅಶೋಕನ ಶಿಲಾಶಾಸನಗಳೇ ಸಾಕ್ಷಿ. ಉತ್ತರಕರ್ನಾಟಕದ ಹಲವೆಡೆಗಳಲ್ಲೂ ಬೌದ್ಧಧರ್ಮವು ನೆಲೆಗೊಂಡಿತ್ತು.

ದಕ್ಷಿಣಕನ್ನಡಜಿಲ್ಲೆಯ ಮಂಗಳೂರು ಬೌದ್ಧರ ಮುಖ್ಯ ಕೇಂದ್ರವಾಗಿತ್ತು. ಕದರಿಯಲ್ಲಿ ಗೋರಕ್ಷಕನಾಥಸಂಪ್ರದಾಯದ ಸಿದ್ಧರಿದ್ದರು. ಆಲೂಪದೊರೆಗಳಲ್ಲಿ ಪ್ರಸಿದ್ಧನಾದ ಕುಂದವರ್ಮನು ನಾಥಪಂಥಕ್ಕೆ ಪರಿವರ್ತಿತನಾಗಿದ್ದನು. ಹತ್ತನೆ ಶತಮಾನದ ಕೊನೆಯಲ್ಲಿ ಕೇರಳಕ್ಕೆ, ಬಂದಿದ್ದ ಮತ್ಸ್ಯೇಂದ್ರನಾಥರಾಜನ ಮಹಿಮೆಗೆ ಮನಸೋತ ಪ್ರಮೀಳೆ ಎಂಬ ಕೇರಳರಾಜಪುತ್ರಿಯು ಅವನೊಡನೆ ನಾಸಿಕಕ್ಷೇತ್ರಕ್ಕೆ ಹೊರಟು, ನಡುದಾರಿಯಲ್ಲಿ ಇಂದಿನ ಮಂಗಳೂರಿನ ಬಳಿಯ ಬೋಲೂರಿನಲ್ಲಿ ನಿಂತಳೆಂದೂ, ಆಕೆಗಾಗಿ ದೊರೆ ಕುಂದವರ್ಮನು ಒಂದು ಭವನವನ್ನು ಕಟ್ಟಿಸಿಕೊಟ್ಟನೆಂದೂ ಒಂದು ಹೇಳಿಕೆ ಇದೆ. ಇವಳಿಗೆ ಇನ್ನೊಂದು ಹೆಸರು ಮಂಗಳಾದೇವಿ ಎಂದೂ ಇತ್ತು. ಇವಳು ನಿಂತ ಸ್ಥಳವೇ ಈಗ ಮಂಗಳೂರೆನಿಸಿದೆ.

ಇಲ್ಲಿ ನಾಥಪಂಥದ ಜೋಗಿಮಠವಿತ್ತು. ಕದರಿಮಠದ ಮಂಜುನಾಥ ದೇಗುಲದಲ್ಲಿದ್ದ ಲೋಕೇಶ್ವರನ ಕಂಚಿನವಿಗ್ರಹವೇ ಇವರ ಆರಾಧ್ಯಮೂರ್ತಿ ಆಗಿತ್ತು.

ಇದನ್ನು ಬೌದ್ಧರು ತಮ್ಮದನ್ನಾಗಿ ಮಾಡಿಕೊಂಡಾಗ ಈ ವಿಗ್ರಹವನ್ನೇ ಅವಲೋಕಿತೇಶ್ವರನೆಂದು ಪೂಜಿಸಿದರು. ಅವರಿದ್ದ ಜೋಗಿಮಠವೇ ಬೌದ್ಧ ವಿಹಾರವಾಯಿತು. ಹೀಗೆ ಕದರಿಯು ಬೌದ್ಧಕ್ಷೇತ್ರವಾಗಿ, ಅಲ್ಲಿನ ಮಂಜುಶ್ರೀ ಮತ್ತು ಅವಲೋಕಿತೇಶ್ವರಮೂರ್ತಿಗಳು, ಮಹಾಯಾನಬೌದ್ಧಮತವು ಅಲ್ಲಿ ಪ್ರಚಾರದಲ್ಲಿದ್ದುದಕ್ಕೆ ಕುರುಹುಗಳಾಗಿವೆ.

ಭೋಧಿಸತ್ವನ ರೂಪಾಂತರವೇ ಈ ಮಂಜುಶ್ರೀ.

ಹೀಗೆ ಶಂಕರಾಚಾರ್ಯರು ಬೌದ್ಧಮತವನ್ನು ನಿಗ್ರಹಿಸಿ, ತುಳು ನಾಡಿನಲ್ಲಿ ವೈದಿಕ ಮತವನ್ನು ಪುನರುದ್ಧಾರ ಮಾಡಿದ್ದರು.

ಅವರು ಕೊಲ್ಲೂರಿಗೂ ಭೇಟಿ ಇತ್ತು ಅಲ್ಲಿನ ಮೂಕಾಂಬಿಕಾಮಂದಿರದಲ್ಲಿ ಶ್ರೀಚಕ್ರವನ್ನು ಸ್ಥಾಪಿಸಿದ್ದರು. ಅಲ್ಲಿನ ಚಂದ್ರಮೌಳೀಶ್ವರ ದೇವಾಲಯ ಅವರಿಂದ ನಿರ್ಮಿತವಾದದ್ದು. ಶಂಕರಾಚಾರ್ಯರ ಶಿಷ್ಯರಾದ ತೋಟಕಾಚಾರ್ಯರು ಈಗಿನ ಎಡನೀರುಮಠದ ಮೂಲಪುರುಷರೆಂದೂ, ಇನ್ನೊಬ್ಬ ಶಿಷ್ಯರಾದ ಹಸ್ತಾಮಲಕಾಚಾರ್ಯರು ಉಡುಪಿಗೆ ಬಂದಿದ್ದರೆಂದೂ ಆನಂದಗಿರಿಯ ಶಂಕರ ವಿಜಯದಲ್ಲಿ ಹೇಳಿದೆ.

ಇನ್ನೊಂದು ಹೇಳಿಕೆಯಂತೆ ಜೈನರ ಅನಂತನಾಥಬಸದಿಯನ್ನು ಅನಂತೇಶ್ವರದೇವಾಲಯವಾಗಿ ಮಾಡಿ, ಅಲ್ಲಿ ಒಂದು ಲಿಂಗವನ್ನು ಪ್ರತಿಷ್ಠಿಸಿದವರು ಶಂಕರಾಚಾರ್ಯರೇ. ಹೀಗೆ ತುಳುನಾಡಿನಲ್ಲಿ ಜೈನಧರ್ಮಕ್ಕೆ ಶಂಕರಾಚಾರ್ಯರಿಂದ ಬಲವಾದ ಪೆಟ್ಟು ಬಿದ್ದು ಶಕ್ತಿಗುಂದುತ್ತಾ ನಡೆದಿತ್ತು. ಅದರ ಕಡೆಗೆ ಸಾಮಾನ್ಯರ ಒಲವು ಕಡಿಮೆಯಾಗಿ ರಾಜಾಶ್ರಯವೂ ತಪ್ಪಿ ಹೋಗಿತ್ತು. ಇದೊಂದು ದಂತ ಕಥೆ ಮಾತ್ರ.

ಶ್ರೀಮಧ್ವಾಚಾರ್ಯರು ತುಳುನಾಡಿನಲ್ಲಿ ಅವತರಿಸುವ ಕಾಲಕ್ಕೆ ಅದ್ವೈತ[1] ವಿಶಿಷ್ಟಾದ್ವೈತಮತಗಳು ಪ್ರಚಾರದಲ್ಲಿದ್ದವು, ಕೆಲವರು ಶಿವ–ವಿಷ್ಣು

---

ಅದ್ವೈತಮತದ ಪ್ರಮೇಯ —

1) ಶ್ರೀಮಚ್ಛಂಕರದರ್ಶನೇ ಜಗದಿದಂ ಮಿಥ್ಯಾಪರಬ್ರಹ್ಮತ
ತ್ಸತ್ಯಂ ತತ್ಪ್ರತಿಬಿಂಬಮೇತದಖಿಲಂ ಸ್ವಂ ಚ ಸ್ವಯಂ ಪಶ್ಯತಿ ।
ಮಾಯಾಯಾಂಜನಕುಂಭಪಂಕ್ತಿಶಶಿವದ್ಭೇದೋ ನ ಸನ್ನಜ್ಞತಾ
ಹಾನಿರ್ಮುಕ್ತಿರಿತಃ ಪ್ರಮಾ ಚ ಕರಣಂ ಬ್ರಹ್ಮೈವಮಾಸ್ತೇಽಗುಣಮ್ ॥

ಭೇದವನ್ನು ಕಲ್ಪಿಸದೆ ವೈಷ್ಣವ ಹಾಗೂ ಶೈವಸಂಪ್ರದಾಯದಿಂದ ಕೂಡಿದ ಶಾಂಡಿಲ್ಯ ಋಷಿಗಳ ಭಾಗವತಸಂಪ್ರದಾಯವನ್ನು ಸ್ವೀಕರಿಸಿದ್ದರು.

ಜನನಮರಣರೂಪವಾದ ಸಂಸಾರದಿಂದ ಬಿಡುಗಡೆ ಹೊಂದಿ ನಿತ್ಯ ನಿರ್ದೋಷಾನಂದವನ್ನು ಅನುಭವಿಸುವುದೇ ಮುಕ್ತಿ ಎನಿಸುತ್ತದೆ. ಇದಕ್ಕೆ ಸಾಧನೆ: ನಿಶ್ಚಯತತ್ತ್ವಜ್ಞಾನ. ಆದರೆ ಇಂದ್ರಿಯಸುಖವೇ ನಿಜವಾದ ಸುಖವೆಂದು ಭ್ರಮಿಸಿ, ಅತೀಂದ್ರಿಯಸುಖದ ಕಲ್ಪನೆಯನ್ನು ನಂಬದ ಜನರೂ ಅಲ್ಲಲ್ಲಿ ಇದ್ದರು. ಐಹಿಕ ಸುಖಾಪೇಕ್ಷೆಯೇ ಅವರ ಗುರಿಯಾಗಿತ್ತು, ದೇಹಾಂತರಪ್ರಾಪ್ತಿ, ಕರ್ಮ, ಪಾಪಪುಣ್ಯಗಳಲ್ಲಿ ಇವರಿಗೆ ನಂಬಿಕೆ ಇರಲಿಲ್ಲ. ಜಗತ್ತಿನ ವ್ಯಾಪಾರವು ವಸ್ತುಗಳ ಸ್ವಭಾವದಿಂದ ನಡೆಯುತ್ತದೆ. ಪಂಚಭೂತಗಳ ಸಂಯೋಗವೇ ಈ ಸೃಷ್ಟಿ. ಇದನ್ನು ಸೃಷ್ಟಿಸುವ, ನಡೆಯುವಂತೆ ನೋಡಿಕೊಳ್ಳುವ, ವ್ಯಕ್ತಿಯ ಕರ್ಮಗಳನ್ನು ನೋಡಿಕೊಂಡು ಫಲಾಫಲಗಳನ್ನು ಕೊಡುವ, ಬೇರೊಂದು ಶಕ್ತಿ—ಭಗವಂತ—ಇಲ್ಲವೆಂದು ಇವರು ಹೇಳುತ್ತಾ ಜನಸಾಮಾನ್ಯರನ್ನು ಧರ್ಮಮಾರ್ಗದಿಂದ ವಂಚಿಸುತ್ತಿದ್ದರು. ಪ್ರತ್ಯಕ್ಷವನ್ನು ಮಾತ್ರ ನಂಬುತ್ತಿದ್ದರು. ಇವರನ್ನು ಚಾರ್ವಾಕರೆಂದು ಕರೆಯುತ್ತಿದ್ದರು.[1]

ಇವರಿಂದ ಆಗುತ್ತಿದ್ದ ಪ್ರಾಣಿಹಿಂಸೆ. ಅನ್ಯಾಯ ಅನರ್ಥಗಳ ಪರಂಪರೆಯನ್ನು ಗಮನಿಸಿ ಬೌದ್ಧರ ಅಹಿಂಸಾ ಧರ್ಮವು ಮುಂದೆ ಬಂದಿತು. ಪ್ರತ್ಯಕ್ಷದೊಂದಿಗೆ ಅನುಮಾನವನ್ನೂ ಪ್ರಮಾಣವಾಗಿ ಸ್ವೀಕರಿಸಿ, ಕರ್ಮ, ಪುನರ್ಜನ್ಮಗಳನ್ನೂ ಅವುಗಳ ಫಲಾಫಲಗಳನ್ನೂ ಎತ್ತಿಹಿಡಿಯಿತು. ಗೌತಮಬುದ್ಧನು ತನ್ನ ಶಿಷ್ಯರಿಗೆ ಸರ್ವವೂ ಕ್ಷಣಿಕ, ಸ್ವಲಕ್ಷಣ, ದುಃಖ ಮತ್ತು ಶೂನ್ಯವೆಂದು ಉಪದೇಶ ನೀಡಿದನು. ಮಾಧ್ಯಮಿಕರು, ವೈಭಾಷಿಕರು, ಸೌತ್ರಾಂತಿಕರು, ಮತ್ತು ಯೋಗಾಚಾರರೆಂಬುವರು ಬೌದ್ಧಮತದ ಒಳಪಂಗಡಗಳು.

---

1) ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ।
ತಸ್ಮಾತ್ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್ ॥

ಬುದ್ಧನ ಉಪದೇಶಕ್ಕೆ ಭಾವನಾಚತುಷ್ಟಯುವೆಂದು ಹೆಸರು. ಜೀವನವು ದುಃಖಮಯುವಾದುದರಿಂದ ಆಸೆಯನ್ನು ಗೆದ್ದು, ಕರ್ಮಬಂಧನದಿಂದ ಬಿಡುಗಡೆಯಾದಾಗಲೇ ಮುಕ್ತಿ ; ಶೂನ್ಯವನ್ನು ಪಡೆದಾಗಲೇ ನಿರ್ವಾಣ ವೆಂದೂ ಬೋಧಿಸಿದನು.

ಜೈನಧರ್ಮಕ್ಕೂ ಬೌದ್ಧದರ್ಮದಂತೆ, ಶೂನ್ಯವನ್ನು ಹೊಂದುವುದೇ ಮುಕ್ತಿ ಅಥವಾ ಬಿಡುಗಡೆ ಆಗಿತ್ತು. ಇಂಥ ಶೂನ್ಯವಾದವನ್ನು ಖಂಡಿಸಿ, ಅದನ್ನು ನಿರಾಕರಿಸಿ, ಯುಕ್ತಿಯುಕ್ತವಾದ ತತ್ತ್ವಜ್ಞಾನದಿಂದ ಸಚ್ಚಿದಾನಂದ ಸ್ವರೂಪಿಯೂ, ಸರ್ವಶಕ್ತನೂ ಆದ ಒಬ್ಬ ಭಗವಂತನಿರುವನೆಂಬುದನ್ನು ಸ್ಪಷ್ಟವಾಗಿ ಪ್ರತಿಪಾದಿಸುವ ವೈದಿಕಧರ್ಮದ ಅಗತ್ಯವಿತ್ತು. ಈ ಅಗತ್ಯವನ್ನು ಪೂರೈಸಲು ನ್ಯಾಯವೈಶೇಷಿಕಮತಗಳು ಹುಟ್ಟಿಕೊಂಡವು.

ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂಬ ಪ್ರಮಾಣಗಳನ್ನು ಸ್ವೀಕರಿಸಿ ವೈದಿಕತತ್ತ್ವಗಳನ್ನು ಬೋಧಿಸಲು ಪ್ರಾಜ್ಞರಾದ ಋಷಿಗಳು ಷಡ್ದರ್ಶನಗಳನ್ನು ಲೋಕಕ್ಕೆ ಇತ್ತರು. ಗೌತಮರು ನ್ಯಾಯದರ್ಶನ ವನ್ನೂ, ಕಣಾದರು ವೈಶೇಷಿಕದರ್ಶನವನ್ನೂ, ಕಪಿಲರು ಸಾಂಖ್ಯದರ್ಶನ ವನ್ನೂ, ಪತಂಜಲಿಯು ಯೋಗದರ್ಶನವನ್ನೂ, ಜೈಮಿನಿಯು ಪೂರ್ವ ಮೀಮಾಂಸಾದರ್ಶನವನ್ನೂ, ಬಾದರಾಯಣರು ಉತ್ತರಮೀಮಾಂಸಾವೇದಾಂತ ದರ್ಶನವನ್ನೂ ಲೋಕಕ್ಕೆ ಅನುಗ್ರಹಿಸಿದರು.

ನ್ಯಾಯವೈಶೇಷಿಕದರ್ಶನಗಳಲ್ಲಿ ಯಾವ ವಸ್ತುವೂ ಕ್ಷಣಿಕವಲ್ಲ. ಯಥಾರ್ಥಜ್ಞಾನಕ್ಕೆ ಗೋಚರವಾಗುವ ಪದಾರ್ಥಗಳೆಲ್ಲ ಸತ್ಯ. ಪಂಚಭೂತಗಳ ಸಂಯೋಗದಿಂದ ಚೇತನವು ಹುಟ್ಟುವುದಿಲ್ಲ. ಆತ್ಮವೆಂಬ ನಿತ್ಯವಸ್ತುವು ಅನು ಮಾನಪ್ರಮಾಣದಿಂದಲೇ ಸಿದ್ಧವಾಗುತ್ತದೆ. ಜೀವರು ಅನೇಕರು, ಜೀವರಿಗೆ ಕರ್ಮಾನುಸಾರ ದೇಹಾಂತರಪ್ರಾಪ್ತಿಯಾಗುತ್ತದೆ, ಅಶೇಷದುಃಖನಿವೃತ್ತಿಯೇ ಮೋಕ್ಷ. ಇದು ಜೀವರಿಗೆ ನಿತ್ಯಾನಿತ್ಯವಸ್ತುವಿವೇಕದಿಂದ ಉಂಟಾಗುತ್ತದೆ ಎಂದು ಈ ದರ್ಶನಗಳು ಸಾರಿದವು.

ಕಾರ್ಯರೂಪವಾದ ಈ ಜಗತ್ತಿಗೆ ನಿಯಾಮಕನೊಬ್ಬನಿದ್ದಾನೆ. ಅವನೇ ಈಶ್ವರನು-ಪರಮಾತ್ಮನು ಎಂದು ಈ ದರ್ಶನಗಳು ಪ್ರತಿಪಾದಿಸಿದುವು.

ಸಾಂಖ್ಯದರ್ಶನವು ಪ್ರಪಂಚವನ್ನು ಚೇತನಾಚೇತನಾತ್ಮಕವೆಂದು ಒಪ್ಪಿಕೊಳ್ಳುತ್ತದೆ. ಜಗತ್ತಿನ ಸೃಷ್ಟಿಗೆ ಮೂಲಭೂತವಾಗಿ ಇಪ್ಪತ್ತನಾಲ್ಕು ತತ್ತ್ವಗಳಿವೆ. ಅವು ಯಾವುವೆಂದರೆ: ಪಂಚತನ್ಮಾತ್ರಗಳಾದ ರೂಪ, ರಸ, ಗಂಧ, ಸ್ಪರ್ಶ, ಶಬ್ದ ; ಪಂಚೇಂದ್ರಿಯಗಳಾದ ಕಣ್ಣು, ಕಿವಿ, ನಾಲಿಗೆ, ಮೂಗು, ಚರ್ಮ ; ಪಂಚಕರ್ಮೇಂದ್ರಿಯಗಳಾದ ಕೈ, ಕಾಲು, ನಾಲಿಗೆ, ಗುದ, ಉಪಸ್ಥ ; ಪಂಚಭೂತಗಳಾದ ಪೃಥ್ವಿ, ಅಪ್, ತೇಜಸ್ಸು, ವಾಯು, ಆಕಾಶ-ಇವುಗಳೊಡನೆ, ಬುದ್ಧಿ, ಮನಸ್ಸು, ಅಹಂಕಾರ, ಮತ್ತು ಮಹತ್ತತ್ತ್ವಗಳು ಸೇರಿ ಇಪ್ಪತ್ತನಾಲ್ಕು ತತ್ತ್ವಗಳು—ಇವುಗಳಿಂದ ದೃಶ್ಯಾತ್ಮಕವಾದ ಜಗತ್ತು ಸೃಷ್ಟಿಯಾಗುತ್ತದೆ. ಈ ಪ್ರಕೃತಿಪುರುಷರ ಸಂಬಂಧವೇ ಸಂಸಾರ ಅಥವಾ ಜಗತ್ತು. ಪ್ರಾಕೃತಬಂಧನದಿಂದ ಬಿಡಿಸಿಕೊಂಡು ಆತ್ಮದ ಶುದ್ಧಸ್ವಭಾವವನ್ನು ಅರಿತುಕೊಳ್ಳುವುದೇ ಮೋಕ್ಷವೆಂದು ಸಾಂಖ್ಯದರ್ಶನ ತಿಳಿಸುತ್ತದೆ.

ಯೋಗದರ್ಶನವು ಸಾಂಖ್ಯದರ್ಶನದಂತೆ ಪ್ರಕೃತಿಪುರುಷರ ಸಂಬಂಧವನ್ನು, ಒಪ್ಪಿಕೊಂಡರೂ, ಅದು ಅಖಂಡೈಶ್ವರ್ಯಯುಕ್ತನೂ. ಸರ್ವಜ್ಞನೂ ಆದ ಈಶ್ವರನನ್ನು—ಭಗವಂತನನ್ನು ಅಂಗೀಕರಿಸುತ್ತದೆ. ಈಶ್ವರನು ದುಃಖದೋಷಗಳಿಂದ ನಿರ್ಲಿಪ್ತನೆಂದು ಹೇಳುತ್ತದೆ.

ಸಾಂಖ್ಯರಲ್ಲಿ ಎರಡು ವಿಧ-ಸೇಶ್ವರರು ಮತ್ತು ನಿರೀಶ್ವರರೆಂದು.

ಈ ದರ್ಶನದಲ್ಲಿ ಈಶ್ವರನ ಅಖಂಡಧ್ಯಾನವು ಪುರುಷಾರ್ಥಸಾಧನೆ ಎನಿಸುತ್ತದೆ. ಜೀವರು ಪ್ರಕೃತಿಬಂಧನದಿಂದ ಬಿಡುಗಡೆ ಹೊಂದಲು ಚಿತ್ತವೃತ್ತಿ ನಿರೋಧದಿಂದ ಸಾಧ್ಯ. ಚಿತ್ತ ಅಥವಾ ಅಂತಃಕರಣದ ವೃತ್ತಿಗಳಾದ ಪ್ರಮಾಣ, ವಿಪರ್ಯಾಸ, ವಿಕಲ್ಪ, ನಿದ್ರೆ ಮತ್ತು ಸ್ಮೃತಿಗಳನ್ನು ಗೆದ್ದಾಗ ಮಾತ್ರ ನಿರೋಧ ಸಾಧ್ಯ. ಈ ದರ್ಶನವು ಪ್ರತ್ಯಕ್ಷ, ಅನುಮಾನ, ಆಗಮಗಳನ್ನು ಪ್ರಮಾಣಗಳೆಂದು ಒಪ್ಪುತ್ತದೆ.

ಯೋಗದರ್ಶನವು, ಸಾಧನಮಾರ್ಗವೆಂದು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿಗಳೆಂಬ ಅಷ್ಟಾಂಗಗಳನ್ನು ಹೇಳುತ್ತದೆ. ಚಿತ್ತವು ತನ್ನ ವೃತ್ತಿಗಳನ್ನು ಕಳೆದುಕೊಂಡು ನಿಶ್ಚಲಸ್ಥಿತಿಗೇರಿದಾಗ ಬರುವ ಆನಂದವೇ ಮುಕ್ತಿ.

ಪೂರ್ವಮೀಮಾಂಸೆಯಲ್ಲಿ ವೇದೋಕ್ತವಾದ ಯಜ್ಞಯಾಗಾದಿಗಳ ಮಹತ್ವವನ್ನು ಎತ್ತಿಹಿಡಿಯಲಾಗಿದೆ. ಕುಮಾರಿಲಭಟ್ಟ, ಮುರಾರಿಮಿಶ್ರ ಮತ್ತು ಪ್ರಭಾಕರರೆಂಬುವರು ಜ್ಞಾನಪೂರ್ವಕ ಅರ್ಥ, ವೇದಾಧ್ಯಯನಪೂರ್ವಕ ಧರ್ಮ, ಜಿಜ್ಞಾಸೆಯಿಂದ ಉಂಟಾದ ವಿಹಿತಕರ್ಮ ಇವುಗಳಿಂದ ಜೀವನು ಮುಕ್ತಿ ಪಡೆಯುವುದಾಗಿ ಹೇಳುತ್ತಾರೆ. ವೇದಾಧ್ಯಯನದಿಂದ ಧರ್ಮಾಧರ್ಮ ವಿವೇಕ ಉಂಟಾಗುವುದೆಂದು ಈ ದರ್ಶನಕಾರರು ಅಭಿಪ್ರಾಯಪಡುತ್ತಾರೆ.

ಇವೆಲ್ಲಕ್ಕಿಂತ ಉತ್ತರಮೀಮಾಂಸಾದರ್ಶನವೆನಿಸಿಕೊಂಡ ವೇದಾಂತ ದರ್ಶನವು ಶಂಕರಾಚಾರ್ಯರು, ರಾಮಾನುಜಾಚಾರ್ಯರಂತಹ ಮಹಾ ಮೇಧಾವಿಗಳನ್ನು ಆಕರ್ಷಿಸಿತು. ವೇದ ಮತ್ತು ಉಪನಿಷತ್ತುಗಳ ದರ್ಶನವೇ ವೇದಾಂತ, ಇದನ್ನು ಬಾದರಾಯಣರು ಸೂತ್ರರೂಪದಲ್ಲಿ ರಚಿಸಿದರು. ಅವುಗಳು ವೇದಾಂತಸೂತ್ರ, ಅಥವಾ ಬ್ರಹ್ಮಸೂತ್ರ, ಅಥವಾ ಶಾರೀರಕಸೂತ್ರಗಳೆಂದು ಪ್ರಸಿದ್ಧವಾಗಿವೆ. ಅಂತ ಅಂದರೆ ಸಿದ್ಧಾಂತ.

ಇವುಗಳಿಗೆ ತಮ್ಮದೇ ಆದ ವ್ಯಾಖ್ಯಾನವನನ್ನು ರಚಿಸಿ ಶಂಕರಾಚಾರ್ಯರು ಅದ್ವೈತ ಮತವನ್ನು ಪ್ರತಿಷ್ಠಾಪಿಸಿದರು,[1] ರಾಮಾನುಜಾಚಾರ್ಯರು ತಮ್ಮದೇ ಆದ ವ್ಯಾಖ್ಯಾನವನ್ನು ರಚಿಸಿ ವಿಶಿಷ್ಟಾದ್ವೈತ

---

ವಿಶಿಷ್ಟಾದ್ವೈತಮತದ ಪ್ರಮೇಯ—

ಶ್ರೀರಾಮಾನುಜದರ್ಶನೇ ಪರತರಃ ಶ್ರೀವಲ್ಲಭಸ್ತಜ್ಜಗ
ತ್ಸತ್ಯಂ ಭಾನುತದೀಯ್ಯಜಾವದವಿನಾಭಾವಶ್ಚ ಜೀವೇಶಯೋಃ।
ಅಗ್ರೇ ಜೀವಗಣಾಃ ಹರೇರನುಪಮಾನಂದಸ್ತು ಮುಕ್ತಿಪ್ರಪ
ತ್ತ್ಯನ್ನೇತಾ ತ್ರಿತಯಂ ಪ್ರಮಾಣಮುಪರೋಕ್ಷ್ಯಾಧ್ಯಾತ್ಮವೇದ್ಯೋ
ಹರಿಃ ॥

("ಮಧ್ವಮತೇ ಪರಮರಹಸ್ಯಪ್ರಮೇಯಮ್" ಗ್ರಂಥದಿಂದ ಉದ್ಧೃತವಾದುದು)

ಮತವನ್ನು ಪ್ರತಿಷ್ಠಾಪಿಸಿದರು.

ಹೀಗೆ ಅದ್ವೈತ[1] ಮತ್ತು ವಿಶಿಷ್ಟಾದ್ವೈತ[2] ಮತಗಳಿಂದ ಶ್ರೀಮಧ್ವಾಚಾರ್ಯರ ಅವತಾರ ಕಾಲದಲ್ಲಿ ಜನಸಾಮಾನ್ಯರಿಗೆ ಸರಿಯಾದ ವೇದಾಂತ ದರ್ಶನವು ಯಾವುದೆಂದು ತಿಳಿಯದೆ ಹೋಗಿತ್ತು. ವೇದಗಳ ಅರ್ಥವನ್ನು ನಿರ್ಣಯ ಮಾಡುವ ದರ್ಶನಕ್ಕೆ ವೇದಾಂತವೆಂದು ಹೆಸರು.

"ವೇದಾನಾಂ ಅಂತೋ ನಿರ್ಣಯಃ ವೇದಾಂತಃ"

ಎಂದು ನಿರ್ವಚನ.

---

1) ಅದ್ವೈತಮತದ ಪ್ರಮೇಯ ಗ್ರಂಥಗಳು—

ಭಾಷ್ಯಕಾರರು-ಶಂಕರಾಚಾರ್ಯರು (ಶಾರೀರಿಕಭಾಷ್ಯ) ಶಂಕರಭಾಷ್ಯ-

ಟೀಕೆಗಳು:— 1) ವಾಚಸ್ಪತಿಮಿಶ್ರರ-ಭಾಮತಿ

2) ಪದ್ಮಪಾದರ-ಪಂಚಪಾದಿಕಾ.

ಭಾಮತಿಗೆ ಟಿಪ್ಪಣಿಗಳು—

ಅಮಲಾನಂದಸರಸ್ವತಿಗಳ ಕಲ್ಪತರು ; ಇದರ ವ್ಯಾಖ್ಯಾನ-ಅಪ್ಪಯ್ಯ ದೀಕ್ಷಿತರ ಪರಿಮಳ.

ಪಂಚಪಾದಿಕಾ ಟೀಕಾ—ಪಂಚಪಾದಿಕಾವಿವರಣ-ಪ್ರಕಾಶಾತ್ಮರು. ಇದರ ವ್ಯಾಖ್ಯಾನ ತತ್ತ್ವದೀಪನ-ಅಖಂಡಾನಂದಮುನಿಗಳು.

ಹಾಗೆಯೇ ಗೋವಿಂದಾನಂದರ ರತ್ನಪ್ರಭಾ, ಆನಂದಗಿರಿಗಳ ನ್ಯಾಯ ನಿರ್ಣಯ, ಅದ್ವೈತಾನಂದಸರಸ್ವತಿಗಳ ಬ್ರಹ್ಮವಿದ್ಯಾಭರಣಗಳೆಂಬ ವ್ಯಾಖ್ಯಾನ ಗಳೂ ಇವೆ.

2) ವಿಶಿಷ್ಟಾದ್ವೈತಮತದ ಪ್ರಮೇಯ ಗ್ರಂಥಗಳು.

ಭಾಷ್ಯಕಾರರು—ರಾಮಾನುಜಾಚಾರ್ಯರು—ಶ್ರೀಭಾಷ್ಯ

ಇದರ ವ್ಯಾಖ್ಯಾನ — ಸುದರ್ಶನಭಟ್ಟರಚಿತ ಶ್ರುತಪ್ರಕಾಶಿಕಾ.

ಶ್ರುತಪ್ರಕಾಶಿಕಾ ವ್ಯಾಖ್ಯಾನ-ರಂಗರಾಮಾನುಜರಚಿತ ಭಾವಪ್ರಕಾಶಿಕಾ.

ಇತರ ಗ್ರಂಥಗಳು:— ವೇದಾಂತದೇಶಿಕರ ರಹಸ್ಯತ್ರಯ ಸಾರ, ತತ್ತ್ವ ಮುಕ್ತಾಕಲಾಪ, ಯಾಮುನಾಚಾರ್ಯರ-ಸಿದ್ಧಿತ್ರಯ, ಶ್ರೀನಿವಾಸಾಚಾರ್ಯರ-ಯತೀಂದ್ರಮತ ದೀಪಿಕಾ, ಮತ್ತು ಶ್ರೀಭಾಷ್ಯವಾರ್ತಿಕಾ ಮುಂತಾದುವು.

ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನ, ಮತ್ತು ಟಿಪ್ಪಣಿಗಳಿದ್ದರೂ ತತ್ತ್ವ ನಿಶ್ಚಯವಾಗದೆ ಜನಸಾಮಾನ್ಯರು ಗೊಂದಲದಲ್ಲಿ ಸಿಕ್ಕಿಬಿದ್ದಿದ್ದರು.

ಜಗತ್ತು ಎಲ್ಲರಿಗೂ ಕಣ್ಣಿಗೆ ಕಾಣುವಂಥದು. ಇದನ್ನು ಮಿಥ್ಯೆಯೆಂದು ಹೇಳುವುದನ್ನು ನಂಬುವುದು ಹೇಗೆ ? ಭಗವಂತನು ಚೇತನಾಚೇತನ ವಸ್ತುಗಳಲ್ಲಿ ಅಂತರ್ಯಾಮಿಯಾಗಿ ಇದ್ದು ತನ್ನ ವಿರಾಟರೂಪದಲ್ಲಿ ಪ್ರಕಟನಾಗುತ್ತಾನೆ ಅಂಥ ಬ್ರಹ್ಮನನ್ನೇ ತಾನೆಂದು ತಿಳಿಯುವುದು ಹೇಗೆ ? ಮುಕ್ತಿ ಎಂಬುದು ಸ್ವರೂಪಾನಂದಾವಿರ್ಭಾವ. ಪರಮಾತ್ಮ ಮತ್ತು ಜೀವಾತ್ಮರು ಅತ್ಯಂತ ಬೇರೆಯಾಗಿರದೆ ಈ ಮುಕ್ತಿಯ ಸುಖವನ್ನು ಹೊಂದುವುದು ಹೇಗೆ ? ಇಂತಹ ಪ್ರಶ್ನೆಗಳಿಗೆ ಉತ್ತರ ದೊರಕದೆ ಸಾಮಾನ್ಯಜನರು ಸಂಶಯಗ್ರಸ್ತರಾಗಿದ್ದರು. ಒಂದು ಕಡೆ ಷಡ್ದರ್ಶನಗಳ ದಾಳಿಯನ್ನು ಸಹಿಸಲಾಗದೆ ಕಣ್ಮರೆಯಾಗಿದ್ದ ಜೈನ ಬೌದ್ಧ ಮತಗಳು, ಇನ್ನೊಂದುಕಡೆ ತಮ್ಮ ತಮ್ಮಲ್ಲೇ ವಾದವಿವಾದಗಳಲ್ಲಿ ಗೊಂದಲವೆಬ್ಬಿಸುತ್ತಿದ್ದ ಷಡ್ದರ್ಶನಗಳು, ಬೇರೊಂದೆಡೆ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾದರ್ಶನಗಳಿಂದ ಸಮಂಜಸ ಪರಿಹಾರ ದೊರಕದೆ ಜನತೆ ವಿಹ್ವಲಗೊಂಡಿತ್ತು. ಇಂಥ ಸಮಯದಲ್ಲಿ ಶ್ರೀಬಾದರಾಯಣರ ವೇದಾಂತದರ್ಶನವು ಬಾಯಾರಿದವರಿಗೆ ಅಮೃತಸೇಚನ ಮಾಡಿತ್ತು. ಆದರೆ ಶಂಕರಾಚಾರ್ಯರು ಮತ್ತು ರಾಮಾನುಜಾಚಾರ್ಯರು ಬಾದರಾಯಣರ ಬ್ರಹ್ಮಸೂತ್ರಗಳಿಗೆ ತಮ್ಮದೇ ಆದ ಕುಭಾಷ್ಯಗಳನ್ನು ರಚಿಸಿದ್ದುದರಿಂದ ಇವುಗಳಲ್ಲಿ ಯಾವುದು ಸರಿ ಯಾವುದು ಸರಿಯಲ್ಲ ಎಂದು ತಿಳಿಯದೆ ಜನತೆಯು ಹೊಸ ದಾರ್ಶನಿಕನಿಗಾಗಿ–ಕಾರಣಪುರುಷನಿಗಾಗಿ, ತತ್ತ್ವವಾದಕ್ಕಾಗಿ ಹಾತೊರೆಯುತ್ತಿತ್ತು.

ಅಂತಹ ತತ್ತ್ವವಾದಿಮತದ ಕಾರಣಪುರುಷರಾಗಿ ವಾಯ್ವಂಶಸಂಭೂತರಾದ ಶ್ರೀಮಧ್ವಾಚಾರ್ಯರ ಅವತಾರವಾಗಿತ್ತು.1

---

ಮಧ್ವಮತದ ಪ್ರಮೇಯಗಳು :—

1) ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾಃ ।
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಸ್ತು ತತ್ಸಾಧನಂ

ಮುಂದಿನ ಪುಟಕ್ಕೆ

# ಭಕ್ತಿಪಂಥದ–ಹಿನ್ನೆಲೆ

ಭಕ್ತಿಸಾಹಿತ್ಯವು ವೇದಗಳಷ್ಟು ಪ್ರಾಚೀನವಾದುದು. ಪರಮಪುರುಷಾರ್ಥವೆನಿಸಿದ ಮೋಕ್ಷಕ್ಕೆ ನಿಯತಸಾಧನರೂಪವಾಗಿ ಭಗವಂತನನ್ನು ಈಶನೆಂದೂ, ಜೀವನನ್ನು ದಾಸನೆಂದೂ ತಿಳಿದು ಸುದೃಢಸ್ನೇಹರೂಪವಾಗಿ ಮಾಡುವ ಭಾವವೇ ಭಕ್ತಿ ಎನಿಸುತ್ತದೆ. ಇಂಥ ಭಕ್ತಿ ದೃಢವಾಗಲು ಭಕ್ತಿಗೆ ಕಾರಣವಾದ ಭಗವಂತನ ಮಾಹಾತ್ಮ್ಯಜ್ಞಾನವಿರುವುದು ಅತ್ಯಾವಶ್ಯಕ.1 ಇಂಥ ಮಾಹಾತ್ಮ್ಯಜ್ಞಾನ ಬರಬೇಕಾದರೆ ಭಗವಂತನು ಸರ್ವತೋಧಿಕನಾಗಿಯೂ, ಗುಣಪರಿಪೂರ್ಣನಾಗಿಯೂ ಇರಬೇಕು. ಭಕ್ತಿಸೂತ್ರಗಳನ್ನು ರಚಿಸಿದ ನಾರದರು ಇದನ್ನೇ "ಪರಮಪ್ರೇಮರೂಪಾ" ಎಂದು ಕರೆದಿದ್ದಾರೆ. ಶ್ಯಾಂಡಿಲ್ಯರು "ಆತ್ಮರತ್ಯವಿರೋಧೇನ"

---

ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥
(ಶ್ರೀವ್ಯಾಸರಾಜರ—ವೇದಾಂತಸ್ತೋತ್ರ)

ಮಧ್ವಮತದ ಪ್ರಮೇಯ ಗ್ರಂಥಗಳು:—

ಭಾಷ್ಯಕಾರರು— ಶ್ರೀಮಧ್ವಾಚಾರ್ಯರು— ಸೂತ್ರಭಾಷ್ಯ ಮತ್ತು ಅನುವ್ಯಾಖ್ಯಾನ.

ಪ್ರಾಚೀನ ಟೀಕೆಗಳು — ಸೂತ್ರಭಾಷ್ಯಕ್ಕೆ

1) ಪದ್ಮನಾಭತೀರ್ಥರ–ಸತ್ತರ್ಕದೀಪಾವಲಿ.
2) ತ್ರಿವಿಕ್ರಮಪಂಡಿತಾಚಾರ್ಯರ–ತತ್ತ್ವಪ್ರದೀಪ.

ಅನುವ್ಯಾಖ್ಯಾನಕ್ಕೆ—

1) ಪದ್ಮನಾಭತೀರ್ಥರ–ಸಂನ್ಯಾಯರತ್ನಾವಲಿ.
2) ನಾರಾಯಣ ಪಂಡಿತಾಚಾರ್ಯರ–ನಯಚಂದ್ರಿಕಾ.

ಜಯತೀರ್ಥರ ಟೀಕೆಗಳು—

ಸೂತ್ರಭಾಷ್ಯಕ್ಕೆ— ತತ್ತ್ವಪ್ರಕಾಶಿಕಾ.
ಅನುವ್ಯಾಖ್ಯಾನಕ್ಕೆ— ಶ್ರೀಮನ್ನ್ಯಾಯಸುಧಾ

1) ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥
ಮ॥ ಭಾ॥ ತಾ॥ ನಿ॥ 1-85, 86

ಅಂದರೆ ಪರಮಾತ್ಮನಲ್ಲಿ ಸದಾ ಮನಸ್ಸಿಟ್ಟು ಆತ್ಮರತಿಗೆ ವಿರೋಧವಾಗದಂತೆ ಆವನನ್ನು ಪೂಜಾದಿಗಳಿಂದ ಸಂತೋಷಪಡಿಸುವುದು ಭಕ್ತನ ಏಕಮೇವ ಹಂಬಲ ವಾಗಿರುತ್ತದೆ. ತಾನುಮಾಡುವ ಸಕಲ ವಿಹಿತಕರ್ಮಗಳನ್ನು ಭಗವಂತನಿಗೆ ಅರ್ಪಿಸುವುದು ; ಅವನ ವಿಸ್ಮರಣದಿಂದ ವ್ಯಾಕುಲನಾಗುವುದು ಭಗವದ್ಭಕ್ತನ ಇನ್ನೊಂದು ಲಕ್ಷಣ. 1 ಭಕ್ತಿಯು ಜ್ಞಾನರೂಪವೂ ಅಲ್ಲ, ಕ್ರಿಯಾರೂಪವೂ ಅಲ್ಲ. ಆದೊಂದು ಭಾವರೂಪವೆಂದು ಶ್ಯಾಂಡಿಲ್ಯರು ಅಭಿಪ್ರಾಯಪಡುತ್ತಾರೆ. ಈ ಪ್ರೇಮರಸಪ್ರವಾಹವನ್ನು– ಭಕ್ತಿಯನ್ನು–ವಾತ್ಸಲ್ಯ, ಪ್ರೀತಿ, ಆಕ್ಕರತೆ, ಪ್ರಣಯ, ಸ್ನೇಹ, ಆದರ, ಗೌರವ, ಆನುರಾಗಗಳೆಂದು ಕರೆಯುಬಹುದು. ಇಂಥ ಭಕ್ತಿಯು ಸತತ ಹರಿಕಥಾಶ್ರವಣಮನನಾದಿಗಳಿಂದಲೂ, ಸಜ್ಜನರ ಸಂಗದಿಂದಲೂ ಸುದೃಢವಾಗುತ್ತದೆ.

ವಿವಿಧಜೀವರ ಯೋಗ್ಯತೆಯನ್ನು ಅನುಸರಿಸಿ ಭಕ್ತಿಯನ್ನು, ಕಾಮೋಪಸರ್ಜನ, ದ್ವೇಷೋಪಸರ್ಜನ, ಬಂಧುತ್ವೋಪಸರ್ಜನ, ಸಮತಲಿತ ಬಹುಮಾನ, ಮಾಹಾತ್ಮ್ಯಜ್ಞಾನ ಎಂಬುದಾಗಿ ವಿಂಗಡಿಸುತ್ತಾರೆ. ಗೋಪಿಕಾ ಸ್ತ್ರೀಯರು, ಶಿಶುಪಾಲ, ಯಾದವರು ಪಾಂಡವರು ಮತ್ತು ನಾರದರನ್ನು ಇಂಥ ಭಕ್ತಿಗೆ ಉದಾಹರಣೆಯಾಗಿ ವಿದ್ವಾಂಸರು ಸೂಚಿಸುತ್ತಾರೆ.2

ಭಾಗವತದಲ್ಲಿ ಪ್ರಹ್ಲಾದರಾಜರು ದೈತ್ಯಬಾಲಕರಿಗೆ ಭಗವಂತನನ್ನು ಉಪಾಸಿಸಲು ನವವಿಧಭಕ್ತಿಯನ್ನು ಬೋಧಿಸಿದ್ದಾರೆ.3 ಭಗವಂತನ ಮಹಿಮೆ

---

1) ತದರ್ಪಿತಾಖಿಲಾ ಚರಿತಾ ತದ್ವಿಸ್ಮರಣೇ ಪರಮವ್ಯಾಕುಲತೇತಿ
— ನಾರದ ಭಕ್ತಿಸೂತ್ರ.

2) ಗೋಪ್ಯಃ ಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋ ನೃಪಾಃ।
ಸಂಬಂಧಾದ್ವೃಷ್ಣಯಃ ಸ್ನೇಹಾದ್ಯೂಯಂ ಭಕ್ತ್ಯಾ ವಯಂ ವಿಭೋ ॥
ಶ್ರೀಮದ್ಭಾಗವತ 7-2-30

3) ಶ್ರವಣಂ ಕೀರ್ತನಂ ವಿಷ್ಣೋರ್ದಾಸ್ಯಂ ಸ್ಮರಣಂ ಪಾದಸೇವನಂ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥
ಭಾಗವತ. 7-4-23

ಗಳನ್ನು ಕೇಳುವುದರಿಂದಲೂ, ಕೀರ್ತಿಸುವುದರಿಂದಲೂ, ಸ್ಮರಿಸುವುದರಿಂದಲೂ, ದಾಸ್ಯದಿಂದಲೂ, ಸಖ್ಯದಿಂದಲೂ, ಆತ್ಮನಿವೇದನೆಯಿಂದಲೂ ಅವನ ಅನುಗ್ರಹ ಸಂಪಾದಿಸಲು ಅವಕಾಶವಿದೆ. ಇದರಂತೆ ಶಾಂತಿತ್ತ್ವ, ದಾಸ್ಯ, ಸಖ್ಯ, ವಾತ್ಸಲ್ಯ ಹಾಗೂ ಮಾಧುರ್ಯ ಭಕ್ತಿ ಎಂಬ ಐದು ಭಾವನೆಗಳಿಂದಲೂ ಭಗವಂತನ ಕೃಪೆಗೆ ಪಾತ್ರರಾಗಬಹುದೆಂದು ಹರಿದಾಸರ ನಂಬಿಕೆ.

ಕರ್ನಾಟಕದ ಭಕ್ತಿಪಂಥವು ದ್ರಾವಿಡ ದೇಶದಲ್ಲಿ ಹುಟ್ಟಿ ಕನ್ನಡನಾಡಿನಲ್ಲಿ ಅಭಿವೃದ್ಧಿಯನ್ನು ಪಡೆಯಿತು. ಮಹಾರಾಷ್ಟ್ರದಲ್ಲಿ ಕೆಲವುಕಡೆ ನಾಶ ಹೊಂದುತ್ತಾ ಗುಜರಾತಿನಲ್ಲಿ ಪೂರ್ತಿ ಲುಪ್ತವಾಯಿತು.[1] ಎಂಬ ಒಂದು ಹೇಳಿಕೆ ಯಿದೆ. ಈ ಮಾತಿಗೆ ನಾಡಿನ ಸಾಹಿತ್ಯದಲ್ಲಿ ಅಸಂಖ್ಯನಿದರ್ಶನಗಳನ್ನು ಕಾಣ ಬಹುದು. ದ್ರಾವಿಡದೇಶವೆನಿಸಿದ ತಮಿಳುನಾಡಿನಲ್ಲಿ ಆಳ್ವಾರರು ತಮಿಳು ಭಾಷೆಯ ವೈಷ್ಣವಪ್ರಬಂಧಗಳೆಂಬ ಭಕ್ತಿಗೀತೆಗಳಿಂದ ಪರಮಾತ್ಮನನ್ನು ಸ್ತುತಿಸಿದರು. ಇವರಲ್ಲಿ ಎಲ್ಲ ವರ್ಗದ, ಎಲ್ಲ ಜಾತಿಯ ಭಕ್ತರೂ ಇದ್ದಾರೆ. ಪೆರಿಯಾಳ್ವಾರ್, ನಮ್ಮಾಳ್ವಾರ್, ಕುಲಶೇಖರಾಳ್ವಾರ್. ತಿರುಪಾಣಿ, ತಿರುಮಂಗೈ ಆಳ್ವಾರರಂಥ ಭಕ್ತರು ಕೃತಿರಚನೆ ಮಾಡಿದ್ದಾರೆ. ಆಂಡಾಳ್ ಎಂಬ ಭಕ್ತಳೂ ಭಕ್ತಿಗೀತೆಗಳನ್ನು ರಚಿಸಿದ್ದಾಳೆ.

ಮಹಾರಾಷ್ಟ್ರದಲ್ಲಿ ಜ್ಞಾನದೇವ, ನಾಮದೇವ, ತುಕಾರಾಮ, ಸಕ್ಕೂಬಾಯಿ ಅಂಥವರೂ ಆಗಿ ಹೋಗಿದ್ದಾರೆ. ತುಲಸೀದಾಸ ಮತ್ತು ಕಬೀರರು ಉತ್ತರಪ್ರದೇಶದವರಾದರೆ, ಚೈತನ್ಯರು ಬಂಗಾಳದವರು. ವಲ್ಲಭಾಚಾರ್ಯರು, ನರಸಿಮೆಹತ, ಸೂರದಾಸರು ಗುಜರಾತಿನವರು. ಮೀರಾಬಾಯಿ ರಾಜಾ ಸ್ಥಾನದವಳು. ಆದುದರಿಂದ ಭಕ್ತಿ ಪಂಥವು ನಾಡನ್ನೆಲ್ಲಾ ವ್ಯಾಪಿಸಿದೆ ಎನ್ನ ಬಹುದು.

---

1) ಉತ್ಪನ್ನಾ ದ್ರಾವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ ।
ಕ್ವಚಿತ್‌ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥

—ಪದ್ಮಪುರಾಣ, ಉತ್ತರ ಖಂಡ, ೧ನೇ ಅಧ್ಯಾಯ ೪೮ನೇ ಶ್ಲೋಕ.

ಈ ಶ್ಲೋಕದಲ್ಲಿ ಬರುವ ಜೀರ್ಣ ಶಬ್ದಕ್ಕೆ ಅಭಿವೃದ್ಧಿ ಎಂಬ ಅರ್ಥವೂ ಇದೆ ಎಂದು ಹೇಳುತ್ತಾರೆ.

ಭಗವಂತನ ಕೃಪೆಗೆ ಪಾತ್ರರಾಗಲು ಕಲಿಯುಗದಲ್ಲಿ ಶ್ರೀಹರಿಯ ನಾಮ ಸಂಕೀರ್ತನೆಯ ಹೊರತು ಬೇರೆ ದಾರಿಯೇ ಇಲ್ಲವೆಂದು ಶ್ರೀವೇದ ವ್ಯಾಸರು ಹೇಳಿದ್ದಾರೆ.1 ಈ ಮಾತಿಗೆ ಸಾಕ್ಷಿಯಾಗಿ ಭಗವಂತನು ತಾನು ವೈಕುಂಠದಲ್ಲಿಯಾಗಲಿ, ಯೋಗಿಯ ಹೃದಯದಲ್ಲಾಗಲೀ ಇರುವುದಿಲ್ಲ. ಎಲ್ಲಿ ತನ್ನ ಭಕ್ತರು ತನ್ನನ್ನು ಗಾನಮಾಡುತ್ತಿರುವರೋ ಅಂಥ ಭಕ್ತರ ಹೃದಯದಲ್ಲಿ ತಾನು ನೆಲೆಸಿರುವುದಾಗಿ ತಿಳಿಸಿದ್ದಾನೆ.2

ವೇದಗಳು ಭಗವಂತನ ಈ ಆಶ್ವಾಸನೆಗೆ ವ್ಯಾಖ್ಯಾನಗಳಂತಿವೆ. ಋಗ್ವೇದದಲ್ಲಿ ಬರುವ ಶ್ರದ್ಧಾಮಂತ್ರವು ಈ ಮಾತಿಗೆ ನಿದರ್ಶನವಾಗಿದೆ. ಶ್ರದ್ಧಾ, ವಂದನ, ಅರ್ಚನ, ಭಜನ ಇವೇ ಮೊದಲಾದ ಶಬ್ಧಗಳು ದೇವತೆಗಳ ಮೇಲಿದ್ದ ಭಕ್ತನ ಮನಃಪ್ರಾಮಾಣ್ಯವನ್ನು ಸೂಚಿಸುವುವೆಂದು ಹೇಳುತ್ತಾರೆ.3 ಮಹೀದಾಸನಾಮಕಭಗವಂತನು ಭಕ್ತಿಮಾರ್ಗವನ್ನು ಜಗತ್ತಿನಲ್ಲಿ ಪ್ರಚಾರಕ್ಕೆ ತಂದನೆಂದು ಕೆಲವರು ಹೇಳುತ್ತಾರೆ. ಇದೇ ಅಭಿಪ್ರಾಯವನ್ನು ತೈತ್ತಿರೀಯ ಉಪನಿಷತ್ತಿನ ವಾಕ್ಯಗಳಿಂದಲೂ, ಅನೇಕ ಪುರಾಣವಾಕ್ಯಗಳಿಂದಲೂ ತಿಳಿಯುತ್ತದೆ. ವೇದ ಮತ್ತು ಶಾಸ್ತ್ರಗಳಲ್ಲಿ ಪರಮಮುಖ್ಯಪ್ರತಿಪಾದಿತಾರ್ಥವು ಶ್ರೀ ವಿಷ್ಣುಮಹಿಮೆ ಎಂದು ಗೊತ್ತಾಗುವುದು.4

---

1) ಹರೇರ್ನಾಮ ಹರೇರ್ನಾಮ ಹರೇರ್ನಾಮೈವ ಕೇವಲಂ ।
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥

2) ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥
— ಶ್ರೀಮದ್ಭಾಗವತ.

3) i) ಶ್ರದ್ಧಾಂ ದೇವಾ ಯಜಮಾನಾ ವಾಯುಗೋಪಾ ಉಪಾಸತೇ
(ಋಗ್ವೇದ ೧೦ನೇ ಮಂತ್ರ)

ii) ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ
(ಋಗ್ವೇದ ೧೦ನೇ ಮಂತ್ರ)

iii) ದ್ವೇ ವಿದ್ಯೇ ವೇದಿತವ್ಯೇ ಪರಾಚೈವಾಪರಾಚೇತಿ
(ಋಗ್ವೇದ ೧೫೬ನೇ ಮಂತ್ರ)

4) vi) ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।

ಕ್ರಿಸ್ತಪೂರ್ವ ೨ನೇ ಶತಮಾನದ ವೇಳೆಗಾಗಲೇ ಶ್ರೀಕೃಷ್ಣಭಕ್ತಿಯೂ ಆವನ ಮಹಿಮೆಯೂ ಜನತೆಯಲ್ಲಿ ಪ್ರಚಾರಕ್ಕೆ ಬಂದಿತ್ತೆನ್ನಲು ಪಾತಂಜಲ ವ್ಯಾಕರಣಮಹಾಭಾಷ್ಯದಲ್ಲೂ 1 ಉಲ್ಲೇಖನ ದೊರಕುತ್ತದೆ. ಅಷ್ಟೇ ಅಲ್ಲ, ಕ್ರಿಸ್ತಪೂರ್ವ ೨-೩ನೇ ಶತಮಾನದ ಹಥಿಬಾಡ ಶಾಸನದಲ್ಲೂ, ಅನಂತರ ಬೆಸನ ನಗರಸ್ತಂಭಲಿಪಿಯ ಶಾಸನದಲ್ಲಿಯೂ, (ತಕ್ಷಶಿಲಾನಿವಾಸಿಯ ದಿಯೋನನ ಪುತ್ರ ಭಾಗವತ ಹೆಲಿಯೋದರಸನ ವಾಸುದೇವನಿಗೆ ನಿಲ್ಲಿಸಿದ ಗರುಡ ಸ್ತಂಭದ ಶಾಸನ) ದೇವದೇವನಾದ ಶ್ರೀಕೃಷ್ಣ ವಾಸುದೇವನ ಉಲ್ಲೇಖ ಬರುತ್ತದೆ.

ಈ ದೃಷ್ಟಿಯಿಂದ ಶ್ರೀಮಧ್ವಾಚಾರ್ಯರ ಕಾಲಕ್ಕಾಗಲೇ ಭಕ್ತಿ ಪಂಥವು ನಮ್ಮ ದೇಶದಲ್ಲಿ ಪ್ರಚಾರದಲ್ಲಿತ್ತೆಂದು ತಿಳಿಯಬಹುದು. ದ್ವೈತಮತಸಂಪ್ರದಾಯದಲ್ಲಿ ಈ ಭಕ್ತಿಪಂಥಕ್ಕೆ ಜೀವೋತ್ತಮರಾದ ವಾಯು ದೇವರು-ಬ್ರಹ್ಮದೇವರೇ ಮೂಲ. ಅವರ ಮಾನಸಪುತ್ರರು ಸನಕಾದಿಗಳು, ಅವರ ಶಿಷ್ಯರು ದೂರ್ವಾಸರು, ಅವರ ಶಿಷ್ಯರು ಪರತೀರ್ಥರು ಈ ಪರಂಪರೆ ಯಲ್ಲೂ ಐತಿಹಾಸಿಕಕಾಲದಲ್ಲಿ ಸತ್ಯಪ್ರಜ್ಞರೂ, ಪ್ರಾಜ್ಞತೀರ್ಥರೂ ಆಗಿ ಹೋದರು. ಇವರ ಶಿಷ್ಯರೇ ಅಚ್ಯುತಪ್ರೇಕ್ಷರು. ಅಚ್ಯುತಪ್ರೇಕ್ಷಕರಕಮಲ ಸಂಜಾತರೇ ವಾಯುದೇವರ ಮೂರನೆಯ ಅವತಾರರಾದ ಭಾಷ್ಯಕಾರರೆನಿಸಿದ ಶ್ರೀಮಧ್ವಾಚಾರ್ಯರು. ಇವರು ಸಂಸ್ಕೃತದಲ್ಲಿ ರಚಿಸಿದ ದ್ವಾದಶಸ್ತೋತ್ರವೆ ಹರಿದಾಸಸಾಹಿತ್ಯಕ್ಕೆ ಮೂಲವೆಂದು ವಿದ್ವಾಂಸರು ಹೇಳುತ್ತಾರೆ. ಅವರು ಪ್ರಾಕೃತಭಾಷೆಯಲ್ಲಿ, ತುಳು ಮತ್ತು ಕನ್ನಡಗಳಲ್ಲಿ ದಾಸಸಾಹಿತ್ಯವನ್ನು ನಿರ್ಮಿಸಿರಬಹುದಾದರೂ, ಈ ಕೃತಿಗಳು ಈಗ ಉಪಲಭ್ಯವಿಲ್ಲ.

ಇಂಥ ಹರಿದಾಸಮೂಲಪುರುಷರಾದ ಶ್ರೀಮಧ್ವಾಚಾರ್ಯರನ್ನು ಕುರಿತು ಅವರ ಪರಂಪರೆಯಲ್ಲಿ ಬಂದ ಶಿಷ್ಯರೂ, ಕನ್ನಡನಾಡಿನ ಹರಿದಾಸರೂ, ಶ್ರೀಮಧ್ವಾಚಾರ್ಯರ ಸಾಹಿತ್ಯಸೇವೆಯನ್ನು ಮುಕ್ತಕಂಠದಿಂದ ಭಕ್ತಿ

---

1) ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ||
ವಾಕ್ಯಕಾರಂ ವರರುಚಿಂ ಭಾಷ್ಯಕಾರಂ ಪತಂಜಲಿಮ್ |
ಪಾಣಿನಿಂ ಸೂತ್ರಕಾರಂ ಚ ಪ್ರಣತೋऽಸ್ಮಿ ಮುನಿತ್ರಯಮ್ ||
— (ವ್ಯಾಕರಣಶಾಸ್ತ್ರದ ಮುನಿತ್ರಯರು)

ಗೌರವಗಳಿಂದ ಸ್ಮರಿಸಿದ್ದಾರೆ. ಇವರಲ್ಲಿ ಕೆಲವು ಅಪರೋಕ್ಷ ಜ್ಞಾನಿಗಳು ಚಿತ್ರಿಸಿದ ಶ್ರೀಮಧ್ವಾಚಾರ್ಯರ ಮಹಿಮೆಯನ್ನು ಇಲ್ಲಿ ಸೂಕ್ಷ್ಮವಾಗಿ ಪರಿಚಯಿಸಲಾಗಿದೆ.

## ಹರಿದಾಸರು ವರ್ಣಿಸಿರುವ ಶ್ರೀಮಧ್ವಾಚಾರ್ಯರು

ಎಲ್ಲ ಸಜ್ಜನರು ಶ್ರೀಮಧ್ವಾಚಾರ್ಯರನ್ನು ಆದಿಹರಿದಾಸರೆಂದು ಗೌರವಿಸುತ್ತಾರೆ. ಇವರು ತಮ್ಮ ಮುವ್ವತ್ತೇಳು ಸರ್ವಮೂಲಗ್ರಂಥಗಳಿಂದ ಹರಿದಾಸ ದೀಕ್ಷೆಯನ್ನು ಪ್ರತಿಪಾದಿಸಿದ್ದಾರೆ. ಈ ಗ್ರಂಥಗಳ ಮಂಗಳಶ್ಲೋಕಗಳೂ, ಶ್ರೀ ತ್ರಿವಿಕ್ರಮಪಂಡಿತಾಚಾರ್ಯರ ವಾಯುಸ್ತುತಿಗೆ ರಚಿಸಿರುವ ನೃಸಿಂಹನಖಸ್ತುತಿಯೂ ದಾಸಸಾಹಿತ್ಯವೇ ಆಗಿದೆ. ಆಚಾರ್ಯರು ರಚಿಸಿರುವ ದ್ವಾದಶಸ್ತೋತ್ರವಂತೂ ಸಂಸ್ಕೃತದಭಾಷೆಯಲ್ಲಿ ಬಂದಿರುವ ಶ್ರೇಷ್ಠ ಹರಿದಾಸಸಾಹಿತ್ಯವೆನಿಸಿದೆ. ದ್ವಾರಕೆಯಿಂದ ಹಡಗಿನಲ್ಲಿ ಬಂದು, ತಮಗೆ ಲಬ್ಧವಾದ ಗೋಪಿಚಂದನದಗಡ್ಡೆಯಲ್ಲಿ ದೊರೆತ ಶ್ರೀಕೃಷ್ಣನನ್ನು, ಮಲ್ಪೆಯಿಂದ ಉಡುಪಿಗೆ ಹೊತ್ತುಕೊಂಡು ಬರುತ್ತಿದ್ದಾಗ ಶ್ರೀಮಧ್ವಾಚಾರ್ಯರು "ವಂದೇ ವಂದ್ಯಂ ವಾಸುದೇವಂ ಸದಾನಂದಂ" ಎಂದು ಮೊದಲಾಗುವ ಈ ಹರಿಗೀತೆಯಲ್ಲಿ ಶ್ರೀಮನ್ಮಹಾವಿಷ್ಣುವಿನ ಮಹಿಮೆಗಳನ್ನು ಅಡಿಯಿಂದ ಮುಡಿಯವರೆಗೆ ಅತ್ಯಂತ ಹೃದಯಂಗಮವಾಗಿ ಭಾವಪೂರ್ಣವಾಗಿ ವರ್ಣಿಸಿದ್ದಾರೆ.

ಆಚಾರ್ಯರ ಈ ಮೇಲ್ಪಂಕ್ತಿಯನ್ನು ಅನುಸರಿಸಿ ಕನ್ನಡನಾಡಿನ ಹರಿದಾಸರು ಜೀವೋತ್ತಮರಾದ ವಾಯುದೇವರ ಮೂರು ಅವತಾರಗಳನ್ನು ಕುರಿತು ಸ್ತೋತ್ರಸಾಹಿತ್ಯವನ್ನು ವಿಪುಲವಾಗಿ ರಚಿಸಿದ್ದಾರೆ.

ಕನ್ನಡಭಾಷೆಯಲ್ಲಿ ಅಚಲಾನಂದರೆಂಬ ಹರಿದಾಸರು ಪ್ರಪ್ರಥಮವಾಗಿಕೃತಿ ರಚನೆ ಮಾಡಿದ್ದಾರೆಂದು ಹೇಳಲಾಗಿದ್ದರೂ, ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀನರಹರಿತೀರ್ಥರೇ ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿದ ಮೊದಲನೆಯ ಹರಿದಾಸರು. ಇವರು ರಚಿಸಿರುವ ದೇವರ ನಾಮಗಳಲ್ಲಿ "ಎಮರ್ಯಾರೋ ಗುರುವೆ ಸಮರ್ಯಾರೋ"— ಎಂಬ ಕೃತಿಯಲ್ಲಿ ವಾಯು

ದೇವರ ಮೂರು ಅವತಾರಗಳನ್ನು ಸುಂದರವಾಗಿ ವರ್ಣಿಸಿದ್ದಾರೆ. ಈ ಸ್ತೋತ್ರದಲ್ಲಿ ಶ್ರೀಮಧ್ವಾಚಾರ್ಯರನ್ನು ಕುರಿತು

"ಗುರು ಮಧ್ವಾಖ್ಯದಿ ಧರೆಯೊಳು ನೀನವತರಿಸಿ ನಿಗಮಗಳ ।
ವರಶಾಸ್ತ್ರಂಗಳ ಪರಿಶೋಧಿಸಿ ಕೇಸರಿಕರಿ
ವೃಂದಗಳ್ । ಭರದಿಂದೋಡಿಪ ತೆರದಿಂ ಕುಮತರ ಪರಿದೋ
ಡಿಸಿ ಸ / ತ್ಪುರುಷ ಕುಮುದ ಹಿಮಕರನಾಗಿ ನಿಗಮಸುರ
ಧೇನಿವಿನೋಲ್ । ಹರಿಸರ್ವೋತ್ತಮನೆಂಬುವ ಮತ್ಪಾಲಕರೆದು
ಶಿಷ್ಯರೀ ಗೆರದು ಕುವಾದಿಕುಪುರುಷ ಕಮಲ ಹಿಮಕರ
ನಾಗಿ ಮೆರದ್ಯೋ । ನರಹರಿ ರಘುಪತಿ ಭಕುತನೆ ಗುರುಯತಿ
ರಾಯನೆ" — ಎಂದು ವರ್ಣಿಸಿದ್ದಾರೆ.

ಇವರ ನಂತರ ಆದ್ಯರೆಂಬ ಹರಿದಾಸರು ಕನ್ನಡಭಾಷೆಯಲ್ಲಿ ಕೃತಿರಚನೆ ಮಾಡಿದರೆಂದು ಹೇಳುತ್ತಾರೆ. ಇವರು ಅರವತ್ತು ಜನರಂತೆ. ಆದ್ಯರ ನಂತರ ಹರಿದಾಸ ಸಾಹಿತ್ಯಕ್ಕೆ ಸಂವೃದ್ಧಿಯನ್ನೂ, ವ್ಯಾಪ್ತಿಯನ್ನೂ ತಂದು ಕೊಟ್ಟವರು ಲಕ್ಷ್ಮೀನಾರಾಯಣತೀರ್ಥರೆಂದು ಪ್ರಸಿದ್ಧರಾದ ಶ್ರೀಪಾದರಾಜರು. ಇವರುಸಂಸ್ಥಾನದ ದೇವರ ಪೂಜಾಕಾಲದಲ್ಲಿ ಹರಿದಾಸರ ದೇವರ ನಾಮಗಳನ್ನು ಹೇಳಿಸುವ ಪರಿಪಾಠವನ್ನು ಆರಂಭಿಸಿದುದಲ್ಲದೆ ಸ್ವತಃ ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿ, ಶಿಷ್ಯರಿಂದಲೂ ಕೃತಿರಚನೆ ಮಾಡಲು ಸ್ಫೂರ್ತಿ ನೀಡಿದ ಮಹನೀಯರು.

ಶ್ರೀಪಾದರಾಜರು ರಚಿಸಿರುವ ಮಧ್ವನಾಮವೆಂಬ ಕೃತಿ ವಾಯುದೇವರ ಅವತಾರತ್ರಯವನ್ನು ಅತ್ಯಂತ ರಮಣೀಯವಾಗಿ ವರ್ಣಿಸುತ್ತದೆ. ವಾಯು ದೇವರು ತ್ರೇತಾದ್ವಾಪರಯುಗಗಳಲ್ಲಿ ಶ್ರೀರಾಮ-ಕೃಷ್ಣರನ್ನು ಹನುಮ ಭೀಮರಾಗಿ ಸೇವಿಸಿದ ಪರಿಯನ್ನು ಕೊಂಡಾಡಿ ಕಲಿಯುಗದಲ್ಲಿ ಶ್ರೀಬಾದ ರಾಯಣರನ್ನು ಸೇವಿಸುತ್ತಿರುವ ಮಧ್ವಾಚಾರ್ಯರನ್ನು ಹೀಗೆ ಕೊಂಡಾಡಿದ್ದಾರೆ.

ದಾನವರು ಕಲಿಯುಗದೊಳವತರಿಸಿ ವಿಬುಧರೊಳು
ವೇನನ ಮತವನರುಹಲದನರಿತು

ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ
ಮಾನನಿಧಿ ಮಧ್ವಾಖ್ಯನೆಂದೆನಿಸಿದ.

ಅವನು ಮುಖ್ಯಪ್ರಾಣನು. "ದೇಹದೊಳಿರಲು ಹರಿನೆಲೆಸಿಹನು, ಅವನು ತೊಲಗೆ ಹರಿ ತಾ ತೊಲಗುವನು" ಅಂಥ ಕುಲಗುರುರಾಯ ವಾಯುಅವತಾರ ಶ್ರೀಮಧ್ವಾಚಾರ್ಯರನ್ನು ಕುರಿತು ಭಕ್ತಿಯಿಂದ ಮೈಮರೆತು ಹಾಡಿದ್ದಾರೆ—ಶ್ರೀಪಾದರಾಜರು.

ಇವರ ವಿದ್ಯಾಶಿಷ್ಯರು ಶ್ರೀವ್ಯಾಸರಾಯರು. ಇವರೂ ತಮ್ಮ ಗುರುಗಳಾದ ಶ್ರೀಪಾದರಾಜರಂತೆ ಸ್ವತಃ ಕೃತಿ ರಚನೆ ಮಾಡಿದರು. ವ್ಯಾಸರಾಯರ ಕಾಲ ಹರಿದಾಸಸಾಹಿತ್ಯದ ಸ್ವರ್ಣಯುಗ. ಇವರಿಗೆ ವಾದಿರಾಜರು, ವಿಜಯೀಂದ್ರರೇ ಮೊದಲಾದ ಸಂನ್ಯಾಸಿ ಶಿಷ್ಯರೂ, ಪುರಂದರದಾಸ, ಕನಕದಾಸರೇ ಮೊದಲಾದ ಗೃಹಸ್ಥ ಶಿಷ್ಯರೂ ಇದ್ದರು. ಇವರೆಲ್ಲರಿಗೂ ವ್ಯಾಸರಾಯರು ಹರಿದಾಸ ದೀಕ್ಷೆ ಯಿತ್ತು, ಅವರಿಂದ ವಿಪುಲವಾಗಿ ಕನ್ನಡದಲ್ಲಿ ಕೃತಿ ರಚನೆ ಮಾಡಲು ಸ್ಫೂರ್ತಿ ಯನ್ನು ನೀಡಿದರು, ಇದು ಹರಿದಾಸ ಸಾಹಿತ್ಯ, ಸಂಗೀತಗಳ ಸಂವೃದ್ಧ ಕಾಲ.

ವ್ಯಾಸರಾಯರು ವಾಯುದೇವರ ಅವತಾರತ್ರಯವನ್ನು ಕುರಿತು ಈತನೀಗ ವಾತಜಾತನು, ಧೀರನನೋಡಿರೈ, ಜಾಣನೀನಹುದೊ ಗುರು ಮುಖ್ಯ ಪ್ರಾಣನೀನಹುದೋ, ನೀನೆ ವರಗುರುಮುಖ್ಯ ಪ್ರಾಣ, ಸಾರಿರೋ ಡಂಗುರವ, ಏನೆಂಬೆ ನಿಮ್ಮ ಕರುಣವ ದೇವವರ್ಯ, ಜಯವಾಯುಹನು ಮಂತ, ಆರುಃ ನಿನಗಿದಿರಧಿಕ ಧಾರುಣಿಯೊಳಗೆ—ಮುಂತಾದ ದೇವರನಾಮ ಗಳನ್ನು ರಚಿಸಿದ್ದಾರೆ.

ಶ್ರೀಮಧ್ವಾಚಾರ್ಯರನ್ನು

ಇಳೆಯೊಳಿದ್ದ ಮಧ್ಯಗೇಹನ
ಕುಲದಿ ಜನಿಸಿ ಶುದ್ಧವಾದ
ನಳಿನನಾಭನ ಒಲುಮೆಯಿಂದ
ಮಲಿನರನ್ನು ಅಳಿದ ಧೀರ—ಎಂಬುದಾಗಿ ವರ್ಣಿಸಿದ್ದಾರೆ,

ಅವರು ಮಾಡಿದ ಕಾರ್ಯವನ್ನು ಕುರಿತು

ಇಪ್ಪತ್ತೊಂದು ಕುಮತಗಳನು
ಒಪ್ಪದಿಂದ ಗೆಲಿದ ಭಕ್ತ
ಕಲ್ಪವೃಕ್ಷನೆನಿಸಿ ಮೆರೆದ
ಸರ್ಪ ಶಯನನ ನಿಜವ ತೋರ್ದ॥

ಧರಣಿ ಮಂಡಲದೊಳಗೆ ಸುರರ ಗಣಕೆ ಶಾಸ್ತ್ರಾಮೃತವೆರೆದು ಕೃಷ್ಣನ ಇರವ ತೋರಿ । ವರಬದರಿಯೊಳ್ ನಿಂದ ಧೀರ ॥—ಎಂಬುದಾಗಿ ಹಾಡಿದ್ದಾರೆ ಅವರು "ಅದ್ವೈತ ಶಾಸ್ತ್ರದ ಸದ್ದಡಗಿಸಿದ ಆರ್ಯ."

ಸಾಂಗದಲಿ ಮಧ್ವಮತದಂಗವನು ಏರ್ಪಡಿಸಿ
ಕಂಗೆಟ್ಟ ಕುಮತ ದುಸ್ಸಂಗಗಳನಳಿದು
ಗಂಗೆಪಿತ ಕೃಷ್ಣಪದಭೃಂಗ ಮೂಜ್ಜಗದೊಳಗೆ

ತುಂಗಭವಭಂಗ ದಯಾಪಾಂಗ ಯತಿಪುಂಗವನೆ—ಎಂದು ಹೊಗಳಿ ವೈಷ್ಣವ ಮತವವನಿಯೊಳಗೆ ನಮ್ಮ ಸಲಹುವ ಮಧ್ವೇಶ ಕೃಷ್ಣಪ್ರಿಯ ನೆಂದು—ಕೊಂಡಾಡಿದ್ದಾರೆ.

ಜ್ಞಾನಚಂದ್ರಿಕೆ ಪೊಳೆಯೆ ಭಕ್ತಿವಾರಿಧಿಯುಕ್ಕೆ ।
ಮುನಚಕೋರವು ವಿಷ್ಣುಪದದಿ ನಲಿಯೆ ।
ದೀನಜನ ಭಯವಡಗೆ ತಾಪತ್ರಯಗಳೋಡೆ ।
ಆನಂದತೀರ್ಥೇಂದು ಶ್ರೀಕೃಷ್ಣತಾಮೆಚ್ಚೆ ॥
ಏನೆಂಬೆ ನಿಮ್ಮ ಕರುಣವೆಂದು ।

ಉದ್ಗಾರ ತೆಗೆದಿದ್ದಾರೆ.

ಕಲಿಯುಗದಲ್ಲಿ, ಮಧ್ವಾಚಾರ್ಯರು "ಕಳ್ಳರುದಿಸಿ, ದುರ್ಮತಗಳನು ಬಲಿಸಿ, ಶ್ರೀಹರಿಯ ಗುಣಗಳನು ಮರೆಸಿ, ಕಲಿಯನನುಸರಿಸಲು, ಗುರುವಾಗಿ ಅವತರಿಸಿ ಖಳರ ದುರ್ಮತ ಮುರಿದರು."

ಆರು ನಿನಗಧಿಕ ಧಾರುಣಿಯೊಳಗೆ
ಸಾರ ಶಾಸ್ತ್ರವನೊರೆದ ಸರ್ವಜ್ಞ ಮುನಿರಾಯ
ಆರೊಂದು ವೈರಿಗಳ ತರಿದು ವೈಷ್ಣವರಿಗೆ

ಆರೆರಡು ಊರ್ಧ್ವ ಪುಂಡ್ರಗಳ ಇಡಿಸಿ
ಆರುಮೂರರ ಮೇಲೆ ಮೂರಧಿಕ ಕುಮತಗಳ
ಬೇರೊರಿಸಿ ಕಿತ್ತೊಮ್ಮೆ ಬಿಸುಟಂಥ ಧೀರ ॥
ಆರು ನಾಲಕು ತತ್ವದಭಿಮಾನಿಗಳಿಗೊಡೆಯ
ಮಾರುತನ ಮೂರನೆಯ ಅವತಾರನೆ
ಆರೈದು ಮೇಲೆರಡು ಅಧಿಕ ಲಕ್ಷಣವುಳ್ಳ
ಮೂರುತಿಯೊಳೊಪ್ಪುತಿಹ ಮುನಿವರೇಣ್ಯ ॥
ಆರಾರು ಮೇಲೊಂದು ಅಧಿಕ ಲೆಕ್ಕದ ಗ್ರಂಥ
ಸಾರವನು ರಚಿಸಿ ಸಜ್ಜನಗಿರಿಗಿತ್ತು
ಪಾರಮಾರ್ಥಿಕ ಭೇದ ಪಂಚವಂ ಸ್ಥಾಪಿಸಿದ ಉ
ದಾರ ಶ್ರೀಕೃಷ್ಣನ್ನ ದಾಸರೊಳು ದೊರೆಯ

—ಎಂದು ವರ್ಣಿಸಿದ್ದಾರೆ.

ಪುರಂದರದಾಸರು, ಜೀವೋತ್ತಮರಾದ ವಾಯುದೇವರನ್ನು ಕುರಿತು ಹಲವು ದೇವರನಾಮಗಳನ್ನು ರಚಿಸಿ ಹಾಡಿದ್ದಾರೆ. ಇವುಗಳಲ್ಲಿ ಪ್ರಾಣದೇವರ ಮಹಿಮೆಗಳನ್ನು ಮನಸಾರೆ ಕೊಂಡಾಡಿದ್ದಾರೆ.

"ಪ್ರಥಮದಲಿ ಹನುಮಂತ, ದ್ವಿತೀಯದಲಿ ಕಲಿಭೀಮ, ತೃತೀಯದಲಿ ಗುರುಮಧ್ವಮುನಿಯೆನಿಸಿದೆ"— ಎಂದು ಅವರನ್ನು ವರ್ಣಿಸಿದ್ದಾರೆ.

ಮಧ್ವಾವತಾರದಲ್ಲಿ ಇವನು ಸದ್ವೈಷ್ಣವರ ಸಲಹಿದ. ಉಡುಪಿಯ ಕೃಷ್ಣನ ನಿಲ್ಲಿಸಿದ. ಇಂಥ ಶ್ರೀಮಧ್ವರಾಯರ ಸೇವೆ ದೊರಕುವುದು ಜನುಮ ಸಫಲ ಕಾಣಿರೋ—ಎಂದಿದ್ದಾರೆ

"ಹಿಮಗಿರಿಯಿಂದ ಸೇತುವೆಯ ಪರ್ಯಂತರ
ಭ್ರಮಿಸುತ ಸುಜನರಿಗೆ
ಕ್ರಮತತ್ತ್ವ ಬೋಧಿಸಿ ಕಮಲನಾಭನ ಮೂರ್ತಿ
ಕ್ರಮವರಿತು ಸ್ಥಾಪಿಸಿ ಪೂಜಿಸಿರೆಂದ—"

ಇಂಥ ಮಧ್ವರಾಯರ ನೆನೆದು ಶುದ್ಧರಾಗಿರೊ । ಹೊದ್ದಿ ವೈಷ್ಣವಮತ ಭವಾಬ್ಧಿ ದಾಟಿರೊ"— ಎಂದಿದ್ದಾರೆ ಪುರಂದರದಾಸರು.

ಶ್ರೀಮಧ್ವಾಚಾರ್ಯರು "ಸುಜನರ ಹೃದಯದಿ ಸೇರಿದ್ದ ತಾಮಸಿಗೆ ನಿಜಜ್ಞಾನರವಿಯಂತೆ ಕಿರಣವ" ಹರಡಿದರು.

"ಜೀವೇಶರೊಂದೆಂಬ ದುರ್ವಾದಿಗಳ ಕು । ಭಾವ ಶಾಸ್ತ್ರಗಳೆಲ್ಲ ತರಿದೋಡಿಸಿ ॥ ಕೋವಿದರಿಗೆ ಸದ್ಭಾಷ್ಯಸುಧೆಯನಿತ್ತು । ದೇವ ಪುರಂದರವಿಠಲ ಸೇವಕನಾದ ॥"

ಮಧ್ವಯತಿರೂಪ ಧರಿಸಿ ಸದ್ಗತಿ ಪಾಲಿಸಿದರು. ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡಿಸಿ । ಮತಿಗೆಟ್ಟ ವೈಷ್ಣವರಿಗೆ ಗತಿಯು ತೋರಿದರು. ಸೋಹಂ ಎಂಬ ಶಂಕರನ ಹುಲುಮತಂಗಳ ಜರಿದು, ಮಾಯಿಗಳ ಗೆಲಿದು ಮೋಹನ ಶಾಸ್ತ್ರ ಬಲೆಯನು ಹರಿದರು. ಇಂಥ ಗುರುರಾಯರನ್ನು ನಂಬಿ ಸದ್ಗತಿ ಪಡೆಯಿರಿ—ಎಂದಿದ್ದಾರೆ ಪುರಂದರದಾಸರು.

ಪುರಂದರದಾಸರಂತೆ, ಕನಕದಾಸರೂ ವ್ಯಾಸರಾಯರ ಗೃಹಸ್ಥ ಶಿಷ್ಯರು. ಇವರು ವಾಯುದೇವರನ್ನು ಕುರಿತು "ಭಜರೇ ಹನುಮಂತಂ । ಮಾನಸ । ಭಜರೇ ಹನುಮಂತಂ ।", "ಎಷ್ಟು ಪೊಗಳಲಿ ನಾನು," "ಕದರ ಮಂಡಲಗಿಯ ಕರುಣಿ ಹನುಮಂತರಾಯ", "ಅರಸಿನಂತೆ ಬಂಟನೋ ಹನುಮ ರಾಯ" "ಪರಮಪದವೀವ ಗುರು ಮುಖ್ಯಪ್ರಾಣ" "ಏನಂದಳೀನಂದಳೋ", "ಎನ್ನ ಕಂದ ಹಳ್ಳಿಯಹನುಮ" "ಶರಣು ಶರಣು ದಶರಥರಾಮದೂತಗೆ," "ಭೀಮನೆಂಬುವರಿಗೆ ಯಾತರ ಭಯವಿಲ್ಲ"—ಮುಂತಾದ ದೇವರನಾಮ ಗಳನ್ನು ರಚಿಸಿ, ಮಧ್ವರಾಯರ ಹಿಂದಿನ ಅವತಾರಗಳಲ್ಲಿ ಮಾಡಿದ ಅದ್ಭುತ ಕಾರ್ಯಗಳನ್ನು ಕೊಂಡಾಡಿದ್ದಾರೆ.

ಕಲಿಯುಗದಲ್ಲಿ ತುರಿಯಾಶ್ರಮವನೆ ಧರಿಸಿ ।
ಕಲುಷರಾದ ಮಾಯಿಗಳ ಸೋಲಿಸಿ ॥
ಬಲವಾದ ಮಧ್ವಮತವನ್ನು ಬಲಿದೆಂದೆನಿಸಿ ಕಾಗಿ ।
ನೆಲೆಯಾದಿ ಕೇಶವನ ಪರ ದೈವವೆನಿಸಿ ॥

ಸಜ್ಜನರನ್ನು ಉದ್ಧಾರ ಮಾಡಿರುವರೆಂದು ವರ್ಣಿಸಿದ್ದಾರೆ.

ವ್ಯಾಸರಾಯರ ವಿದ್ಯಾಶಿಷ್ಯರಾದ ವಾದಿರಾಜರು ವಿಷ್ಣುತೀರ್ಥರ ಸೋದಾ ಮಠದ ಪೀಠಾಧಿಪತಿಗಳು. ಇವರು ವಾಯುದೇವರ ಅವತಾರಗಳನ್ನೆಲ್ಲ ತಮ್ಮ ಅನೇಕ ಕೃತಿಗಳಲ್ಲಿ ವರ್ಣಿಸಿ, ಶ್ರೀಮಧ್ವಾಚಾರ್ಯರ ಕಾರ್ಯವನ್ನೂ, ಮಹಿಮೆಯನ್ನೂ ಹೀಗೆ ಕೊಂಡಾಡಿದ್ದಾರೆ.

ಮೂರಾರು ಎರಡೊಂದು ಮೂಢಮತಗಳ ಜರಿದು1
ಸಾರಮಧ್ವಶಾಸ್ತ್ರಸಜ್ಜನರಿಗೊರೆದೆ
ಧೀರ ಹಯವದನನ ಕೂರ್ಮಸೇವಕನಾದ
ಧೀರ ಮಧ್ವಾಚಾರ್ಯ ದೇಶದೊಳು ಮೆರೆದೆ.

ಅಷ್ಟೇ ಅಲ್ಲ. ಮಧ್ವಾಚಾರ್ಯರು "ದುರುಳವಾದಿಗಳೆನಿಪ ಘನತಾಮಸಕೆ ದಿನಪ." "ಮಂಗಳ ಮಹಿಮ ವಿಹಾರ." "ಮಾಯಾವಾದಿಗಳಿಗತಿ ಕ್ರೂರ."

ಪತಿತ ಸಂಕರ ಪುಟ್ಟಿ ಮತವೆಲ್ಲ ಕೆಡಿಸಲು
ಮತಿಹೀನರಾಗೆ ಸಜ್ಜನರೆಲ್ಲ
ಅತಿವೇಗದಲಿ ಮಧ್ವಯತಿಯಾಗಿ ಅವತರಿಸಿ
ಗತಿಯ ತೋರಿದೆ ಹಯವದನ ನಿಜದಾಸ.

ಇಂಥ ಗುರುಮಧ್ವಮುನಿಗಳನ್ನು ನಂಬಿ ಉದ್ಧಾರವಾಗಿರಿ—ಎಂದು ಸುಜನರಿಗೆ ಕರೆ ನೀಡಿದ್ದಾರೆ. ಏಕೆಂದರೆ ಕಲಿಯುಗದಲಿ ಯತಿಯಾಗಿ ಈ ಇಳೆಯ ದುಶ್ಶಾಸ್ತ್ರವ ಜರಿದರು. ಭವಬಂಧಮಾಯಿಗಳ ಕಾಲಲೊದ್ದು ಮಧ್ವಶಾಸ್ತ್ರವೆಲ್ಲ ಪ್ರಸಿದ್ಧಮಾಡಿದ ಯತಿರಾಯರು. ಮಹಾಮಹಿಮರಾದ

---

1) ಇಪ್ಪತ್ತೊಂದು ಕುಭಾಷ್ಯಗಳು:—
ಭಾರತೀವಿಜಯಶ್ಚೈವ ಸಂವಿದಾನಂದ ಏವ ಚ ।
ಬ್ರಹ್ಮಘೋಷಃ ಶತಾನಂದ ಉದ್ವರ್ತಶ್ಚೈವ ಪಂಚಮಃ ॥
ವಿಜಯೋ ರುದ್ರಭಟ್ಟಶ್ಚ ವಾಮನಾಖ್ಯಸ್ತಥಾಷ್ಟಮಃ ।
ಸ ಯಾದವಪ್ರಕಾಶಶ್ಚ ನವಮಸ್ತತ್ರ ಕೀರ್ತಿತಃ ॥
ರಾಮಾನುಜಸ್ತಥಾ ಭೃರ್ತೃಪ್ರಪಂಚೋ ದ್ರವಿಡಸ್ತಥಾ ।
ಬ್ರಹ್ಮದತ್ತೋ ಭಾಸ್ಕರಶ್ಚ ವಿಶಾಖೋ ವೃತ್ತಿಕಾರಕಃ ॥
ತಥಾ ವಿಜಯಭಟ್ಟಶ್ಚ ವಿಷ್ಣುಕ್ರಾಂತಸ್ತಥೈವ ಚ ।
ವಾದೀಂದ್ರಶ್ಚ ತಥಾ ಪಶ್ಚಾತ್ತತೋ ಮಾಧವದಾಸಕಃ ॥
ತತಶ್ಚ ಶಂಕರಃ ಸ್ಯಾದೇಕವಿಂಶತಿವಾದಿಭಿಃ ।
ಪ್ರಣೀತಾನಿ ನಿರಾಚಕ್ರೇ ಕುಭಾಷ್ಯಾಣಿ ಮಹಾಮತಿಃ ॥
—(ಮ ॥ ವಿ॥ ಛಲಾರಿವ್ಯಾಖ್ಯಾನ-9-2)

ಆನಂದತೀರ್ಥರನ್ನು-ಪೂರ್ಣಪ್ರಜ್ಞರನ್ನು-ಸರ್ವಜ್ಞಾಚಾರ್ಯರನ್ನು — ಮಧ್ವ ರಾಯರನ್ನು ಒಂದು ಬಾರಿ ಸ್ಮರಣೆ ಮಾಡಿದರೆ ಘೋರ ಸಂಸಾರಾಂಬುಧಿಯಲ್ಲಿ ತೊಳಲಾಡುತ್ತಿರುವ ಸುಜೀವರು ಉದ್ಧಾರರಾಗುವರೆಂದು ಉಡುಪಿ ಸೋದಾಮಠದ ವಾದಿರಾಜಶ್ರೀಪಾದರು ಕೊಂಡಾಡಿದ್ದಾರೆ.

ಪುರಂದರದಾಸರ ನಂತರ — ವಿಜಯದಾಸರಗಿಂತ ಸ್ವಲ್ಪ ಮೊದಲು ಬಿಜಾಪುರ ಜಿಲ್ಲೆಯ ಕಾಖಂಡಕಿಯಲ್ಲಿದ್ದ ಹರಿದಾಸರು ಮಹೀಪತಿದಾಸರು. ಇವರು ಯೋಗ ಮಾರ್ಗದಲ್ಲಿ ನಡೆದು ಶ್ರೀಮಹೀಪತಿಯ ಅಪರೋಕ್ಷಜ್ಞಾನ ಪಡೆದವರು. ಇವರು ಮಧ್ವಾಚಾರ್ಯರನ್ನು ರತ್ನಕ್ಕೆ ಹೋಲಿಸಿದ್ದಾರೆ. ನೀನು ಹರಿಭಕ್ತಿಯಲಿ ಅವಿಚ್ಛಿನ್ನ. ನಿನಗೆ ಈ ಧರೆಯೊಳು ಸರಿಯಾರು ಎಂದು ಹೇಳಿದ್ದಾರೆ.

ಅತಿಬಾಹುಪರಾಕ್ರಮ ಕ್ಷಿತಿಯೊಳು ನಿನ್ನದೇ ನೇಮ
ಪ್ರಥಮಲ್ಯಾದ ಹನುಮ ದ್ವಿತೀಯಲ್ಯಾದೆ ಭೀಮ
ತೃತೀಯಲ್ಲಿ ಪೂರ್ಣಪ್ರಜ್ಞನೆನಿಸಿದೆ ನಿಸ್ಸೀಮ — ಎಂದು ಪ್ರಾಣದೇವರನ್ನು ಕೊಂಡಾಡಿ ಸ್ತುತಿಸಿದ್ದಾರೆ.

ಪುರಂದರದಾಸರಿಂದ ಸ್ವಪ್ನಾಂಕಿತರಾದ ವಿಜಯದಾಸರು ವಾಯುದೇವರ ಅವತಾರತ್ರಯಗಳನ್ನು ಕುರಿತು, ಅನೇಕ ದೇವರನಾಮಗಳಲ್ಲೂ, ಸುಳಾದಿಗಳಲ್ಲೂ ಹಾಡಿದ್ದಾರೆ. ಅವರು ಧಾತ್ರಿತ್ರಯಕೆ ಗುರು. ಸೂತ್ರನಾಮಕವಾಯು ಸುಳಾದಿಯಲ್ಲೂ, ಪ್ರಾಣ ಅಪಾನ ವ್ಯಾನ ಸಮಾನ ಉದಾನ — ಎಂಬ ಕೇನ ಷಟ್ಪ್ರಶ್ನೋಪನಿಷತ್ ಸುಳಾದಿಯಲ್ಲೂ, ಪ್ರಾಣದೇವರ ವಿರೋಧಾಭಾಸವನ್ನು ಚಿತ್ರಿಸುವ ಜಲಜಸಂಭವನ ಪಟ್ಟಕ್ಕೇರುವ ಗುರುವರ-ಸುಳಾದಿಯಲ್ಲೂ, ಕಡಗ ಕಂಕಣದಿಂದ ಎಂಬ ಹಸ್ತಸುಳಾದಿಯಲ್ಲೂ, ಕೋತಿಯಾದರೆ ಬಿಡೆನೊ, ಬಲು ಪರಿ ಭೀಮಸೇನನೆ ಪೂರ್ಣಕಾಮನೆ, ಶ್ರೀಗುರುವಿನಂಘ್ರಿಯ ಯೋಗದಿಂದಲಿ, ದುರ್ಮತವನು ನೆಚ್ಚಿ ಕರ್ಮಕ್ಕೆ ಬೀಳದಿರು, ಶ್ರೀಮದ್ವಿಠಲಪದಾಂಬುಜ ಮಧುಪರಾಜಾ, ಮುನಿಗಳಮಸ್ತಕರತುನಾ-ಮುಂತಾದ ಸುಳಾದಿಗಳಲ್ಲಿಯೂ ಬಹು ವಿಧವಾಗಿ ವಾಯುದೇವರ ಅವತಾರತ್ರಯಗಳನ್ನು ವರ್ಣಿಸಿದ್ದಾರೆ. ಹಂಪಿಯ ಚಕ್ರತೀರ್ಥದಲ್ಲಿರುವ ಯಂತ್ರೋದ್ಧಾರಕಪ್ರಾಣದೇವರನ್ನೂ ಸ್ಮರಿಸಿದ್ದಾರೆ.

ಶ್ರೀಮಧ್ವಾಚಾರ್ಯರು ಮಾಡಿದ ಮಹತ್ಕಾರ್ಯವೇನು ?

ಕರಿಯು ತೆರದಿ ದುಷ್ಟ ಸಂಕರನು
ತಿರುಗಲವನ ಮುರಿದು ಮತ್ತೆ
ಮರುತ ಮತದ ಬಿರುದನೆತ್ತಿ
ಪರನೆ ವಿಜಯವಿಠಲನೆಂದಾ

ಈತನೀಗ ಭಾರತೀಶನು, ತನ್ನ ಪ್ರೀತಿಸುವವರ ಮನದ ಮಾತು ಸಲಿಸಿ ಮುಕುತಿ ಈವನು. ಇವರು ಪರಮಯೋಗಿ.

ಯತಿಯಾಗಿ ಜನಿಸಿ ಸುವಾಕ್ಯವ ಬಯಸಿ
ಮತಿಹೀನಜನರ ಶಾಸ್ತ್ರವ ಖಂಡಿಸಿ
ಸ್ತುತಿಸಿದ ಭಕ್ತರ್ಗೆ ಗತಿಯಕೊಡುವ ಪ್ರಾಣ
ಪತಿ ವಿಜಯವಿಠಲ ಬದರಿನಿಲಯ ನಿತ್ಯಪರವು.

ಮಧ್ವಾಚಾರ್ಯರು ಅದ್ವೈತಮತಕೋಲಾಹಲರು. ವೇದಸಿದ್ಧಾಂತ ಶುಭಗುಣಶೀಲರು, ಸದ್ವೈಷ್ಣವರನ್ನು ಪಾಲಿಸುವವರು. ಚಾರುಚರಿತ ನಿರ್ದೋಷರು, ಲೋಕಮೂರೊಳಗೆ ಪ್ರಕಾಶಕರು ; ಧೀರ ವಿಜಯವಿಠಲೇಶನ ಬಿಡದೆ ಆರಾಧಿಪ ಭಾರತೀಶರು.

ಇಂಥ ಮಧ್ವರಾಯರ ಕರುಣ ಪಡೆಯದವ ಧರೆಯೊಳಗೆ ಇದ್ದರೇನು ಇಲ್ಲದಿದ್ದರೇನು ? ಎಂದು ಪ್ರಶ್ನಿಸಿದ ವಿಜಯದಾಸರು

ಮಧ್ವಮತವೇ ಮತವು ಸಕಲಶ್ರುತಿ ಸಮ್ಮತವು
ಮಧ್ವರಾಯರ ಧ್ಯಾನ ಅಮೃತಪಾನ
ಮಧ್ವರಾಯರ ಲೀಲೆ ನವರತುನದಾ ಮಾಲೆ
ಮಧ್ವೇಶನಾ ಸ್ಮರಣೆ ಕುಲಕೋಟಿ ಉದ್ಧರಣೆ

—ಎಂದು ಘೋಷಿಸಿದ್ದಾರೆ.

ವಿಜಯದಾಸರ ಶಿಷ್ಯರು ಗೋಪಾಲದಾಸರು. ಇವರು ಪ್ರಾಣದೇವರನ್ನು ಕುರಿತು "ಇದು ಏನೋ ಚರಿತ ಯಂತ್ರೋದ್ಧಾರ ಕರವ ಮುಗಿವೆ ಮುಖ್ಯ ಪ್ರಾಣ, ಮುಖ್ಯಪ್ರಾಣ ಕೈಯಮುಗಿದು ಬೇಡುವೆನಯ್ಯ, ಮಂಗಳ ಮುಖ್ಯ ಪ್ರಾಣೇಶ ಜಯ"—ಮುಂತಾದ ದೇವರನಾಮಗಳನ್ನೂ, "ಪೊಗಳಲೆನ್ನಳವೆ ನಿನ್ನ ಗುರುಗಳೆರನ್ನ" ಎಂಬ ಸುಳಾದಿಯನ್ನೂ ರಚಿಸಿದ್ದಾರೆ.

ಪದುಮನಾಭನ ದೂತನಾದ ಪ್ರಾಣದೇವರನ್ನು—ಇದು ಏನು ಚರಿತ
ಹೀನ ಮತಗಳನ್ನು ವಾಣಿಲಿ ತರಿದಂಥ ಜ್ಞಾನವಂತನೆ ಹೀಗೆ ಮೌನವ ಧರಿಸಿದ್ದು—ಏಕೆ ಎಂದು ಕೇಳಿದ್ದಾರೆ. ವಾಯುದೇವರು ಕಲಿಯುಗದಲ್ಲಿ ಶ್ರೀಮಧ್ವಾಚಾರ್ಯರಾಗಿ ಅವತರಿಸಿ ಮಾಡಿದ ಕಾರ್ಯಗಳನ್ನು ಹೀಗೆ ಸಂಗ್ರಹಿಸಿದ್ದಾರೆ.

ಜೀವೇಶರೈಕ್ಯವು ಜಗತು ಮಿಥ್ಯವೆಂದು
ಈ ವಿಧ ಪೇಳುವ ಮಾಯಿಗಳಳಿಯೆಂದು
ತಾರತಮ್ಯ ಪಂಚಭೇದ ಸತ್ಯವೆಂದು
ಮಾರುತಮತ ಪೊಂದಿದವರನು ಪೊರೆಯೆಂದು
ಇಲ್ಲಿ ಮಾತ್ರವು ಭೇದ ಅಲ್ಲಿ ಒಂದೆ ಎಂದ
ಕ್ಷುಲ್ಲಕರ ಹಿಡಿದ್ದಲ್ಲು ಮುರಿಯೆಂದು
ಪರಿ ಪರಿ ಪರಿ ಭಕ್ತರ ಹೃದಯಕಮಲದಲ್ಲಿ
ನಿರುತ ಮಾಡುವಕರ್ಮ ಶ್ರೀಹರಿಗೆ ಅರ್ಪಿತವೆಂದು
ಹರಿಮಾಡೋ ವ್ಯಾಪಾರ ಬಲ್ಲಕಾರಣದಿಂದ
ಸಿರಿಗೋಪಾಲವಿಠಲಗೆರಗಿ ನಿಂದು ।
—ಕರವ ಮುಗಿದಿದ್ದಾರಂತೆ ಮುಖ್ಯಪ್ರಾಣರು !

ಶ್ರೀಮಧ್ವರಾಯರು ದಶ ಉಪನಿಷತ್ತುಗಳಿಗೆ ಟೀಕವ ಮಾಡಿ, ಪೊಸಗೀತ ಭಾಷ್ಯ, ಋಗ್ಭಾಷ್ಯಾಣುವೇದಾಂತ, ಅನುಮತಾತ್ಪರ್ಯನಿರ್ಣಯ, ದ್ವಾದಶ ಸ್ತೋತ್ರ, ಕುಶಲದಿ ಯಮಕಭಾರತಗ್ರಂಥಮಾಡಿ, ಕುಸುಮನಾಭತೀರ್ಥರು, ನರಹರಿತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರಿಗುಸುರಿ, ಸರ್ವಾರ್ಥ ಸಾರವತೋರಿ, ಗ್ರಂಥವ ವಸುಧೆಯ ಮೇಲಿರಿಸಿ, ರಂಜಿಸುತಲಿ ಬದರಿಗೆ ನಿರ್ಗಮಿಸಿ, ಮರಳಿ ಬಂದು ದಶ ದಿಶಗಳ ಗೆದ್ದ ದಶಪ್ರಮತಿರಾಯ—ಎಂಬುದಾಗಿ ಕೀರ್ತಿತರಾಗಿದ್ದಾರೆ.

ಹರಿಕಥಾಮೃತಸಾರವನ್ನು ರಚಿಸಿರುವವರು ಜಗನ್ನಾಥದಾಸರು. ಇವರು ವಾಯುದೇವರನ್ನು ಕುರಿತು ಪವಮಾನಮದ್ಗುರುವೆ, ಭಾರತೀರಮಣಾ ಮನ್ನನದಲಿ, ಮಾರುತಿ ನಮ್ಮ ಗುರು ಹನುಮಭೀಮಮುನಿವರೇಣ್ಯ, ಪ್ರಾಣ ದೇವ ನೀನಲ್ಲದೆ ಕಾಯ್ವರೆ, ಅಪಮೃತ್ಯು ಪರಿಹರಿಸೊ ಅನಿಲದೇವಾ, ಶ್ರೀ ರಮಣ ಭಕ್ತಬಂಧು, ಶರಣು ಭಾರತೀರಮಣ, ಶ್ರೀಮಾರುತಾತ್ಮಸಂಭೂತ

  

ಹನುಮ, ಭಾರತೀರಮಣ, ಭವಭಯಹರಣ, ನಾನೆಂತುತುತಿಪೆ ನಿನ್ನಾ, ಭಾರತೀ ರಮಣಸದ್ಭಕ್ತಬಂಧೋ, ಯತಿಕುಲಾಂಬುಜ ಬಿನ್ನೈಪೆ ನಿನಗಾನು ಭೀಮ ಸೇನ, ಕೀಚಕಾಂತಕ, ಅಪರಾಧವೆಣಿಸದಲೇ ಕಾಯಬೇಕು ಮಧ್ವರಾಯರ ಪಾದ ನಂಬೋ, ಬಂದೆ ಗುರುರಾಯ-ಮುಂತಾದ ದೇವರನಾಮಗಳಲ್ಲಿ ವಾಯು ದೇವರು ಅವತಾರತ್ರಯಗಳಲ್ಲಿ ಮಾಡಿದ ಲೀಲೆಗಳನ್ನು ಕೊಂಡಾಡಿದ್ದಾರೆ.

ಭೂತಳದೊಳಗೆ ಯತಿರೂಪ
ನೀ ತಾಳಿದೆಯೋ ಶುಭಕಾಯ ಮಾಯಿ
ವ್ರಾತ ಗೆಲಿದೆ ಮಧ್ವರಾಯಾ ಕಾಯ
ಜಾತ ಜನಕಗತಿ ಪ್ರಿಯಾ

—ಎಂದು ವರ್ಣಿಸಿದ್ದಾರೆ.

ಶ್ರೀಪೂರ್ಣಬೋಧ ಯತಿರಾಯ ಎಮ್ಮ
ತಾಪತ್ರಯಗಳಿಂದ ನೋಯಗೊಡದೆ
ನೀ ಪಾಲಿಪುದು ಗುಣ ನಿಕಾಯ ಕೃಷ್ಣ
ದ್ವೈಪಾಯನಗೆ ನೀನೆ ಪ್ರಿಯನೆಂದು

—ಪ್ರಾರ್ಥಿಸಿದ್ದಾರೆ

ಮಧ್ವಾಚಾರ್ಯರು ಕುಮತಿಗಳನ್ನು ತರಿದವರು ; ಪುಟ್ಟಜಗನ್ನಾಥ ವಿಠಲನನ್ನು ಕೊಂಡಾಡಿದ ದಾಸಶ್ರೇಷ್ಠರು. ಇಂಥ ಮಧ್ವರಾಯರ ಪಾದ ನಂಬಿ ಸಿದ್ಧಾಂತಸಾರವನ್ನು ಹೃದಯದಿ ತುಂಬಿಕೊಳ್ಳಿರೆಂದು ಸಜ್ಜನರಿಗೆ ಸಾರಿದ್ದಾರೆ.

ವಿಜಯರಾಯರ ಸಮಕಾಲೀನರು ಬಾಗಲಕೋಟೆಯ ಪ್ರಸನ್ನವೆಂಕಟ ದಾಸರು. ಇವರು ಪ್ರಾಣದೇವರ ಅವತಾರತ್ರಯಮಹಿಮೆಗಳನ್ನು ಹಲವಾರು ದೇವರನಾಮಗಳಲ್ಲಿ ಕೊಂಡಾಡಿದ್ದಾರೆ,

"ಹನುಮಾ ನಮ್ಮ ತಾಯಿತಂದೆ। ಭೀಮಾ ನಮ್ಮ ಬಂಧು ಬಳಗಾ। ಆನಂದತೀರ್ಥರೇ ನಮ್ಮ ಗತಿ ಗೋತ್ರರು"—ಎಂದು ಘೋಷಿಸಿದ್ದಾರೆ.

ಇವರಲ್ಲದೆ ಅಪರೋಕ್ಷಜ್ಞಾನಿಗಳಾದ ಮೋಹನವಿಠಲರು, ಶ್ರೀದ ವಿಠಲರು, ಗುರುವಿಜಯವಿಠಲರು, ಪ್ರಾಣೇಶವಿಠಲರು, ವಾಸುದೇವ ವಿಠಲರು, ಹರಪನಹಳ್ಳಿ ಭೀಮವ್ವ—ಮುಂತಾದವರು ಶ್ರೀಮಧ್ವಾಚಾರ್ಯ ರನ್ನು ವಿವಿಧ ದೇವರನಾಮಗಳಿಂದ ಭಕ್ತಿಪೂರ್ವಕವಾಗಿ ಸ್ತುತಿಸಿದ್ದಾರೆ.

# ಶ್ರೀಮಧ್ವಾವತಾರದ ಅರುಣೋದಯ

ಪಾಜಕಕ್ಷೇತ್ರವು ಉಡುಪಿಗೆ ಆಗ್ನೇಯದಿಕ್ಕಿನಲ್ಲಿ ಏಳು ಮೈಲಿ ದೂರದಲ್ಲಿದೆ. ಪಾಜಕವೆಂದರೆ ಬೆಳ್ಳಿ ಎಂದು ಅರ್ಥ. ಉಡುಪಿಯ ಪರಿಸರದಲ್ಲಿರುವ ಈ ಹಳ್ಳಿಯನ್ನು ಬೆಳ್ಳಿ ಅಥವಾ ಬೆಳ್ಳೆ ಎಂದೂ ಕರೆಯುತ್ತಾರೆ. ಉಡುಪಿಗೆ ಶಿವಬೆಳ್ಳಿ ಎಂಬ ಹೆಸರು ಇದ್ದು, ಅದು ಜನಸಾಮಾನ್ಯರ ಬಾಯಲ್ಲಿ ಶಿವಳ್ಳಿಯಾಯಿತು. ಈ ಊರಿನ ಬ್ರಾಹ್ಮಣರು ಶಿವಳ್ಳಿಬ್ರಾಹ್ಮಣರೆಂದು ಕರೆಸಿಕೊಂಡರು.1

ಇಂಥ ಒಂದು ಶಿವಳ್ಳಿಬ್ರಾಹ್ಮಣ ಮನೆತನಕ್ಕೆ ನಾರಾಯಣಭಟ್ಟರೆಂಬವರು ಸೇರಿದ್ದರು. ಇವರ ಮನೆಯು ಊರಿನ ನಡುಭಾಗದಲ್ಲಿ ಇದ್ದುದರಿಂದ ಇವರನ್ನು ನಡುಂತಿಲ್ಲಾಯರೆಂದು ಕರೆಯುತ್ತಿದ್ದರು. ಈ ನಡುಮನೆಯ ಭಟ್ಟರು ಸಂಸ್ಕೃತಭಾಷೆಯಲ್ಲಿ ಮಧ್ಯಗೇಹಭಟ್ಟರಾದರು. ಈ ಹೆಸರೇ ಅವರಿಗೆ ರೂಢಿಯ ಹೆಸರಾಗಿ ಒಳಕ್ಕೆ ಬಂದಿತ್ತು.2

---

1) ವೇದಾದ್ರಿಸದ್ರಜತಪೀಠಪುರೇಶ್ವರಾಭ್ಯಾಂ
ಗ್ರಾಮೋ ವಿಭೂಷಿತತರಃ ಶಿವರೂಪ್ಯನಾಮಾ ।
ಹೇಮಾದ್ರಿರಾಜವಿಭುರಾಜದಿಲಾವೃತಾಭಃ
ತಸ್ಯಾಭವದ್ಗುರುಗುಣಃ ಖಲು ಮೂಲಭೂಮಿಃ ॥
ಮ॥ ವಿ॥—ಸರ್ಗ 2 ಶ್ಲೋಕ 10

2) ತಸ್ಯ ಪ್ರಭೋಶ್ಚರಣಯೋಃ ಕುಲದೇವತಾಯಾ
ಭಕ್ತಿಂ ಬಬಂಧ ನಿಜಧರ್ಮರತಸ್ಸ ಧೀರಃ ।
ವಿಜ್ಞಾತಭಾರತ ಪುರಾಣಮಹಾರಹಸ್ಯಂ
ಯಂ ಭಟ್ಟ ಇತ್ಯಭಿವದಂತಿ ಜನಾ ವಿನೀತಮ್ ॥

ಭಾರತ ಮತ್ತು ಪುರಾಣಗಳ ಮಹಾರಹಸ್ಯಗಳನ್ನು–ಅತಿಗೂಢಾರ್ಥವಾದವುಗಳನ್ನು ಯಾವ ಬ್ರಾಹ್ಮಣನು ತಿಳಿದುಕೊಂಡು ಇರುತ್ತಾನೆಯೋ ಅಂಥವನನ್ನು "ಭಟ್ಟ"ನೆಂದು ಕರೆಯುತ್ತಾರೆ. ಮಧ್ಯಗೇಹಭಟ್ಟರು ವೇದಾಧ್ಯಯನಮಾಡಿ ವೇದಗಳ ಅರ್ಥಗಳನ್ನು ತಿಳಿದುಕೊಂಡು ಅದರಂತೆ ಆಚಾರಿಸುತ್ತಿದ್ದ ಶ್ರೋತ್ರಿಯರು.
ಮ॥ ವಿ॥—ಸರ್ಗ–2 ಶ್ಲೋಕ 14

ತುಳುನಾಡಿಗೆ ಬಂದು ನೆಲಸಿದ ಬ್ರಾಹ್ಮಣಕುಟುಂಬಗಳಲ್ಲಿ ಶಿವಳ್ಳಿಯುವರದು ನೂರಿಪ್ಪತ್ತು ಕುಟುಂಬಗಳು ಇದ್ದವು. ಇವರಲ್ಲಿ ಅಲೆವೂರಾಯು, ಸರಳರಾಯು, ತೆಂಕಿಲ್ಲಾಯು, ನಡುಂತಿಲ್ಲಾಯುರೆಂದು ವರ್ಗೀಕರಣವಿತ್ತು. ಹೀಗೆ ದಿಕ್ಕುಗಳನ್ನು ಹೆಸರಾಗಿ ಹೊಂದಿದ್ದ ಒಂದು ಮನೆತನಕ್ಕೆ ಶ್ರೀಮಧ್ವಾಚಾರ್ಯರ ಪೂರ್ವಿಕರು ಸೇರಿದ್ದರು. ನಡುಂತಿಲ್ಲಾಯುರು ಭಟ್ಟವೃತ್ತಿಗೆ ಸೇರಿದ್ದವರು. ಅವರ ಮನೆಗೆ ಭಟ್ಟತಿಲ್ಲವೆಂದು ಹೆಸರಿತ್ತು. ಭಟ್ಟಜನರ ಉದ್ಯೋಗವೆಂದರೆ ಗ್ರಾಮಗಳಲ್ಲಿ ಭೂಮಿ ಅಥವಾ ಬೇರೆ ಕಾರಣಗಳಿಂದ ವಿವಾದಗಳುಂಟಾದರೆ ಅವನ್ನು ಪಂಚಾಯುತಿಯಿಂದ ಪರಿಹರಿಸುವ ಕಾರ್ಯ. ಇದರ ಜೊತೆಗೆ ಅವರು ಕೃಷಿಯನ್ನೂ ಕೈಗೊಂಡಿದ್ದರು. ಅವರು ಕಕ್ರನೆಂಬ ಒಬ್ಬ ಜಂಟಿಜಮೀನುದಾರನಿಂದ ಮೂಲಗೇಣಿಗೆ ಭೂಮಿಯನ್ನು ಪಡೆದು ವ್ಯವಸಾಯ ಮಾಡುತ್ತಿದ್ದರು. ಸಂಸಾರದ, ಮೇಲಿನ ಖರ್ಚಿಗೆ ಬೇಕಾಗುತ್ತಿದ್ದ ಹಣವನ್ನು ವೈದಿಕ ವೃತ್ತಿಯಿಂದ ಸಂಪಾದಿಸುತ್ತಿದ್ದರು.

ಪ್ರತಿವರ್ಷ ನಡೆಯುವ ಸಂಕ್ರಾಂತಿ, ಶಿವರಾತ್ರಿ, ನವರಾತ್ರಿ ಉತ್ಸವಗಳಲ್ಲಿ ಉಡುಪಿಯ ಅನಂತೇಶ್ವರದೇವಾಲಯಕ್ಕೆ ಹೋಗಿ ಆ ಊರಿನ ಪ್ರಾಯಃ ಎಲ್ಲ ಜನರಿಂದಲೂ ಸನ್ಮಾನಿತರಾಗಿ ಬರುತ್ತಿದ್ದರು. ಉಡುಪಿಯ ಆಳ್ವಿಕೆಯನ್ನು ನಿರ್ವಹಿಸುತ್ತಿದ್ದ ಬಲ್ಲಾಳರಿಗೆ ಮಧ್ಯಗೇಹಭಟ್ಟರಲ್ಲಿ ಬಹಳ ಗೌರವವಿದ್ದಿತು. ಅವರು ಭಟ್ಟರ ಕಷ್ಟಕಾರ್ಪಣ್ಯಗಳಲ್ಲಿ ನೆರವಾಗುತ್ತಿದ್ದರು.

ಮಧ್ಯಗೇಹಭಟ್ಟರು ಮತ್ತು ವೇದವತಿಯರದು ಚಿಕ್ಕ ಚೊಕ್ಕ ಸಂಸಾರ. ಮನೆಯಲ್ಲಿ ಗಂಡ ಹೆಂಡತಿ ಇಬ್ಬರು ಮಾತ್ರ. ಅವರಿಗೆ ಕಲ್ಯಾಣೀದೇವಿ ಎಂಬ ಹಿರಿಯ ಹೆಣ್ಣು ಮಗಳಿದ್ದಳು. ಆದರೆ ಅವರು ವಂಶೋದ್ಧಾರಕನಾದ, ಪಿತೃಗಳನ್ನು ನರಕದಿಂದ ಪಾರು ಮಾಡುವ, ಸುಪುತ್ರನಿಗಾಗಿ ಹಂಬಲಿಸುತ್ತಿದ್ದರು. ದೇವರು ಅವರಿಗೆ ಒಂದಲ್ಲ ಎರಡು ಪುತ್ರಸಂತಾನ ಭಾಗ್ಯವನ್ನು ಕೊಟ್ಟಿದ್ದನು. ಅವರನ್ನು ನೋಡಿಕೊಂಡು ಸಮಾಧಾನ ತಂದುಕೊಳ್ಳಬೇಕೆಂದಿರುವಾಗಲೇ ಕಾಣದ ದೈವ ಕೊಟ್ಟ ಕೈಯಿಂದಲೇ ಅವರನ್ನು ಕಿತ್ತುಕೊಂಡು ಹೋಗಿತ್ತು.

ಹೀಗಾಗಿ ಬರಿದಾದ ಮನೆ-ಮನಗಳನ್ನು ತುಂಬುವ ಸುಪುತ್ರ[1] ಸಂತಾನ ಭಾಗ್ಯಕ್ಕಾಗಿ ಅವರು ಚಾತಕ ಪಕ್ಷಿಗಳಂತೆ ಹಾತೊರೆಯುತ್ತಿದ್ದರು.

ಮಧ್ಯಗೇಹಭಟ್ಟರಿಗೆ ಈ ಕೊರಗನ್ನು ಮರೆಯಲು ಸಾವಿರಾರು ಅವಕಾಶಗಳಿದ್ದವು. ಅವರು ತಮ್ಮ ಸಮಯವನ್ನು ಮಳೆ ಬಿಸಿಲೆನ್ನದೆ ತಮ್ಮ ಅಡಿಕೆ ತೋಟ ಹಾಗೂ ಭತ್ತದ ಬಯಲಗಳಲ್ಲೂ, ವ್ಯವಸಾಯದ ನೂರಾರು ಕೆಲಸ ಕಾರ್ಯಗಳಲ್ಲೂ ಕಳೆಯುತ್ತಿದ್ದರು. ಈ ಕಾರ್ಯಗಳಲ್ಲಿ ಕೊಂಚ ಬಿಡುವು ದೊರೆತರೆ ಸಾಕು; ಅವರು ತಮ್ಮ ಕುಲದೈವವಾದ ಉಡುಪಿಯ ಅನಂತಾಸನ ಸ್ವಾಮಿಯ ಸೇವೆಗೆ ಹೊರಟುಬಿಡುತ್ತಿದ್ದರು.

ಅಲ್ಲದೆ ಅವರು ನೆರೆಹೊರೆ ಗ್ರಾಮಗಳಲ್ಲಿ ಪಂಚಾಯತಿ-ವಾದವಿವಾದ, ನ್ಯಾಯತೀರ್ಮಾನಗಳಿಗೆಂದು ಹಗಲು ರಾತ್ರಿ ಹೋಗಬೇಕಾಗುತ್ತಿತ್ತು. ಗ್ರಾಮಸ್ಥರೊಡನೆ ಪಂಚಾಯತಿಗೆ ಕುಳಿತರೆ ರಾತ್ರಿ ಕಳೆದು ಬೆಳಗಾಗುತ್ತಿತ್ತು. ಇದಲ್ಲದೆ ಅವರನ್ನು ಶ್ರೌತಕರ್ಮಗಳು ದೂರದ ಊರುಗಳಿಗೆ ಕರೆದೊಯ್ಯುತ್ತಿದ್ದವು. ಮದುವೆ ಮುಂಜಿ ಸಾವುನೋವು—ಹೀಗೆ ಅವರು ತಮ್ಮ ಗೃಹಸ್ಥರ ಮನೆಗಳಿಗೆ ಶುಭ-ಅಶುಭ ಕಾರ್ಯಗಳಿಗೆ ಹೋಗಬೇಕಾಗುತ್ತಿತ್ತು. ಇದರಿಂದ ವರಮಾನವೂ ಇರುತ್ತಿತ್ತು. ಆದರೆ ಭಟ್ಟರು ಈ ಕೆಲಸ ಕಾರ್ಯಗಳಿಗೆ ತಮ್ಮ ಊರಿನಿಂದ ಹೊರಗೆ ಇರಬೇಕಾಗಿ ಬರುತ್ತಿತ್ತು. ಅವರ ಸ್ವಭಾವವೂ ಹಾಗೆಯೇ ಇತ್ತು. ಮನೆಯಲ್ಲಿದ್ದಾಗ ಸಂಸಾರದ ಚಿಂತೆ, ಮಡದಿಯ ಚಿಂತೆ. ಮನೆ ಹೊರಗೆ ಹೋದರೆಂದರೆ, ಕಾರ್ಯಮಗ್ನರಾಗಿ ತಮ್ಮನ್ನು ತಾವೇ ಮರೆತುಬಿಡುತ್ತಿದ್ದರು.

ಮನೆಯಲ್ಲಿ ಇದ್ದಾಗಲೂ ದನಕರುಗಳಿಗೆ ಮೇವು ಒದಗಿಸುವುದು, ಮೇಯಿಸುವುದು ಹೀಗೆ ನೂರೆಂಟು ಕಾರ್ಯಗಳು ಇರುತ್ತಿದ್ದವು. ಇವು ಯಾವುವೂ ಇಲ್ಲದಿದ್ದ ದಿನಗಳಲ್ಲಿ — ಬಹುತೇಕ ಮಳೆಗಾಲದಲ್ಲಿ — ಮಧ್ಯಗೇಹಭಟ್ಟರು

---

1) ತ್ರಾತಾ ಯ ಏವ ನರಕಾತ್ಸ ಹಿ ಪುತ್ರನಾಮಾ
ಮುಖ್ಯಾವನಂ ನ ಸುಲಭಂ ಪುರುಷಾದಪೂರ್ಣಾತ್ ।
ತಸ್ಮಾತ್ಸಮಸ್ತವಿದಪತ್ಯಮವದ್ಯಹೀನಂ
ವಿದ್ಯಾಕರಾಕೃತಿ ಅಭೀಷ್ಟಮಹಿ ಕೈರುಪಾಯೈಃ ॥
ಮ॥ ವಿ॥ ಸರ್ಗ-2 ಶ್ಲೋಕ-17

ರಾಮಾಯಣವನ್ನೋ,ಮಹಾಭಾರತವನ್ನೋ, ಭಾಗವತವನ್ನೋ ತೆಗೆದುಕೊಂಡು ತಮ್ಮ ಪಾಡಿಗೆ ತಾವು ಪಾರಾಯಣ ಮಾಡುತ್ತಾ ಕುಳಿತು ಬಿಡುವರು.

ಕೆಲವು ಬಾರಿ ಅಕ್ಕಪಕ್ಕದ ಮನೆಗಳ ವೃದ್ಧರಾದ ಸ್ತ್ರೀಪುರುಷರು ಸತ್ಸಂಗಕ್ಕಾಗಿ ಭಟ್ಟರ ಮನೆಯ ಮುಂದಿನ ಚಾವಡಿಯಲ್ಲಿ ಸೇರಿ ಕಥಾಭಾಗವನ್ನು ಆಲೈಸುತ್ತಿದ್ದರು.

ಇಂಥ ಸತ್ಸಂಗಕ್ಕೆ ಭಟ್ಟರ ಪತ್ನಿ ವೇದವತಿಯೂ ತನ್ನ ಮನೆ ಕೆಲಸ ಮುಗಿದಿದ್ದರೆ ಒಮ್ಮೊಮ್ಮೆ ಬಂದು ಕುಳಿತುಕೊಳ್ಳುವಳು. ಈಗ ಆಕೆಗೆ ಮನೆಗೆಲಸದಲ್ಲಿ ಉತ್ಸಾಹವೂ ಇಲ್ಲ; ಮಾಡಿ ಮುಗಿಸಲು ಕೆಲಸಗಳು ಇದ್ದರೂ ಮನಸ್ಸಾಗಲೀ, ಸಮಾಧಾನವಾಗಲೀ ಇರಲಿಲ್ಲ. ಸದಾ ಏನೋ ಚಿಂತೆಯಿಂದ ನಿರುತ್ಸಾಹಗೊಂಡು ಮಂಕಾಗಿ ಕುಳಿತಿರುತ್ತಿದ್ದಳು. ಅಲ್ಲದೆ ವೇದವತಿಯು ಮಡಿ ಎಂದು ಸದಾ ಅಡಿಗೆ ಮನೆಯಲ್ಲಿ ಇರುತ್ತಿದ್ದಳು. ಅವರು ತಮ್ಮ ಪತ್ನಿಯನ್ನು ಒಂದು ದಿನ ಬಳಿಗೆ ಕರೆದು ಹೀಗೆ ಸಂತೈಸಿದರು.[1]

"ನೋಡು, ನೀನೇನೂ ಅರಿಯದವಳಲ್ಲ; ಕೊರಗಿದರೆ, ಹಂಬಲಿಸಿದರೆ ದೊರಕುವ ಫಲಗಳಲ್ಲ. ಎಲ್ಲವೂ ಅವರವರ ಪ್ರಾಪ್ತಿ. ಋಣಾನುಬಂಧ. ಈಗ ಒಬ್ಬ ಹೆಣ್ಣು ಮಗಳು ಕಲ್ಯಾಣಿ ಇದ್ದಾಳಲ್ಲ."

ಈ ಮಾತಿಗೆ ಸಾಧ್ವೀಶಿರೋಮಣಿಯಾದ ವೇದವತಿಯು ಉತ್ತರ ರೂಪವಾಗಿ ಕಂಬನಿ ಮಿಡಿದಳು.

ಕಡೆಗೆ ಅವರಿಗೆ ಅದೇನನಿಸಿತೋ, ನಿಶ್ಚಯದ ಧ್ವನಿಯಲ್ಲಿ ಹೇಳಿದರು.

"ನೋಡು, ಭಗವಂತನು ಕರುಣಿಸಿದರೆ ಪುತ್ರಸೌಭಾಗ್ಯ ಉಂಟಾಗುವುದು ಅದೆಷ್ಟು ಹೊತ್ತು ? ಇದಕ್ಕೆ ಒಂದು ಪರಿಹಾರವಿದೆ. ನಾವು ಅನನ್ಯಭಕ್ತಿ

---

1) ಷಣ್ಮಾಸಂ ಪಿತೃದುಃಖಂ ಸ್ಯಾನ್ಮಾತೃದುಃಖಂ ತು ವತ್ಸರಂ ।
ಭಾರ್ಯಾದುಃಖಂ ಪುನರ್ಭಾರ್ಯಾ ಪುತ್ರದುಃಖಂ ನಿರಂತರಮ್ ॥
ಚಿಂತಾಯಾಶ್ಚ ಚಿತಾಯಾಶ್ಚ ಬಿಂದುಮಾತ್ರಂ ವಿಶಿಷ್ಯತೇ ।
ಚಿತಾ ದಹತಿ ನಿರ್ಜೀವಂ ಚಿಂತಾ ದಹತಿ ಜೀವಿನಮ್ ॥
(ಸುಭಾಷಿತಭಾಂಡಾಗಾರ)

ಯಿಂದ ಕುಲದೇವನಾದ ಅನಂತಾಸನಸ್ವಾಮಿಯನ್ನು ಸೇವಿಸಿದರೆ ಅವನು ನಮಗೆ ಪುತ್ರಭಾಗ್ಯವನ್ನು ಕೊಟ್ಟೇಕೊಡುವನು !"

"ಪೂರ್ವಕಾಲದಲ್ಲಿ ಕರ್ದಮಋಷಿಗಳು ಅನನ್ಯಭಕ್ತಿಯಿಂದ ಶ್ರೀಮನ್ನಾರಾಯಣನ ಸೇವೆಯನ್ನು ಮಾಡಿ ಸುಪುತ್ರನಾದ ಕಪಿಲ ಮಹರ್ಷಿಯನ್ನೂ ಪರಾಶರ ಮಹರ್ಷಿಗಳು ಅಮೋಘವಾದ ತಪಸ್ಸಿನಿಂದ ವ್ಯಾಸ ಮಹರ್ಷಿಗಳನ್ನೂ ಮತ್ತು ಪಾಂಡು ಮಹಾರಾಜನ ಪತ್ನಿಯಾದ ಕುಂತೀದೇವಿಯು ದೂರ್ವಾಸರ ಪರಿಚರ್ಯೆಯಿಂದ ಯುಧಿಷ್ಠಿರ, ಭೀಮಸೇನ ಮತ್ತು ಅರ್ಜುನರನ್ನೂ ಪಡೆದಿದ್ದರು. ನಾವೂ ಸಹ ಅನಂತಾಸನ ಸ್ವಾಮಿಯನ್ನು ಅನನ್ಯ ಭಕ್ತಿ ಶ್ರದ್ಧೆಗಳಿಂದ ಸೇವಿಸೋಣ. ಸೇವೆಗೆ ತಕ್ಕ ಫಲವಿದ್ದೇ ಇರುತ್ತದೆ. ತಪಸ್ಸು ಎಂದಿಗೂ ವ್ಯರ್ಥವಾಗುವುದೇ ಇಲ್ಲ. ಕರ್ದಮಾದಿಗಳನ್ನು ಅನುಗ್ರಹಿಸಿದಂತೆ ಸ್ವಾಮಿಯು ನಮ್ಮನ್ನೂ ಅನುಗ್ರಹಿಸುತ್ತಾನೆ. ಆದ್ದರಿಂದ ಮಹಾತ್ಮ್ಯಜ್ಞಾನಪೂರ್ವಕ ಸುದೃಢ ಭಕ್ತಿಯಿಂದ ನಾವೂ ಸಹ ಆ ಸ್ವಾಮಿಯನ್ನು ತ್ರಿಕರಣ ಪೂರ್ವಕವಾಗಿ ಆರಾಧಿಸೋಣ" ಎಂದು ಅವರು ಪತ್ನಿಯನ್ನು ಸಂತೈಸಿ ರಜತಪೀಠಪುರಾಧೀಶ್ವರನಾದ ಅನಂತೇಶ್ವರಸ್ವಾಮಿಯನ್ನು ಸೇವಿಸಲು ಉಡುಪಿಗೆ ಪ್ರಯಾಣ ಮಾಡಿದರು.

## ವಾಸುದೇವಪ್ರಾದುರ್ಭಾವ

ಅನಂತಾಸನಸ್ವಾಮಿಯ ಬಗೆಗೆ ಅನೇಕ ದಂತಕಥೆಗಳು ಪ್ರಚಾರದಲ್ಲಿದ್ದುವು.

ಅದು ಪೂರ್ವದಲ್ಲಿ ಒಂದು ಜೈನಮಂದಿರವಾಗಿತ್ತಂತೆ. ಅನಂತನಾಥ ಸ್ವಾಮಿಯ ಬಸದಿಯಾಗಿತ್ತಂತೆ. ಆದರೆ ಜೈನರ ಪ್ರಾಬಲ್ಯವು ತುಳುನಾಡಿನಲ್ಲಿ ಕುಗ್ಗಿ ಶೈವಮತವು ಪ್ರಸಾರಗೊಂಡಮೇಲೆ ಅನಂತನಾಥನಬಸದಿಯು ಅನಂತೇಶ್ವರನೆಂಬ ಹೆಸರಿನ ಶೈವಮಂದಿರವಾಯಿತು.

ತುಳುನಾಡಿನಲ್ಲಿ ಭೂತಳಪಾಂಡ್ಯನು ಹನ್ನೆರಡು ಜನ ಜೈನಕನ್ಯೆಯರನ್ನು ಮದುವೆಯಾಗಿ ಅವರಲ್ಲಿ ಹುಟ್ಟಿದ ಹನ್ನೆರಡು ಜನ ಮಕ್ಕಳನ್ನು ಬೇರೆ ಬೇರೆ ಊರುಗಳಲ್ಲಿ ನೆಲೆಗೊಳಿಸಿದ್ದನಷ್ಟೇ. ಆ ಕಾಲದಿಂದ ತುಳುನಾಡಿನಲ್ಲಿ ಜೈನ ಧರ್ಮವು ಉಚ್ಛ್ರಾಯಸ್ಥಿತಿಗೆ ಬಂದು, ನಾಡಿನಲ್ಲೆಲ್ಲಾ ವ್ಯಾಪಕವಾಗಿ ಎಲ್ಲೆಲ್ಲೂ

ತೀರ್ಥಂಕರರ, ಯಕ್ಷಯಕ್ಷಿಯರ ದೇವಮಂದಿರಗಳು ನಿರ್ಮಾಣಗೊಂಡಿದ್ದವು.

ಕ್ರಿಸ್ತಾಬ್ದ ಮೂರನೆ ಶತಮಾನದಷ್ಟು ಹಿಂದೆ ನಾಡವರಾಗಿದ್ದ ಬಂಟರು ಬಹು ಸಂಖ್ಯೆಯಲ್ಲಿ ಜೈನಮತವನ್ನು ಸ್ವೀಕರಿಸಿದ್ದರು. ಹೊಯ್ಸಳರ ಕಾಲದಲ್ಲಿ ಹೊಂಬುಜ ಕ್ಷೇತ್ರಕ್ಕೂ ದಕ್ಷಿಣ ಕನ್ನಡ ಜಿಲ್ಲೆಗೂ ಬಾಂಧವ್ಯವೇರ್ಪಟ್ಟಿತ್ತು.

ಶ್ರೀಮಧ್ವಾಚಾರ್ಯರು ಅವತರಿಸುವ ಕಾಲಕ್ಕೆ ತುಳುನಾಡಿನಲ್ಲಿ ನೂರ ಎಂಬತ್ತು ಜೈನಬಸದಿಗಳಿದ್ದವಂತೆ. ಮೂಡಬಿದರೆ, ಕಾರ್ಕಳ, ಬಂಟವಾಳ, ಉಲ್ಲಾಳ, ಶಿರಾಡಿ, ಪಂಜ, ಕನ್ನರಪಾಡಿ ಮೊದಲಾದವೂ, ಹಾಡುವಳ್ಳಿ, ಗೇರುಸೊಪ್ಪೆ, ಮೂಲ್ಕಿ, ಹೊಸಂಗಡಿ, ನಂದಾವರ ಇವುಗಳೂ ಜೈನಯಾತ್ರಾಸ್ಥಳಗಳಾಗಿದ್ದವು. ಮೂಡಬಿದರೆಯು ಜೈನರಪಾಲಿಗೆ ದಕ್ಷಿಣಕಾಶಿ ಎನಿಸಿತ್ತು. ಜೈನರಷ್ಟು ಪ್ರಾಬಲ್ಯಕ್ಕೆ ಬೌದ್ಧರಾಗಲೀ, ನಾಥಪಂಥದವರಾಗಲೀ ಬಾರದಿದ್ದರೂ ಅವರು ಮಂಗಳೂರಿನ ಕದರಿಬೆಟ್ಟದಲ್ಲಿ ಮಂಜುಶ್ರೀ ಅವಲೋಕಿತೇಶ್ವರ ಮಂದಿರಗಳನ್ನು ನಿರ್ಮಿಸಿಕೊಂಡು, ಬೌದ್ಧಧರ್ಮವು ಅಳಿಯದಂತೆ ನೋಡಿಕೊಂಡಿದ್ದರು.

ತುಳುನಾಡಿನಲ್ಲಿ ಇವರನ್ನೆಲ್ಲಾ ಮತಾಂತರಗೊಳಿಸಿ, ಜೈನ, ಬೌದ್ಧರ ಪ್ರಭಾವವನ್ನು ಕುಗ್ಗಿಸಿದ ಕೀರ್ತಿ ಶಂಕರಾಚಾರ್ಯರದು. ಅವರು ಅದ್ವೈತಮತವನ್ನು ಪ್ರಚಾರಮಾಡಿ, ಜೈನಬೌದ್ಧರ ಶೂನ್ಯವಾದವನ್ನು ನಿರಾಕರಿಸಿ, ಎಲ್ಲರನ್ನೂ ಶೈವರನ್ನಾಗಿ ಮಾಡಿದ್ದರು. ಜೈನಬೌದ್ಧರ ದೇವ ಮಂದಿರಗಳನ್ನು ಶೈವಮಂದಿರಗಳನ್ನಾಗಿ ಮಾರ್ಪಡಿಸಿದ್ದರು.

ಹೀಗೆ ಮಾರ್ಪಟ್ಟ ದೇವಾಲಯಗಳಲ್ಲಿ ಉಡುಪಿಯ ಅನಂತನಾಥನ ಬಸದಿಯೂ ಒಂದು. ಅಲ್ಲಿನ ತೀರ್ಥಂಕರ ಮೂರ್ತಿಯು ಸ್ಥಳಾಂತರಗೊಂಡು ಅನಂತೇಶ್ವರನೆಂಬ ಲಿಂಗವು ಸ್ಥಾಪಿತವಾಯಿತೆಂಬು ಒಂದು ಪ್ರತೀತಿ. ಆ ದೇವಾಲಯದ ಮುಂದೆ ಇಂದಿಗೂ ನಿಂತಿರುವ ಮಾನಸ್ತಂಭ ಇದಕ್ಕೆ ಸಾಕ್ಷಿ ಎಂದು ಕೆಲವರು ಹೇಳುತ್ತಾರೆ.

ಈ ದೇವರನ್ನು ಶೈವರು ಶಿವನೆಂದೂ, ಅನಂತೇಶ್ವರನೆಂದೂ ಆರಾಧಿಸಿದರೆ, ವೈಷ್ಣವರು–ಭಾಗವತಸಂಪ್ರದಾಯದವರು–ವಿಷ್ಣುವೆಂದೂ, ಅನಂತಾಸನಸ್ವಾಮಿಯೆಂದೂ ಆರಾಧಿಸುತ್ತಾ ಬಂದಿದ್ದರು. ಶೈವರಾದರೂ, ಭಾಗವತ

ಸಂಪ್ರದಾಯದವರು - ವಿಷ್ಣುವೆಂದೂ, ಅನಂತಾಸನಸ್ವಾಮಿಯೆಂದು ಆರಾಧಿಸುತ್ತಾ ಬಂದಿದ್ದರು ಶೈವರಾದರೂ, ಭಾಗವತ ಸಂಪ್ರದಾಯ ಸ್ವೀಕರಿಸಿದ್ದ ಮಧ್ಯಗೇಹಭಟ್ಟರು ಅನಂತೇಶ್ವರನನ್ನು ಅನಂತಾಸನನಾದ ಶ್ರೀಮನ್ಮಹಾವಿಷ್ಣುವೆಂದೇ ತಿಳಿದಿದ್ದರು. ಆ ಸ್ವಾಮಿಯನ್ನು ತಮ್ಮ ಕುಲದೈವವಾಗಿಯೂ ಸ್ವೀಕರಿಸಿದ್ದರು, ಅಂತಲೇ ಆವರ ಉಡುಪಿಯ ಪ್ರಯಾಣ,

ಭಟ್ಟದಂಪತಿಗಳು ಹನ್ನೆರಡು ವರ್ಷಗಳ ಕಾಲ ಎಡಬಿಡದೆ ಸ್ವಾಮಿ ಸೇವೆಯನ್ನು ಮಾಡಿ ವ್ರತಸಮಾಪ್ತಿಗೊಳಿಸಿದರು. ಮಧ್ಯಗೇಹಭಟ್ಟರು ಪರಮಾತ್ಮನ ಪಾದಕಮಲಗಳನ್ನು ಸೇವಿಸುತ್ತಾ ಆಹಾರಾದಿ ಬಾಹ್ಯಭೋಗಗಳನ್ನು ಕ್ರಮೇಣ ಕಡಿಮೆ ಮಾಡಿ ಆಮೇಲೆ ವಿಷಯಗಳ ದೆಶೆಯಿಂದ ಮನೋನಿಗ್ರಹವನ್ನು ಮಾಡಿದರು. ಅನಂತರ ಬಾಹ್ಯಾಂತರಶುದ್ಧಿಯಿಂದ ಶರೀರವನ್ನು ನಿರ್ಮಲ ಮಾಡಿದರು. ಸತ್ಪುತ್ರೋತ್ಪತ್ತಿಕಾಂಕ್ಷಿತರಾದ ಈ ದಂಪತಿಗಳು ಕಠಿಣವಾದ ಪಯೋವ್ರತಾದಿವ್ರತಾಚರಣೆಗಳಿಂದ ಅತ್ಯಂತ ಕೃಶರಾದರು. ಪರಮಾತ್ಮನ ಕೃಪೆಗೆ ಪಾತ್ರರಾದ ಆ ದಂಪತಿಗಳು ಲಕ್ಷ್ಮೀನಾರಾಯಣರ ಸಾನ್ನಿಧ್ಯವಿಶೇಷವುಳ್ಳ ಅನೇಕ ಕಠಿಣವ್ರತಗಳನ್ನು ಮಾಡೋಣದರಿಂದ, ತೇಜೋಮಯವೂ ಅತಿ ಪವಿತ್ರವೂ ಆದ ಶರೀರವುಳ್ಳವರಾದರು.

ಹುಟ್ಟಿದಾಗಿನಿಂದಲೂ ಸಾತ್ವಿಕರೇ ಆಗಿದ್ದ ಅವರು ಈಗ ಮತ್ತಷ್ಟು ಸಾತ್ವಿಕರಾದರು. ಹಾಲು ಹಣ್ಣುಗಳನ್ನು ಮಾತ್ರವೇ ಸೇವಿಸಿ ಜಾಗ್ರತ್, ಸುಷುಪ್ತಿದೆಶೆಯಲ್ಲೂ ಶ್ರೀಹರಿಯನ್ನೇ ಧ್ಯಾನಿಸುತ್ತಿದ್ದರು. ತಾವು ವಂಶೋದ್ಧಾರಕನೆನಿಸುವ ಸುಪುತ್ರನನ್ನು ಬೇಡುವುದು ಧರ್ಮವಿರುದ್ಧವಾದ ಕಾಮ್ಯಕರ್ಮವೆಂದು ಅವರಿಗೆ ಅನಿಸಲಿಲ್ಲ. ಅವರ ಹೃದಯಾಂತರಾಳದಿಂದ ಯಾವುದೋ ಅಂತರ್ವಾಣಿ, ಅವತಾರಪುರುಷನೊಬ್ಬನ ಜನನಕ್ಕೆ, ತಾವು ತಾಯಿ ತಂದೆಗಳಾಗಬೇಕೆಂದು ಪ್ರೇರೇಪಿಸುತ್ತಿತ್ತು. ಯಶೋದೆಯು ಲೋಕೋದ್ಧಾರಕನಾದ ಶ್ರೀಕೃಷ್ಣನನ್ನು ಮಗನಾಗಿ ಪಡೆದು ಅವನ ಬಾಲಲೀಲೆಗಳನ್ನು ನೋಡಿ ನಲಿದಂತೆ, ತಾವೂ ಇಂಥ ಅವತಾರಪುರುಷನನ್ನು ಮಗನಾಗಿ ಪಡೆದು, ಜನ್ಮವನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಆಶೆ ಅವರಿಬ್ಬರಲ್ಲೂ ಭಗವಂತನ ಪ್ರೇರಣೆಯಿಂದ ಸಹಜವಾಗಿಯೇ ಅಂಕುರಿಸಿತ್ತು.

ವರ್ಷಗಳ ಮೇಲೆ ವರ್ಷಗಳು ಉರುಳಿದವು. ಪ್ರಶಸ್ತವಾದ ಪಿಂಗಳ ನಾಮ ಸಂವತ್ಸರವು ಕಾಲಿರಿಸಿತು.

ಉಡುಪಿಯಲ್ಲಿ ಅನಂತಾಸನಸ್ವಾಮಿಗೆ ಮಕರಸಂಕ್ರಾಂತಿ, ಯುಗಾದಿ, ನವರಾತ್ರಿಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತಿದ್ದವು. ಈ ಬಾರಿ ಮಕರಸಂಕ್ರಾಂತಿ ಉತ್ಸವಕ್ಕೆ ಅಧಿಕ ಸಂಖ್ಯೆಯಲ್ಲಿ ಆಸ್ತಿಕ ಜನರು ಸ್ವಾಮಿಯ ಉತ್ಸವಕ್ಕೆ ಸೇರಿದ್ದರು. ಪಾಜಕದಲ್ಲಿದ್ದ[1] ಮಧ್ಯಗೇಹಭಟ್ಟರಿಗೂ ವಿಶೇಷವಾದ ಆಮಂತ್ರಣ ಹೋಗಿತ್ತು. ಈ ಉತ್ಸವದಲ್ಲಿ ಪಾಲುಗೊಂಡು ಸ್ವಾಮಿಯ ದರ್ಶನಮಾಡಿಕೊಂಡು ಬರಲು ಮಧ್ಯಗೇಹಭಟ್ಟರು ತಮ್ಮ ಪತ್ನಿ ವೇದವತಿಯೊಡನೆ ಉಡುಪಿಗೆ ಬಂದರು.

ಉತ್ಸವಗಳು ಮುಗಿದುವು. ಅವರು ತಮ್ಮ ಬಹುದಿನಗಳ ಬಯಕೆಯನ್ನು ಇನ್ನಾದರೂ ಈಡೇರಿಸಿಕೊಡಬೇಕೆಂದು ಸ್ವಾಮಿಯನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ, ಮತ್ತೊಮ್ಮೆ ಸರ್ವಸಮರ್ಪಣಭಾವದಿಂದ ನಮಸ್ಕರಿಸಿದರು.

---

1) ಪವಿತ್ರಂ ಪಾಜಕಕ್ಷೇತ್ರಂ ಕೋ ನ ಸೇವೇತ ಪಂಡಿತಃ ।
ಸತ್ಯಲೋಕೇಶ್ವರಃ ಪ್ರಾಣೋ ಯತ್ರಾವತರದುತ್ಸುಕಃ ॥
ತೀರ್ಥಪ್ರಬಂಧ— ಪಶ್ಚಿಮಪ್ರಬಂಧ— ಶ್ಲೋಕ 16

"ಕ್ಷೇತ್ರಂ ಸ ಪಾಜಕಪದಂ ತ್ರಿಕುಲ್ಯೈಕಕೇತುಃ"

ಮ॥ ವಿ॥ ಸರ್ಗ 2—ಶ್ಲೋಕ-11—ಇಲ್ಲಿ ಪಾಜಕಕ್ಷೇತ್ರ ಅನ್ನುವಾಗ ಪಾಜಕಪದಕ್ಕೆ ಛಲಾರಿ ಶೇಷಾಚಾರ್ಯರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ ಪಾಜಕಪದಂ— ಪಾಜಕಮಿತಿ ಪದಂ ಶಬ್ದಃ ನಾಮೇತಿ ಯಾವತ್ ಯಸ್ಯಸಃ ತತ್ತಥೋಕ್ತಂ .. .. ಅನೇನ ಪಾಜಕಮಿತ್ಯತ್ರ ಪಾತೀತಿ ಪಃ ಪಶ್ಚಾಸೆ, ಆಜಶ್ಚಪಾಜಃ ಪಾಜಾತ್ ಕಂ ಜಲಂ ಯಸ್ಮಿನ್ ತತ್ಪಾಜಕಂ ಇತಿ ವಿಗ್ರಹ: ಆ ವಿಮಾನಗಿರಿಯಲ್ಲಿ ಪರಶುರಾಮನು ತನ್ನ ಬಾಣದಿಂದ ಪರಶ್ವದ, ಧನು. ಬಾಣ ಗದಾತೀರ್ಥಗಳೆಂಬ ತೀರ್ಥಗಳನ್ನು ನಿರ್ಮಿಸಿದ್ದನು. ಪಾಜಕವೆಂಧರೆ ಬೆಳ್ಳಿಯೆಂದೂ ಮತ್ತು ನೀರುಳ್ಳ (ತೀರ್ಥಗಳುಳ್ಳ) ಕ್ಷೇತ್ರವೆಂತಲೂ ಆಗುತ್ತದೆ.

ಊರಿಗೆ ಹಿಂತಿರುಗುವ ಮುಂಚೆ ಅವರು ಪುನಃ ದೇವಾಲಯಕ್ಕೆ ಹೋಗಿ ಸ್ವಾಮಿಯ ದರ್ಶನ ಪಡೆದು ದೇಗುಲದ ಮುಂದಿನ ಬಯಲಿಗೆ ಬಂದಾಗ ಅಲ್ಲಿ ಒಂದು ಅತ್ಯದ್ಭುತಪವಾಡವೇ ಕಾದಿತ್ತು. ದೇವಾಲಯದ ಮುಂದೆ ಇದ್ದ ಧ್ವಜಸ್ತಂಭದ ಸುತ್ತಲೂ ಸಾವಿರಾರು ಜನರು ಸೇರಿದ್ದರು. ಅಲ್ಲಿ ಒಬ್ಬ ದಡ್ಡನಂತೆ ತೋರುವ, ಮೂರ್ಖನಂತೆ ಕಾಣುವ ವ್ಯಕ್ತಿಯ ಮೇಲೆ-ಪಾತ್ರಿಯಮೇಲೆ-ಅನಂತಾಸನನ ಆವೇಶ ಬಂದಿತ್ತು. ಅವನು ತನ್ನ ಕೈಗಳನ್ನು ಮೇಲಕ್ಕೆ ಎತ್ತಿ ಆವೇಶದಿಂದ ಕುಣಿಯುತ್ತಾ, ಕುಪ್ಪಳಿಸುತ್ತಾ ಘೋಷಣೆಗಳನ್ನು ಕೂಗುತ್ತಿದ್ದನು. ಜನರು ಕುತೂಹಲದಿಂದ ನೋಡುತ್ತಿದ್ದರು.

"ಈ ಕ್ಷೇತ್ರದ ಸಮೀಪದಲ್ಲಿ ಒಬ್ಬ ವಿಶ್ವಜ್ಞನೂ ಮಹಾನುಭಾವನೂ ಆದ ಮಹಾ ಪುರುಷ ಶೀಘ್ರದಲ್ಲಿಯೇ ಹುಟ್ಟುತ್ತಾನೆ. ಅವನಿಂದ ಲೋಕ ಕಲ್ಯಾಣವಾಗುತ್ತದೆ ನನ್ನ ಮಾತು ಸತ್ಯ, ಸತ್ಯ, ಸತ್ಯ" ಎಂದು ಶಪಥ ಮಾಡಿದನು.1

---

1) ತತ್ಪ್ರೀತಯೇ ರಜತಪೀಠಪುರಾಧಿವಾಸೀ ದೇವೋ ವಿಮೋಶ
ಪುರುಷಂ ಶುಭಸೂಚನಾಯ ।
ಪ್ರಾಪ್ತೇ ಮಹಾಯ ಮಹಿತಾಯ ಮಹಾಜನೌಘೇ ಕೋಲಾಹಲೇನ
ಸುಕುತೂಹಲಿನಿ ಪ್ರವೃತ್ತೇ ॥
ಆವಿಷ್ಟವಾನಕುಶಲಂ ಪುರುಷಂ ಪ್ರಕೃತ್ಯಾ ಪ್ರತ್ಯಾಯಯ
ನ್ನಿಜಜನಾನ್ನಿತರಾಮನೃತ್ಯತ್ ॥
ಉತ್ತುಂಗಕೇತುಶಿಖರೇ ಸ ಕೃತಾಂಗಹಾರೋ ರಂಗಾಂತರೇ ನಟ
ಇವಾಖಿಲವಿಸ್ಮಯಾತ್ಮಾ ॥
ಆಭಾಷ್ಯ ಸೋಽತ್ರ ಜನತಾಂ ಶಪಥಾನುವಿದ್ಧಮುಚ್ಚೈರಿದಂ
ವಚನಮುದ್ಧೃತ ದೋರ್ಭಭಾಷೇ
ಉತ್ಪತ್ಸ್ಯತೇ ಜಗತಿ ವಿಶ್ವಜನೀನವೃತ್ತಿರ್ವಿಶ್ವಜ್ಞ ಏವ
ಭಗವಾನಚಿರಾದಿಹೇತಿ ॥
ಮ॥ ವಿ ॥ ಸರ್ಗ 2 ಶ್ಲೋಕ 8

ಇದನ್ನು ಕೇಳಿ ತಮಗೆ ಅರಿವಿಲ್ಲದೆಯೇ ಮಧ್ಯಗೇಹಭಟ್ಟವೇದವತಿ ದಂಪತಿಗಳಿಗೆ ಮೈ ರೋಮಾಂಚನವಾಯಿತು. ಅವರು ಇಂಥ ಮಹಾ ಪುರುಷನನ್ನು ತಾವು ಕಣ್ಣಾರೆಕಾಣುವ ಪುಣ್ಯ ಪಡೆದಿದ್ದೇವೆಯೇ ಎಂದು ಪ್ರಶ್ನಿಸುವಂತೆ ಪರಸ್ಪರ ಮುಖ ನೋಡಿಕೊಂಡರು.

ಅವರು ಹಾಗೆ ಪರಸ್ಪರ ಮುಖ ನೋಡಿಕೊಳ್ಳುತ್ತಿರುವಾಗ ಆವೇಶಹೊಂದಿದ್ದ ಪಾತ್ರಿಯು ಸರಸರನೆ ಧ್ವಜಸ್ತಂಭವನ್ನು ಹತ್ತಿ, ಅದರ ಮೇಲ್ಭಾಗದ ಸಣ್ಣ ಪೀಠದಲ್ಲಿ ನಿಂತು, ಎರಡು ಕೈಗಳನ್ನೂ ಮೇಲಕ್ಕೆತ್ತಿ ಮತ್ತೆ ಮತ್ತೆ ಘೋಷಣೆಗಳನ್ನು ಕೂಗುತ್ತಾ, ವಿಶಾಲವಾದ ರಂಗಸ್ಥಳದ ಮೇಲೆ ನಾಟ್ಯವಾಡುವಂತೆ ಕುಣಿಯತೊಡಗಿದನು.

ವಿಸ್ಮಯಕಾರಿಯೂ ಅಪಾಯಕಾರಿಯೂ ಆದ ಆ ಕುಣಿತವನ್ನು ನೋಡಿ ಜನ ಆವಾಕ್ಕಾದರು. ಅವನ ಕುಣಿತವನ್ನು ನೋಡಿ, ಹೆದರಿಕೆಯಿಂದ ಹೃದಯ ಡವಗುಟ್ಟುತ್ತಿತ್ತು. ಕಡೆಗೆ ಪಾತ್ರಿಯು ಆಯಾಸವಾದುದರಿಂದಲೋ ಏನೋ, ಅಥವಾ ತನ್ನ ಕಾರ್ಯ ಮುಗಿಯಿತೆಂದು ತಿಳಿದುದ್ದರಿಂದಲೋ ಏನೋ, ಮೈ ತಿಳಿದು ಮೆಲ್ಲನೆ ಉಪಾಯವಾಗಿ ಧ್ವಜಸ್ತಂಭದಿಂದ ಇಳಿದು ಬಂದನು.

ಜನರು ಅವನನ್ನು ಮುತ್ತಿ ಅವನ ಬಾಯಿಂದ ತಾವು ಕೇಳಿದ ಸಂಗತಿಯನ್ನು ಅವನಿಗೆ ತಿಳಿಸಿದಾಗ, ಅವನಿಗೆ ತಾನು ಮಾಡಿದ್ದ ವಿಚಿತ್ರ ಸಾಹಸ ಕಾರ್ಯದ ಸ್ಮರಣೆಯೇ ಇರಲಿಲ್ಲ.

ಇದೆಲ್ಲವನ್ನು ನೋಡಿದ ಜನಸ್ತೋಮ ಹರ್ಷೋದ್ಗಾರಮಾಡಿ, ಇದು ಶ್ರೀಅನಂತಾಸನನ ಮಹಿಮೆ ಎಂದು ಅವನನ್ನು ಕೊಂಡಾಡುತ್ತಾ ಅಲ್ಲಿಂದ ತೆರಳಿತು.

ಮಧ್ಯಗೇಹಭಟ್ಟದಂಪತಿಗಳೂ ಇದೆಲ್ಲವನ್ನು ಮೆಲ್ಲಧ್ವನಿಯಲ್ಲಿ ಚರ್ಚಿಸುತ್ತಾ ತಮ್ಮ ಊರಿನ ದಾರಿ ಹಿಡಿದರು.

ಮಧ್ಯಗೇಹಭಟ್ಟದಂಪತಿಗಳು ಹೀಗೆ ನಿಷ್ಠೆಯಿಂದ ಹನ್ನೆರಡು ವರ್ಷಗಳ ಕಾಲ ಶ್ರೀಅನಂತಾಸನಸ್ವಾಮಿಯನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದುದರ

ಫಲವೋ ಎಂಬಂತೆ ಸಾಧ್ವೀಮಣಿ ವೇದವತಿಯಲ್ಲಿ ಗರ್ಭಚಿಹ್ನೆಗಳು ಕಾಣಿಸಿದವು.

ಜಗತ್ಸ್ವಾಮಿಯಾದ ಶ್ರೀಹರಿಯು ತ್ರೇತಾ ಮತ್ತು ದ್ವಾಪರಯುಗಗಳಲ್ಲಿ ಸ್ವಯಂ ದುಷ್ಟಶಿಕ್ಷಣಾರ್ಥವಾಗಿ ಶ್ರೀರಾಮ ಮತ್ತು ಕೃಷ್ಣರಾಗಿ ಅವತರಿಸಿದನು. ಆದರೆ ಕಲಿಯುಗದಲ್ಲಿ ತಾನೇ ಅವತರಿಸದೆ ತನ್ನ ಅಂಶವನ್ನು ಮಾತ್ರ ಹೊಂದಿದ್ದ ಭಕ್ತನಿಂದ ಈ ಕಾರ್ಯವನ್ನು ನೆರವೇರಿಸಿಕೊಳ್ಳಲಾಶಿಸಿ ಭಾವಿಬ್ರಹ್ಮರಾದ ವಾಯುದೇವರನ್ನು ಮಧ್ವಾಚಾರ್ಯರನ್ನಾಗಿ ಭೂಲೋಕಕ್ಕೆ ಕಳುಹಿಸಿದನು. ಹನುಮ, ಭೀಮರಾಗಿ ಅವತರಿಸಿದ್ದ ಆ ಮಹಾಹರಿಭಕ್ತನು ವೇದವತಿಯ ಗರ್ಭವನ್ನು ಪ್ರವೇಶಿಸಿದನು.

ಈ ಘಟನೆಯು ಅತ್ಯದ್ಭುತಪವಾಡವಾಗಿ ನಡೆಯಿತು.

ಇನ್ನೇನು ಗರ್ಭಿಣಿಯಾದ ವೇದವತಿಯು ನವಮಾಸಗಳನ್ನು ಕಳೆದು ಗರ್ಭಸ್ಥವಾದ ಶಿಶುವಿಗೆ ಜನ್ಮಕೊಡಬೇಕು— ಎಂದಿರುವಾಗ ಒಂದು ದಿನ ಮಧ್ಯಾಹ್ನ ಆಕೆಯು ಚಾಪೆಯ ಮೇಲೆ ಹರಿನಾಮಸ್ಮರಣೆ ಮಾಡುತ್ತಾ ಕುಳಿತಿದ್ದವಳು ಹಾಗೇ ಮೂರ್ಛಿತಳಾಗಿ ನಿಶ್ಚೇಷ್ಟಿತಳಾಗಿ ಮಲಗಿಬಿಟ್ಟಳು. ಮಾತನಾಡಿಸಿದರೆ ಮಾತಿಲ್ಲ ಮೈಮೇಲೆ ಎಚ್ಚರವೇ ಇಲ್ಲ, ಈ ಸಂದರ್ಭದಲ್ಲಿ ಹೆರಿಗೆಯಾದರೆ ಏನು ಗತಿ? ತಾಯಿಮಗುವು ಉಳಿಯುವರೇ ? ಎಂದು ವ್ಯಗ್ರಗೊಂಡ ಮಧ್ಯಗೇಹ ಭಟ್ಟರು ಅನುಭವಸ್ಥರಾದ ಊರಿನ ವೃದ್ಧ ಹೆಂಗಸರನ್ನೆಲ್ಲಾ ಮನೆಗೆ ಕರೆಸಿಕೊಂಡು ಅವರ ಹೇಳಿಕೆಯಂತೆ ಪತ್ನಿಯನ್ನು ಉಪಚರಿಸಿದರು. ಹೀಗೆ ಸ್ವಲ್ಪಕಾಲ ಕಳೆದರೂ ವೇದವತಿಗೆ ಪ್ರಜ್ಞೆ ಮರಳಲೇ ಇಲ್ಲ, ವೃದ್ಧೆಯೊಬ್ಬಳು ಮುಂದೇನು ಮಾಡಬೇಕೆಂದು ತಿಳಿಯದೆ ಕರ್ತವ್ಯಮೌಢ್ಯಳಾಗಿ ಆಕೆಯ ಹೊಟ್ಟೆಯನ್ನು ಪರೀಕ್ಷಿಸಿಳು. ಒಳಗಿದ್ದ ಮಗುವು ನಿಶ್ಚೇಷ್ಟಿತವಾಗಿರುವಂತೆ ಭಾಸವಾಯಿತು. ಇನ್ನು ಈ ತಾಯಿ ಮಗುವಿನ ಕಥೆ ಮುಗಿಯಿತೆಂದು ಎಲ್ಲರೂ ಮೌನವಾಗಿ ತಿಳಿದರು.

ಭಟ್ಟರಿಗೆ ಈ ವಿಷಯ ತಿಳಿದು ಅವರು ತಲೆಯಮೇಲೆ ಕೈಹೊತ್ತು ಕುಳಿತರು. ಯೋಚಿಸಿದಷ್ಟೂ ಅವರಿಗೆ ಅಧೈರ್ಯ ಹೆಚ್ಚಾಯಿತು. ಕಡೆಗೆ ಅವರಿಗೆ ಅದೇನು ಅನಿಸಿತೋ, ಶಾಲಗ್ರಾಮಕ್ಕೆ ಅಭಿಷೇಕ ಮಾಡಿದ ತೀರ್ಥವನ್ನು ಪತ್ನಿಯ ಬಾಯಲ್ಲಿ ಹಾಕಿ ಕಿವಿಯಲ್ಲಿ "ಹರಿಃ ಓಂ" ಎಂದರು ವಿಭೂತಿ, ಊದಿ.

ತೈಲಗಳಿಂದ ಕಾವೇರಿದ್ದ ದೇಹಕ್ಕೆ ಮತ್ತೆ ಪ್ರಾಣಸಂಚಾರವಾಗಿ, ವೇದವತಿಯು ಮೆಲ್ಲನೆ ಕಣ್ತೆರೆದು ನೋವಿನ ಧ್ವನಿ ಹೊರಡಿಸಿದಳು.

ಸದ್ಯ ಆವಳು ಬದುಕಿದಳಲ್ಲ ಎಂದು ಎಲ್ಲರೂ ಸಮಾಧಾನದ ಉಸಿರನ್ನು ಬಿಟ್ಟರು

ಆಗ, ಭಟ್ಟರ ಕಳೆಗುಂದಿದ್ದ ಮುಖ ಪೂರ್ಣಚಂದ್ರಬಿಂಬದಂತೆ ಪ್ರಕಾಶಿಸಿತು. ದುಃಖದ ಕಾರ್ಮೋಡಗಳು ಚದುರಿ ಮುಖದಲ್ಲಿ ಸುಪ್ರಸನ್ನತೆಯು ಬೆಳದಿಂಗಳುಂಟಾಯಿತು.

ಆ ದಿನ ರಾತ್ರಿ ಮಲಗಿದ್ದಾಗ ಅವರಿಗೆ ಒಂದು ಕನಸಾಯಿತು. ಕನಸಿನಲ್ಲಿ ಶ್ರೀಹರಿಯಿಂದ ಆಜ್ಞಪ್ತನಾದ ಒಬ್ಬ ತೇಜಸ್ವಿಯಾದ ಮಹಾಪುರುಷನು ತೇಜೋ ರೂಪದಿಂದ ವೇದವತಿಯ ಗರ್ಭಸ್ಥವಾದ ಶಿಶುವಿನಲ್ಲಿದ್ದ ಪ್ರಾಣಗಳನ್ನು ಹೊರಗೆ ಎಳೆದು ತಾನು ಆ ಶಿಶುವಿನದೇಹ ಹೊಕ್ಕಂತೆ ಭಾಸವಾಯಿತು.

ಇದನ್ನು ಕೇಳಿದವರೆಲ್ಲರೂ ಆಶ್ಚರ್ಯಚಕಿತರಾದರು. ಯಾರೋ ಶ್ರೇಷ್ಠನಾದ ಜೀವನು ಅವರಿಗೆ ಮಗನಾಗಿ ದೇಹಧಾರಣೆ ಮಾಡಿ, ಲೋಕ ಕಲ್ಯಾಣ ಮಾಡಲಿದ್ದಾನೆ ಎಂದು ತಿಳಿದರು.

ಆ ಸಮಯಕ್ಕೆ ತಕ್ಕಂತೆ ವೇದವತಿಗೆ ಹಿಂದೆ ಆಗಿದ್ದ ಒಂದು ವಿಚಿತ್ರವಾದ ಕನಸೂ ನೆನಪಿಗೆ ಬಂದಿತು.

ಅಶ್ವಯುಜಮಾಸವು ಕಾಲಿರಿಸುತ್ತಿದ್ದಂತೆ ಒಂದು ದಿನ ವೇದವತಿಗೆ ವಿಚಿತ್ರವಾದ ಕನಸು ಬಿದ್ದಿತು. ಸ್ವಾಮಿಯ ಗರ್ಭಗುಡಿಯಿಂದ ತೇಜಃಪುಂಜವೊಂದು ಬಂದು ತನ್ನ ಗರ್ಭದಲ್ಲಿ ವಿಲೀನವಾದಂತೆಯೂ, ರಾಮಾವತಾರದಲ್ಲಿ ತಾನು ಜೀವಿಸುತ್ತಿದ್ದಂತೆಯೂ, ವಾನರವೀರರನ್ನು ದಕ್ಷಿಣಾಭಿಮುಖವಾಗಿ ಒಬ್ಬ ಮಹಾನುಭಾವನು ಗಾಳಿಯಲ್ಲಿ ಹಾರುತ್ತ ಮುನ್ನ ಡೆಸುತ್ತಿದ್ದಂತೆಯೂ ಕಂಡಳು. ಅವನ ಗದೆಯು ಕೈಯಿಂದ ಜಾರಿ ಬಂಡೆಗಲ್ಲಿನ ಮೇಲೆ ಬೀಳಲು ಅದು ಒಡೆದು ಅಲ್ಲಿದ್ದ ದೈತ್ಯ ಕ್ರಿಮಿಗಳು ನಾಶವಾದಂತೆ ಕಂಡಳು. ಆ ಗದೆಯನ್ನು ತಾಣು ಕೈಯಿಂದ ಎತ್ತಿ ಆ ವಾನರ ನಾಯಕನ ಕೈಗೆ ನೀಡಲೆತ್ನಿಸಿದಾಗ, ಅವನು ತನ್ನ ರೂಪವನ್ನು ಮಾರ್ಪಡಿಸಿಕೊಂಡು, ರಾಜಪುತ್ರನನ್ನು

ಹೋಲುವಂತೆಯೂ ಮದಗಜಮಲ್ಲನಂತೆಯೂ ಕಾಣಿಸಿಕೊಂಡನು. ಅವನು ವೇದವತಿಯನ್ನು ಕಾಣುತ್ತಲೇ "ಅಮ್ಮಾ" ಎಂದು ಕೂಗುತ್ತಾ ಅವಳ ದೇಹದಲ್ಲಿ ತೇಜೋರೂಪದಿಂದ ಹೊಕ್ಕಂತೆ ಸ್ವಪ್ನವಾಯಿತು.

ಇದನ್ನು ತಮ್ಮ ಕುಲಪುರೋಹಿತರಾದ ಅನಂತಾಸನಸ್ವಾಮಿಯ ಅರ್ಚಕರಿಗೆ ತಿಳಿಸಿದಾಗ, ಅವರು ಆಶ್ಚರ್ಯಚಕಿತರಾದರು. ಈ ದಂಪತಿಗಳಿಗೆ ಆಂಜನೇಯನಂಥ ಭಕ್ತನೂ, ಭೀಮನಂತಹ ಬಲಶಾಲಿಯೂ ಆದ ಪುತ್ರನೊಬ್ಬನು, ಜನಿಸುವುದಾಗಿ ಹೇಳಿದರು. ಇದೆಲ್ಲ ಶುಭಸೂಚನೆಯೆಂದು ತಿಳಿಸಿದರು.

ಈ ಮಾತು ಸತ್ಯವಾದರೆ ಮುಂದಿನ ಸಂಕ್ರಾಂತಿಗೆ ಪುತ್ರನೊಡನೆ ಬಂದು ಸ್ವಾಮಿಗೆ ಸೇವೆ ಸಲ್ಲಿಸುವುದಾಗಿ ಆ ದಂಪತಿಗಳು ಹರಕೆಹೊತ್ತರು. ಅನಂತಾಸನ ಸ್ವಾಮಿಗೆ ಬೀಳ್ಕೊಂಡು ಬೆಳ್ಳಿ ಗ್ರಾಮಕ್ಕೆ ಹಿಂತಿರುಗಿದರು.

ಮಧ್ಯಗೇಹಭಟ್ಟರು ಪಾಜಕಕ್ಷೇತ್ರಕ್ಕೆ ಹಿಂದಿರುಗಿ ತಮ್ಮ ನಿತ್ಯವ್ಯವಹಾರಗಳಲ್ಲಿ ಮುಳುಗಿದ್ದರು. ವೇದವತಿಯು ಕಂಡಿದ್ದ ಸ್ವಪ್ನವಾಗಲೀ, ಅಲ್ಲಿನ ಅರ್ಚಕರು ಹೇಳಿದ್ದ ಭವಿಷ್ಯವಾಗಲೀ ಸುಳ್ಳಾಗಲಿಲ್ಲ. ವೇದವತಿಯು ಗರ್ಭಿಣಿಯಾಗಿ ನವಮಾಸಗಳು ತುಂಬಿ, ಪ್ರಶಸ್ತವಾದ ಪಿಂಗಳನಾಮ ಸಂವತ್ಸರದ ಅಶ್ವಯುಜ ಶುಕ್ಲ ದಶಮಿ ಸುದಿನ ಒಬ್ಬ ಸುಂದರನಾದ ತೇಜಸ್ವೀ ಬಾಲಕನಿಗೆ ಜನ್ಮವಿತ್ತಳು.1

---

1) ನಾಥಂ ನಿಷೇವ್ಯ ಭವನಾದತಿದೂರಮಾಪ್ತಃ
ಪ್ರಾಜ್ಞೋ ಮಹಪ್ರಕೃತದುಂದುಭಿನಾದಪೂರ್ವಾತ್ ।
ಪುತ್ರೋದ್ಭವಶ್ರವಣತೋ ಮಹದಾಪ್ಯ ಸೌಖ್ಯಂ
ಜ್ಞಾನಂ ಪರೋಕ್ಷಪದಮಪ್ಯಮತೇಷ್ಟಹೇತುಂ ॥
ಆವಿಶ್ಯ ವೇಶ್ಮ ನಿಜನಂದನಮಿಂದುವಕ್ತ್ರಂ
ಭೂಯೋಽಭಿನಂದ್ಯ ಸ ಮುಕುಂದದಯಾಂ ಪ್ರವಂದ್ಯ ।
ಜಾತಸ್ಯ ತಸ್ಯ ಗುಣಜಾತವಹಸ್ಯ ಜಾತ
ಕರ್ಮಾದಿಕರ್ಮನಿವಹಂ ವಿದಧೇ ಸುಕರ್ಮಾ ॥
ಮ॥ ವಿ॥ ಸರ್ಗ 2 ಶ್ಲೋಕ 27–28

ಈ ಮಗುವು ಹುಟ್ಟಿದ ಕಾಲದಲ್ಲಿ[1] ಭಟ್ಟರು ಊರಿನಲ್ಲಿ ಇರಲಿಲ್ಲ. ತಮ್ಮ ಕಾರ್ಯನಿಮಿತ್ತವಾಗಿ ಉಡುಪಿಗೆ ಹೋಗಿದ್ದವರು ಹೊತ್ತುಮಾಡಿಕೊಂಡು ಮನೆಗೆ ಹಿಂದಿರುಗಿದ್ದರು. ಅವರು ಮನೆಯನ್ನು ಸಮೀಪಿಸುತ್ತಿದ್ದಂತೆ ದೇವದುಂದುಭಿಗಳು ಮೊಳಗಿದಂತೆ ಭಾಸವಾಯಿತು. ವೀಣಾವೇಣುಮೃದಂಗ ಪಣ್ಯವಾಡಕದುಂದುಭಿಗಳ ಸುಸ್ವರ ಕೇಳಿಸಿದಂತೆ ಅವರಿಗೆ ಅನುಭವವಾಯಿತು.

ಮನೆಗೆ ಬಂದಾಗ ಅವರಿಗೆ ಆಶ್ಚರಿಯ ವಾರ್ತೆ ಕಾದಿತ್ತು.

ಮಧ್ಯಗೇಹಭಟ್ಟರಿಗೆ ಹನ್ನೆರಡು ವರ್ಷಗಳನಂತರ ಪುತ್ರೋತ್ಸವವಾಗಿತ್ತು.[2]

---

1) ಶ್ರೀಮಧ್ವಾಚಾರ್ಯರ ಕಾಲವಿಚಾರ : ಶ್ರೀಮನ್ಮಹಾಭಾರತತಾತ್ಪರ್ಯ ನಿರ್ಣಯ"—32ನೇ ಅಧ್ಯಾಯ–ಶ್ಲೋಕ 131 ಕುಂಭಕೋಣದ ಮುದ್ರಣದಲ್ಲಿ ಪೂರ್ಣಪ್ರಜ್ಞರು ಹೀಗೆ ಹೇಳಿದ್ದಾರೆ :

ಚತುಸ್ಸಹಸ್ರೇ ತ್ರಿಶತೋತ್ತರೇ ಗತೇ
ಸಂವತ್ಸರಾಣಾಂ ತು ಕಲೌ ಪೃಥಿವ್ಯಾಮ್ ।
ಜಾತಃ ಪುನರ್ವಿಪ್ರತನುಃ ಸ ಭೀಮಃ
ದೈತ್ಯೈರ್ನಿಗೂಢಂ ಹರಿತತ್ತ್ವಮಾಹ ॥

ಕಲಿಯುಗದ 4,300ನೇ ವರ್ಷದಲ್ಲಿ ಶ್ರೀಮಧ್ವಾಚಾರ್ಯರ ಅವತಾರ. ಗಣಿತ-ಜ್ಯೋತಿಷಶಾಸ್ತ್ರಜ್ಞರ ಪ್ರಕಾರ 3,101 ನೇ ಕಲಿಯುಗದ ವರ್ಷ ಕ್ರಿಸ್ತಶಕಾರಂಭ. ಅಂದರೆ ಆಚಾರ್ಯರ ಅವತಾರ 4300–3101= ಕ್ರಿ. ಶ. 1199. ಅವರ ಎಪ್ಪತ್ತೊಂಭತ್ತನೇ ವಯಸ್ಸಿನಲ್ಲಿ ಬದರಿಕಾಶ್ರಮಗಮನ. ಆದ್ದರಿಂದ ಆಚಾರ್ಯರ ಕಾಲ ಸುಮಾರು ಕ್ರಿ. ಶ. 1199 ರಿಂದ 1278. ಆಧುನಿಕರು, ಆಚಾರ್ಯರ ಕಾಲವನ್ನು ಕಾರಣಾಂತರಗಳಿಂದ ಕ್ರಿ. ಶ. 1238–1317 ಎಂದು ನಿರ್ಣಯಿಸಿ, ಇದನ್ನು ವ್ಯವಹಾರದಲ್ಲಿಯೂ ತಂದಿರುತ್ತಾರೆ.

2) ಅಥ ತೇಷು ಹರಿಃ ಪ್ರಸೋದಿವಾನ್ ಪವನಂ
ಪ್ರಾಹ ಸ ಮಂದಹಾಸವಾನ್ ।
ಅನವೇಕ್ಷ್ಯ ಪರಂ ಹ್ಯನಾಮಯಂ ಪ್ರವರಂ

ಮುಂದಿನ ಪುಟಕ್ಕೆ

ಜಗತ್ತನ್ನು ಬೆಳಗುವ ಮಣಿದೀಪವೊಂದು ತೊಟ್ಟಿಲಲ್ಲಿ ಪ್ರಕಾಶಿಸುತ್ತಿತ್ತು.

ಈ ವಾರ್ತೆಯನ್ನು ಕೇಳಿ ತಮ್ಮ ಬಹುಕಾಲದ ಕನಸು ನನಸಾಯಿತೆಂದು ಭಟ್ಟರು ಸಂತೋಷಿಸಿದ್ದರು. ಇಂಥ ಸುಲಕ್ಷಣವಂತ! ಮಗುವನ್ನು ಅನುಗ್ರಹಿಸಿದ ಅನಂತಾಸನಸ್ವಾಮಿಯನ್ನು ಮನಸ್ಸಿನಲ್ಲೇ ವಂದಿಸಿದರು.

---

ಕಾರ್ಯಕೃತೌ ಸ್ಪೃಹಯತ್ಪ್ರಿಯಂ ॥
ಅವತೀರ್ಯ ಭುವಿ ಪ್ರಜಾ ನಿಜಾಃ ಪರಿಪಾಹ್ಯತ್ರ
ನಿವಾರ್ಯ ಹೃದ್ರುಜಾಃ ।
ಯಶಸಾ ಪರಿಪೂರಯಾಶು ತಾಂ ಹ್ರಸಿತಾಮುದ್ಧರ
ಚಾರುವೇಗಾಮ್ ॥
ಕುಮತಾನಿ ವಿಧೂಯ ಯತ್ನತಃ ಸ್ವಮತಂ ಸಾಧು
ವಿಭೂಷಯಾದೃತಃ ।
ಸುರಕಾರ್ಯಮಿದಂ ಗುಣಾಕರ ತ್ವರಿತಂ ಮೇ ದಯಿತಂ ಸಮಾಚರ ॥
ಇತಿ ದೇವವರೇಣ ಚೋದಿತಃ ಶಿರಸಾಽಽಜ್ಞಾಂ ಪ್ರತಿಗೃಹ್ಯ ಸನ್ನತಃ ।
ತ್ರಿದಿವಾಧಿಪಯಾಚಿತಂ ಚ ತದ್ಭುವಿ ಕಾರ್ಯ ಸಮಾದದೇ ಮರುತ್ ॥
ಅಥ ಮಧ್ಯಮಗೇಹನಾಮಕೇ ವಿದುಷಿ ಕ್ಷೇತ್ರವರೇ ಚ ಪಾಜಕೇ ।
ಉದಿಯಾಯ ಸಮೀರದೇವರಾಟ್ ಕುಮತಾರಣ್ಯವಿನಾಶಹವ್ಯವಾಟ ॥
ವ್ಯಾಸತೀರ್ಥಕೃತ ಜಯತೀರ್ಥವಿಜಯ ಸರ್ಗ–1 ಶ್ಲೋಕ 11-18

1) ಮಹಾತ್ಮರ ದ್ವಾತ್ರಿಂಶಲ್ಲಕ್ಷಣಗಳು :—
"ಪಂಚದೀರ್ಘಃ, ಪಂಚಸೂಕ್ಷ್ಮಃ, ಪಂಚರಕ್ತಃ, ಷಡುನ್ನತಃ। ತ್ರಿಪೃಥು
ರ್ಲಘುಗಂಭೀರೋ ದ್ವಾತ್ರಿಂಶಲ್ಲಕ್ಷಣಾಸ್ತ್ವಿತಿ ॥"
ಭುಜನೇತ್ರಹನುಕರ್ಣನಾಸಾಸ್ಥಾನೇಷು ಪಂಚ ದೈರ್ಘ್ಯಾನಿ
ತಥಾ ತ್ವಕ್ಕೇಶನಖಾಂಗುಲೀಪರ್ವಸು ಪಂಚ ಸೌಕ್ಷ್ಮ್ಯಾಣಿ
ತಥಾ ಪಾದತಲದ್ವಯೋ, ನೇತ್ರಾಂತೇ, ತಾಲುಸ್ಥಾನೇ ಜಿಹ್ವಾಯಾ
ಮಧರೋಷ್ಠೇ ನಖೇಷು ಚೇತಿ ಸಪ್ತಸ್ಥಾನಾನಿ ರಕ್ತಾನಿ

ಮುಂದಿನ ಪುಟಕ್ಕೆ

# ಅವತರಿಸಿದ ಮಗು ಮಹಾಪುರುಷ

ಮುಖ್ಯಪ್ರಾಣನು ಭಗವಂತನ ಪ್ರೇರಣೆಯಂತೆ, ಅವನ ಕಾರ್ಯ ಸಾಧನೆಗೆಂದೇ ಅವತರಿಸಿದ್ದನು.1 ಅವನ ಮುಖದಲ್ಲಿದ್ದ ದೈವೀ ತೇಜಸ್ಸನ್ನು ಕಂಡು, ಅತಿಮಾನುಷಕಾಂತಿಯುತವಾದ ಕಣ್ಣುಗಳನ್ನು ನೋಡಿ ಅವನನ್ನು ವೇದಾಂತರಾಜ್ಯವನ್ನು ಆಳಲು ಬಂದ ವಾಸುದೇವನೆಂದೇ ತಿಳಿದರು.

---

ವಕ್ಷಃಕುಕ್ಷ್ಯಲಿಕಾಸ್ಕಂಧಚರಣೇಷು ಷಟ್‌ಸ್ಥಾನೇಷು
ಔನ್ನತ್ಯಾನಿ
ತಥಾ ಲಲಾಟಕಟಿವಕ್ಷಸ್ಸು ತ್ರಿಷು ಸ್ಥಾನೇಷು ತ್ರೀಣಿ ಪೃಥುತ್ವಾನಿ
ತಥಾ ಜಂಘಾಯಾಂ ಗ್ರೀವಾಯಾಂ ಮೇಢ್ರೇ ಚ ತ್ರೀಣಿ ಹ್ರಸ್ವಾನಿ
ತಥಾ ನಾಭ್ಯಾದಿಷು ತ್ರಿಷು ಸ್ಥಾನೇಷು ತ್ರೀಣಿ ಗಂಭೀರತ್ವಾನಿ
ಇತಿ ದ್ವಾತ್ರಿಂಶಲ್ಲಕ್ಷಣಾನಿ.

ಬೃಹದ್ಭಾಷ್ಯೇ :— ದ್ವಾತ್ರಿಂಶಲ್ಲಕ್ಷಣ್ಯೈಃ ಸಮ್ಯಗ್ಯುಕ್ತಾ ವಾಯುತ್ವಯೋಗ್ಯತಾ ।
ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ ॥
ಸಪ್ತಪಾದಶ್ಚತುರ್ಹಸ್ತೋ ದ್ವಾತ್ರಿಂಶಲ್ಲಕ್ಷಣೈರ್ಯುತಃ ।

ಸಂಪೂರ್ಣಲಕ್ಷಣಚಣಂ ನವರಾಜಮಾನದ್ವಾರಾಂತರಂ
ಪರಮಸುಂದರಮಂದಿರಂ ತತ್ ।
ರಾಜೀವ ಸತ್ಪುರವರಂ ಭುವನಾಧಿರಾಜೋ ನಿಷ್ಕಾಶಯನ್
ಪರಮಸೌ ಭಗವಾನ್ ವಿವೇಶ ॥
ಮ ॥ ವಿ ॥ ಸರ್ಗ–2 ಶ್ಲೋಕ 25

1) ತಂ ಪೂರ್ವಪಕ್ಷಸಿತಬಿಂಬಮಿವ ಪ್ರವೃದ್ಧಂ
ಯಾವದ್ದ್ವಿಜೇಂದ್ರವನಿತಾ ಸುಷುವೇಽತ್ರ ತಾವತ್ ।
ಅಂಶೇನ ವಾಯುರವತೀರ್ಯ ಸರೂಪ್ಯಹೀರೇ
ವಿಷ್ಣುಂ ಪ್ರಣಮ್ಯ ಭವನಂ ಪ್ರಯಯೌ ತದೀಯಂ ॥
ಮ ॥ ವಿ ॥ ಸರ್ಗ 2– ಶ್ಲೋಕ 24

ಮಗುವಿಗೆ ವಾಸುದೇವನೆಂದೇ ನಾಮಕರಣ ಮಾಡಿದರು. ಈ ಶಿಶು ಮುಂದೆ ಆನಂದತೀರ್ಥ, ಸುಖತೀರ್ಥ, ಪೂರ್ಣಬೋಧ, ಅನುಮಾನತೀರ್ಥ, ಪೂರ್ಣ ಪ್ರಜ್ಞ, ಸರ್ವಜ್ಞಾಚಾರ್ಯ, ದಶಪ್ರಮತಿ, ಮಧ್ವಾಚಾರ್ಯರೆಂಬ ಹಲವು ನಾಮಗಳಿಂದ ಲೋಕಕಲ್ಯಾಣ ಸಾಧಿಸುವದೆಂದು ಯಾರು ಊಹಿಸಿದ್ದರು?

ಮಗುವಿಗೆ ಮೂರು ತಿಂಗಳಾಗುತ್ತಿದ್ದಂತೆ ಸಂಕ್ರಾಂತಿ ಉತ್ಸವಕ್ಕೆ ಬರಲು ಶ್ರೀಅನಂತಾಸನಸ್ವಾಮಿಯ ದೇವಾಲಯದ ಅಧಿಕಾರಿಗಳಿಂದ ಮಧ್ಯಗೇಹಭಟ್ಟರಿಗೆ ವಿಶೇಷ ಆಮಂತ್ರಣ ಬಂದಿತ್ತು. ಸಂಕ್ರಾಂತಿಹಬ್ಬವು ಉಡುಪಿಯ ಜನತೆಗೆ ಒಂದು ಮುಖ್ಯವಾದ ಹಬ್ಬ. ಸಹಸ್ರಾರು ಜನರು ಈ ಸಮಯದಲ್ಲಿ ಉಡುಪಿ ಯಲ್ಲಿ ಸೇರಿ ಸ್ವಾಮಿಯನ್ನು ವೈಭವದಿಂದ ಪೂಜಿಸುತ್ತಾರೆ. ದೊಡ್ಡ ಜಾತ್ರೆಯೂ ನಡೆಯುತ್ತದೆ,

ಈ ಉತ್ಸವಕ್ಕೆ ಹೊರಟಿದ್ದ ಮಧ್ಯಗೇಹಭಟ್ಟರನ್ನುದ್ದೇಶಿಸಿ ವೇದ ವತಿಯು ತಾನೂ ಅವರೊಡನೆ ದೇವರ ಸೇವೆಗೆ ಬರುವುದಾಗಿ ಪ್ರಾರ್ಥಿಸಿದಳು. ಮೂರುತಿಂಗಳಮಗುವನ್ನು ಸಂಗಡ ಕರೆದುಕೊಂಡು ಇಷ್ಟು ದೂರದ ಪ್ರಯಾಣದ ಆಯಾಸವನ್ನು ಸಹಿಸಿಕೊಳ್ಳುವಳೇ ಎಂದು ಭಟ್ಟರು ಅನುಮತಿ ನೀಡಲು ಆಲೋಚಿಸುತ್ತಿದ್ದರು. ಆದರೆ ಮಗನನ್ನು ಸ್ವಾಮಿಯದರ್ಶನಕ್ಕೆ ಕರೆತರುವು ದಾಗಿ ಹರಕೆ ಹೊತ್ತಿದ್ದರು. ಏನಾದರೂ ಇದನ್ನು ಈಡೇರಿಸಲೇ ಬೇಕಾಗಿತ್ತು. ಅಲ್ಲದೆ ವಾಸುದೇವನಿಗೆ ಸ್ವಾಮಿಯ ಕೃಪಾಕಟಾಕ್ಷ ಈ ಚಿಕ್ಕ ವಯಸ್ಸಿನಲ್ಲಿಯೇ ಪ್ರಾಪ್ತವಾದರೆ ಒಳ್ಳೆಯದಲ್ಲವೇ–ಎಂದು ಆಲೋಚಿಸಿ, ಭಟ್ಟರು ಪತ್ನೀಪುತ್ರ ಬಂಧುಜನಸಮೇತರಾಗಿ ಬೆಳ್ಳೆಯಿಂದ ಉಡುಪಿಗೆ ನಡದೇ ಬಂದರು.

ಉಡುಪಿಯಲ್ಲಿ ಅವರ ಇಷ್ಟಮಿತ್ರನ ಮನೆಯಲ್ಲಿ ತಂಗಿ ಶ್ರೀಅನಂತಾಸನಸ್ವಾಮಿಯನ್ನು ತೃಪ್ತಿಯಾಗುವವರೆಗೆ ಪೂಜಿಸಿ, ಹರಕೆ ಸಲ್ಲಿಸಿ, ಕೃತಾರ್ಥತೆ ಪಡೆದರು. ಬಾಲಶಿಶು ಮುದ್ದು ವಾಸುದೇವನಿಗೆ ತನ್ನ ಮನೆಗೆ, ತನ್ನ ಒಡೆಯನ ಮನೆಗೆ ಬಂದಷ್ಟು ಹಿಗ್ಗು, ಇದನ್ನು ಕೇಕೆಗಳಿಂದ ವ್ಯಕ್ತಪಡಿಸು ತ್ತಿದ್ದನು.

ಅವರು ಉಡುಪಿಯನ್ನು ಬಿಟ್ಟು ಬೆಳ್ಳೆಗೆ ಹಿಂದಿರುಗುತ್ತಾ ಕುಕ್ಕಿಕಟ್ಟೆ ಎಂಬ ಗ್ರಾಮಕ್ಕೆ ಬಂದಾಗ ಮಧ್ಯರಾತ್ರಿಯಾಗಿ ಕತ್ತಲು ಕವಿದಿತ್ತು. ಆ ಪ್ರದೇಶವು

ದಟ್ಟವಾದ ಗಿಡಮರಗಳಿಂದ ಕೂಡಿದ ಗೋಂಡಾರಣ್ಯವಾಗಿದ್ದು, ಭೂತಾವಾಸವೆಂಬ ಹೆಸರನ್ನೂ ಪಡೆದಿತ್ತು. ಅಲ್ಲಿ ಒಂದು ಭೂತದ ಗುಡಿಯೂ ಇತ್ತು. ಅಲ್ಲಿಗೆ ಮಧ್ಯರಾತ್ರಿ ಬಂದವರು ಯಾರೇ ಆಗಿರಲಿ ರಕ್ತಕಾರಿ ಸಾಯುತ್ತಿದ್ದರು.

ಈ ನಾಗಬನದಲ್ಲಿ ಅನೇಕ ದೈಯ್ಯ(ಅಥವಾ ಭೂತಗಳು ವಾಸವಾಗಿರುವು ದಾಗಿ ಜನ ನಂಬಿದ್ದರು. ತುಳುನಾಡಿನಲ್ಲಿ ಜನತೆ ಅನೇಕ ಭೂತಗಳನ್ನು ನಂಬುತ್ತಾರೆ ; ಅವುಗಳಿಗೆ ಭಕ್ತಿಯಿಂದ ನೇಮ, ಕೋಲ ಸಲ್ಲಿಸುತ್ತಾರೆ ; ಅಲ್ಲದೆ ಹರಕೆಹೊತ್ತು ಕಾಣಿಕೆ ತೆತ್ತು ಅವನ್ನು ಸುಪ್ರಸನ್ನಗೊಳಿಸಿದಮೇಲೆ ಶುಭಾಶುಭಕಾರ್ಯಗಳನ್ನು ಆರಂಭಿಸುವುದು, ಹೀಗಾಗಿ ತುಳುನಾಡಿನಲ್ಲಿ ಕಲ್ಕುಡ, ಕಲ್ಲುರ್ಟಿ, ಬೊಬ್ಬರ್ಯೆ, ಕೋಟಿಪೂಂಜ, ಕುಂಬೆಲ್ರ್, ಪಿಲಿಚಾ ಪುಂಡಿ, (ಹುಲಿ) ಪೆಂಜಾರ್ಲಿ (ಹಂದಿ) ಮೊದಲಾದ ಭೂತಪ್ರೇತಗಳು ಸಾಮಾನ್ಯರಿಂದ ಮಾತ್ರವಲ್ಲ, ಸುಸಂಸ್ಕೃತರಾದ ಜನರಿಂದಲೂ ಸ್ಥಾನ, ಗುಡಿ, ಗರಡಿ, ಕೊಟ್ಟಿಗೆಗಳನ್ನು ಕಟ್ಟಿಸಿಕೊಂಡು ವಿದ್ಯಾವಂತರಾದ ಅವರನ್ನು ಅನುಗ್ರಹಿಸುತ್ತಾ ಬಂದಿವೆ.

ಇಂಥ ಒಂದು ದೈಯ (ದೈವ) ವು ಉಡುಪಿ ಹಾಗೂ ಬೆಳ್ಳೆಗಳ ನಡುವಣ ಈ ಹಾದಿಯ ನಾಗಬನದಲ್ಲಿ ಮನೆಮಾಡಿಕೊಂಡಲ್ಲಿ ` ಮಧ್ಯರಾತ್ರಿಯ ಸಂಚಾರ ಹೊರಡುವ ವೇಳೆಯಲ್ಲಿ ಅಲ್ಲಿಗೆ ಬಂದವರನ್ನು ರಕ್ತಕಾರಿಸಿ ಮುಗಿಸಿ ಬಿಡುತ್ತಿದ್ದವು.

ಇದನ್ನು ನೆನೆಯುತ್ತ ಭೀತರಾದ ಭಟ್ಟದಂಪತಿಗಳು ತಮ್ಮ ಕಂದನಿಗೆ ಇನ್ನೇನು ಗತಿ ಎಂದು ಗಾಬರಿಯಿಂದ ಬಿಳಿಚಿಕೊಂಡು, ಗಡಗಡನೆ ನಡುಗಿದರು. ಅಷ್ಟರಲ್ಲಿಯೇ ಅವರ ಜೊತೆಯಲ್ಲಿ ಸ್ವಲ್ಪ ಮುಂದೆ ಬಂದಿದ್ದ ಪ್ರಯಾಣಿಕ ನೋರ್ವನು ಚೀರಿಕೊಂಡು ರಕ್ತಕಾರಿ ಅವರ ಕಣ್ಣೆದುರಿಗೇ ಸತ್ತುಬಿದ್ದನು.

ಇದನ್ನು ನೋಡಿ ವೇದವತಿಯು ಹೆದರಿಕೆಯಿಂದ ನಡುಗಿ ಕೂಗಿಕೊಂಡು ವಾಸುದೇವನನ್ನು ಉಡಿಯಲ್ಲಿ ಮರೆಮಾಡಿಕೊಂಡಳು.

ಆಗ ಅಲ್ಲಿದ್ದ ಮತ್ತೊಬ್ಬ ಪ್ರಯಾಣಿಕನ ಮೇಲೆ — ಪಾತ್ರಿಯಮೇಲೆ— ಒಂದು ಭೂತವು ಆವೇಶಗೊಂಡು ಹೀಗೆ ಘರ್ಜಿಸಿತು :

"ಭಟ್ಟರೇ ನೀವು ಹೆದರುವ ಕಾರಣವಿಲ್ಲ ! ನಾನು ನಿಮ್ಮ ತಂಟೆಗೆ ಬರುವುದಿಲ್ಲ ! ಆಗೋ ಆ ವೇದವತಿಯ ಉಡಿಯಲ್ಲಿರುವ ಮಗುವಿನ ಸಲುವಾಗಿ, ನಾವು ನಿಮ್ಮನ್ನು ರಕ್ತಕಾರಿಸದೆ ಬಿಟ್ಟಿದ್ದೇವೆ. ಆ ಮಗುವಿನಿಂದಲೇ ನೀವು ಉಳಿದುಕೊಂಡಿರಿ! ಆ ಮಗುವು ಸಾಮಾನ್ಯನಲ್ಲ. ಮಹಾಪುರುಷ, ಲೋಕೇಶ್ವರ! ಅವನ ಮುಂದೆ ನಮ್ಮ ಆಟ ನಡೆಯದು ! ಅವನಿಂದಾಗಿ ನೀವು ಉಳಿದಿರಿ! ಅವನಿಗೋಸ್ಕರ ನಿಮ್ಮನ್ನು ಉಳಿಸಿದ್ದೇವೆ. ಇಲ್ಲದಿದ್ದರೆ ನಾವು ವಿಹಾರಹೊರಟ ವೇಳೆಯಲ್ಲಿ ಯಾರೇ ಬರಲಿ ಅವರನ್ನು ರಕ್ತಕಾರಿಸಿ ನಾಶಮಾಡದೆ ಬಿಡೆವು !

ಈ ಮಾತನ್ನು ಕೇಳಿ ಮಧ್ಯಗೇಹಭಟ್ಟವೇದವತಿಯರಿಗೆ ಭಯಮಿಶ್ರಿತ ಆಶ್ಚರ್ಯ ಸಂತೋಷಗಳಾದವು. ಹಾಗಾದರೆ ತಮ್ಮನ್ನು ಈಗ ಕಾಪಾಡಿದವನು ಮುದ್ದುಕಂದ ವಾಸುದೇವನೇ ? ಈ ಮಾಣಿಯಿಂದಾಗಿ ತಾವು ಉಳಿದುಕೊಂಡೆವೆ ?

ಹಾಗಾದರೆ ಇವನು ಸಾಮಾನ್ಯ ಶಿಶುವಲ್ಲ. ಉಡುಪಿಯಲ್ಲಿ ಅನಂತಾಸನ ದೇವಸ್ಥಾನದ ಧ್ವಜಸ್ತಂಭದ ಮೇಲೆ ನಿಂತು ಪಾತ್ರಿ ಹೇಳಿದ

---

1) ನತ್ವಾ ಹರಿಂ ರಜತಪೀಠಪುರಾಧಿವಾಸಂ ಬಾಲಸ್ಯ ಸಂಪದಮನಾಪದಮರ್ಥಯಿತ್ವಾ ।
ಸಾಕಂ ಸುತೇನ ಪರಿವಾರಜನಾನ್ವಿತೋಽಸೌ ಪ್ರಾಯಾನ್ನಿಶೀಥಸಮಯೇ ನಿಜಮೇವ ಧಾಮ ॥
ದೋಷೇಯುಷಾಂ ಷಮಮನೇನ ವನೇಽತಿಭೀಮೋ ತತ್ಕ್ರೀಡಿತಗ್ರಹ ಇಹೈಕತಮಂ ತುತೋದ ।
ಉದ್ವಾಂತರಕ್ತಮವಲೋಕ್ಯ ತಮಭ್ಯಧಾಯಿ ಕೇನಾಪ್ಯಹೋ ನ ಶಿಶುತತ್ಕಥಮೇಷ ಇತ್ಥಂ ॥
ಆವಿಶ್ಯ ಪೂರುಷಮುವಾಚ ಮಹಾಗ್ರಹಾಸಾವಸ್ಮದ್ವಿಹಾರಸಮಯೋಪಗತಾನ್ ಸಮಸ್ತಾನ್ ।
ಯಚ್ಛಕ್ತಿಗುಪ್ತಿರಹಿತಾನಲಮಸ್ಮಿ ಹಂತುಂ ಲೋಕೇಶ್ವರಃ ಸ ಬತ ಬಾಲತಮಃ ಕಿಲೇತಿ ॥

ಮ ॥ ವಿ ॥ ಸರ್ಗ–2 ಶ್ಲೋಕ 31–34

ಮಹಾಪುರುಷ ಇವನೇ ಇರಬಹುದೆ ?— ಎಂದು ಆನಂದಭಾಷ್ಪಗಳನ್ನು ಸುರಿಸಿದರು.

ಆ ದಿನ ಅವರು ಮನೆಯನ್ನು ಸೇರಿದಾಗ ಮೊದಲಿನ ಮಧ್ಯಗೇಹಭಟ್ಟ ವೇದವತಿಯರಾಗಿ ಉಳಿದಿರಲಿಲ್ಲ. ಅವರ ದೃಷ್ಟಿಗೆ ವಾಸುದೇವನು ತಮ್ಮ ಮಗನಾಗಿ ಕಾಣಿಸಲಿಲ್ಲ. ಯಾವ ಮಗುವನ್ನು ಅವರು ತಮ್ಮ ತನುಜಾತನೆಂದು ತಿಳಿದು ಮುದ್ದಿಸಿದ್ದರೋ ಆ ಮೂರ್ತಿಯನ್ನು, ಚಿಣ್ಣನನ್ನು ಮಗುವೆಂದು ಮುಟ್ಟಲೂ ಈಗ ಹೆದರಿಕೆ ಆಗಿತ್ತು.

ಭಟ್ಟರ ಪಾಲಿಗೆ ವಾಸುದೇವನು ಮಹತ್ಕಾರ್ಯ ಸಾಧಿಸಲು ಅವತರಿಸಿದ ವಿಸ್ವಜ್ಞನಾದ ಅವತಾರಪುರುಷ— ಮಹಾತ್ಮನಾಗಿ ಕಾಣಿಸಿದನು.

ತಾಯಿ ವೇದವತಿಯ ಪಾಲಿಗೆ ಅವನು ಯಶೋದೆ ಕಂಡ ಕೃಷ್ಣನಂತೆ ತೋರಿದನು !

ಸೋದರಿ ಕಲ್ಯಾಣಿಯ ಪಾಲಿಗೆ ಇದಾವ ವಿಶೇಷವೂ ಇಲ್ಲದ ಸಾಮಾನ್ಯ ಮಗುವಾಗಿ ಕಂಡನು. ಅವಳ ಕಣ್ಣಿನಲ್ಲಿ ವಾಸುದೇವನು ಮಾತನಾಡುವ ಗೊಂಬೆಯಾಗಿ ತೋರಿದನು.

ಈ ಗೊಂಬೆಯನ್ನು ಎತ್ತಿಕೊಳ್ಳುವುದು, ಮುದ್ದುಮಾಡುವುದು ಅವನೊಂದಿಗೆ ಆಟವಾಡುವುದು ಇವೆಲ್ಲ ಅವಳನ್ನು ಬೇರೊಂದು ಜಗತ್ತಿಗೆ ಕರೆದೊಯ್ಯುತ್ತಿತ್ತು. ಅವಳು ತಾನು ಹೇಳಿದಂತೆ ಕೇಳುವ ಆ ಮುದ್ದಿನ ಮುದ್ದೆಯನ್ನು, ಮೈತುಂಬಿಕೊಂಡು ನೋಡಲು ಮನೋಹರವಾಗಿದ್ದ ಆ ರೂಪವನ್ನು "ನನ್ನ ಚಿನ್ನ, ನನ್ನ ರನ್ನ" ಎಂದು ಎಡಬಿಡದೆ ಎತ್ತಿಕೊಂಡು ಸಂತೋಷಪಡುತ್ತಿದ್ದಳು. ಈ ಅಕ್ಕ ತಮ್ಮನ ಒಡನಾಟ ತಾಯಿ ತಂದೆಗಳ ಪಾಲಿಗೆ ಸಂತೋಷದ ಚಿಲುಮೆಯಾಗಿತ್ತು. ಅವರು ತಮ್ಮ ಬಡತನದಲ್ಲೂ ಸಂತೋಷದ ಸಿರಿಯನ್ನು ಅನುಭವಿಸುತ್ತಿದ್ದರು.

ಕಾರ್ದಿಂಗಳು ಕವಿದಿದ್ದ ಮಧ್ಯಗೇಹಭಟ್ಟವೇದವತಿಯರ ಜೀವನದಲ್ಲಿ ಬೆಳದಿಂಗಳು ಅವತರಿಸಿತ್ತು. ನಿರಾಶೆಯಿಂದ ತುಂಬಿದ್ದ ಅವರ ಮನೆ ಈಗ ಸಂತೋಷ ಸಡಗರ, ತೃಪ್ತಿಗಳ ಆಗಾರವಾಗಿತ್ತು. ಅವರ ಪ್ರೀತಿಯನ್ನು ಉಂಡು ಮಗು ವಾಸುದೇವನು ಬಿದಿಗೆಯ ಚಂದ್ರನಂತೆ ದಿನದಿನಕ್ಕೂ ಅಭಿವೃದ್ಧಿ ಹೊಂದುತ್ತಿದ್ದನು.

# ಮನೆಗೆ ಬಂದ ಕಾಮಧೇನು

ಬಹುಕಾಲ ಗಂಡು ಮಕ್ಕಳಿಲ್ಲದ ಮನೆಯಲ್ಲಿ ಮಣಿದೀಪವೊಂದು ಬೆಳಗಿತ್ತು. ತಂದೆತಾಯಿಗಳ ಪಾಲಿಗೆ ಇದೊಂದು ಸಂತಸದ ಬುಗ್ಗೆ, ಅದು ಮೊಗೆದಷ್ಟು ಮತ್ತೆ ಮತ್ತೆ ತುಂಬಿಕೊಳ್ಳುತ್ತಿತ್ತು. ಆ ತಾಯಿತಂದೆಗಳ ಮನ ಮನೆಗಳುಈಗ ಸಂತೋಷ ಸಮಾಧಾನಗಳಿಂದ ತುಂಬಿ ಕೋಡಿಹರಿದಿತ್ತು. ತಮ್ಮ ಮೂವತ್ತೈದು ವರ್ಷಗಳ ದಾಂಪತ್ಯ ಜೀವನದಲ್ಲಿ ಪ್ರಥಮಬಾರಿಗೆ ಮಧ್ಯಗೇಹಭಟ್ಟ ಮತ್ತು ವೇದವತಿಯರಿಗೆ ಸಂತೃಪ್ತಿ ಕಾಣಿಸಿಕೊಂಡಿತ್ತು

ಅವರಿಗೆ ದಾರಿದ್ರ್ಯವಿದ್ದರೇನಂತೆ ! ಮನಸ್ಸು ಶ್ರೀಮಂತವಾಗಿತ್ತು. ಅವರ ಪಾಲಿಗೆ ವಾಸವಾಗಿದ್ದ ಜೋಪಡಿಯೇ ಅರಮನೆಯಾಗಿತ್ತು. ತಿನ್ನುವ ಅಂಬಲಿ—ಗಂಜಿಗಳೇ ಅಮೃತವಾಗಿತ್ತು. ಮಕ್ಕಳ ಮುಗುಳ್ನಗೆ—ಆಟ ಪಾಟಗಳೇ ಬೆಳುದಿಂಗಳಂತೆ ಆಹ್ಲಾದಮಯವಾಗಿತ್ತು. ತಮ್ಮ ಬಾಳಿನ ಬಳ್ಳಿ ಚಿಗುರಿದಂತೆ ಕಲ್ಯಾಣಿ—ವಾಸುದೇವರು ತಾಯಿತಂದೆಗಳಿಗೆ ಕವಲೊಡೆದಿದ್ದರು. ಅವರು ಸುತ್ತಮುತ್ತಲಿನ ಮನೆಗಳ ಆಬಾಲವೃದ್ಧರ ಕಣ್ಮನಸೆಳೆಯುತ್ತಿದ್ದರು. ಈ ಮಕ್ಕಳನ್ನು ನೋಡುವುದೇ ಒಂದು ಹಬ್ಬವೆನಿಸಿತ್ತು. ಹಿರಿಯರು ಎಂದಿಗೂ ಬರಿಗೈಯಲ್ಲಿ ಬರುತ್ತಿರಲಿಲ್ಲ, ಬೆಳೆದ ಕಾಯಿಪಲ್ಲೆಯನ್ನೋ, ಧಾನ್ಯವನ್ನೋ, ಹಣ್ಣು ಹಂಪಲನ್ನೋ—ಏನೂ ಇಲ್ಲದೆ ಇದ್ದರೆ ಲೋಟ ಹಾಲು ಇಲ್ಲವೇ ಮಜ್ಜಿಗೆ—ಅದೂ ನಿಲ್ಲವಾದರೆ ಒಂದು ಸೀಯಾಳವನ್ನೋ ಕೊಚ್ಚಿತಂದು ಒಪ್ಪಿಸಿ ಹೋಗುತ್ತಿದ್ದರು,

ಹೀಗಾಗಿ ಮಕ್ಕಳು ಹುಟ್ಟಿದಮೇಲೆ ಮಧ್ಯಗೇಹಭಟ್ಟರಿಗೆ ಬಡತನವೂ ಆಪ್ಯಾಯಮಾನವಾಗಿತ್ತು. ಅವರೆಂದೂ ರಿಕ್ತಹಸ್ತರಾಗಿ ಒಬ್ಬರಿಗೆ ಕೈಯೊಡ್ಡಿದ್ದವರಲ್ಲ.[1] ಯಾವುದೇ ವಸ್ತು ಬೇಕೆಂದು ಯಾರನ್ನೂ ಕೇಳುತ್ತಿರಲಿಲ್ಲ, ಬ್ರಾಹ್ಮಣನಾಗಿ ಹುಟ್ಟಿ ಯಾಚಿಸುವುದು, ಪರರಿಗೆ ಕೈಯೊಡ್ಡುವುದು ಪಾಪ

---

1) ಅಸಂತುಷ್ಟಾ ದ್ವಿಜಾ ನಷ್ಟಾಃ ಸಂತುಷ್ಟಾಶ್ಚ ಮಹೀಭುಜಃ ।
ಸಲಜ್ಜಾ ಗಣಿಕಾ ನಷ್ಟಾ ನಿರ್ಲಜ್ಜಾ ಚ ಕುಲಾಂಗನಾ ॥
(ಶುಕ್ರನೀತಿ)

ವೆಂದು ತಿಳಿದಿದ್ದರು ; ತಮ್ಮ ಆಶ್ರಮಧರ್ಮಕ್ಕೆ ವಿರುದ್ಧವೆಂದು ತಿಳಿದಿದ್ದರು. ಎಷ್ಟೋ ಬಾರಿ ಈ ನಿಷ್ಕಿಂಚನ ನೀತಿ ಅವರನ್ನು ಅಸಹಾಯ ಸ್ಥಿತಿಗೆತಂದು, ಉಪವಾಸ ಬೀಳುವಂತೆ ಮಾಡಿತ್ತು.

ಮೊದಲಿಂದಲೂ ಸರಳಜೀವನ ನಡೆಸಿದ ಅವರಿಗೆ ಉಪವಾಸ ವನವಾಸಗಳು ಅಪರೂಪವಲ್ಲ. ಅದು ಅವರಿಗೆ ಒಗ್ಗಿಹೋಗಿತ್ತು. ಮಕ್ಕಳ ಸಲುವಾಗಿ ಹನ್ನೆರಡುವರ್ಷ ಕಾಲ ಅಲ್ಪಾಹಾರಮಾಡಿ—ಕೇವಲ ಹಾಲು ಹಣ್ಣುಗಳಿಂದ ತೃಪ್ತರಾಗಿ—ಸೇವೆಯಲ್ಲಿ ಕಾಲಕಳೆದವರಿಗೆ ಬಡತನವೆಂಬುದು ಶಾಪವಾಗಿರಲಿಲ್ಲ.

ಆದರೆ ಮನೆಯಲ್ಲಿ ಈಗ ಪರಿಸ್ಥಿತಿ ಬೇರೆಯಾಗಿತ್ತು. ಅವರಿಬ್ಬರ ಜೀವಕ್ಕೆ ಇನ್ನೆರಡು ಪುಟ್ಟ ಜೀವಗಳು ಜೋತುಬಿದ್ದಿದ್ದವು. ತಮಗಿಲ್ಲದಿದ್ದರೂ ತಾವು ಅರೆಹೊಟ್ಟೆ ಊಟಮಾಡಿಯಾದರೂ, ಮಕ್ಕಳ ಭಾಗಕ್ಕೆ ಯಾವುದೂ ಕೊರತೆಯಾಗದಂತೆ ನೋಡಿಕೊಳ್ಳಬೇಕಾಗಿತ್ತು. ಇಷ್ಟಾದರೂ ಹಿಂದೆಂದೂ ಕಾಣದಿದ್ದ ದಾರಿದ್ರ್ಯ ಈ ಬಾರಿ ಮಧ್ಯಗೇಹಭಟ್ಟರ ಪಾಲಿಗೆ ಒದಗಿತ್ತು. ಅದು ಹಾಲಿನ ಕೊರತೆಯರೂಪದಲ್ಲಿ ಮಗುವಿಗೆ ಸವಾಲಾಗಿ ಬಂದಿತ್ತು.

ಹೆಣ್ಣುಮಗು ಕಲ್ಯಾಣಿಯು ಹುಟ್ಟಿದಾಗ ಮನೆಯಲ್ಲಿ ಎರಡು ಹಸುಗಳು ಕರೆಯುತ್ತಿದ್ದವು. ಆಗ ಹಾಲಿಗೆ ಕೊರತೆ ಇರಲಿಲ್ಲ, ಹಾಲು ಮೊಸರು ತುಪ್ಪ ಸಂಮೃದ್ಧವಾಗಿದ್ದವು. ದವಸದ ಕೊರತೆಯನ್ನು ಅವು ತುಂಬಿ ಕೊಡುತ್ತಿದ್ದವು.

ಆದರೆ ಮುದ್ದುಮಗ ವಾಸುದೇವ ಹುಟ್ಟಿದಾಗ ಈ ಎರಡೂ ಹಸುಗಳೂ ಏಕಕಾಲದಲ್ಲಿ ಬರಡಾಗಿದ್ದವು. ಅವುಗಳನ್ನು ಮಾರಲು ಇಷ್ಟಪಡದೆ ತಮ್ಮ ಗುರುತಿನ ಒಕ್ಕಲು ಮಗನಿಗೆ ಮೇಯಿಸಲು ಕೊಟ್ಟುಬಿಟ್ಟಿದ್ದರು. ಈಗ ಹಾಲು ಬೇಕೆನಿಸಿದರೆ ಅವರಿವರನ್ನು ಆಶ್ರಯಿಸಬೇಕಾದ ಪರಿಸ್ಥಿತಿ ಒದಗಿತ್ತು,

ಇದನ್ನು ಅರಿತೇ ಮಧ್ಯಗೇಹಭಟ್ಟರ ಪತ್ನಿ ವೇದವತಿಯು ಪತಿಯೊಡನೆ ಮಾತು ತೆಗೆದಿದ್ದಳು :

"ನೋಡಿ, ಮಗುವಿಗೆ ಎದೆಹಾಲು ಸಾಕೂ ಸಾಲದು. ಕೃಶಳಾದ ನನ್ನನ್ನು ನಂಬಿ ಕುಳಿತರೆ ಮಗು ಇನ್ನೂ ಕಂಗಾಲಾದೀತು. ಈ ಕಂದನ ಸಲುವಾಗಿ ಹಸುವಿನಹಾಲಿಗೆ ಏನಾದರೂ ಏರ್ಪಾಡು ಮಾಡಿಕೊಳ್ಳಲೇಬೇಕು. ಇಲ್ಲದಿದ್ದರೆ ಮಗು ನಮ್ಮ ಕೈಹತ್ತುವುದು ಸಂಶಯ"

—ಎಂದು ನೊಂದು ದೈನ್ಯದಿಂದ ನುಡಿದಳು.

ಪತ್ನಿಯ ಕಳವಳತುಂಬಿದ ದೈನ್ಯ ಮುಖವನ್ನು ನೋಡಿ, ಭಟ್ಟರ ಮುಖವೂ ಸಪ್ಪೆಯಾಯಿತು. ಅವರೂ ದೈನ್ಯತುಂಬಿದ ದೃಷ್ಟಿಯಿಂದ ಪತ್ನಿಯನ್ನು ನೋಡಿ,

"ಏನು ಮಾಡಲಿ ? ದನ ಸಂಮೃದ್ಧವಾಗಿ ಕರೆಯುತ್ತಿದ್ದಾಗ ಹಾಲು ಹೈನುಗಳಿಗೆ ಕೊರತೆ ಇರಲಿಲ್ಲ. ಈಗ ಒಂದು ಮಿಡಿ ಹಾಲಿಗೂ ನಮ್ಮ ವಾಸುದೇವ ಅನ್ಯರ ಮುಖ ನೋಡುವಂತೆ ಆಗಿದೆ" ಎಂದು ಪರಿತಪಿಸಿದರು.

"ಈಗ ಮಗುವಿನ ಹಾಲಿಗೆ ನಾವು ಏನನ್ನಾದರೂ ಮಾಡಲೇಬೇಕು. ಗುರುತಿನವರಲ್ಲಿ ಯಾವುದಾದರೂ ಈದ ಹಸುವಿದ್ದರೆ ತರಲೇಬೇಕು ; ಇಲ್ಲವೇ ಗಬ್ಬದ ಹಸುವಿದ್ದರೂ ತರಬೇಕು. ಇಲ್ಲದಿದ್ದರೆ ನಮ್ಮ ವಾಸುದೇವ ನಮ್ಮ ಕೈಹತ್ತುವುದಿಲ್ಲ"—ಎಂದು ಮೂರು ತಿಂಗಳು ತುಂಬಿದ ಕೃಶವಾದ ಮಗುವನ್ನು ನೋಡಿ ನಿಟ್ಟುಸಿರುಬಿಟ್ಟಳು.

ಇದಾವುದರ ಪರಿವೆ ಇಲ್ಲದೆ ತೊಟ್ಟಿಲಲ್ಲಿ ಮಲಗಿದ್ದ ವಾಸುದೇವನು ಕನಸಿನಲ್ಲಿ ಏನೋ ಅದ್ಭುತವನ್ನು ಕಂಡವನಂತೆ ಮುಗುಳುನಕ್ಕನು. ಅದನ್ನು ನೋಡಿ ವೇದವತಿ ಹೇಳಿದಳು :

"ನಮ್ಮ ಬವಣೆ ಕಂಡು ಈ ಮಾಣಿಯೂ ನಗುತ್ತಿದ್ದಾನೆ ನೋಡಿ "

ಭಟ್ಟರು ಏನಾದರೂ ಮಾಡಿ ತಮ್ಮ ವಂಶದ ಕುಡಿಯಾದ ವಾಸುದೇವನಿಗೆ ಹಾಲು ಒದಗಿಸಿಕೊಳ್ಳಲೇಬೇಕೆಂದು ಸಂಕಲ್ಪಿಸಿ, ಅಲ್ಲಿಂದ ಎದ್ದು ತೋಟಕ್ಕೆ ಹೋದರು.

ಅವರು ತೋಟದಿಂದ ಊಟದ ಎಲೆಯನ್ನು ಕೊಯ್ದುಕೊಂಡು

ಮನೆಗೆ ಬರುತ್ತಿದ್ದಂತೆ ಮನೆಯ ಮುಂದೆ ಒಂದು ಹಸು ತನ್ನ ಎಳೆಗರುವನ್ನು ನಾಲಿಗೆಯಿಂದ ನೆಕ್ಕುತ್ತಾ ಪ್ರೀತಿಯಮೊಲೆಗರೆಯುತ್ತಾ ನಿಂತಿರುವುದನ್ನು ನೋಡಿ ಅಚ್ಚರಿಪಟ್ಟರು. 1

ಅಷ್ಟರಲ್ಲಿ ಅವರು ಮನೆಮುಂದಿನ ಚಾವಡಿಗೆ ಬಂದರು. ಅವರನ್ನು ನೋಡಿ ಅಲ್ಲೇ ಇದ್ದ ಅವರ ಪರಿಚಯದ ಒಬ್ಬ ಬ್ರಾಹ್ಮಣಗೃಹಸ್ಥರು ಭಟ್ಟರಿಗೆ ದೀರ್ಘದಂಡನಮಸ್ಕಾರ ಮಾಡಿ ಕೈಮುಗಿದು, ಮುಗುಳುನಗೆನಗುತ್ತಾ ನಿಂತರು.

"ಯಾಕೆ ಸ್ವಾಮಿ, ನಾನು ಮೂಡಂತ್ತಿಲ್ಲಾಯ. ನಿಮಗೆ ನನ್ನ ಜ್ಞಾಪಕ ಮರೆತುಹೋಯಿತೇ ಹೇಗೆ ?"

"ಓ ಹೋ ಹೋ ! ನಮ್ಮ ಪಕ್ಷನಾಥಮೂಡಂತ್ತಿಲ್ಲಾಯರೋ ! ನೋಡಿ ಬಹಳ ಕಾಲವಾಯಿತು. ನೀವು ಬಹಳ ಕಾಲದಿಂದ ಈ ಕಡೆ ಸುಳಿಯಲೇ ಇಲ್ಲ. ಮನೆಯಲ್ಲಿ ಎಲ್ಲರೂ ಕ್ಷೇಮ ತಾನೇ"—ಎಂದು ಮೂಡಂತಿಲ್ಲಾಯರ ಗುರುತು ಹಿಡಿದು, ಭಟ್ಟರು ಸಂತೋಷಾಶ್ಚರ್ಯಗಳಿಂದ ಅವರ ಹತ್ತಿರ ಹೋಗಿ ಕೈ ಹಿಡಿದುಕೊಂಡು ಮೈತಡವಿದರು. ವಿಶ್ವಾಸ ದಿಂದ ಅವರನ್ನು ಮನೆಯೊಳಗೆ ಕರೆದುಕೊಂಡು ಹೋಗಿ ನೂಲುಮಂಚದಲ್ಲಿ ಕೂಡಿಸಿದರು.

ಅನಂತರ ಅವರ ಕುಶಲಪ್ರಶ್ನೆ ಕೇಳಿ ಬಾಯಾರಿಕೆ ಪರಿಹರಿಸಿಕೊಳ್ಳಲು ಬೆಲ್ಲ ನೀರು ಸೀಯಾಳಗಳನ್ನು ಇತ್ತರು.

ಇದೆಲ್ಲ ಆದಮೇಲೆ ಮೂಡಂತಿಲ್ಲಾಯರು (ಪೂರ್ವಾಲಯ) ತಾವು ಬಂದ ಕಾರ್ಯವನ್ನು ಕೆಲವೇ ಮಾತುಗಳಲ್ಲಿ ನಮ್ರರಾಗಿ ವಿಜ್ಞಾಪಿಸಿಕೊಂಡರು.

---

1) ಪಾತುಂ ಪಯಾಂಸಿ ಶಿಶುವೇ ಕಿಲ ಗೋಪ್ರದೋಽಸ್ಮೈ
ಪೂರ್ವಾಲಯಃ ಸ್ವಸುತಸೂನುತಯಾಪ ಜಾತಃ ।
ನಿರ್ವಾಣಹೇತುಮುಲಭೀಷ್ಟ ಪರಾತ್ಮವಿದ್ಯಾಂ
ದಾನಂ ಧ್ರುವಂ ಫಲತಿ ಪಾತ್ರಗುಣಾನುಕೂಲ್ಯಾತ್ ॥
॥ಮ॥ ॥ವಿ॥ ಸರ್ಗ—2—ಶ್ಲೋಕ 30.

"ನೋಡಿ ಭಟ್ಟರೇ, ನಿಮ್ಮ ಎಳೆಯ ಮಗುವಿನ ಹಾಲಿಗಾಗಿ ಒಂದು ಕರೆಯುವ ಹಸುವನ್ನು ನಿಮಗೆ ದಾನವಾಗಿ ಕೊಡಲು ನಿಶ್ಚಯಿಸಿ, ಹೊಡೆದುಕೊಂಡು ಬಂದಿದ್ದೇನೆ. ದಯಮಾಡಿ ಇದನ್ನು ಸ್ವೀಕರಿಸಿ ನನ್ನನ್ನು ಆಶೀರ್ವದಿಸಬೇಕು"

— ಎಂದು ಹೇಳಿ ತೆಂಗಿನಫಲಸಮೇತ ದಕ್ಷಿಣೆತಾಂಬೂಲಗಳನ್ನು ಹಸಿಬಿಚೀಲದಿಂದ ಹೊರತೆಗೆದು ಭಟ್ಟರ ಮುಂದೆ ಇಟ್ಟು ಅದನ್ನು ಸ್ವೀಕರಿಸಬೇಕೆಂದು ದೈನ್ಯದಿಂದ ಪ್ರಾರ್ಥಿಸಿದನು.

ಇದನ್ನು ನೋಡಿ ಭಟ್ಟರು ತಮ್ಮ ಕಣ್ಣುಗಳನ್ನು ತಾವೇ ನಂಬದಾದರು. ಇದೇನು ಕನಸು ಕಾಣುತ್ತಿದ್ದೇನೆಯೋ ? ಅಥವಾ ನಿಜಕ್ಕೂ ನನಸೋ ? ಚಣಕಾಲ ಯಾವುದೂ ತೋರದಾಯಿತು. ಅನಂತರ ಯೋಚಿಸಿ ಇದೆಲ್ಲವೂ ಶ್ರೀಅನಂತಾಸನಸ್ವಾಮಿಯ ಕೃಪೆ. ತಮ್ಮ ಮಾಣಿ ವಾಸುದೇವನ ಸಲುವಾಗಿ ಲೋಕಜನನಿಯಾದ ಲಕ್ಷ್ಮೀದೇವಿಯು ತಮ್ಮ ಕಂದನಿಗೆ ಹಾಲಿನ ಕೊರತೆ ನೀಗಿಸಲು ಈ ಘಟನೆಯನ್ನು ಕಲ್ಪಿಸಿದ್ದಾಳೆ ಎಂದು ಭಾವಿಸಿದರು. ಕೃತಜ್ಞತೆಯ ಕಣ್ಣೀರನ್ನು ಸುರಿಸುತ್ತಾ ಮೂಡಂತಿಲ್ಲಾಯರ ಕೈಗಳನ್ನು ಹಿಡಿದುಕೊಂಡು ಮನದಲ್ಲೇ ಅವರ ವಿಶ್ವಾಸವನ್ನು ಕೊಂಡಾಡಿದರು.

ಆ ದಿನ ಅವರು ಮೂಡಂತಿಲ್ಲಾಯರನ್ನು ತಮ್ಮ ಮನೆಯಲ್ಲೇ ಉಳಿಸಿಕೊಂಡು ಉಪಚರಿಸಿ, ಊರಿಗೆ ಕಳುಹಿಸಿಕೊಟ್ಟರು.

ಈಗ ವಾಸುದೇವನ ಹಾಲಿನ ಸಮಸ್ಯೆ ಪರಿಹಾರವಾಗಿತ್ತು.

ಬೆಟ್ಟದಂತೆ ತಲೆದೋರಿದ್ದ ಹಾಲಿನ ಸಮಸ್ಯೆ ಈಗ ಮಂಜಿನಂತೆ ಕರಗಿ, ಇದೆಲ್ಲವೂ ಶ್ರೀಹರಿಯ ಕೃಪೆ ಎಂದೂ, ಶಿಶುವಾದ ತಮ್ಮ ಚಿಣ್ಣನ ಭಾಗ್ಯವೆಂದೂ ಆ ದಂಪತಿಗಳು ತಿಳಿದು, ಶಿಷ್ಟರಕ್ಷಕನಾದ ಭಗವಂತನನ್ನು ಮನದಲ್ಲೇ ವಂದಿಸಿದರು.

## ಹುರುಳಿತಿಂದ ಅದ್ಭುತ ಅಲೌಕಿಕ ಶಿಶು

ಬೃಹದಾಕಾರವಾಗಿ ತಲೆದೋರಿದ್ದ ವಾಸುದೇವನ ಹಾಲಿನ ಸಮಸ್ಯೆ ಸುಲಭವಾಗಿ ಹೀಗೆ ಬಗೆಹರಿದಿತ್ತು. ಕೆಲವು ತಿಂಗಳು ಕಳೆದವು.

ಈಗ ವಾಸುದೇವ ಆರು ತಿಂಗಳ ತೇಜಃಪುಂಜ ಕೂಸು. ಆವನದು ಬಕಾಸುರನಂಥಹೊಟ್ಟೆ. ಹಿಂದಣ ಅವತಾರದಲ್ಲಿ ವೃಕೋದರನಾಗಿ ಹುಟ್ಟಿದ್ದ ಜೀವವಲ್ಲವೆ ? ಊಟದ ವಿಷಯದಲ್ಲಿ ಶತ್ರುವಾದ ಬಕಾಸುರನನ್ನು ಮೀರಿಸಿದ್ದವನಲ್ಲವೆ? ಮಗುವಿಗೆ ಎಷ್ಟು ಹಾಲು ಕೊಟ್ಟರೂ ಸಾಲದು. ವಾಸುದೇವನಿಗೆ ತೃಪ್ತಿ ಎಂಬುದೇ ಇರಲಿಲ್ಲ.

ತಾಯಿಯೂ ಎದೆಹಾಲನ್ನು ಕೊಡುವುದನ್ನು ಎಂದೋ ನಿಲ್ಲಿಸಿದ್ದಳು. ಕೃಶಳಾದ ಅವಳಲ್ಲಿ ಹಾಲಿದ್ದರೆ ತಾನೆ ? ಅವನಿಗೆ ಹಾಲು ಕೊಡುವುದೆಂದರೆ ಆ ತಾಯಿಗೆ ಹೆದರಿಕೆಯಾಗುತ್ತಿತ್ತು. ಹೀಗಾಗಿ ಉಪಾಯವಾಗಿ ಸ್ತನ್ಯಪಾನ ಬಿಡಿಸಿ, ಮಗುವಿಗೆ ಹಸುವಿನ ಹಾಲನ್ನೇ ರೂಢಿ ಮಾಡಿಸಿದ್ದಳು.

ಆದನ್ನು ಬಿಸಿಬಿಸಿಯಾಗಿ ಕೊಡಲು ಅವಳು ಹೆದರುತ್ತಿದ್ದಳು. ಮಗನಿಗೆ ಎಲ್ಲಿ ಉಷ್ಣವಾಗುವುದೋ ಎಂಬ ಹೆದರಿಕೆ. ಹಸಿಹಾಲು ಕೊಟ್ಟರೆ ಶೀತವಾಗುವುದೆಂಬ ಹೆದರಿಕೆ.—ಸಂಶಯ ಅವಳು ಚೆನ್ನಾಗಿ ಕಾಸಿ ಆರಿಸಿದ ಶೀತೋಷ್ಣವಾದ ಹಾಲನ್ನು ಮಾತ್ರವೇ ಕೊಡುತ್ತಿದ್ದಳು.

ವೇದವತಿಯು ಬೆಳಗಿನ ಹಾಲನ್ನು ಊಟಕ್ಕೆ ಬಳಸದೆ ಕೇವಲ ವಾಸುದೇವನ ಸಲುವಾಗಿಯೇ ಮೀಸಲಿಡುತ್ತಿದ್ದಳು. ಮೊಸರು ಮಾಡಲು ರಾತ್ರಿಯ ಹಾಲು ಮಾತ್ರ ವಿನಿಯೋಗವಾಗುತ್ತಿತ್ತು.

ಮನೆಗೆ ಬಂದಿದ್ದ ಕಾಮಧೇನು—ಕೆಂದ ಹಸುವಿನ ಹಾಲು ಅಮೃತದಂತೆ ರುಚಿಯಾಗಿರುತ್ತಿತ್ತು. ಈ ಹಾಲನ್ನು ಕುಡಿದು ವಾಸುದೇವನು ಒಂದು ವರ್ಷದ ಹಸುಳೆಯಂತೆ, ಸೋರೆಯ ಕುಡಿಯಂತೆ, ಶುಕ್ಲಪಕ್ಷದ ಬಿದಿಗೆಯ ಚಂದ್ರನಂತೆ ಆರೋಗ್ಯದಿಂದ ದಿನದಿನಕ್ಕೂ ಬೆಳೆಯುತ್ತಿದ್ದನು.

ಒಂದು ದಿನ ವಾಸುದೇವನಿಗೆಂದು ತಾಯಿ ವೇದವತಿಯು ಬಿಸಿ ಮಾಡಿ ಆರಿಸಲು ಇಟ್ಟ ಹಾಲನ್ನು, ಆಡುತ್ತಿದ್ದ ಮಗಳು ಕಲ್ಯಾಣಿಗೆ ತೋರಿಸಿ,

"ಕಲ್ಯಾಣಿ, ಮಗು ಎದ್ದರೆ, ಹಾಲು ಕುಡಿಸಿ ನೋಡಿಕೊಂಡಿರು. ನಾನು ತೋಟಕ್ಕೆ ಹೋಗಿ ಇನ್ನರ್ಧ ತಾಸಿನಲ್ಲಿ ಹಿಂದಿರುಗಿ ಬಂದು ಬಿಡುತ್ತೇನೆ. ತೋಟಕ್ಕೆ ಹೋಗಿರುವ ನಿನ್ನ ತಂದೆ ಊಟದ ವೇಳೆ ಮೀರಿದರೂ

ಇನ್ನೂ ಮನೆಗೆ ಬಂದಿಲ್ಲ. ಅಡಿಕೆ ಕೀಳಿಸುವುದು ಮುಗಿಯಿತೋ ಇಲ್ಲವೋ ನೋಡಿ ಬರುತ್ತೇನೆ"

— ಎಂದು ಹೇಳಿ ಮನೆಯ ಕಡೆ, ಮಗುವಿನ ಕಡೆ ಒಂದು ಕಣ್ಣಿಡಲು ತಿಳಿಸಿ, ಹೊರಟುಹೋದಳು.1

ಮಗಳು ಚಾವಡಿಯಲ್ಲಿ ತನ್ನ ಓರಗೆಯ ಹುಡುಗಿಯರೊಡನೆ ಚೌಕಬಾರದ ಆಟದಲ್ಲಿ ತಲ್ಲೀನಳಾಗಿದ್ದಳು. ಅನ್ಯಮನಸ್ಕಳಾಗಿ ಹೂಂಗುಟ್ಟಿ ತಾಯಿಯನ್ನು ಕಳುಹಿಸಿಕೊಟ್ಟಳು.

ಅಷ್ಟರಲ್ಲಿ ಮಗು ವಾಸುದೇವನು ನಿದ್ರೆಯಿಂದ ಎಚ್ಚೆತ್ತನು. ಬಹಳ ಹೊತ್ತಾದರೂ ತಾಯಿಯಾಗಲೀ, ತನ್ನ ಅಕ್ಕನಾಗಲೀ, ತನ್ನನ್ನು ವಿಚಾರಿಸಲು ಯಾರೂ ಬಾರದಿರುವುದನ್ನು ನೋಡಿ, ಮೆಲ್ಲನೆ ಹಸಿವಿನಿಂದ ರಾಗಾಲಾಪನೆಗೆ ತೊಡಗಿದವನು, ಈಗ ಗಟ್ಟಿಯಾಗಿ ಚೀರಲಾರಂಭಿಸಿದನು.

ಕಲ್ಯಾಣಿಯು ತನ್ನ ಆಟವನ್ನು ನಿಲ್ಲಿಸಿ ಬೇಸರದಿಂದಲೇ ಗೆಳತಿಯರನ್ನು ಕಳುಹಿಸಿಕೊಟ್ಟು, ಮಗುವನ್ನು ಎತ್ತಿಕೊಳ್ಳಲು ಒಳಗೆ ಬಂದಳು.

ಮಗು ವಾಸುದೇವನು ತೊಟ್ಟಿಲನ್ನು ಅಸಹನೆಯಿಂದ ಒದೆಯುತ್ತಾ ಆರ್ಭಟಿಸುತ್ತಿದ್ದನು. ಬಹುಶಃ ಅವನಿಗೆ ಜರಾಸಂಧ ಕೀಚಕರನ್ನು ಕೊಂದ ನೆನಪು ಬಂದಿರಬೇಕು !

ಕಲ್ಯಾಣಿ ಮಗುವನ್ನು ಎತ್ತಿಕೊಂಡು ಅಳಬೇಡವೆಂದು ರಮಿಸಿದಳು. ಬಾಳೆಹಣ್ಣು ಕೊಡುತ್ತೇನೆ, ಕಾಸಿದ ಹಾಲೇ ಕೊಡುತ್ತೇನೆ ಅಳಬೇಡವೆಂದು ಸಂತೈಸಿದಳು. ಏನೂ ಪ್ರಯೋಜನವಾಗಲಿಲ್ಲ.2

---

1) ಸ್ತನ್ಯೇನ ಬಾಲಮನುತೋಷ್ಯ ಮುಹುಃ ಸ್ವಧಾಮ್ನೋ
ಮಾತಾ ಕದಾಚನ ಯಯೌ ವಿರಹಾಸಹಾಪಿ ।
ವಿಶ್ವಸ್ಯ ವಿಶ್ವಪರಿಪಾಲಕಪಾಲನಾಯ
ಕನ್ಯಾಂ ನಿಜಾಮನುಜಾಂ ಕಿಲ ಭೀರುರೇಷಾ ॥
ಮ ॥ ವಿ ॥ ಸರ್ಗ 2 ಶ್ಲೋಕ – 35

2) ಸಾ ಬಾಲಕಂ ಪ್ರರುದಿತಂ ಪರಿಸಾಂತ್ವಯಂತೀ
ಮುಗ್ಧಾಕ್ಷರೇಣ ವಚಸಾನುನಿನಾಯ ಮುಗ್ಧಾ ।

ಮುಂದಿನ ಪುಟಕ್ಕೆ

ವಾಸುದೇವನ ಅಳುವಾಗಲೀ, ಅಬ್ಬರವಾಗಲೀ ನಿಲ್ಲಲಿಲ್ಲ. ಅವನನ್ನು ತಾಯಿಯು ನೀರೆರೆದು ತೊಟ್ಟಿಲಿನಲ್ಲಿ ಮಲಗಿಸಿದ್ದಳು. ಮಗು ದೀರ್ಘನಿದ್ರೆ ಮಾಡಿ ಎದ್ದಿತ್ತು, ಅದಕ್ಕೆ ಮಾತನಾಡಿಸಿದವರನ್ನು ನುಂಗುವಷ್ಟು ಹಸಿವಾಗಿತ್ತು. ಅದು ತನ್ನ ಕಾಲುಕೈಗಳನ್ನು ಬಡಿದು ತನ್ನ ಹಸಿವನ್ನು ಪ್ರಕಟಿಸಿತು.

ಕಲ್ಯಾಣಿಯು ತನ್ನ ತಾಯಿ ಹೇಳಿದ್ದ ಮಾತನ್ನು ನೆನಪು ಮಾಡಿಕೊಂಡು, ಕಾಸಿ ಆರಲು ಇಟ್ಟಿದ್ದ ಹಾಲಿನ ಪಾತ್ರೆಯಿದ್ದ ಸ್ಥಳಕ್ಕೆ ಹೋದಳು. ಅವಳು ಹೋಗಿ ನೋಡುತ್ತಾಳೆ ! ಅಲ್ಲೇನಿದೆ ? ಯಾವುದೋ ಕಳ್ಳ ಬೆಕ್ಕೊಂದು ಅಡಿಗೆ ಮನೆಗೆ ನುಗ್ಗಿ ಯಾರೂ ಇಲ್ಲದ ವೇಳೆ ಸಾಧಿಸಿ, ಪಾತ್ರೆಯನ್ನು ಉರುಳಿಸಿ, ಹಾಲನ್ನೆಲ್ಲಾ ಕುಡಿದುಹೋಗಿತ್ತು.

ಈಗ ವಾಸುದೇವನಿಗೆ ಕೊಡಲು ಒಂದು ತೊಟ್ಟು ಹಾಲೂ ಮನೆಯಲ್ಲಿ ಇರಲಿಲ್ಲ,

ಏನು ಮಾಡುವುದು ?

ಕಲ್ಯಾಣಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಅತ್ತ ತಾಯಿ ಬಂದು ಕೇಳಿದರೆ ಏನು ಹೇಳುವುದು ಎಂಬ ಹೆದರಿಕೆ ಇತ್ತು. ಹಸಿದು ಅಳುತ್ತಿರುವ ಮಗುವನ್ನು ಹೇಗೆ ಸಮಾಧಾನ ಮಾಡಬೇಕೆಂಬುದೂ ತಿಳಿಯದೆಹೋಗಿತ್ತು.

ಅವಳು ಮಗುವನ್ನು ಎತ್ತಿಕೊಂಡು ಮನೆಯಲ್ಲೆಲ್ಲಾ ಓಡಾಡಿದಳು. ಬೀದಿಗೆ ಎತ್ತಿಕೊಂಡು ಬಂದಳು. ರನ್ನ ಚಿನ್ನ ಎಂದು ಮುದ್ದಿಸಿದಳು, ಕಾಗೆ

---

ಮಾ ತಾತ ತಾತ ಸುಮುಖೇತಿ ಪುನಃಪ್ರರೋದಿ
ಮಾತಾ ತನೋತಿ ರುಚಿತಂ ತ್ವರಿತಂ ತಮೇತಿ ॥
ರೋದೇ ಕ್ರಿಯಾಸಮಭಿಹಾರತ ಏವ ವೃತ್ತೇ
ಪೋತಸ್ಯ ಮಾತರಿ ಚಿರಾದಪಿ ನಾಗತಾಯಾಂ ।
ಜಗ್ರಾಹ ಬಾಲಮಥ ಚೈಕ್ಷತ ಮಾತೃಮಾರ್ಗಂ
ಸಾಪಿ ಕ್ರಿಯಾಸಮಭಿಹಾರತ ಏವ ಬಾಲಾ ॥

ಮ ॥ ವಿ ॥ ಸರ್ಗ—2 ಶ್ಲೋಕ 36, 37

ಗುಬ್ಬಿಗಳನ್ನು ತೋರಿಸಿದಳು. ಅಮ್ಮನ ಹೆಸರು ಹಿಡಿದು ಕೂಗಿಸಿದಳು. ಏನು ಮಾಡಿದರೂ ವಾಸುದೇವನು ಹಠ ಬಿಡಲಿಲ್ಲ, ತೆರದ ಬಾಯನ್ನು ಮುಚ್ಚಲಿಲ್ಲ. ಒಂದೇ ರಾಗದಿಂದ ಅಳುತ್ತಿದ್ದನು.

ಮಗುವನ್ನು ಸಂತೈಸಲು ಬೇರೇನೂ ಮಾಡಲು ತೋಚದೆ ಆ ಬಾಲೆಯು ಮಗುವಿಗೆ ತಿನ್ನಲು ಕೊಡಲು ಏನಾದರೂ ಇದೆಯೆ ಎಂದು ಮನೆಯನ್ನು ಶೋಧಿಸಿದಳು ಮಗು ತಿನ್ನಬಹುದಾದ ಪದಾರ್ಥ ಒಂದೂ ಕೈಗೆ ಸಿಕ್ಕುವಂತಿರಲಿಲ್ಲ. ಅಡಿಗೆ ಏನೋ ಸಿದ್ಧವಾಗಿತ್ತು – ಆದರೆ ಅದು ಮಡಿಯಲ್ಲಿತ್ತು. ಅದನ್ನು ಮುಟ್ಟಲು ಆ ಬಾಲೆಗೆ ಧೈರ್ಯವಾಗಲಿಲ್ಲ.

ಅವಳು ಹಿತ್ತಲಿಗೆ ಬಂದಳು. ಅಲ್ಲಿ ಒಂದು ಪಾತ್ರೆಯಲ್ಲಿ ಎತ್ತುಗಳಿಗೆ ತಿನ್ನಿಸಲು ಹುರುಳಿಯನ್ನು ಬೇಯಿಸಿ ಇಟ್ಟಿದ್ದರು. ಅದನ್ನು ನೋಡಿ ಕಲ್ಯಾಣಿಗೆ ಅದೇನು ಅನಿಸಿತೋ. ಅವಳು ಒಂದು ಹಿಡಿ ಬೆಂದಹುರುಳಿಯನ್ನು ತನ್ನ ಬಾಯಿಗೆ ಹಾಕಿಕೊಂಡಳು. ಅದು ರುಚಿಯಾಗಿತ್ತು. ಅದನ್ನು ಇನ್ನೊಂದು ಹಿಡಿ ತೆಗೆದುಕೊಂಡು ಹಿಂದುಮುಂದು ನೋಡದೆ ಅಳುತ್ತಿದ್ದ ವಾಸುದೇವನ ಬಾಯಲ್ಲಿ ಹಾಕಿದಳು. ಮತ್ತೂ ಹಾಕಿದಳು. 1

ವಾಸುದೇವನಾದರೋ ಅದನ್ನು ತಿಂದು ನೀರುಕುಡಿದು, ತನ್ನ ಪ್ರಿಯವಾದ ತಿನಸೆಂಬಂತೆ ಬೆಂದಹುರುಳಿಯನ್ನು ತಿಂದು ಪುನಃ ನೀರನ್ನು ಕುಡಿದನು. ತೃಪ್ತಿ ಹೊಂದಿ, ಅಳುವನ್ನು ನಿಲ್ಲಿಸಿ, ಕಿಲಕಿಲನೆ ನಗತೊಡಗಿದನು.

ಅವಳು ಮಗುವನ್ನು ನೋಡಿ ನಿಟ್ಟುಸಿರುಬಿಟ್ಟು ತಾಯಿತಂದೆಗಳ ಆಗಮನವನ್ನೇ ಎದುರುನೋಡುತ್ತಾ ಕುಳಿತಳು,

---

1) ಕರ್ತವ್ಯಮೌಢ್ಯಮಭಿಪದ್ಯ ನಿರೂಪ್ಯ ಸಾ ತಂ
ಪ್ರಾಭೋಜಯತ್ಸಲು ಕುಲಿತ್ಥಕುಲಂ ಪ್ರಪಕ್ವಂ ।
ಶೀತಂ ಪಯೋಽಪಿ ಸತತಂ ಪರಿಪಾಯಯಂತೀ
ಯಸ್ಯೋಷ್ಣರೋಗಮತಿವೇಲಮಶಂಕತಾಂಬಾ ॥
ಮ ॥ ವಿ ॥ ಸರ್ಗ–2–ಶ್ಲೋಕ–38

ಸ್ವಲ್ಪ ಹೊತ್ತಿಗೆ ಭಟ್ಟರೂ ವೇದವತಿಯೂ ಬಂದರು. ಬಟ್ಟರ ತಲೆಯ ಮೇಲೆ ಹಣ್ಣಿನ ಅಡಿಕೆಯ ಮೂಟೆ ಇತ್ತು. ವೇದವತಿಯು ಒಂದು ಕುಕ್ಕೆಯಲ್ಲಿ ಒಗೆದ ಬಟ್ಟೆಗಳ ಗಂಟು ಕಟ್ಟಿಕೊಂಡು ಬಂದಿದ್ದಳು.

ಅವಳು ಹಜಾರದಲ್ಲಿ ಬಟ್ಟೆಯ ಗಂಟನ್ನು ಕೆಳಗಿಟ್ಟು ಅಲ್ಲೇ ಮಲಗಿದ್ದ ಮಗುವನ್ನು ಎತ್ತಿಕೊಂಡು ಮುದ್ದಾಡಲು ಮುಖವನ್ನು ಹತ್ತಿರಕ್ಕೆ ತೆಗೆದುಕೊಂಡಳು. ತುಟಿಗೆ ತಗುಲಿಕೊಂಡಿದ್ದ ಹುರುಳಿಯ ಕಾಳೊಂದು ಕಾಣಿಸಿತು ಮಗುವಿನ ಬಾಯಿಂದ ಹುರುಳಿವಾಸನೆ ಬರುತ್ತಿತು ; ಹೊಟ್ಟೆಯೂ ಊದಿತ್ತು. ವೇದವತಿಗೆ ಗಾಬರಿಯಾಯಿತು. ತಾನಿಲ್ಲದ ವೇಳೆಯಲ್ಲಿ ಕಲ್ಯಾಣಿಯು ಏನೋ ಅಚಾತುರ್ಯದ ಕಾರ್ಯ ನಡೆಸಿದ್ದಾಳೆ — ಎಂದುಕೊಂಡಳು. ಮಗುವಿನ ಬಾಯಿಂದ ಹೊರಡುತ್ತಿದ್ದ ಹುರುಳಿಯ ವಾಸನೆ, ಉಬ್ಬಿ ಗಟ್ಟಿಯಾಗಿದ್ದ ಮಗುವಿನ ಹೊಟ್ಟೆ ಇವುಗಳನ್ನು ನೋಡಿಯೇ ಅವಳು ಕಂಗೆಟ್ಟು ಹೌಹಾರಿದಳು. ಮಗಳನ್ನು ಹತ್ತಿರ ಕರೆದು,

"ಮಗುವಿಗೆ ಹಾಲು ಕೊಟ್ಟೆಯಾ ?"—ಎಂದು ವಿಚಾರಿಸಿದಳು.

ಈ ಪ್ರಶ್ನೆಗೆ ಕಲ್ಯಾಣಿಯು ಉತ್ತರ ಕೊಡದೆ, ತಲೆತಗ್ಗಿಸಿ ಮೌನವಾಗಿ ನಿಂತಳು.

"ಯಾಕೆ ? ಹಾಲು ಕುಡಿಸಲು ಹೇಳಿದ್ದು ಮರೆತುಬಿಟ್ಟೆಯಾ ?" ಎಂದು ತಾಯಿ ಗದರುವ ಧ್ವನಿಯಲ್ಲಿ ಕೇಳಿದಳು.

ಕಲ್ಯಾಣಿ, ತಾಯಿಯ ಆರ್ಭಟಕ್ಕೆ ಹೆದರಿ, ನಡೆದ ಸಂಗತಿಯನ್ನೆಲ್ಲಾ ಹೇಳಿಬಿಟ್ಟಳು. ತಾನು ಮಗುವು ಅಳುವುದನ್ನು ನಿಲ್ಲಿಸಲು ಬೆಂದ ಹುರುಳಿಯನ್ನು ಕೊಟ್ಟಿದ್ದನ್ನೂ, ತಣ್ಣೀರು ಕುಡಿಸಿದ್ದನ್ನೂ ಸಹಜವೆಂಬಂತೆ ಹೇಳಿದಳು.

ಇದನ್ನು ಕೇಳಿ ವೇದವತಿ ಹಾಗೂ ಭಟ್ಟರಿಗೆ ಎದೆಯೊಡೆಯಿತು.

ಆರುತಿಂಗಳ ಮಗುವಿಗೆ, ದೊಡ್ಡವರಿಗೂ ಜೀರ್ಣವಾಗುವುದು ಕಷ್ಟವಾದ ಚೆನ್ನಾಗಿ ಬೆಂದ ಹುರುಳಿಯನ್ನು ತಿನ್ನಲು ಕೊಡುವುದೆ ?[1]

---

1) ನೂನಂ ಪಿಪಾಸುರತಿರೋದಿತಿ ಹಂತ ಬಾಲೋ
ಧಿಙ್ಮಾಂ ದಯಾವಿರಹಿತಾಂ ಪರಕೃತ್ಯಸಕ್ತಾಂ ।

ಮುಂದಿನ ಪುಟಕ್ಕೆ

ಈ ಅರಿಯದ ಹುಡುಗಿಯ ವಶಕ್ಕೆ ಮಗುವನ್ನು ಒಪ್ಪಿಸಿ ಎಂತಹ ಅನ್ಯಾಯ ಮಾಡಿದೆವು—ಎಂದು ಅವರು ತಮ್ಮ ಅವಿವೇಕಕ್ಕಾಗಿ ಪರಿತಪಿಸಿದರು.

ಮಗುವು ಬೆಂದ ಹುರುಳಿ ತಿಂದು ಉಷ್ಣರೋಗದಿಂದ ಏನಾಗುವುದೋ ಎಂದು ಹೆದರಿದ್ದ ತಾಯಿತಂದೆಗಳ ಮುಖ ನೋಡಿ ಹಾಸ್ಯಮಾಡುವಂತೆ ಹಸುಳೆ ವಾಸುದೇವನು ಮಾತ್ರ ಕಿಲಕಿಲನೆ ನಗುತ್ತಿದ್ದನು.

ಮಗುವು ಹೀಗೆಯೇ ಆರೋಗ್ಯವಾಗಿ ಆಡಿಕೊಂಡಿದ್ದರೆ ದೇವರಿಗೆ ತಪ್ಪು ಕಾಣಿಕೆ ಸಲ್ಲಿಸುವುದಾಗಿ ಆ ತಾಯಿ ಹರಕೆ ಹೊತ್ತು ಕಾಣಿಕೆಯನ್ನು ತೆಗೆದು ಅರಶಿನ ಬಟ್ಟೆಯಲ್ಲಿ ಕಟ್ಟಿ ಮನೆಯ ದೇವರ ಬಳಿ ಇಟ್ಟಳು. ಮಗುವಿಗೆ ಯಾವ ವ್ಯಾಧಿಯೂ ಬಾರದಿರಲೆಂದು ಭಟ್ಟರು ಧನ್ವಂತರಿಮಂತ್ರ, ಶಾಂತಿ ಸೂಕ್ತಗಳನ್ನು ಜಪಿಸಿದರು.[1] ಹಿಂದೆ ಭೀಮಾವತಾರದಲ್ಲಿ ದುರ್ಯೋಧನನಿಂದ ಕೊಡಲ್ಪ

---

ಇತ್ಯಾಕುಲಾ ಗೃಹಮುಪೇತ್ಯ ತದಾ ಪ್ರಸನ್ನಂ
ಪೂರ್ಣೋದರಂ ಸುತಮುವೈಕ್ಷತ ವಿಪ್ರಪತ್ನೀ ||
ಪೃಷ್ಟ್ವಾವಗಮ್ಯ ಸಕಲಂಚ ತತಃ ಪ್ರವೃತ್ತಂ
ಯೂನಾಂ ಚ ದುಃಸಹಮಿದಂ ಶಿಶುನೋಪಭುಕ್ತಂ |
ಇತ್ಥಂ ವಿಚಿಂತ್ಯ ತನಯಾಂ ಬಹುಭರ್ತ್ಸಯಂತ್ಯಾ
ಭೀತಂ ತಯಾನುಕುಪಿತಂ ಮನಸಾನುತಪ್ತವ್ ||
ಮ॥ ವಿ॥ ಸರ್ಗ 2—ಶ್ಲೋಕ 39—40

1) ಆರೋಗ್ಯಶಾಲಿವಿ ತದಾ ಪಿತುರೇವ ಪುತ್ರೇ
ವಿಸ್ಮೇರತಾಮುಪಜಗಾಮ ಜನನ್ಯಮುಷ್ಯ |
ಯಸ್ಯ ತ್ರಿಲೋಕಜನನೀ ಜನನೀ ವಿಷ್ವೇಽಪಿ
ಪೀತೇನ ವಿಸ್ಮಯಮವಾಪ ಸಮಸ್ತಶಕ್ತೇಃ ||
ಸ್ತನ್ಯಂ ಮುಹುಃ ಕಿಲ ದದೌ ಜನನೀ ಗೃಹೀತ್ವಾ
ಕ್ಷೇಮಾಯ ತಂ ಕಿಲ ದಧಜ್ಜನಕೋ ಜಜಾಪ |
ಅನ್ಯೋ ಜನೋಽಪಿ ಕಿಲ ಲಾಲಯತಿ ಸ್ಮ ಕಿಂತು
ಸರ್ವೋಽಪಿ ತನ್ಮುಖಸುಹಾಸರಸಾಯನೋಕ್ತಃ ॥
ಮ || ವಿ|| ಸರ್ಗ 2—ಶ್ಲೋಕ 41—42

ಟ್ಟಿದ್ದ ವಿಷಮಿಶ್ರಿತ ಆಹಾರವನ್ನು ಉಂಡು ಜೀರ್ಣಿಸಿಕೊಂಡಿದ್ದ ಭೀಮಸೇನನು, ಈಗ ಮಧ್ವಾವತಾರದಲ್ಲಿ ಬೆಂದಹುರುಳಿಯನ್ನು ತಿಂದು ಅರಗಿಸಿಕೊಂಡಿದ್ದದ್ದು ಏನು ಆಶ್ಚರ್ಯ ?

ಆ ದಿನ ಕಳೆದು ವಾಸುದೇವನು ಮೊದಲಿನಂತೆ ರಾತ್ರಿ ನಿದ್ರೆ ಹೋಗಿ, ಮಾರನೆಯ ದಿನ ಬೆಳಗ್ಗೆ ಆಲಸ್ಯವಿಲ್ಲದೆ ಎಂದಿನಂತೆ ಆರೋಗ್ಯವಾಗಿ ಎಚ್ಚೆತ್ತಾಗಲೇ ವೇದವತಿಯ ಹೋಗಿದ್ದ ಜೀವ ಮೊದಲಿನಂತೆ ಆದದ್ದು.

ಅವಳಿಗೆ ಬೆಂದ ಹುರುಳಿ ತಿಂದು ನೀರುಕುಡಿದು, ಮಗು ಬದುಕಿ ಉಳಿಯುವುದಿಲ್ಲವೆಂದು ಅನಿಸಿತ್ತು.

ಆದರೆ ದೇವರ ದಯೆ ದೊಡ್ಡದು ! ವಾಸುದೇವನು ತಾನೊಬ್ಬ ಅಲೌಕಿಕಶಿಶುವೆಂಬುದನ್ನು ತಾಯಿಗೆ ಮನದಟ್ಟು ಮಾಡಿಕೊಡಲೆಂಬಂತೆ ಯುವಕರಿಗೂ ಜೀರ್ಣಿಸಿಕೊಳ್ಳಲು ಅಸಾಧ್ಯವಾದ ಹುರುಳಿ ತಿಂದು ಜೀರ್ಣಿಸಿಕೊಂಡಿದ್ದನು.

## ಹೊನ್ನಾದ ಹುಣಸೆಯ ಬೀಜ

ಈ ಘಟನೆ ನಡೆದು ಮೂರು ವರ್ಷಗಳಾದವು.

ಆ ತಾಯಿತಂದೆಗಳ ಸಮಾಧಾನದ ನಿಟ್ಟುಸಿರು ಬಿಡುತ್ತಿದ್ದಂತೆ ಇನ್ನೊಂದು ಘಟನೆ ನಡೆದು ವಾಸುದೇವನು ತಾನು ಒಬ್ಬ ಅತಿಮಾನುಷಶಿಶುವೆಂಬುದನ್ನು ಮಾತಾಪಿತೃಗಳಿಗೂ, ಇತರರಿಗೂ ತೋರಿಸಿದನು.

ಭಟ್ಟರು ಸ್ವಂತ ಸಾಗುವಳಿ ಮಾಡಿಸುತ್ತಿದ್ದರಷ್ಟೆ. ಭೂಮಿ ಉಳಿಸಲು ಅವರು ಇತರ ಒಕ್ಕಲುಮಕ್ಕಳಂತೆ ಕೋಣಗಳನ್ನು ಉಪಯೋಗಿಸದೆ ಎತ್ತುಗಳನ್ನೇ ಮನೆಯಲ್ಲಿ ಇರಿಸಿಕೊಂಡಿದ್ದರು. ಇದ್ದ ಎತ್ತುಗಳಲ್ಲಿ ಒಂದು ಮುದಿಯಾಗಿ ತೀರಿಕೊಂಡಿತ್ತು. ಭಟ್ಟರು ಅದರ ಜೊತೆಗೆ ನೆರೆ ಊರಿನ ಒಬ್ಬ ಧನಿಕನಾದ ಒಕ್ಕಲುಮಗನಿಂದ ಒಂದು ಎತ್ತನ್ನು ಐದು ವರಹಗಳಿಗೆ ಸಾಲವಾಗಿ ಕೊಂಡಿದ್ದರು.

ಈ ಹಣವನ್ನು ಸಾಲವಾಗಿ ಉಳಿಸಿಕೊಂಡೇ ಇದ್ದರು. ವಾಸುದೇವನು ಹುಟ್ಟಿದಾಗ ಮಾಡಿದ್ದ ಈ ಸಾಲ ಮಗುವಿಗೆ ಮೂರು ವರ್ಷ ತುಂಬುತ್ತಾ ಬಂದಿದ್ದರೂ ಇನ್ನೂ ಮರು ಪಾವತಿ ಮಾಡಲು ಸಾಧ್ಯವಾಗಿರಲಿಲ್ಲ, ಸಾಹು

ಕಾರನು ಮೇಲಿಂದಮೇಲೆ ಬಂದು ಭಟ್ಟರನ್ನು ಸಾಲದ ಹಣಕ್ಕಾಗಿ ಪೀಡಿಸುತ್ತಿದ್ದನು ಭಟ್ಟರಿಗೆ ಈಋಣದಿಂದ ತಾವು ಮುಕ್ತರಾಗಬೇಕೆಂದು ಅನಿಸಿದ್ದರೂ ಹಣದ ರೂಪದಲ್ಲಿ ಐದು ವರಹಗಳನ್ನು ಆ ಒಕ್ಕಲುಮಗನಿಗೆ ಹಿಂದಕ್ಕೆ ಕೊಡಲು ಸಾಧ್ಯವಾಗಿರಲಿಲ್ಲ.

ಭಟ್ಟರು, ಅವನು ಬಂದು ಹಣವನ್ನು ಕೇಳಿದಾಗಲೆಲ್ಲ ಇಂದು ನಾಳೆ ಕೊಡುತ್ತೇನೆ ಎಂದು ಹೇಳಿಕೊಂಡೇ ಬಂದಿದ್ದರು ; ಕಡೆಗೆ ಬೇಸತ್ತ ಎತ್ತಿನ ಒಡೆಯನು,

"ಸ್ವಾಮಿ, ನಿಮ್ಮ ಕೈಲಿ ಎತ್ತಿನ ಸಾಲದ ಹಣಕೊಡಲು ಸಾಧ್ಯವಿಲ್ಲವೆಂದು ಅನಿಸಿದರೆ ಹಾಗೆಂದು ಹೇಳಿಬಿಡಿ, ನಾನು ಹೊರಟುಹೋಗುತ್ತೇನೆ. ಹಾಗಿಲ್ಲದೆ ಇಂಥ ದಿನ ಕೊಡುವುದಾಗಿ ನಿರ್ಧರವಾಗಿ ಹೇಳಿಬಿಡಿ, ನಾನು ಹೊರಟುಹೋಗುತ್ತೇನೆ. ನನಗೆ ನಿಮ್ಮ ಬಳಿಗೆ ಬಂದು ನನ್ನ ಹಣಕ್ಕಾಗಿ ಕಾಡಿ ಬೇಡಿ ಸಾಕಾಗಿದೆ ! ನೀವು ಹಣ ಕೊಡಲಾಗದಿದ್ದರೆ ಎತ್ತನ್ನಾದರೂ ಹಿಂದಕ್ಕೆ ಕೊಟ್ಟುಬಿಡಿ !"

—ಎಂದು ಬೇಸರದಿಂದ ಹೇಳಿದ್ದನು.

ಈ ಮಾತು ಕೇಳಿ ಭಟ್ಟರಿಗೂ ಬೇಸರವಾಯಿತು. ಏನು ಮಾಡುವುದೆಂದು ತೋಚಲಿಲ್ಲ. ಕ್ರಯಕ್ಕೆ ಕೊಂಡಿದ್ದ ಎತ್ತನ್ನು ಮತ್ತೆ ಹಿಂದಕ್ಕೆ ಕೊಡುವುದು ಮರ್ಯಾದೆಯಲ್ಲ, ಹಾಗೆಂದು ಹಣವನ್ನು ಕೊಡಲು ಅವರ ಬಳಿ ಒಂದು ಗದ್ಯಾಣವೂ ಇರಲಿಲ್ಲ. ಆದರೂ ಧೈರ್ಯಮಾಡಿ ಹೇಳಿದರು :

"ನೋಡಪ್ಪ, ನಿನ್ನಿಂದ ಎತ್ತನ್ನು ನಾವು ಕ್ರಯಕ್ಕೆ ತೆಗೆದುಕೊಂಡಿದ್ದೇವೆ. ಅದನ್ನು ನಿನಗೆ ಹಿಂದಿರುಗಿಸುವುದು ನ್ಯಾಯವಲ್ಲ. ನೀನು ನಾಳೆ ಇಲ್ಲಿಗೆ ಬಂದರೆ, ಖಂಡಿತವಾಗಿಯೂ ಹಣ ಕೊಡುತ್ತೇನೆ. ನಿನ್ನ ಹಣವನ್ನು ಏನಾದರೂ ಮಾಡಿ ನಿನಗೆ ತಲುಪಿಸುತ್ತೇನೆ"

—ಎಂದು ಹೇಳಿ ಕಳುಹಿಸಿಕೊಟ್ಟು ಭಟ್ಟರು ತಲೆಯಮೇಲೆ ಕೈಹೊತ್ತು ಕುಳಿತರು.

ಈ ಸಮಯದಲ್ಲಿ ವೇದವತಿ ಅವರನ್ನು ಊಟಕ್ಕೆ ಎಬ್ಬಿಸಿದಳು.

"ಈ ಹಣವನ್ನು ತೀರಿಸದೆ ನಾನು ಊಟ ಮಾಡುವುದಿಲ್ಲ" ಎಂದು ಹೇಳಿ, ತನ್ನಲ್ಲಿ ಗೌರವವಿಟ್ಟಿದ್ದ ಮೂಡಂತಿಲ್ಲಾಯ ಮನೆಯವರನ್ನು

ಈ ಕಷ್ಟ ಕಾಲದಲ್ಲಿ ಸಹಾಯಮಾಡಬೇಕೆಂದು ಕೋರಲು ಭಟ್ಟರು ಎದ್ದು ಹೊರಟೇಬಿಟ್ಟರು.

ವೇದವತಿಯು ಬಾಲಕ ವಾಸುದೇವನನ್ನು ತಬ್ಬಿಕೊಂಡು ಕಂಬನಿ ಮಿಡಿಯುತ್ತಾ ಪತಿ ಹೊರಟುಹೋದ ದಿಕ್ಕನ್ನೇ ನೋಡುತ್ತಾ ಬಹಳ ಹೊತ್ತು ನಿಂತಿದ್ದಳು. ಹಸಿದ ಮಕ್ಕಳಿಗೆ ಉಣಬಡಿಸಲು ಅವರಿಬ್ಬರನ್ನೂ ಅಡಿಗೆ ಮನೆಗೆ ಕರೆದುಕೊಂಡು ಹೋದಳು. ಅವರ ಊಟ ಮುಗಿದ ಮೇಲೆ ಎತ್ತುಗಳನ್ನು ಮೇಯಲು ಪದ್ಧತಿಯಂತೆ ಬಯಲಿಗೆ ಬಿಟ್ಟಳು.

ಸ್ವಲ್ಪ ಸಮಯ ಕಳೆಯಿತು.

ಮನೆಗೆಲಸದಲ್ಲಿ ತೊಡಗಿದ್ದ ವೇದವತಿಗಾಗಲೀ, ಕಲ್ಯಾಣಿಗಾಗಲೀ ವಾಸುದೇವನ ಮೇಲೆ ಗಮನವಿರಲಿಲ್ಲ. ಸಂಜೆ ಮಗುವೆಲ್ಲೆಂದು ನೋಡಿ ಕೊಂಡಾಗ ಅವನು ಮನೆಯಲ್ಲಿ ಇರಲೇ ಇಲ್ಲ.

ಅವನು ಎಲ್ಲಿ ಹೋದನೆಂದು ಸುತ್ತಮುತ್ತಲೂ ಇದ್ದ ಅವರಿವರನ್ನು ವಿಚಾರಿಸಿದಾಗ, ನೋಡಿದವರೊಬ್ಬರು ಹೇಳಿದರು.

"ನಿಮ್ಮ ಮಾಣಿ ಎತ್ತಿನ ಬಾಲ ಹಿಡಿದುಕೊಂಡು ಕಾಡಿನ ಕಡೆ ಹೊರಟಿದ್ದ"

ಅವರು ಮಗುವಿಗಾಗಿ ಕಾಡುಮೇಡುಗಳನ್ನೆಲ್ಲಾ ಹುಡುಕಿದರು. ಎಲ್ಲೂ ಅವನು ಕಾಣಿಸಲಿಲ್ಲ. ಅಷ್ಟರಲ್ಲಿ ಮೂಡಂತಿಲ್ಲಾಯರಿಂದ ಐದು ವರಹ ಹಣವನ್ನು ಪಡೆದು ಮನೆಗೆ ಬಂದ ಮಧ್ಯಗೇಹಭಟ್ಟರಿಗೆ ಈ ವಾರ್ತೆ ತಿಳಿಯಿತು. ಇದನ್ನು ಕೇಳಿ ಅವರಿಗೆ ಜಂಘಾಬಲವೇ ಉಡುಗಿತು. ಅವರು ಹೌಹಾರಿ ತಲೆಯ ಮೇಲೆ ಕೈಹೊತ್ತು ಕುಳಿತರು. ಮುಖ ನಿಸ್ತೇಜ ವಾಯಿತು. ಈಗ ಮಗುವನ್ನು ಎಲ್ಲಿ ಹುಡುಕುವುದು ? ಮಗುವು ಏನಾದ ನೆಂದು ಯಾರನ್ನು ಕೇಳುವುದು ? ಇದೊಂದೂ ತಿಳಿಯದೆ ಅವರು ದಿಙ್ಮೂಢ ರಾಗಿ ಕುಳಿತರು.

ಅಷ್ಟರಲ್ಲಿ ಹಗಲು ಕಳೆದು ರಾತ್ರಿಯಾಯಿತು.

ಮೇಯಲು ಹೋಗಿದ್ದ ಊರಿನ ದನಗಳೆಲ್ಲವೂ ಮನೆಗೆ ಹಿಂದಿರುಗಿ ದ್ದವು. ಅವುಗಳೊಂದಿಗೆ ಎತ್ತಿನ ಬಾಲ ಹಿಡಿದುಕೊಂಡು ಮೂರು ನಾಲ್ಕು

ವರ್ಷದ ಬಾಲಕ ವಾಸುದೇವನೂ ಸಹ ಕುಣಿಯುತ್ತಾ ಕುಪ್ಪಳಿಸುತ್ತಾ ಮನೆಗೆ ಬಂದನು.

ಸುರಕ್ಷಿತವಾಗಿದ್ದ ಅವನನ್ನು ನೋಡಿದ ಮಾತಾಪಿತೃಗಳು ಓಡಿಬಂದು ಎತ್ತಿಕೊಂಡು ಮುದ್ದಾಡಿದರು.

"ಮಗು, ಎಲ್ಲಿಗೆ ಹೋಗಿದ್ದೀ ? ಇಷ್ಟು ಹೊತ್ತು ಏನು ಮಾಡಿದೀ ?" ಎಂದು ಕೇಳಿದರು. ಅವನು ತನ್ನ ಬಾಲ ಭಾಷೆಯಲ್ಲಿ ಏನೇನೋ ಹೇಳಿದ. ದಿಕ್ಕನ್ನು ತೋರಿಸಿ ಏನೇನೊ ತೊದಲಿದ. ಇದಾವುದೂ ಭಟ್ಟರಿಗಾಗಲೀ, ವೇದವತಿಗಾಗಲೀ ಅರ್ಥವಾಗಲಿಲ್ಲ.

ಕಾಣದಾಗಿದ್ದ ಮಗನು ಸುಖವಾಗಿ ಮನೆಗೆ ಹಿಂದಕ್ಕೆ ಬಂದನಲ್ಲ, ಅವರಿಗೆ ಅಷ್ಟೇ ಸಾಕಿತ್ತು ! ಅವರು ಅವನಿಗೆ ದೃಷ್ಟಿ ನಿವಾಳಿಸಿ ಮನೆಯೊಳಗೆ ಎತ್ತಿಕೊಂಡು ಹೋಗಿ, ಊಟ ಮಾಡಿಸಿ ಮಲಗಿಸಿದರು.

ಆ ರಾತ್ರಿ ಯಾವುದೊಂದು ಘಟನೆಯೂ ನಡೆಯಲಿಲ್ಲವೆಂಬಂತೆ ಮಗು ವಾಸುದೇವನು ನಿಶ್ಚಿಂತೆಯಿಂದ ಮಲಗಿ ನಿದ್ರಿಸಿದನು.

ಮಾರನೆಯದಿನ ಭಟ್ಟರೇ ಎತ್ತಿನ ಕ್ರಯದ ಹಣ ತೆಗೆದುಕೊಂಡು ಎತ್ತಿನ ಒಡೆಯನ ಊರಿಗೆ ಹೋದರು.

ಭಟ್ಟರನ್ನು ಅವನು ಗೌರವದಿಂದಲೇ ಸ್ವಾಗತಿಸಿ, ಮಂದಲಿಗೆ ಮೇಲೆ ಕುಳಿತುಕೊಳ್ಳಲು ಪ್ರಾರ್ಥಿಸಿದನು. ಅನಂತರ ಬ್ರಾಹ್ಮಣರ ಮನೆಯಿಂದ ನೀರು ತರಿಸಿ ಕೊಟ್ಟು, ಸೀಯಾಳವನ್ನು ಕೆತ್ತಿಕೊಟ್ಟು ಉಪಚರಿಸಿದನು.

ಅವನು ಭಟ್ಟರ ಆಗಮನವನ್ನು ನಿರೀಕ್ಷಿಸುತ್ತಿದ್ದನೋ ಎಂಬಂತೆ, ತುಂಬಾ ಸಂತೋಷದಲ್ಲಿದ್ದನು.

ಭಟ್ಟರು ಅವನಿಗೆ ತಾವು ಬಂದ ಕಾರಣ ತಿಳಿಸಿ, ಕೊಡಬೇಕಾಗಿದ್ದ ಐದು ವರಹಗಳನ್ನು ತಮ್ಮ ಸೊಂಟದಿಂದ ತೆಗೆದು ಅವನ ಮುಂದಿಟ್ಟರು.

"ನಿಮ್ಮ ಹಣವನ್ನು ಹಿಂದಕ್ಕೆ ವಾಪತಿ ಮಾಡಲು ದೀರ್ಘಕಾಲ ತೆಗೆದುಕೊಂಡೆ, ನನ್ನಿಂದಾದ ತೊಂದರೆಯನ್ನು ಕ್ಷಮಿಸಬೇಕು"— ಎಂದರು.

"ನಿಮ್ಮ ಹಣ ನನಗೆ ನಿನ್ನೆಯೇ ಮುಟ್ಟಿತಲ್ಲಾ 1 !"ಮುಗುಳು ನಗುತ್ತಾ —ಅಂದ ಆ ಒಕ್ಕಲುಮಗ.

"ಯಾರು ಮುಟ್ಟಿಸಿದರು ?"—ಆಚ್ಚರಿಯಿಂದ ಕೇಳಿದರು ಭಟ್ಟರು.

"ಭಟ್ಟರೇ, ಇದೇನು ಹೀಗೆ ಕೇಳುತ್ತೀರಿ ? ನೀವು ನಿಮ್ಮ ಮಾಣಿಯ ಕೈಲಿ ನಿನ್ನೆಯೇ ಹಣ ಕಳುಹಿಸಿಕೊಡಲಿಲ್ಲವೇ ? ಜೊತೆಗೆ ಎತ್ತನ್ನೂ ಕಾವಲಾಗಿ ಕಳುಹಿಸಿರಲಿಲ್ಲವೆ ? ನಿಮ್ಮ ಮಾಣಿ ಎತ್ತಿನ ಬಾಲ ಹಿಡಿದುಕೊಂಡು ಒಬ್ಬನೇ ಇಲ್ಲಿಗೆ ಬಂದ. ನಾನು ಆಶ್ಚರ್ಯದಿಂದ ಮಗುವಿನ ಬಳಿಗೆ ಹೋಗಿ ಮಾತ ನಾಡಿಸಿದೆ. ಆವನು ಅಲ್ಲಿ ಬಿದ್ದಿದ್ದ ಐದು ಹುಣಸೇಬೀಜಗಳನ್ನು ನನ್ನ ಕೈಸೇರಿ ಸುತ್ತಲೇ ಅವು ನನಗೆ ಬರಬೇಕಾಗಿದ್ದ ಐದು ವರಹಗಳಾಗಬೇಕೆ ? ನನಗೆ ಅಚ್ಚರಿ ಯಾಯಿತು. ಮಗುವನ್ನು ಒಳಗೆ ಕರೆದು ಉಪಚರಿಸಬೇಕೆಂದಿರುವುದ ರೊಳಗೇ ಅವನು ಎತ್ತಿನ ಬಾಲ ಹಿಡಿಮಕೊಂಡು ಕಣ್ಮರೆಯಾಗಿಬಿಟ್ಟ ! ಈ ಸಂಗತಿಯನ್ನು ನಿಮಗೆ ತಿಳಿಸಲು ನಾವೇ ಈ ದಿನ ನಿಮ್ಮಲ್ಲಿಗೆ ಬರಬೇಕೆಂದಿದ್ದೆ. ಆದರೆ ನೀವೇ ಬಂದಿರಿ. ಸಂತೋಷವಾಯಿತು"—ಎಂದು ನಡೆದ ಸಂಗತಿ ಯನ್ನೆಲ್ಲಾ ಹೇಳಿದನು.

ಇದನ್ನು ಕೇಳಿದ ಮಧ್ಯಗೇಹಭಟ್ಟರಿಗೆ ತಮ್ಮ ಕಿವಿಯನ್ನು ತಾವೇ ನಂಬಲಾಗಲಿಲ್ಲ. ತಮ್ಮ ಮಾನ ಉಳಿಸಲು ತಮ್ಮ ಚಿರಂಜೀವಿ ಮಾಡಿದ್ದ ಸಾಹಸ—ಹುಣಸೇ ಬೀಜವನ್ನು ಚಿನ್ನದ ನಾಣ್ಯವಾಗಿ ಪರಿವರ್ತಿಸಿದ್ದ ಪವಾಡ

---

1) ಲೀಲಾವಸಾನಸಮಯೇ ಸಹಸಾ ಕದಾಚಿ
ದಾರ್ಯೋಮುನಾಭವಹೃತಿಂ ಪ್ರತಿಚೋದ್ಯಮಾನಃ ।
ರೋದ್ಧೈಷ ನೋಽಸ್ತಿ ಧನಿಕೋ ವೃಷವಿಕ್ರಯೀತಿ
ಪ್ರೋವಾಚ ನಂದನಮುಖೇಂದುಮವೇಕ್ಷ್ಯ ಮಂದಮ್ ॥
ಲೀಲಾಕರೇಣ ಸ ಕರೇಣ ಸುಕೋಮಲೇನ
ಬೀಜಾಂತರಾಣಿ ಕಿಲ ಕಾನಿಚಿದಾಶು ತಸ್ಮೈ
ಸ್ಮಿತ್ವಾರ್ಭಕೋಭಿಮತನಿಷ್ಕಪದೇ ಯದಾ
ದತ್ತ ತಾನಿ ಧನಿಕೋ ಬಹುಮಾನಪೂರ್ವಮ್ ॥
ಮ॥ ವಿ॥ ಸರ್ಗ—2 ಶ್ಲೋಕ 50-51

—ಕೇಳಿ ಚಕಿತರಾದರು. ಮಗು ವಾಸುದೇವನು ತಮ್ಮ ಮಗನೆಂದು ತಿಳಿಯುವುದು ತಮ್ಮ ಅಜ್ಞಾನ; ಅವನು ಲೋಕೋದ್ಧಾರ ಮಾಡಲು ಅವತರಿಸಿರುವ ಅಲೌಕಿಕವ್ಯಕ್ತಿ ಎಂದು ಅವನನ್ನು ಕೊಂಡಾಡುತ್ತಾ ತನ್ಮನಸ್ಕರಾಗಿಯೇ ತಮ್ಮ ಊರಿಗೆ ಹಿಂದಿರುಗಿದರು.

ಇದನ್ನೆಲ್ಲಾ ತಮ್ಮ ಪತ್ನಿ ವೇದವತಿಗೆ ಹೇಳಿದಾಕ್ಷಣ ಆಕೆಯು ಮನಮ್ಮಕಳಾದಳು. ಅವಳು ಊಟಮಾಡಿ, ನಿಶ್ಚಿಂತೆಯಿಂದ ಮಲಗಿದ್ದ ಮಗುವಿನ ಮುಗ್ಧ ಮುಖ ನೋಡಿ, ಅವನನ್ನು ಆಶೀರ್ವದಿಸಿ ದೇವರ ಕೋಣೆಗೆ ಹೋಗಿ, "ಸ್ವಾಮಿ, ಈ ಮಗು ನನ್ನದಲ್ಲ ನಿನ್ನದು" ಎಂದಳು.

## ಕಾಡಿನ ಒಡೆಯನೇ ನನ್ನ ಸ್ನೇಹಿತ

ವಾಸುದೇವನಿಗೆ ಈಗ ನಾಲ್ಕು ತುಂಬಿ ಐದನೆಯ ವರ್ಷ ಆರಂಭವಾಗಿತ್ತು. ಅವನು ಈ ವೇಳೆಗಾಗಲೇ ತನ್ನ ಅಲೌಕಿಕ ನಡವಳಿಕೆಗಳಿಂದ ತಾನೊಬ್ಬ ಅತಿಮಾನವವ್ಯಕ್ತಿ ಎಂಬುದನ್ನು ತಂದೆತಾಯಿಗಳಿಗೂ, ಸುತ್ತಮುತ್ತಿಲಿನ ಜನರಿಗೂ ಪವಾಡಗಳ ಮೂಲಕ ಮನವರಿಕೆ ಮಾಡಿಕೊಟ್ಟಿದ್ದನು.

ಕೇವಲ ಇಷ್ಟು ಚಿಕ್ಕ ಪ್ರಾಯದಲ್ಲಿಯೇ ವಾಸುದೇವನು ಅನೇಕ ಪವಾಡಗಳನ್ನೂ ಅತಿಮಾನುಷ ಲೀಲೆಗಳನ್ನೂ ತೋರಿಸಿದ್ದನು.

ರಾಮಾವತಾರದಲ್ಲಿ ಹನುಮಂತನಾಗಿ ಅವತರಿಸಿದ್ದಾಗ, ಮುಖ್ಯಪ್ರಾಣನು, ತಾಯಿಯಾದ ಅಂಜನಾದೇವಿಗರ್ಭದಿಂದ ಹೊರಗೆಬಂದಕೂಡಲೇ ಆಕಾಶದಲ್ಲಿ ಪ್ರಕಾಶಿಸುತ್ತಿದ್ದ ಸೂರ್ಯನನ್ನು ನೋಡಿ ಹಣ್ಣೆಂದು ಭ್ರಮಿಸಿ, ಅದನ್ನು ತಿನ್ನಲು ನಭೋಮಂಡಲಕ್ಕೆ ಹಾರಿ ಸೂರ್ಯನಿಂದ ಸುಡಲ್ಪಟ್ಟು ಸೊಟ್ಟಮೂತಿಯವನಾದನೆಂದು ರಾಮಾಯಣದಲ್ಲಿ ವಿವರಗಳಿವೆ. ಹನುಮ ಎಂಬ ಶಬ್ದಕ್ಕೆ ವಿಸ್ತಾರಗಲ್ಲವುಳ್ಳವನೆಂದು ಅರ್ಥವಿದೆ. ಆದರೆ ಹನು ಶಬ್ದಕ್ಕೆ ಜ್ಞಾನ ಅಥವಾ ಬುದ್ಧಿ ಎಂಬ ಅರ್ಥವೂ ಇದೆ ಎಂಬುದನ್ನು ಮರೆಯಬಾರದು. ಹನುಮಂತನು ಅಸಾಧಾರಣ ಬುದ್ಧಿವಂತ ಆಗಿದ್ದುದರಿಂದಲೇ ಅವನು ಶ್ರೀರಾಮನ ಸೇವೆಯಮೂಲಕ ಚಿರಂಜೀವತ್ವವನ್ನೂ, ವಜ್ರಕಾಯತ್ವವನ್ನೂ ಪಡೆದನು. ದ್ವಾಪರದಲ್ಲಿ ಭೀಮಸೇನನು ಕುಂತಿಯ ಮಗನಾಗಿ ಅವತರಿಸಿದ್ದನಷ್ಟೆ, ಅವನು ಕುಂತಿಯ ತೋಳಿನಲ್ಲಿ ಶಿಶುವಾಗಿರು

ವಾಗಲೇ ಅತಿಮಾನುಷಲೀಲೆಯನ್ನು ತೋರಿಸಿದ್ದನು. ಕುಂತೀದೇವಿಯಲ್ಲಿ ಹುಟ್ಟಿದ ಕೂಡಲೇ ಅವಳ ಸೊಂಟದಲ್ಲಿದ್ದ ಭೀಮಸೇನನು ಆಕಸ್ಮಾತ್ ಜಾರಿ ನೆಲಕ್ಕೆ ಬಿದ್ದನಂತೆ. ಅವನು ಬಿದ್ದ ಪೆಟ್ಟಿಗೆ ಅಲ್ಲಿದ್ದ ಪರ್ವತಶಿಖರಗಳು ಶತಶಃ ಚೂರಾದವಂತೆ. ಆ ಪರ್ವತಕ್ಕೆ ಶತಶೃಂಗಪರ್ವತವೆಂದೇ ಹೆಸರಾಯಿತು.

ಇಂಥ ಅತಿಮಾನುಷಶಕ್ತಿಯುಳ್ಳ ವಾಯುದೇವನು ವಾಸುದೇವನಾಗಿ ಅವತರಿಸಿದಾಗ ತನ್ನ ಸರ್ವಜ್ಞತ್ವವನ್ನು ತೋರಿಸಿಕೊಳ್ಳದೆ ಸಾಮಾನ್ಯ ಶಿಶುವೆಂಬಂತೆ ನಡೆದುಕೊಂಡಿದ್ದನು: ಆದರೂ ಆರುತಿಂಗಳ ಮಗು ಹುರುಳಿಯನ್ನು ತಿಂದು ಜೀರ್ಣಿಸಿಕೊಂಡುದು, ಹುಣಸೆಯ ಬೀಜವನ್ನು ಹೊನ್ನಾಗಿ ಪರಿವರ್ತಿಸಿದುದು—ಅವನ ಅಸಾಧಾರಣ ಶಕ್ತಿ ಸಾಮರ್ಥ್ಯಗಳ ದ್ಯೋತಕವಾಗಿದ್ದವು

ಈಗ ತನ್ನ ಸರ್ವಜ್ಞತ್ವವನ್ನೂ, ಭಗವಂತನಲ್ಲಿ ಇಟ್ಟಿದ್ದ ಅನನ್ಯ ಭಕ್ತಿಯನ್ನೂ ಲೋಕಕ್ಕೆ ತೋರಿಸಲೆಂಬಂತೆ ವಾಸುದೇವನು ಮನೆಯಿಂದ ವಿಚಿತ್ರ ರೀತಿಯಲ್ಲಿ ಕಣ್ಮರೆಯಾಗಿ ಮೂರು ದಿನಗಳಾದಮೇಲೆ ಉಡುಪಿ ಕ್ಷೇತ್ರದಲ್ಲಿ ತಾಯಿ ತಂದೆಗಳಿಗೆ ಕಾಣಿಸಿಕೊಂಡಿದ್ದನು.1

---

1) ಅನವಲೋಕ್ಯ ಸುತಂ ಸುತವತ್ಸಲೋಸೌ
ಮೃಗಯತಿಸ್ಮ ಮಹೀಸುರಪುಂಗವಃ ।
ಮುಹುರಪೃಚ್ಛದಮುಷ್ಯಗತಿಂ ನರಾನ್
ಪಥಿ ಪಥಿ ಪ್ರಗತೋSನುಪದಂ ದ್ರುತಂ ॥
ಅಯಿ ಸುತೇದಮುದಾಹರ ತತ್ತ್ವತೋ
ನನು ಸಮಾಗತವಾನಸಿ ಸಾಂಪ್ರತಂ ।
ಸ್ವಜನತಾರಹಿತಸ್ಸ ತು ಕೋSತ್ರ ತೇ
ಸಹಚರೋSರ್ಭಕ ದೀರ್ಘತಮೋ ಪಥಿ ॥
ಜನಕವಾಚಮಿಮಾಮವಧಾರಯನ್
ಕಲಮುದಾಹರದಂಬುರುಹೇಕ್ಷಣಃ ।

ಮುಂದಿನ ಪುಟಕ್ಕೆ

ಈ ಘಟನೆ ನಡೆದುದು ಹೀಗೆ :

ಒಮ್ಮೆ ಮಧ್ಯಗೇಹಭಟ್ಟರ ನೆಂಟರ ಮನೆಯಲ್ಲಿ ವಿವಾಹವೊಂದು ನಡೆಯುವುದಿತ್ತು. ಅವರ ಜ್ಞಾತಿಯೊಬ್ಬನು ನೇಯಂಪಳ್ಳಿ (ಘೃತವಲ್ಯಪಿ) ಎಂಬಲ್ಲಿ ವಾಸವಾಗಿದ್ದನು. ಬೆಳ್ಳೆಯಿಂದ ಈ ಹಳ್ಳಿಗೆ ನಾಲ್ಕೈದು ಮೈಲಿ ದೂರ. ಅವರ ಮನೆಯಲ್ಲಿ ಅಪರೂಪಕ್ಕೆ ಮದುವೆ ನಡೆಯುವುದಿತ್ತು. ಇದಕ್ಕೆ ಭಟ್ಟದಂಪತಿಗಳಿಗೆ ಆಹ್ವಾನ ಕೊಟ್ಟು, ಬರಲೇಬೇಕೆಂದು ಒತ್ತಾಯದ ಕರೆ ನೀಡಿ ಹೋಗಿದ್ದನು. ಬೇರೆ ದಾರಿ ಕಾಣದೆ ಮಧ್ಯಗೇಹಭಟ್ಟರು ಪತ್ನಿ ವೇದವತಿ ಹಾಗೂ ಮಕ್ಕಳೊಡನೆ ಅಲ್ಲಿಗೆ ಹೋಗಲು ತೀರ್ಮಾನಿಸಿದರು.

ಇದು, ಮನೆಯನ್ನು ಬಿಟ್ಟು ಬೇರೆ ಊರಿಗೆ ಅಷ್ಟಾಗಿ ಹೋಗದಿದ್ದ ಮಕ್ಕಳ ಪಾಲಿಗೆ, ಒಂದು ಅಪರೂಪದ ಅನುಭವ. ಹೊಸ ಬಟ್ಟೆ ತೊಟ್ಟು, ಸಂತೋಷ ಸಡಗರಗಳಿಂದ ಎಲ್ಲರೂ ಮದುವೆಮನೆಗೆ ಹೋಗಿ, ಅವರ ಸಂತೋಷದಲ್ಲಿ ಪಾಲುಗೊಂಡರು

ಮದುವೆಯ ಕಾರ್ಯಗಳೆಲ್ಲವೂ ಮುಗಿದು, ಬಂದ ನೆಂಟರು ಉಡುಗೊರೆಗಳನ್ನು ಪಡೆದು ತಮ್ಮ ತಮ್ಮ ಊರುಗಳಿಗೆ ಹಿಂತಿರುಗಿದರು. ಅದರಂತೆ ಭಟ್ಟ ದಂಪತಿಗಳೂ ಬೆಳ್ಳೆಗೆ ಹಿಂತಿರುಗಲು ಪ್ರಯಾಣದ ಸಿದ್ಧತೆ ಮಾಡಿಕೊಂಡರು.

ಅವರು ಆ ದಿನ ಬೆಳಿಗ್ಗೆ ನೇಯಂಪಳ್ಳಿಯಿಂದ ತಮ್ಮ ಊರಿಗೆ ಹೊರಡಬೇಕೆಂದಿರುವಾಗ ಅವರಿಗೆ ಬರಸಿಡಿಲಿನಂತಹ ವರ್ತಮಾನ ಬಂದೆರಗಿತು.

---

ಸ್ವಪದಮಾವ್ರಜತೋ ವ್ರಜತೋಽಸ್ಯತೋ
ನನು ಸಖಾ ಮಮ ಕಾನನಗೋ ವಿಭುಃ ॥

ಮ ॥ ವಿ ॥ ಸರ್ಗ 3-ಶ್ಲೋಕ 8-12

ಬೆಳಿಗ್ಗೆ ಸ್ನಾನಮಾಡಿ ತಿಂಡಿ ತಿಂದು ಹೊರಗೆ ಹೊರಟ ಬಾಲಕ ವಾಸುದೇವನು ಎಷ್ಟು ಹೊತ್ತಾದರೂ ಮನೆಗೆ 1 ಹಿಂದಕ್ಕೆ ಬಂದಿರಲಿಲ್ಲ; ಬಹುಶಃ ಆವನು ಎಲ್ಲಾದರೂ ಬಚ್ಚಿಟ್ಟುಕೊಂಡು ತಮ್ಮನ್ನು ಆಟವಾಡಿಸುತ್ತಿರಬಹುದೆಂದು ಆ ದಂಪತಿಗಳು ಅವನಿಗಾಗಿ ಊರಿನ ಯಾವ ಸ್ಥಳವನ್ನೂ ಬಿಡದೆ ಹುಡುಕಿದರು. ಎಲ್ಲೂ ವಾಸುದೇವನನ್ನು ಕಾಣದೆ ನಿರಾಶರಾಗಿ ಹಿಂದಿರುಗಿ ಬಂದರು.

ಯಾರನ್ನು ಕೇಳಿದರೂ ತಾವು ಮಗುವನ್ನು ಕಾಣಲಿಲ್ಲವೆಂದು ಉತ್ತರ ಕೊಟ್ಟರು. ಊರಿಗೆ ಹೊರಟಿದ್ದ ಯಾರಾದರೂ ನೆಂಟರೊಡನೆ ಅವನು ಹಿಂಬಾಲಿಸಿ ಹೋಗಿರಬಹುದೇ ? ಎಂದು ಊಹಿಸಿ ಅವರು ಸಮೀಪದ

---

1) ಸ್ವಜನತಾಪಗಮಾಗಮಾಸಂಗಮಾಪ್ರತಿಸಭಾಜಿತ
ಪೂರ್ವಕಸಂಭ್ರಮೋ ।
ಅವಿದುಷೀ ಜನನೀತಿ ಸ ಬಾಲಕಃ ಶರಣತೋರಣತೋ
ನಿರಗಾನ್ನೃಭಿಃ ॥
ಕ್ವನು ಯಿಯಾಸತಿ ತಾತ ನ ಸಾಂಪ್ರತಂ ಸ್ವಜನಸಂತ್ಯಜನಂ
ತವ ಸಾಂಪ್ರತಮ್ ।
ಇತಿ ವಿಭುಃ ಪಥಿಕೈರುದಿತೋ ವ್ರಜನ್ ಸ್ಮಿತಮನಾ
ಕುಲಮುತ್ತರಮಾತನೋತ್ ॥
ತ್ವರಿತಮೇತ್ಯ ಸ ಕಾನನದೇವತಾಸದನಮತ್ರ ನನಾಮ
ರಮಾಪತಿಂ ।
ಅಪಿ ತತಃ ಪ್ರಗತೋ ಲಘುನಾರಿಕೇಲ್ಯುಪಪದಾಂತರ
ಸದ್ಮಗತಂ ಚ ತಂ ॥
ನಲಿನನಾಭನಿಭಾಲನಸಂಮುದಾಗಮವಿಕಸ್ವರ
ಭಾಸ್ವರಲೋಚನಃ ।
ಜನಮನೋನಯನಾಂಬುಜಭಾಸ್ಕರೋ
ರಜತಪೀಠಪುರಂ ಪ್ರಯಯಾವಸೌ ॥

ಮ ॥ ವಿ ॥ ಸರ್ಗ-3 — ಶ್ಲೋಕ 3-5

ನೆಂಟರ ಮನೆಗಳಿಗೆಲ್ಲಾ ಹೋಗಿ ಬಂದರು. ಯಾರನ್ನು ಕೇಳಿದರೂ ತಾವು ವಾಸುದೇವನನ್ನು ನೋಡಲಿಲ್ಲವೆಂದೇ ಉತ್ತರ ಕೊಟ್ಟರು.

ಇದರಿಂದ ಬೇಸತ್ತು ನಿರಾಶೆ ದುಃಖಿಗಳಲ್ಲಿ ಮುಳಗಿ ಮಧ್ಯಗೇಹ ಭಟ್ಟ–ವೇದವತಿಯರು ತಮ್ಮ ಸಮಸ್ತವನ್ನೂ ಕಳೆದುಕೊಂಡು ನಿರ್ಭಾಗ್ಯರಾದವರಂತೆ, ಬರಿಗೈಯಲ್ಲಿ ಬೆಳ್ಳೆಗೆ ಹಿಂದಿರುಗಿದರು.

ವಾಸುದೇವನು ಕಣ್ಮರೆಯಾಗಿ ಎರಡು ದಿನಗಳು ಕಳೆದವು. ಅವನ ಬಗೆಗೆ ಯಾರಿಂದಲೂ ಯಾವುದೇ ವರ್ತಮಾನ ಬರಲಿಲ್ಲ. ಅವನನ್ನು ನೋಡಿದ ಬಗೆಗೆ ಯಾರಿಂದಲೂ ಯಾವುದೇ ಸುದ್ದಿ ಬರಲಿಲ್ಲ.

ಮೂರನೆಯ ದಿನ ದಾರಿಹೋಕನೊಬ್ಬನಿಂದ ಸುದ್ದಿ ತಿಳಿಯಿತು. ಸುಮಾರು ಐದಾರು ವರ್ಷ ಪ್ರಾಯದ ಒಬ್ಬ ಹುಡುಗನು ನಿಡಂಬೂರಿನ ಶಂಕರನಾರಾಯಣದೇವಾಲಯದ ಬಳಿ ಒಂಟಿಯಾಗಿ ತಿರುಗತ್ತಿದ್ದುದನ್ನು ತಾನು ನೋಡಿರುವುದಾಗಿ ತಿಳಿಸಿದನು.

ಬೆಳ್ಳೆಗೂ ನಿಡಂಬೂರಿಗೂ ಹತ್ತಾರು ಮೈಲಿ ದೂರವಿತ್ತು. ಅದು ಸಮುದ್ರತೀರದಲ್ಲಿದ್ದ ಊರು. ಉಡುಪಿಯ ಬಲ್ಲಾಳರಿಗೆ ಸೇರಿದ್ದ ಒಂದು ಗ್ರಾಮ. ಇಲ್ಲಿನ ದೇವನಾದ ಶಂಕರನಾರಾಯಣನನ್ನು ಕಾನನದೇವನೆಂದೂ, ಕ್ರೋಡದ ಅಂದರೆ ಕೊಡವೂರ ದುರ್ಗೆಯನ್ನು ಕಾನನದೇವತೆಯೆಂದೂ ಜನರು ಕರೆಯುತ್ತಿದ್ದರು 1

ಅಲ್ಲಿಗೆ ಭಟ್ಟದಂಪತಿಗಳು ಹೊರಡಬೇಕೆಂದಿರುವಾಗಲೇ ಬನ್ನಂಜೆಗೆ ಹೋಗಿದ್ದ ಪರಿಚಿತರೊಬ್ಬರಿಂದ ವಾಸುದೇವನನ್ನು ತಾವು ಅಲ್ಲಿನ ದೇವಾಲಯದ ಪ್ರಾಂಗಣದಲ್ಲಿ ನೋಡಿದುದಾಗಿ ತಿಳಿಯಿತು. ತಾವು ಒತ್ತಾಯ ಮಾಡಿದರೂ ಊರಿಗೆ ಬರಲು ನಿರಾಕರಿಸಿದುದಾಗಿಯೂ ಅವರು ತಿಳಿಸಿದರು. ಇದರಿಂದ

---

1) ಶ್ರುತಿಶತವರ್ಣಿತಚರಿತಂ ಯತಿಹೃನ್ನಿರತಂ
ಯಥೇಷ್ಟಗುಣಭರಿತಂ ।
ಕಿಂಕರವದನಮನಿಂದ್ಯಂ ಶಂಕರನಾರಾಯಣಂ ವಂದೇ ॥
ತೀರ್ಥಪ್ರಬಂಧ–ಪಶ್ಚಿಮಪ್ರಬಂಧ–ಶ್ಲೋಕ–53

ಮಧ್ಯಗೇಹಭಟ್ಟ ದಂಪತಿಗಳಿಗೆ, ದೇವರ ದಯೆಯಿಂದ, ತಮ್ಮ ಮಗನು ಜೀವಂತ ವಿರುವನೆಂದು ಧೈರ್ಯವಾಯಿತು. ಅವರ ಮಗನ ಕ್ಷೇಮಕ್ಕಾಗಿ ಮನದಲ್ಲೇ ಅನಂತಾಸನನನ್ನು ಕೊಂಡಾಡಿದರು

ಆದರೆ ಅವರಿಗೆ ಬಗೆಹರಿಯದ ಸಂಗತಿ ಎಂದರೆ ಬೆಳ್ಳೆ—ನೇಯಂಪಳ್ಳಿ ಗಳಿಗೆ ಈ ಊರುಗಳಿಗೆ ಹತ್ತು ಹನ್ನೆರಡು ಮೈಲಿಗಳಷ್ಟು ದೂರ ಇತ್ತು. ಇಷ್ಟು ದೂರದ ಊರುಗಳಿಗೆ—ಹಿಂದೆಂದೂ ಕಂಡು ಕೇಳರಿಯದ ಊರು ಗಳಿಗೆ–ತಮ್ಮ ಮಗು ಬಾಲಕ ವಾಸುದೇವನು ಹೇಗೆ ಹೋದ ? ಏಕೆ ಹೋದ ? ಇದನ್ನು ತಿಳಿಯದೆ ಮಧ್ಯಗೇಹಭಟ್ಟರು ಅವನನ್ನು ಹುಡುಕಿಕೊಂಡು ಉಡುಪಿಗೆ ಬಂದರು.

ಉಡುಪಿ ಕ್ಷೇತ್ರದ ಸುತ್ತಲೂ ನಾಲ್ಕು ನಾಗಾಲಯಗಳೂ, ನಾಲ್ಕು ದುರ್ಗಾ ಲಯಗಳೂ ರಕ್ಷಣೆ ಇದ್ದವು. ಅರಿತೋಡು, ತಾಂಗೊಡು, ಮೂಂಗೋಡು ಮತ್ತು ಮುಚ್ಚಲುಗೋಡು ಎಂಬಲ್ಲಿ ಪ್ರಾಚೀನವಾದ ನಾಗಾಯತನಗಳಿದ್ದವು. ಇಲ್ಲಿ ರಾಮಭೋಜರಾಜನು ಅಶ್ವಮೇಧಯಾಗ ಮಾಡಿದಾಗ, ಪರಶುರಾಮನು ಕುಳಿತ ರಜತಪೀಠದ ಕಾಲುಗಳು ಊರಿದ್ದವೆಂದು ಒಂದು ಪ್ರತೀತಿ ಇದೆ.

ಪುತ್ತೂರು, ಕುಂಜಾರು, ಕಣ್ಣರಪಾಡಿ ಮತ್ತು ಇಂದ್ರಾಣಿಗಳಲ್ಲಿ ದುರ್ಗಾಲಯಗಳಿದ್ದವು. ಇವುಗಳನ್ನೂ ಪರಶುರಾಮನೇ ನಿರ್ಮಿಸಿದ್ದನೆಂದು ಹೇಳುತ್ತಾರೆ ।

---

1) ಪರಶ್ವಧಧನುರ್ಬಾಣಗದಾತೀರ್ಥೋಪಸೇವಿತೇ ।
ಗತಾ ಯತ್ರ ಸುತಪ್ರೇಮ್ಣೋವಾಸ್ತೇ ನಿತ್ಯಂ ಹರಿಸ್ವಸಾ ॥
ತ್ರಿಶೂಲಧಾರಿಣೇ ಗಜಕುಂಭವಿಧಾರಿಣೇ ।
ಗಿರೀಂದ್ರಶಿಖರಾವಾಸಾ ದುರ್ಗಾ ಸ್ವರ್ಗಾಪವರ್ಗದಾ ॥
ಪ್ರಲಯೇ ಜಲದುರ್ಗಾಸಿ ಸರ್ಗಾದೌ ಗಿರಿವಿಸ್ತೃತಿಃ ।
ಇದಾನೀಂ ಸ್ಥಲದುರ್ಗಾಸಿ ದುರ್ಗಾ ತ್ವಂ ಸುದ್ಗುಣಾರ್ಣವೇ ॥
ದುರ್ಜ್ಞೇಯತ್ವಾದ್ದುಃಖದತ್ವಾದ್ದುಷ್ಪ್ರಾಪ್ಯತ್ವಾಚ್ಚ ದುರ್ಜನೈಃ ।
ಸತಾಮುಭಯಭೂಮಿತ್ವಾದ್ದುರ್ಗಾ ತ್ವಂ
ಹೃದ್ಗುಹಾಶ್ರಯಾತ್ ॥
ತೀರ್ಥಪ್ರಬಂಧ ಪಶ್ಚಿಮಪ್ರಬಂಧ-ಶ್ಲೋಕ-17-20

ಇವುಗಳಲ್ಲಿ ಕುಂಜಾರು ದುರ್ಗಾವತಿ ದೇವಾಲಯವು ತುಂಬ ಪ್ರಸಿದ್ಧವಾಗಿತ್ತು. ಕುಂಜಾರು (ದುರ್ಗಾ) ಬೆಟ್ಟಕ್ಕೆ ವಿಮಾನಗಿರಿ ಎಂಬ ಇನ್ನೊಂದು ಹೆಸರೂ ಇದೆ ಇಲ್ಲಿ ಪರಶುರಾಮನು ತನ್ನ ತಾಯಿಯ ಸಲುವಾಗಿ ನಾಲ್ಕು ತೀರ್ಥಗಳನ್ನು ನಿರ್ಮಿಸಿದ್ದನಂತೆ. ಅವು ಈಗಲೂ ಇವೆ. ಹಿಂದೊಮ್ಮೆ ನಾಲ್ಕು ವರ್ಷದ ವಾಸುದೇವನು ತನ್ನ ಅಕ್ಕ ಕಲ್ಯಾಣಿಯ ಜೊತೆಗೆ ಆಟವಾಡಲು ಕುಂಜಾರು ಬೆಟ್ಟಕ್ಕೆ ಹೋಗಿದ್ದನಂತೆ. ಅಲ್ಲಿನ ತೀರ್ಥಗಳಲ್ಲಿ ಆಟವಾಡುವುದರಲ್ಲಿ ಮೈಮರೆತು, ಸಂಜೆಯಾದರೂ ಮನೆಗೆ ಹಿಂದಿರುಗಿಲ್ಲವಂತೆ. ಆಗ ಭಟ್ಟರು, ವಿಷಯ ತಿಳಿದು ಮಕ್ಕಳನ್ನು ಹುಡುಕಿಕೊಂಡು ಹೋಗಿ ಮನೆಗೆ ಕರೆದೊಯ್ದಿದ್ದರು.

ಇದಾದ ಮೇಲೆ ವಾಸುದೇವನು ತನ್ನ ತಾಯಿಗೆ ನಿತ್ಯದಸ್ನಾನಕ್ಕೆಂದು ಅವರ ಮನೆಯ ಹಿಂದಿನ ಬಯಲಿನಲ್ಲಿಯೇ ಒಂದು ಪುಟ್ಟ ಹೊಂಡವನ್ನು ನಿರ್ಮಿಸಿಕೊಟ್ಟಿದ್ದನು. ಇದನ್ನು ವಾಸುದೇವತೀರ್ಥವೆಂದು ಕರೆಯುತ್ತಾರೆ.

ಹೀಗೆ ವಾಸುದೇವನು ತಮಗೆ ಮತ್ತೊಮ್ಮೆ ಈ ರೀತಿಯಲ್ಲಿ ಕೈಕೊಟ್ಟಿದ್ದಾನೆಂದು ತಿಳಿದರು. ಅವನನ್ನು ಹುಡುಕಿಕೊಂಡು ಭಟ್ಟದಂಪತಿಗಳು ಉಡುಪಿಗೆ ಹೋದರು. ಅವರು ಉಡುಪಿಯಲ್ಲಿ ಅನಂತಾಸನಸ್ವಾಮಿಯನ್ನು ಸಂದರ್ಶಿಸಿ ಮಗನನ್ನು ಕ್ಷೇಮವಾಗಿ ತಮಗೆ ದಯಪಾಲಿಸಬೇಕೆಂದು ಪ್ರಾರ್ಥಿಸಿದರು. ಅವರು ನಿಡಂಬೂರಿಗೆ ಹೊರಡಬೇಕೆಂದಿರುವಾಗಲೇ ಬೀದಿಯಲ್ಲಿ ಹೋಗುತ್ತಿದ್ದವರೊಬ್ಬರು ಭಟ್ಟರನ್ನು ನೋಡಿ ಅವರಿಗೆ ಪ್ರಿಯವಾದ ಒಂದು ಸಂತಸದ ವಾರ್ತೆ ಅರುಹಿದರು.

"ಭಟ್ಟರೇ, ಅನಂತಸರಸ್ಸಿನ ಬಳಿ ಒಬ್ಬ ತೇಜಸ್ವಿಯಾದ ಬಾಲಕ ಕುಳಿತು ನೀರಿನಲ್ಲಿ ಆಟವಾಡುತ್ತಿದ್ದಾನೆ, ಬಹುಶಃ ಅವನು ನಿಮ್ಮ ಮಗನೇ ಇರಬೇಕು. ಹೋಲಿಕೆಯಲ್ಲಿ ನಿಮ್ಮಂತಿದೆ"— ಎಂದು ಹೇಳಿ ಅವರು ಹೊರಟುಹೋದರು.

ಮಧ್ಯಗೇಹಭಟ್ಟರು ಮತ್ತು ವೇದವತಿ ಅಲ್ಲಿಗೆ ಹೋಗಿ ನೋಡುತ್ತಾರೆ !

ಬಾಲಕ ವಾಸುದೇವನು ಇದಾವ ಪರಿವೆಯೂ ಇಲ್ಲದೆ ಸರೋವರದ ಪಾವಟಿಕೆಯಮೇಲೆ ಕುಳಿತುಕೊಂಡು ಕಾಲುಗಳನ್ನು ನೀರಿನಲ್ಲಿ ಇಟ್ಟು ಆಟವಾಡುತ್ತಿದ್ದನು !

ತಂದೆತಾಯಿಗಳು ಓಡಿಬಂದು ಮಗನನ್ನು ಎತ್ತಿತಬ್ಬಿಕೊಂಡರು.

ತಾಯಿ ವೇದವತಿಯು ವಾಸುದೇವನು ಇನ್ನೂ ಪುಟ್ಟ ಮಗುವೆಂಬಂತೆ ಅವನನ್ನು ಎತ್ತಿಕೊಂಡು ಮುದ್ದು ಮಾಡಿದಳು ಅವಳಿಗೆ ಕಳೆದುಹೋಗಿದ್ದ ರತ್ನ ಮತ್ತೆ ದೊರಕಿದಂತೆ ಆಗಿತ್ತು. ತಮ್ಮ ಭಾಗ್ಯನಿಧಿ ಮತ್ತೆ ತಮ್ಮ ವಶವಾದಂತೆ ಅವರು ಹಿಗ್ಗಿದರು.

ಮಧ್ಯಗೇಹಭಟ್ಟರು ಮಗನ ತಲೆಯನ್ನು ಪ್ರೀತಿಯಿಂದ ನೇವರಿಸುತ್ತಾ "ಮಗೂ, ಈ ಮೂರು ದಿನಗಳು ನೀನು ಎಲ್ಲಿಗೆ ಹೋಗಿದ್ದಿ ? ಹೋಗುವಾಗ ನೀನೇಕೆ ನಮಗೆ ಹೇಳಿ ಹೋಗಲಿಲ್ಲ ?"— ಎಂದು ಗದ್ಗದ ಕಂಠದಿಂದ ಕೇಳಿದರು,

"ಅಪ್ಪ, ನಾನು ಕಾನನದೇವನ ದರ್ಶನಕ್ಕೆ ಹೋಗಿದ್ದೆ. ನಿಡಂಬೂರು ಕಾನನದೇವನೇ ನನ್ನನ್ನು ಬಾ ಎಂದು ಕೈಬೀಸಿ ಕರೆದನು, ನಾನು ನಿಮಗೆ ಹೇಳದಯೇ ಹೊರಟುಹೋದೆ."

"ಇಷ್ಟು ದೂರ ನಿನ್ನನ್ನು ಕರೆದೊಯ್ದವರು ಯಾರು ?"

"ಆ ಕಾನನದೇವನೇ, ಅವನೇ ನನ್ನ ಸ್ನೇಹಿತ."

"ಉಡುಪಿಗೆ ನೀನು ಹೇಗೆ ಬಂದೆ ? ಇಲ್ಲಿಗೆ ನಿನ್ನನ್ನು ಕರೆತಂದು ಬಿಟ್ಟವರು ಯಾರು ?"

"ಕೊಡವೂರ ದುರ್ಗಾ !"

"ನೀನು ಇಲ್ಲಿಗೇಕೆ ಬಂದೆ ?"

"ಅನಂತಾಸನನನ್ನು ಸಂದರ್ಶಿಸಿ ಹೋಗಲು ಬಂದೆ. ಅಷ್ಟರಲ್ಲಿ ನೀವೇ ಇಲ್ಲಿಗೆ ಬಂದಿರಿ !"

ಮಗನ ಮಾತು ಕೇಳಿ ನಗಬೇಕೋ ಅಳಬೇಕೋ ಆ ತಾಯಿತಂದೆಗಳಿಗೆ ತಿಳಿಯದಾಯಿತು.

ಆವರು ತಮ್ಮ ಆರಾಧ್ಯಮೂರ್ತಿ ಅನಂತಾಸನನು ವಾಸುದೇವನನ್ನು ರಕ್ಷಿಸುತ್ತಾ ಇರುವನೆಂದು ತಿಳಿದು ಧನ್ಯರಾದರು.

ಅವರು ಮಗನನ್ನು ಬೈದು, ಗದರಿಸಿ ಬೇಸರಗೊಳಿಸಲಿಚ್ಛಿಸದೆ, ಅವನಿಗೆ ಒಳ್ಳೆಯ ರೀತಿಯಲ್ಲಿ ಬುದ್ಧಿಮಾತು ಹೇಳುತ್ತಾ ಬೆಳ್ಳಿಗೆ ಹಿಂದಿರುಗಿದರು.

## ಗುರುವಿಗೆ ತಿರುಮಂತ್ರ

ಬಾಲಕ ವಾಸುದೇವನು ನಾಲ್ಕೈದು ವರ್ಷದವನಾಗಿದ್ದಾಗಲೇ ಊರನ್ನು ಬಿಟ್ಟು, ದಟ್ಟವಾದ ಕಾಡುಮೇಡುಗಳಲ್ಲಿ ಸಂಚರಿಸಿ, ನಿರ್ಜನ ಪ್ರದೇಶದಲ್ಲಿದ್ದ ಶಿವ, ದುರ್ಗಾ ಮತ್ತು ವಿಷ್ಣುಮಂದಿರಗಳನ್ನು ಸಂದರ್ಶಿಸಿ, ಉಡುಪಿಕ್ಷೇತ್ರಕ್ಕೆ ಬಂದು ಅಲ್ಲಿನ ಅನಂತಾಸನಸ್ವಾಮಿಯ ಅನುಗ್ರಹವನ್ನು ಸಂಪಾದಿಸಿ ಕೊಂಡು ಬೆಳ್ಳಿಗೆ ಮರಳಿದ ವಾರ್ತೆಯು ಜನರ ಪಾಲಿಗೆ ಒಂದು ಪವಾಡವೇ ಆಯಿತು.

ವಾಸ್ತವ ಸಂಗತಿಯೂ ಇದಕ್ಕೆ ಪೋಷಕವಾಗಿಯೇ ಇತ್ತು. ನೇಯಂಪಳ್ಳಿ ಯಿಂದ ಸಮುದ್ರತೀರದ ಕೊಡವೂರು ಮೂರುನಾಲ್ಕು ಹರಿದಾರಿಯಿತ್ತು. ಇದು ಉಡುಪಿಯನ್ನು ಆಳುತ್ತಿದ್ದ ನಿಡಂಬೂರು ಬಲ್ಲಾಳರ ಆಳ್ವಿಕೆಗೆ ಸೇರಿತ್ತು. ಈ ಗ್ರಾಮವು ಇಂದಿನ ಮಲ್ಪೆ ಬಂದರಿಗೆ ಸಮೀಪವಾಗಿತ್ತು. ಅಲ್ಲಿ ಷಣ್ಮುಖ ಅಥವಾ ಸುಬ್ರಹ್ಮಣ್ಯನ ಒಂದು ಗುಡಿ ಇತ್ತು. ಇದಲ್ಲದೆ ಅನಂತೇಶ್ವರಸ್ವಾಮಿಯ ಒಂದು ದೇವಾಲಯವೂ ಇಲ್ಲಿತ್ತು. ಹಿಂದೆ ಅದು ಅನಂತನಾಥನ ಬಸದಿಯಾಗಿತ್ತು. ಮುಂದೆ ಈ ಕ್ಷೇತ್ರದಲ್ಲಿ ಶ್ರೀಮಧ್ವಾ ಚಾರ್ಯರು, ದ್ವಾರಕೆಯಿಂದ ಹಡಗಿನಲ್ಲಿ ಬಂದಿದ್ದ ಗೋಪಿಚಂದನದ ಗಡ್ಡೆಯಲ್ಲಿ ಬಲರಾಮನ ಸುಂದರ ವಿಗ್ರಹವನ್ನು ಪ್ರತಿಷ್ಠಿಸಿದ್ದರೆಂದೂ, ಅದನ್ನು ಸಂದರ್ಶಿಸಿದ ನಂತರವೇ ಉಡುಪಿಯಲ್ಲಿ ಇದ್ದ ಶ್ರೀಕೃಷ್ಣಮಂದಿರಕ್ಕೆ ಬರಬೇಕೆಂದೂ ಒಂದು ಪ್ರತೀತಿ ಇದೆ. ವಾಸುದೇವನು ನಾಲ್ಕೈದು ವರ್ಷದ ಬಾಲಕನಾಗಿರುವಾಗಲೇ ಈ ಎಲ್ಲ ಕ್ಷೇತ್ರಗಳನ್ನೂ ತನ್ನ ಪಾದಧೂಳಿಯಿಂದ[1] ಪವಿತ್ರಗೊಳಿಸಿದ್ದನು.

ಈ ಘಟನೆಯಿಂದ ಹೊರಪಡುವ ಅಂಶವೆಂದರೆ ಬಾಲಕನಾಗಿರು ವಾಗಲೇ ವಾಸುದೇವನಿಗೆ ಪ್ರಚಂಡವಾದ ಧೈರ್ಯವಿತ್ತು. ಅವನಿಗೆ ಹೆದರಿಕೆ ಎಂಬುದು ಗೊತ್ತೇ ಇರಲಿಲ್ಲ. ನಿರ್ಜನವಾದ ಅರಣ್ಯ ಪ್ರದೇಶದಲ್ಲಿ ಅಲೆ

---

1) ಶ್ರೀಮದಾನಂದತೀರ್ಥಾರ್ಯಪಾದಪಂಕಜರೇಣವಃ ।
ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ ॥

— ಶ್ರೀಮತ್ತಾತ್ಪರ್ಯಚಂದ್ರಿಕಾ

ಯುವುದಾಗಲೀ, ಬೆಟ್ಟಗುಡ್ಡಗಳನ್ನು ಹತ್ತಿ ಇಳಿಯುವುದಾಗಲೀ ಒಂದೂ ಕಷ್ಟವಿರಲಿಲ್ಲ. ಈ ಬಗೆಯ ಸಾಹಸಗಳು ಅವನ ಸ್ವಭಾವಕ್ಕೆ ಸಹಜ ವಾಗಿದ್ದವು ಅವನ ನಿರ್ಭೀತವ್ಯಕ್ತಿತ್ವಕ್ಕೆ ಸುಸಂಗತವಾಗಿದ್ದವು.

ಅಲ್ಲದೆ ವಾಸುದೇವನ ಭಗವದ್ಭಕ್ತಿಗೆ ಈ ಘಟನೆ ಇನ್ನೊಂದು ಸಾಕ್ಷಿ. ಅವನು ತನ್ನ ಸಮವಯಸ್ಸಿನ ಇತರ ಬಾಲಕರಂತೆ ಆಟಗಳಲ್ಲಿ ಸಮಯ ವನ್ನು ವ್ಯರ್ಥವಾಗಿ ಕಳೆಯದೆ ತನ್ನ ಅವತಾರದ ಮುಖ್ಯಕಾರ್ಯವಾದ ವಿಷ್ಣು ಸರ್ವೋತ್ತಮತ್ವವನ್ನೂ, ಅವನನ್ನು ಹೊಂದಲು ಬೇಕಾಗುವ ಮಾಹಾತ್ಮ್ಯಜ್ಞಾನಯುಕ್ತವಾದ ಭಕ್ತಿಯನ್ನೂ ತೋರಿಸಲು ತೊಡಗಿದ್ದನು.

ಅವನು ತಾನು ಸರ್ವಜ್ಞನೆಂಬ ಸಂಗತಿಯನ್ನು ಚಿಕ್ಕಬಾಲಕನಾಗಿರು ವಾಗಲೇ ಪ್ರಕಟಿಸಿದ್ದನು.

ಪೂರ್ಣಪ್ರಜ್ಞ, ಸರ್ವಜ್ಞಾಚಾರ್ಯರೆಂದು ಮುಂದೆ ಖ್ಯಾತಿ ಪಡೆದ ವಾಸುದೇವನು ಸಾಮಾನ್ಯ ಮಕ್ಕಳು ತೊದಲು ನುಡಿ ನುಡಿಯುತ್ತಿರು ವಾಗಲೇ ಸ್ಪಷ್ಟವಾದ ತರ್ಕಬದ್ಧ ಮಾತುಗಳನ್ನು ಆಡಲು ಕಲಿತಿದ್ದನು. ತಾಯಿ ಹೇಳುತ್ತಿದ್ದ ಎಲ್ಲ ಹಾಡುಗಳು ಅವನಿಗೆ ಬರುತ್ತಿದ್ದವು.

ಎರಡು ತುಂಬಿ ಮೂರನೆಯ ವಯಸ್ಸಿಗೆ ಬರುತ್ತಿದ್ದಂತೆ ತಂದೆ ಮಧ್ಯಗೇಹಭಟ್ಟರೇ ನಿಂತು ಮಗನಿಗೆ ಅಕ್ಷರಾಭ್ಯಾಸ ಮಾಡಿಸಿದರು. ಸರಸ್ವತೀ ದೇವಿಯು ಬ್ರಹ್ಮನ ಮುಂದೆ ನರ್ತಿಸಲು ನಾಚುತ್ತಾ ರಂಗಸ್ಥಳಕ್ಕೆ ಬಂದಂತೆ ವಾಸುದೇವನ ನಾಲಿಗೆಯ ಮೇಲೆ ಮೊದಲು ತೊದಲು ನುಡಿಗಳಾಗಿ ಕಾಣಿಸಿ ಕೊಂಡಳು ದಿನಗಳೆದಂತೆ ತನ್ನ ಜ್ಞಾನಭಂಡಾರವನ್ನೆಲ್ಲಾ ವಾಸುದೇವನ ನಾಲಿಗೆಗೆ ಧಾರೆಎರೆದಳು. ಹೀಗಾಗಿ ಅವನ ಅದ್ಭುತವಾದ ಪ್ರತಿಭೆ ಹಾಗೂ ಜ್ಞಾಪಕ ಶಕ್ತಿಗೆ ಒಂದುಬಾರಿ ಕಲಿಸಿಕೊಟ್ಟುದನ್ನು ಮತ್ತೆ ಕಲಿಯಬೇಕಾಗಿ ರಲಿಲ್ಲ. ಒಮ್ಮೆ ಓದಿದ ವಿಷಯವನ್ನು ಮತ್ತೊಮ್ಮೆ ಓದಬೇಕಾಗಿರಲಿಲ್ಲ. ಸಾಕ್ಷಾತ್ ಸರಸ್ವತಿದೇವಿಯ ಅಭಿಮಾನಕ್ಕೆ ಪಾತ್ರನಾಗಿದ್ದ ವಾಸುದೇವನಿಗೆ ಯಾವ ವಿಷಯವನ್ನೂ ಕುರಿತು ಯೋಚಿಸಿದೊಡನೆ ಕಲಿಯಬೇಕಾಗಿದ್ದ ಎಲ್ಲ ಸಾಹಿತ್ಯ ಹಾಗೂ ಶಾಸ್ತ್ರ ವಿಚಾರಗಳನ್ನೂ ತಿಳಿಯಬಲ್ಲವನಾಗಿದ್ದನು.

ಒಮ್ಮೊಮ್ಮೆ ವಾಸುದೇವನ ತೀಕ್ಷ್ಣವೂ, ಕುಶಾಗ್ರವೂ ಆದ ಮತಿಯನ್ನು ನೋಡಿ ಬೆರಗಾದತಂದೆಯು ಅವನಿಗೆಲ್ಲಿ ದೃಷ್ಟಿ ತಾಕುವುದೋ ಎಂದು ಅವನನ್ನು ಬಳಿಯಲ್ಲಿ ಕೂಡಿಸಿಕೊಂಡು ಒಬ್ಬನಿಗೇ ಪಾಠ ಹೇಳಿಕೊಡುತ್ತಿದ್ದರು.

ಅವರು ಹೇಳಿಕೊಟ್ಟುದನ್ನು ಅವನು ಒಂದೇ ಬಾರಿಗೇ ಬುದ್ಧಿಸ್ಥ ಗೊಳಿಸುತ್ತಿದ್ದನು ಮಗನು ಏಕಸಂಧಿ ಗ್ರಾಹಿಯಾಗಿದ್ದನು.

ಅಕ್ಷರಾಭ್ಯಾಸವನ್ನು ಆರಂಭಿಸಿದ ಎರಡನೆಯ ದಿನವೇ— ನಡೆದ ಘಟನೆ ಯನ್ನು ಮಧ್ಯಗೇಹಭಟ್ಟರು ಮರೆಯುವಂತೆಯೇ ಇರಲಿಲ್ಲ.

ಭಟ್ಟರು ಓಂಕಾರವನ್ನು ಬರೆದು ಮುಗಿಸಿದ ಮೇಲೆ ಭಗವಂತನಾದ ವಿಷ್ಣುವಿನ ಬೇರೆ ಬೇರೆ ಹೆಸರುಗಳನ್ನು ಬರೆದು ಮಗನನ್ನು ಅವುಗಳನ್ನು ತಿದ್ದಲು ಹೇಳಿದರು.

ಹಾಗೆ ಮಾಡಲು ಸಿದ್ಧನಿಲ್ಲದ ವಾಸುದೇವನು "ಅಪ್ಪಾ, ನಿನ್ನೆ ಬರೆದ ಅಕ್ಷರಗಳನ್ನೇ ಇಂದೂ ಏಕೆ ಬರೆಯುತ್ತೀದ್ದಿರಿ ?"—ಎಂದು ಕೇಳಿದನು.1

"ನಿನಗೆ ಇದೆಲ್ಲ ಚೆನ್ನಾಗಿ ಬರಲಿ ಎಂದು"

"ನನಗೆ ಇದೆಲ್ಲವೂ ಚನ್ನಾಗಿಯೇ ಬರುತ್ತದೆ. ಮುಂದಿನ ಪಾಠವನ್ನು ನನಗೆ ಕಲಿಸಿ ; ಬೇಕಿದ್ದರೆ ಪರೀಕ್ಷಿಸಿ. ನೀವು ಇದುವರೆಗೆ ಕಲಿಸಿಕೊಟ್ಟುದ್ದುದನ್ನು ನಿಮಗೆ ಒಪ್ಪಿಸುತ್ತೇನೆ."

ವಾಸುದೇವನು ತಾನು ಹೇಳಿದಂತೆಯೇ ಮಾಡಿತೋರಿಸಿದಾಗ ಮಧ್ಯಗೇಹ ಭಟ್ಟರಿಗೆ ಸಂತೋಷಾಶ್ಚರ್ಯಗಳಾದುವು. ಈ ಬಾಲಕನಿಗೆ ಮುಂದೆ ಏನು ಹೇಳಿ ಕೊಡಬೇಕೆಂದು ತಿಳಿಯದೆ ಕರ್ತವ್ಯಮೌಢ್ಯರಾದರು.

---

1) ಸಕಲಶಬ್ದಮಯೀ ಚ ಸರಸ್ವತೀ ಸತತಮಾನಮತಿ ಸ್ವಯಮೇವ ಯಂ ।
ದ್ವಿಜವರೋಥ ಕದಾಚನ ಮಾತೃಕಾಃ ಕಿಲ ಸುತಂ ಪರಿಚಾಯಯತಿಸ್ಮಯಂ॥
ಲಪಿಕುಲಂ ನನು ತಾತ ಗತೇ ದಿನೇ ಲಿಖಿತಮೇವ ಪುನರ್ಲಿಖಿತಂ ತ್ವತಃ ।
ಇತಿ ನಿಜಗುಣಪ್ರತಿಭಾವಿತಂ ಹರಿಪದಸ್ಯ ವಚಸ್ತಮನಂದಯತ್ ॥
ಮ ॥ ವಿ ॥ ಸರ್ಗ–3–ಶ್ಲೋಕ 18–19

ಈ ಘಟನೆಯಾದ ಮೇಲೆ ಬಾಲಕ ವಾಸುದೇವನ ಮಾತುಗಳನ್ನು ಲಕ್ಷ್ಯ ದಿಂದ ಆಲಿಸುತ್ತಿದ್ದರು, ಅವನ ಸಲಹೆಯನ್ನು ಸಮಾಧಾನದಿಂದ ಪರೀಶಿಲಿಸು ತ್ತಲೂ ಇದ್ದರು.

ಒಂದುದಿನ ನೇಯಂಪಳ್ಳಿಗೆ ಹೋಗಿದ್ದಾಗ ವಾಸುದೇವನ ಪ್ರಶ್ನೆ ಉತ್ತರ ಗಳಿಂದಾಗಿ ಬಂಧುಗಳೊಡನೆ ವಿರಸವನ್ನೂ ಕಟ್ಟಿಕೊಳ್ಳಬೇಕಾಗಿ ಬಂದಿತ್ತು,

ನೇಯಂಪಳ್ಳಿಯ (ಘೃತವಲ್ಲಿ) ಬಂಧುಗಳು ತಮ್ಮ ಮನೆಯಲ್ಲಿ ನಡೆ ಯಲ್ಲಿದ್ದ ಒಂದು ಹಬ್ಬಕ್ಕೆ ಮಧ್ಯಗೇಹಭಟ್ಟರನ್ನೂ ಮತ್ತು ಅವರ ಮನೆಯ ವರನ್ನೂ ಆಹ್ವಾನಿಸಿದರು. ಭಟ್ಟರಿಗೆ ಕೆಲವು ಅನಿವಾರ್ಯ ಕಾರ್ಯಗಳಿಂದಾಗಿ ಹೋಗಲಾಗದೆ ತಮ್ಮ ಪತ್ನೀಪುತ್ರರನ್ನು ಕಳುಹಿಸಿಕೊಟ್ಟಿದ್ದರು.

ನೇಯಂಪಳ್ಳಿಯವರ (ಘೃತವಲ್ಲಿ) ಮನೆಯಲ್ಲಿ ಆ ದಿನ ಶಿವಶಂಕರ ರೆಂಬ ಪೌರಾಣಿಕರು ರಾಮಾಯಣಕಥೆಯನ್ನು ಪುರಾಣ ಹೇಳುತ್ತಿದ್ದರು.

ವಾಸುದೇವನು ತನ್ನ ತಾಯಿಯೊಡನೆ ಅವರ ಮನೆಗೆ ಹೋಗಿದ್ದ ದಿನ ಪೌರಾಣಿಕರು ರಾಮಾಯಣದಲ್ಲಿ ಬರುವ ಕಿಷ್ಕಿಂಧಾಕಾಂಡದ ವಾಲಿ ವಧೆಯ ಭಾಗವನ್ನು ಶ್ರಾವ್ಯವಾಗಿ ಪಠಿಸುತ್ತಿದ್ದರು.

ರಾಮಾಯಣದ ಮೂಲಶ್ಲೋಕವನ್ನು ಒಂದು ಸಲ ಪಠಿಸಿ, ಅದನ್ನು ಸರಳ ಕನ್ನಡದಲ್ಲಿ, ಒಮ್ಮೊಮ್ಮೆ ತುಳುವಿನಲ್ಲಿಯೂ ವಿವರಿಸು ತ್ತಿದ್ದರು. ಹೀಗೆ ಅನುವಾದಿಸುತ್ತಿದ್ದಾಗ ವಾಲಿಯನ್ನು ಕೊಲ್ಲುವ ಪ್ರಸಂಗದಲ್ಲಿ ಶ್ರೀರಾಮನು ಮರದ ಹಿಂದೆ ಅವಿತುಕೊಂಡಿದ್ದು, ವಾಲಿಯನ್ನು ಒಂದೇ ಬಾಣದಿಂದ ಸಂಹರಿಸಿದನೆಂದು ಪೌರಾಣಿಕರು ಹೇಳಿದರು.

ಹೀಗೆ ಮರೆಯಲ್ಲಿ ಅವಿತು ಕೊಲ್ಲಲು, ಸತ್ಯಸಂಧನೂ, ಧರ್ಮಾತ್ಮನೂ ಆದ ಶ್ರೀರಾಮನು ಸುಗ್ರೀವನಿಗೆ ಕೊಟ್ಟಿದ್ದ ವಚನವೇ ಕಾರಣವಾಗಿತ್ತು. ಅವನನ್ನು ಹೇಗಾದರೂ ಮಾಡಿ ಕಿಷ್ಕಿಂಧೆಯಲ್ಲಿ ಪಟ್ಟ ಕಟ್ಟುವುದಾಗಿ ತಿಳಿಸಿ ದ್ದನು. ಅಲ್ಲದೆ ವಾಲಿಗೆ ಶಿವನಿಂದ ಒಂದು ವರವಿತ್ತು. ಯಾರು ಅವನ ವಿರುದ್ಧ ಹೋರಾಡುತ್ತಾರೋ, ಅವರ ಬಲವಲ್ಲಿ, ಅರ್ಧಬಲ ವಾಲಿಯದಾ ಗುತ್ತಿತ್ತು. ಇದರಿಂದ ಶ್ರೀರಾಮನು ಮರದ ಹಿಂದೆ ಅಡಗಿಕೊಂಡು ವಾಲಿ

ಯನ್ನು ಕೊಲ್ಲಬೇಕಾಯಿತು—ಎಂದು ಪೌರಾಣಿಕರು ಭಾವಪೂರ್ವಕವಾಗಿಯೂ ಚಮತ್ಕಾರವಾಗಿಯೂ ಶ್ರೋತೃಗಳಿಗೆ ವಿವರಿಸಿದರು.

ಈ ವಿವರಣೆಯು ವಾಸುದೆನಿಗೇಕೊ ತೃಪ್ತಿಯಾಗಲಿಲ್ಲ.

ಸಲ್ಪ ಕಾಲಾ ನಂತರ ಅವನು ಸಭೆಯಲ್ಲಿ ಎದ್ದು ನಿಂತು, ದಿಟ್ಟತನದಿಂದ ಶಿವಶಂಕರಪೌರಾಣಿಕರ ವಿವರಣೆ ಸಮಾಧಾನಕರವಾಗಿಲ್ಲವೆಂದು ಹೇಳಿದನು. ಅಲ್ಲಿ ನೆರದಿದ್ದ ಎಲ್ಲರೂ ವಾಸುದೇವನನ್ನು ಕುತೂಹಲದಿಂದ ನೋಡಿದರು.

"ನಾನು ಹೇಳಿದ್ದು ಸರಿಯಾಗಿ ಇಲ್ಲದಿದ್ದರೆ, ಸರಿಯಾದ ವಿವರಣೆ ಯಾವುದು ? ಅದನ್ನಾದರೂ ಹೇಳು"-ಎಂದು ಶಿವಶಂಕರಪೌರಾಣಿಕರು ಹುಡುಗನ ಬಾಯಿ ಮುಚ್ಚಿಸಲೆಂಬಂತೆ. ಗಡಸು ಧ್ವನಿಯಲ್ಲಿ ಹೇಳಿದರು

"ಹಾಗಿದ್ದರೆ ಸಾವಧಾನವಾಗಿ ಕೇಳಿ, ಹೇಳುತ್ತೇನೆ—1

"ಶ್ರೀರಾಮನು ಭಗವಂತನಾದ ಶ್ರೀಮನ್ನಾರಾಯಣನ ಅವತಾರ. ಆಂದಮೇಲೆ ಅವನ ಇಚ್ಛೆಯಂತೆ ಪಂಚಭೂತಗಳೂ, ಅಷ್ಟದಿಕ್ಪಾಲಕರೂ, ಮತ್ತು ಸರ್ವರೂ ನಡೆಯುತ್ತಾರೆ. ವಾಲಿಯು ಇಂದ್ರನ ಮಗ, ಸುಗ್ರೀವನು ಸೂರ್ಯಾಂಶ ಸಂಭೂತ. ಇವರಲ್ಲಿ ಕಿಷ್ಕಿಂದಾ ರಾಜ್ಯಕ್ಕಾಗಿ ಪರಸ್ಪರ ದ್ವೇಷ, ಒಬ್ಬರನ್ನು ಒಬ್ಬರು ನಾಶಪಡಿಸುವಷ್ಟು ಕೋಪ, ಮತ್ತು ಹೋರಾಟದಲ್ಲಿ ಈ ಅಣ್ಣ

---

1) ಪರಿಷದಾ ನಿತರಾಂ ಪರಿವಾರಿತಃ ಶಿವಪದಃ ಕಿಲ ಧೌತಪಟೋದ್ಭವಃ ।
ಇಹ ಕಥಾಂ ಕಥಯನ್ ದದೃಶೇತತಃ ಪೃಥುಧಯಾ ಪೃಥಕಾಕೃತಿ ನಾಮುನಾ ॥

ಇದಮುವಾಚ ವಿಚಾರವಿಚಕ್ಷಣಃ ಶುಚಿವಚಃ ಶನಕೈಃ ಸ ಜನಾಂತರೇ ।
ಅಪರಥಾ ಕಥಿತಂ ಕಥಕ ತ್ವಯಾ ನನು ಮತಾನ್ಮಹತಾಮಿತಿ ಸಸ್ಮಿತಮ್ ॥
ಅಥ ಕಥಾಂ ಕಥಯೇತಿ ತದಾ ಜನೇ ಗದಿತವತ್ಯುಚಿತಾರ್ಥಮುದಾಹರತ್ ।

ಸ ಸಮಲಾಲ್ಕೃತ ವಿಸ್ಮಯಬಿರ್ನರೈರಪಿ ಸುರೈರ್ವಿಜಯಾಂಕುರ ಪೂಜಕೈಃ ॥

ಮ ॥ ವಿ ॥ ಸರ್ಗ–3 ಶ್ಲೋಕ 22–25

ತಮ್ಮಂದಿರಲ್ಲಿ ಮೊದಲಿನಿಂದಲೂ ವಾಲಿಯದೇ ಮೇಲ್ಗೈ. ಅಂಥ ಬಲಿಷ್ಠ ನೊಡನೆ ಮತ್ತೆ ಹೋರಾಡಿ ಮಡಿಯಲು ಸುಗ್ರೀವನು ಸಿದ್ಧನಿರಲಿಲ್ಲ. ಆದರೆ ಶ್ರೀರಾಮನು ವಾಲಿಯನ್ನು ಕೊಂದು ಅವನಿಗೆ ಪಟ್ಟ ಕಟ್ಟುವುದಾಗಿ ವಾಗ್ದಾನ ಮಾಡಿದ್ದಾನೆ.

ಋಷ್ಯಮೂಕಪರ್ವತದಲ್ಲಿ ಮೊದಲು ಶರಣಾಗತನಾಗಿ ಬಂದವನೇ ಸುಗ್ರೀವ. ಇವನಿಗೆ ವಚನಕೊಟ್ಟ ಮೇಲೆ ಎಂತಹ ಪ್ರಸಂಗ ಬಂದರೂ ವಾಲಿಯನ್ನು ಕೊಲ್ಲತಕ್ಕದ್ದೇ ಸರಿ ; ಒಂದು ವೇಳೆ ಶ್ರೀರಾಮನು ವಾಲಿಯ ಎದುರು ನಿಂತು ಬಾಣವನ್ನು ಹೂಡಿದನೆಂದು ತಿಳಿಯೋಣ,. ಆಗ ಇಂದ್ರನಂದನನಾದ, ವಾಲಿಯೂ ಸಹ ಸುಗ್ರೀವನಂತೆಯೇ ಶ್ರೀರಾಮನ ಅಂಘ್ರಿಪದ್ಮಗಳಿಗೆ ಬಿದ್ದು ತನ್ನನ್ನು ರಕ್ಷಿಸಲು ಬೇಡಿಕೊಳ್ಳುತ್ತಿದ್ದ. ಆಗ ಶ್ರೀರಾಮನು ಏನು ಮಾಡ ಬೇಕಾಗುತ್ತಿತ್ತು?

ಸುಗ್ರೀವನಿಗೆ ರಕ್ಷಿಸುವುದಾಗಿ ಮೊದಲೇ ಮಾತು ಕೊಟ್ಟಾಗಿದೆ, ವಾಲಿ ಯನ್ನು ಕೊಲ್ಲದೆ ಈ ಮಾತನ್ನು ಉಳಿಸಿಕೊಳ್ಳಲು ಸಾಧ್ಯವೇ ಇಲ್ಲ, ಆದುದರಿಂದ ಶ್ರೀರಾಮನು ಮರದ ಮರೆಯಲ್ಲಿ ಅವಿತುಕೊಂಡು ಬಾಣ ಹೂಡಿ ವಾಲಿಯನ್ನು ಕೊಲ್ಲಬೇಕಾಯಿತು.

ಬಾಣದಿಂದ ನೆಲಕ್ಕೆ ಬಿದ್ದ ವಾಲಿಯು, ಶ್ರೀರಾಮನಿಂದ ಬಾಣಪ್ರಯೋಗ ವಾಗಿದೆ ಎಂದು ತಿಳಿದಮೇಲೆ ನಡೆದುಹೋದುದಕ್ಕೆ ವಿಪರೀತ ವಿಷಾದಿಸಿದನು.

ಮರಣಕ್ಕೆ ಮುಂದೆ ವಾಲಿಯು ಜ್ಞಾನಿಯಂತೆ ಹೀಗೆ ನುಡಿದನು : "ಹೇ ಭಗವನ್, ನೀನು ಸರ್ವೇಶ್ವರ, ಸರ್ವಶಕ್ತನೆಂಬುದನ್ನು ನಾನು ಬಲ್ಲೆ. ನೀನು ಇಚ್ಛಿಸಿದಂತೆ ನಡೆಯುತ್ತದೆ, ನನಗೆ ಗೊತ್ತು. ಆದರೆ ನಿನ್ನ ಕೈಯಿಂದ ನಿನ್ನ ಪಾದಗಳ ಮೇಲೆ ತಲೆಯಿಟ್ಟು ಮರಣಹೊಂದುವ ಭಾಗ್ಯ ಯಾರಿಗೆ ತಾನೇ ದೊರಕುತ್ತದೆ? ನನಗೆ ಶೀಘ್ರ ಮರಣವನ್ನು ಅನುಗ್ರಹಿಸು. ಇದೇ ನನಗೆ ಮುಕ್ತಿ"—ಎಂದು ಪ್ರಾರ್ಥಿಸಿ, ಶ್ರೀರಾಮನಿಂದ ಮುಕ್ತಿಯನ್ನು ಪಡೆದನು.

ಸರ್ವೇಶ್ವರನಾದ ಶ್ರೀರಾಮನನ್ನು ಮುಕ್ತಿಗಿಂತ ಬೇರೆ ವರ ಇನ್ನೇನು ಕೇಳಿಕೊಳ್ಳಬಹುದು ?"

ಕೇವಲ ಐದು ವರ್ಷದ ಹಸುಳೆಯೊದ ವಾಸುದೇವನ ಬಾಯಿಂದ ಬಂದ ಇಂಥ ವಿಚಾರಪೂರ್ಣವಾದ, ತರ್ಕಬದ್ಧವಾದ, ವಾಕ್ಸರಣಿಯನ್ನು ಕೇಳಿ, ಇಡೀ ಸಭೆಯಲ್ಲಿ ವಿದ್ಯುತ್ಸಂಚಾರವಾದಂತೆ ಆಯಿತು. ಸಭೆಯಲ್ಲಿದ್ದವರೆಲ್ಲರೂ ಬಾಲಕನ ಅಲೌಕಿಕ ಪ್ರಜ್ಞೆಗೂ ಅತಿಮಾನುಷ ಮೇಧಾಶಕ್ತಿಗೂ ತಲೆದೂಗಿದರು.

ಶಿವಶಂಕರಪೌರಾಣಿಕರು ಮೊದಲು ಅಸಮಾಧಾನ ವ್ಯಕ್ತಪಡಿಸಿದರೂ ಶಿವಧನುಸ್ಸನ್ನೇ ಲೀಲಾಜಾಲವಾಗಿ ಮುರಿದ ಶ್ರೀರಾಮನಿಗೆ ವಾಲಿಯನ್ನು ಕೊಲ್ಲುವುದು ಕಷ್ಟವಾಗಿತ್ತೇ ? ಅವನಿಗೆ ಶಿವನೇ ಬಂದು ವಾಲಿಯ ಸಹಾಯಕ್ಕೆ ನಿಂತಿದ್ದರೂ ಕೊಲ್ಲಲು ಯಾವುದೇ ಕಷ್ಟವಿರಲಿಲ್ಲ. ಅಂತೆಯೇ ಸಾಕ್ಷಾತ್ ಯಮಧರ್ಮನೇ ಬಂದು "ನಿನ್ನ ಆಯುಸ್ಸು ತೀರಿತು, ಬಳಿಗೆ ಬಾ" ಎಂದು ಕರೆದಿದ್ದರೂ, ಶ್ರೀರಾಮನ ಅಪ್ಪಣೆಯಿಲ್ಲದೆ ವಾಲಿಯನ್ನು ಮುಟ್ಟಲು ಯಮನಿಗೂ ಶಕ್ತಿ ಇರುತ್ತಿರಲಿಲ್ಲ. ಶ್ರೀಹರಿಯ ಸರ್ವೋತ್ತಮತ್ವವನ್ನು ಕುರಿತು ಈ ಪುಟ್ಟ ಬಾಲಕನು ನೀಡಿದ ವ್ಯಾಖ್ಯಾನದಿಂದ ಸಭಿಕರೆಲ್ಲರೂ ಪ್ರಭಾವಿತರಾಗಿ, ವಾಸುದೇವನು ಹೇಳಿದುದು ಸರ್ವಸಮಂಜಸವೆಂದು ತಲೆದೂಗಿ ಆನಂದಿಸಿದರು.

ಈ ಘಟನೆಯನ್ನು ಸ್ವತಃ ವೇದವತಿಯಿಂದಲೇ ಮಧ್ಯಗೇಹಭಟ್ಟರು ಕೇಳಿ ಅವಾಕ್ಕಾದರು. ಇದಾವುದನ್ನೂ ತಾವಾಗಲೀ, ಬೇರೆಯವರಾಗಲೀ ವಾಸುದೇವನಿಗೆ ಹೇಳಿಕೊಟ್ಟಿರಲಿಲ್ಲ. ಇಷ್ಟೆಲ್ಲ ಸಮಂಜಸ ಉತ್ತರ ಅವನಿಗೆ ಹೇಗೆ ಹೊಳೆಯಿತು ? ಅವನು ಸರ್ವಜ್ಞನಲ್ಲದೆ ಈ ಧರ್ಮಸೂಕ್ಷ್ಮಗಳು ಹೇಗೆ ತಿಳಿದೀತು — ಎಂದು ಅವರಿಗೆ ಮಗನ ಬಗೆಗೆ ಅತೀವ ಗೌರವಾದರಗಳು ಉಂಟಾದವು.

ಆದರೂ ಭಟ್ಟರು ಲೋಕಾರೂಢಿಯಾಗಿ ಇಂಥ ಪ್ರಸಂಗಗಳನ್ನು ಅದಷ್ಟು ಮಟ್ಟಿಗೆ ಎದುರು ಹಾಕಿಕೊಳ್ಳಬಾರದೆಂದು ಮಗನಿಗೆ ಬುದ್ಧಿವಾದ ನೀಡಿ ಅವನ ತಲೆಯನ್ನು ಅಭಿಮಾನದಿಂದ ನೇವರಿಸಿದರು.

ಅನಂತರ ಇಂಥ ಅತಿಮಾನುಷ ಮೇಧಾವಿ ಸುಪುತ್ರನನ್ನು ತನಗೆ ಮಗನಾಗಿದಯಪಾಲಿಸಿದ ಶ್ರೀಅನಂತಾಸನಸ್ವಾಮಿಯನ್ನು ಮನದಲ್ಲೇ ವಂದಿಸಿದರು.

ನೆಯ್ಯಂಪಳ್ಳಿಯಲ್ಲಿ ಪೌರಾಣಿಕಶಿವಶಂಕರಭಟ್ಟರಿಗೆ ಆದ ತೇಜೋವಧೆ ಕಥೆ ಅವರಿವರ ಬಾಯಿಗೆ ಬಿದ್ದು ಎಲ್ಲರೂ ವಾಸುದೇವನನ್ನು ಕೊಂಡಾಡುವರೇ ಆದರು. ಇದರಿಂದ ಅವನ ಅಭಿಮಾನಿಗಳಿಗಿಂತಲೂ ವಿರೋಧಿಗಳೇ ಹೆಚ್ಚಿದರು.

ಇನ್ನೊಮ್ಮೆ ವಾಸುದೇವನ ಅತಿಸೂಕ್ಷ್ಮವಾದ ವಿಷಯಜ್ಞಾನ ತಂದೆ ಮಧ್ಯಗೇಹಭಟ್ಟರನ್ನೂ ಇಕ್ಕಟ್ಟಿನಸ್ಥಿತಿಗೆ ಸಿಕ್ಕಿಸಿತ್ತು.

ಭಟ್ಟರು ಅವರ ಮನೆಯಲ್ಲಿಯೇ ಆಗಾಗ್ಗೆ ಯಾವುದಾದರೂ ಗ್ರಂಥವನ್ನು ತೆಗೆದುಕೊಂಡು ಪುರಾಣ ಹೇಳುತ್ತಿದ್ದರೆಂದು ಮೊದಲೇ ತಿಳಿಸಿದೆ. ಹೀಗೆ ಒಂದುದಿನ ಭಟ್ಟರು ಯಾವುದೋ ಒಂದು ಗ್ರಂಥವನ್ನು ವಿವರಿಸುತ್ತಿದ್ದಾಗ "ಲಿಕುಚ" ಎಂಬ ಶಬ್ದ ಬಂದಿತು, ಅದರ ಅರ್ಥ ಭಟ್ಟರಿಗೆ ತಿಳಿದಿರಲಿಲ್ಲ, ಅದನ್ನು ತೋರ್ಪಡಿಸಿಕೊಳ್ಳದೆ, ಅವರು ಅದನ್ನು ಹಾಗೆಯೇಬಿಟ್ಟು ತಮ್ಮ ಪ್ರವಚನವನ್ನು ಮುಂದುವರಿಸಿದರು.

ಆದರೆ ಅಲ್ಲೇ ಪುರಾಣ ಕೇಳುತ್ತಿದ್ದ ವಾಸುದೇವನು ಅಷ್ಟಕ್ಕೇ ಸುಮ್ಮನಾಗಲಿಲ್ಲ !

ಅವನು ತಂದೆಯನ್ನು "ಲಿಕುಚ" ಶಬ್ದದ ಅರ್ಥವೇನೆಂದು ಕೇಳಿದನು.[1]

ತಂದೆಯು ಗೊಂದಲಕ್ಕೆ ಬಿದ್ದರು.

"ಇದು ಒಂದು ಬಗೆಯ ಹಣ್ಣು" ಎಂದು ವಿವರಣೆ ಕೊಟ್ಟರು. ಇದರಿಂದ ವಾಸುದೇವನಿಗೆ ಸಮಾಧಾನ ದೊರಕಲಿಲ್ಲ. ಅವನು ಲಿಕುಚವೆಂದರೆ

---

1) ವಿವಿಧಶಾಖಿಪದಾರ್ಥನಿವೇದನೇ ಲಿಕುಚನಾಮ್ನಿ ತದಾನುದಿತಾರ್ಥಕೇ ।
ಕಿಮಿತಿ ತಾತ ತದರ್ಥಮವರ್ಣಯನ್ ಕಥಯಸೀತಿ ಶನೈರಯಮ
ಬ್ರವೀತ್ ॥
ಅವದಯತಿ ಪಿತರ್ಯಪಿ ಚೋದಿತೇ ಪ್ರತಿಬುಭುತ್ಸುಷು ತತ್ರ
ಜನೇಷ್ವಪಿ ।
ಅಯಮುದೀರ್ಯತದರ್ಥಮವಾಪ್ತವಾನ್ ಪರಿಷದೋ
ಹ್ಯಸಮಾನಸುಮಾನನಾಂ ॥
ಮ ॥ ವಿ ॥ ಸರ್ಗ–3–ಶ್ಲೋಕ 29–30

"ಹೆಬ್ಬುಲಸು" ಎಂದು ಅರ್ಥ ಹೇಳಿದನು. ಭಟ್ಟರು ಶಬ್ದಕೋಶ ನೋಡಿದಾಗ ವಾಸುದೇವನು ಹೇಳಿದ್ದ ಅರ್ಥವೇ ಸರಿಯಾಗಿತ್ತು. ಇದರಿಂದ ಭಟ್ಟರಿಗೆ ಪರಮಸಂತೋಷವಾಯಿತು. ಅವರು ಬಂದು ಮಗನನ್ನು ಎತ್ತಿಕೊಂಡು ತಲೆಯನ್ನು ಆಘ್ರಾಣಿಸಿ ಹೀಗೆ ಉಪದೇಶ ನೀಡಿದರು :

"ಮಗು, ಈ ಲೋಕದಲ್ಲಿ ಎಲ್ಲರೂ ಸತ್ಯವನ್ನೇ ಸ್ವೀಕರಿಸುವುದಿಲ್ಲ, ಈರ್ಷ್ಯಾವಂತರೂ ಇರುತ್ತಾರೆ, ಅವರು ಇಂಥದನ್ನು ಸಹಿಸುವುದಿಲ್ಲ, ಆದುದರಿಂದ ನೀನು ತುಂಬಿದ ಸಭೆಯಲ್ಲಿ ಹೀಗೆ ವಿದ್ವಾಂಸರನ್ನು ಅಪಮಾನ ಮಾಡಬೇಡ, ಅಲ್ಲದೆ ನೀನು ಹೀಗೆ ಬಹಿರಂಗವಾಗಿ ಪ್ರತಿಭೆಯನ್ನೂ ಪ್ರಕಟಿಸಲೂಬಾರದು." ಮಗನಿಂದ ಈ ವಿಷಯದಲ್ಲಿ ಭಾಷೆಯನ್ನೂ ಸಹ ತೆಗೆದುಕೊಂಡರು,

## ಗುರುಕುಲವಾಸ

ಲಕ್ಷ್ಮೀ, ಭಾರತೀ, ವಾರುಣೀ, ಪಾರ್ವತೀ ಮೊದಲಾದ ವೇದಾಭಿಮಾನಿದೇವತೆಗಳೂ, ಗಾಯತ್ರೀ ಸಾವಿತ್ರೀ ಸರಸ್ವತೀ ಎಂಬ ತ್ರಿದೇವತಾತ್ಮಕ ಶಕ್ತಿರೂಪಿಣಿಯಾದ ಓಂಕಾರಾತ್ಮಕ ದೇವಿಯೂ ಎಂದಿಗೆ ವಾಸುದೇವನಿಗೆ ಉಪನಯನಸಂಸ್ಕಾರವಾದೀತು. ಎಂದಿಗೆ ತಾವು ಅವನ ನಾಲಗೆಯೆಂಬ ರಂಗಸ್ಥಳದಲ್ಲಿ ನಾವು ನೆಲಸಿ ನರ್ತಿಸಬಹುದು-ಎಂದು ಕಾತರಗೊಂಡಿದ್ದರಂತೆ. ಅವರೆಲ್ಲರ ಬಯಕೆಯನ್ನು ಈಡೇರಿಸಲೆಂದು ಮಧ್ಯಗೇಹಭಟ್ಟ-ವೇದವತಿಯರು ಬಾಲಕ ವಾಸುದೇವನ ಉಪನಯನ ಸಂಸ್ಕಾರವನ್ನು ಅವನ ಬಾಲ್ಯದಲ್ಲಿಯೇ ವಿಧ್ಯುಕ್ತವಾಗಿ ನೆರವೇರಿಸಲು ನಿರ್ಧರಿಸಿದರು.

ವಾಸುದೇವನು ತನಗೆ ಉಪನಯನ-ಮುಂಜಿಯಾಗುವುದೆಂದು ಕೇಳಿ ಸಂತೋಷಪಟ್ಟನು. ತಾನು ವೇದಾಧಿಕಾರಿಯಾಗುವೆನೆಂದೂ, ಮಂತ್ರಾಭಿಮಾನಿ ದೇವತೆಗಳನ್ನು ತಾನು ಒಲಿಸಿಕೊಳ್ಳಲು ಬೇಕಾದ ಸಂಸ್ಕಾರ ಅನುಷ್ಠಾನ ಮಾರ್ಗಗಳು ತನಗೆ ದೊರಕುವುವೆಂದೂ ಹಿಗ್ಗಿದನು. ಅಪರೋಕ್ಷಪ್ರಿಯರಾದ ದೇವತೆಗಳು ಮಂತ್ರಾಧೀತರೆಂಬುದು ವಾಸುದೇವನಿಗೆ ತಿಳಿದಿತ್ತು. ದೇವತೆಗಳನ್ನು ಒಲಿಸಿಕೊಳ್ಳಲು ಮಂತ್ರಗಳು ಮುಖ್ಯ. ಇದಕ್ಕೆ

ಮಂತ್ರದ್ರಷ್ಟಾರರಾದ ಋಷಿಗಳ ಅನುಗ್ರಹ ಬೇಕೇಬೇಕು. ಅವರ ಅನುಗ್ರಹ ಸಂಪಾದನೆಗೆ ಸಂಧ್ಯೋಪಾಸನೆಗಿಂತ ಬೇರೆ ಸುಲಭವಾದ ಮಾರ್ಗವಿಲ್ಲ ಆದುದರಿಂದ ಬ್ರಹ್ಮಜ್ಞಾನಕ್ಕೆ ಮೊದಲ ಸೋಪಾನ, ಸಂಧ್ಯೋಪಾಸನೆ ಎಂದು ಮಧ್ಯಗೇಹಭಟ್ಟರು ವಾಸುದೇವನಿಗೆ ಗಾಯತ್ರೀಮಂತ್ರೋಪದೇಶನ್ನು ಮಾಡಲು ಸಂಭ್ರಮಪಟ್ಟರು.

ಅಜಿನದಂಡಕಮಂಡಲುಗಳಿಂದ ಕೂಡಿದ ಬಾಲಕನನ್ನು ನೋಡುವ ಬಯಕೆ ತೀವ್ರವಾಯಿತು. ಒಂದು ಶುಭ ದಿನ, ನಿಷ್ಪಂಚಕ ಲಗ್ನದಲ್ಲಿ ತಂದೆಯು ಪುರೋಹಿತರ ಸಮ್ಮುಖದಲ್ಲಿ ವಾಸುದೇವನಿಗೆ ಚೌಲಾದಿ ಶಾಸ್ತ್ರಗಳನ್ನು ಮಾಡಿಸಿ ಗಾಯತ್ರೀಮಂತ್ರೋಪದೇಶಮಾಡಿ ಉಪನಯನ ಮಹೋತ್ಸವ ವನ್ನೂ ನೆರವೇರಿಸಿದರು.

ಅನಂತರ ಮಾತಾಪಿತೃಗಳು ಆಚಾರ್ಯರು ಇವರ ಕೈಯಿಂದ ಬಿಕ್ಷೆ ಸ್ವೀಕರಿಸುವ ಶಾಸ್ತ್ರವೂ ನೆರವೇರಿತು.

ಮಗನಿಗೆ ಮಾಡಬೇಕಾದ ಉಪನಯನಸಂಸ್ಕಾರಗಳೆಲ್ಲವೂ ಮುಗಿದ ಮೇಲೆ ಅವನನ್ನು ಏಕಾಂತದಲ್ಲಿ ಕೂಡಿಸಿಕೊಂಡು ಹೀಗೆ ಉಪದೇಶಿಸಿದರು :

"ಮಗೂ, ನೀನು ಈ ಘಳಿಗೆಯಿಂದ ದ್ವಿಜನಾದಿ. ತ್ರಿಕಾಲದಲ್ಲಿಯೂ ಸಂಧ್ಯಾವಂದನೆಯನ್ನೂ ಅಗ್ನಿಕಾರ್ಯಗಳನ್ನೂ ಸಾಂಗವಾಗಿ ನೆರವೇರಿಸು. ಗುರು ಹಿರಿಯರನ್ನು ಸೇವಿಸು. ಬ್ರಹ್ಮಚರ್ಯವನ್ನು ಪರಿಪಾಲಿಸು, ವೇದಗಳನ್ನು ಗುರುಮುಖದಿಂದ ಅಧ್ಯಯಮಾಡು.

ಈ ಮಾತನ್ನು ಕೇಳಿ ವಾಸುದೇವನು ಮುಗುಳುನಗೆ ನಕ್ಕನು ಭಾವಿ ಬ್ರಹ್ಮನ ಅವತಾರನಾದ ವಾಸುದೇವನಿಗೆ ಎಂಥ ಉಪದೇಶ ?

ಭಗವಂತನು ಭೂಲೋಕದಲ್ಲಿ ಅವತರಿಸಿದಾಗ ತಾನೂ ಮಾನವನಂತೆ ನಡೆದುಕೊಳ್ಳಬೇಕೆಂಬ ನಿಯಮವನ್ನು ಪಾಲಿಸುವನು. ಇನ್ನು ಅವನ ಭಕ್ತರಾದ ದೇವತೆಗಳು ಪ್ರತಿಷ್ಠೆಯನ್ನು ಆರಸುವರೆ ?

ಸರ್ವಜ್ಞರಾದ ವಾಯುದೇವರು ಈ ನಿಯಮವನ್ನು ಪಾಲಿಸುವವರೇ ಹೊರತು ಮುರಿಯುವವರಲ್ಲ—ಎಂಬುದನ್ನು ತೋರಿಸಲೆಂಬಂತೆ

ವಾಸುದೇವನು ತಂದೆಯ ಉಪದೇಶವನ್ನು ಕೇಳಿ ಅದರಂತೆ ನಡೆಯುವುದಾಗಿ ಆಶ್ವಾಸನವಿತ್ತನು.

ತಾಯಿ ವೇದವತಿಗೆ ವಟುವಾಮನನಂತೆ ಅಲಂಕಾರಗೊಂಡು ನಿಂತ ತೇಜಸ್ವೀ ವಟು–ವಾಸುದೇವನ ವಟು ರೂಪವನ್ನು ನೋಡಿದಷ್ಟೂ ನೋಡಬೇಕೆನ್ನುವ ಆಶೆ. ಆದರೆ ಅವಳಿಗೆ ತನ್ನ ಕಣ್ಣುಗಳಿಂದ ಮಗನಿಗೆ ದೃಷ್ಟಿಯಾಗುವುದೆಂದು ಅಳುಕು. ಅವಳು ಮಗನನ್ನು ನೋಡಿದಾಗಲೆಲ್ಲಾ ಕಣ್ಮುಚ್ಚಿ, ತನ್ನ ಮನೋಮಂದಿರದಲ್ಲಿ ಆರಾಧ್ಯ ದೈವನಾಗಿದ್ದ ಅವನನ್ನು ನೋಡುತ್ತಾ ಆಶೀರ್ವಾದ ಮಾಡುತ್ತಿದ್ದಳು.

ವಾಸುದೇವನು ಸಂಧ್ಯೋಪಾಸನೆಯ ಅಂಗಗಳಾದ ಶುದ್ಧಿಕ್ರಮ. ಆಚಮನ, ಸಂಧ್ಯೋಪಸ್ಥಾನಗಳನ್ನಲ್ಲದೆ ಆಸನ, ಮುದ್ರೆಗಳನ್ನೂ ಬಹುಬೇಗನೇ ಕಲಿತನು.

ಹೀಗಿರಲು ಒಂದು ದಿನ ವಾಸುದೇವನ ಸಂಧ್ಯೋಪಾಸನೆಯಿಂದ ಹೊಂದಿದ ಬ್ರಹ್ಮತೇಜಸ್ಸನ್ನು ಪರೀಕ್ಷಿಸುವಂಥ ಒಂದು ಸಣ್ಣ ಘಟನೆಯು ನಡೆಯಿತು.

ಆ ದಿನ ಸಂಜೆ ವಾಸುದೇವನು ಅಗ್ನಿಕಾರ್ಯಕ್ಕೆ ಸಮಿತ್ತುಗಳನ್ನು ಆರಿಸಿಕೊಂಡು ಬರಲು ಊರ ಹೊರಗಿನ ನಾಗಬನಕ್ಕೆ ಹೋಗಿದ್ದನು. ಅಲ್ಲಿನ ಪ್ರಕೃತಿ ಸೊಬಗನ್ನು ಸವಿಯುತ್ತಾ ಮೈಮರೆತು ನಿಂತನು.

ಆಗತಾನೇ ಸಂಜೆಯಾಗಿ ಸೂರ್ಯಾಸ್ತಮಯವಾಗುತ್ತಿತು. ಪಶ್ಚಿಮ ದಿಗಂತದಲ್ಲಿ ಸೂರ್ಯನಾರಾಯಣನು ಬೆಂಕಿಯುಂಡೆಯಾಗಿ ತಾಪವನ್ನು ಪರಿಹರಿಸಿಕೊಳ್ಳಲೆಂಬಂತೆ ಸಮುದ್ರಮುಖಿಯಾಗಿ ಇಳಿಯುತ್ತಿದ್ದನು. ಪಶ್ಚಿಮದ ಕಡಲ ತೀರದಲ್ಲಿ ಮೋಡಗಳ ದಿಬ್ಬಣ ಹೊರಟಿತ್ತು. ಅವು ಸೂರ್ಯನಾರಾಯಣನಿಗೆ ವರ್ಣದ ಓಕುಳಿಯನ್ನು ಎರಚಿ ಸ್ವಾಗತಿಸಲು ನಿಂತಂತೆ ತೋರುತ್ತಿತ್ತು. ಈ ಅಪೂರ್ವ ವರ್ಣದಾರತಿಯನ್ನು ನೋಡುತ್ತಾ, ಒಂದು ದಟ್ಟವಾದ ಪೊದೆಯ ಬಳಿ ಇದ್ದ ಹೆಬ್ಬಂಡೆಗೆ ಒರಗಿಕೊಂಡು ವಾಸುದೇವನು ನಿಂತಿದ್ದನು. ಅಲ್ಲಿದ್ದ ಹುತ್ತದಲ್ಲಿ ವಾಸಿಸುತ್ತಿದ್ದ ಒಂದು ವಿಷಸರ್ಪವು ಹೊರಗೆ ಬಂದು ಅವನ

ಕಾಲನ್ನು ಕಚ್ಚಿತು. ವಾಸುದೇವನನ್ನು ಕಚ್ಚಿದುದರಿಂದ ಅದರ ಹಲ್ಲುಗಳೇ ಭಂಗವಾದವು !1

ಆಗಲೇ ವಾಸುದೇವನಿಗೆ ಎಚ್ಚರ. ಅವನು ಮುಳ್ಳು ತುಳಿದವನಂತೆ "ಹಾಂ" ಎಂದು ಕಾಲನ್ನು ಮೇಲಕ್ಕೆ ಎತ್ತಿದನು. ಅನಂತರ ಏನಾಯಿತೆಂದು ಸುತ್ತಲೂ ಕಣ್ಣು ಹೊರಳಿಸಿದನು. ಎದುರಿಗೆ ಸುಮಾರು ಒಂದುಮಾರು ಉದ್ದವಿದ್ದ ಒಂದು ನಾಗರಹಾವು ಹೆಡೆಯೆತ್ತಿ ಫೂತ್ಕರಿಸುತ್ತಾ ವಾಸುದೇವನ ಮುಂದೆ ನಿಂತಿತ್ತು. ವಾಸುದೇವನಿಗೆ ನಡೆದ ಸಂಗತಿ ಎಲ್ಲವೂ ಸ್ಪಷ್ಟವಾಗಿ ಗೋಚರವಾಯಿತು. ಅವನು ಧೈರ್ಯಗುಂದದೆ ಎದುರಿಗೆ ನಿಂತಿದ್ದ ಅಸುರರೂಪಿ ನಾಗರಹಾವನ್ನು ಒಂದು ಅಲ್ಪಕ್ರಿಮಿ ಎಂಬಂತೆ ತನ್ನ ಕೈಯಿಂದ ಅದರ ಬಾಲವನ್ನು ಹಿಡಿದು ಮೇಲಕ್ಕೆ ಎತ್ತಿ ಬಂಡಗಲ್ಲಿಗೆ ಅಪ್ಪಳಿಸಿದನು. ಅದು ತಾನು ಮಾಡಿದ ದುಷ್ಕೃತ್ಯದ ಫಲವನ್ನು ಅನುಭವಿಸುತ್ತಾ ಮಡಿಯಿತು. ಈ ಸಂಗತಿಯನ್ನು ಕೇಳಿದವರೂ, ಈ ಸರ್ಪದಿಂದ ನೊಂದಿದ್ದವರೂ ಒಂದು ದೈತ್ಯಸದೃಶ ದುಷ್ಟ ಪ್ರಾಣಿಯು ನಾಶವಾಯಿತೆಂದು ಹಿಗ್ಗಿದರು.

ಭಟ್ಟದಂಪತಿಗಳಿಗೆ ಈ ವಿಷಯ ತಿಳಿದು ಗಾಬರಿಯಾಯಿತು.

"ಏನೂ ಇಲ್ಲಮ್ಮ, ಒಂದು ಕೆಟ್ಟ ಹುಳ ಕಚ್ಚಿತು. ನನ್ನನ್ನು ಕಚ್ಚಲು ಪ್ರಯತ್ನಿಸಿ ತಾನೇ ನಾಶವಾಯಿತು"–ಎಂದು ಅತಿಸಾಮಾನ್ಯ ಸಂಗತಿ ಎಂಬಂತೆ ನಿಧಾನವಾಗಿ ಶಾಂತನಾಗಿಯೇ ವಾಸುದೇವನು ತಿಳಿಸಿದನು.

ಭಟ್ಟರು ತಮಗೆ ತಿಳಿದಿದ್ದ ವಿಷಾಪಹಾರಿ ಗರುಡಮಂತ್ರದಿಂದಲೂ ಧನ್ವಂತರಿ ಮಂತ್ರದಿಂದಲೂ ಜಪಿಸಿ ಹಾವಿನವಿಷವನ್ನು ಇಳಿಸಿದರು.

ವಾಯುದೇವರಾಗಿದ್ದಾಗ ಸಮುದ್ರಮಂಥನ ಕಾಲದಲ್ಲಿ ಹಾಲಾಹಲ ವಿಷವನ್ನು ಕುಡಿದು ಜೀರ್ಣಿಸಿಕೊಂಡಿದ್ದ ಮುಖ್ಯಪ್ರಾಣನಿಗೆ ಮಧ್ಯಗೇಹಭಟ್ಟರು

---

1) ಅವಿರಲೈರ್ಗರಲೋಷ್ಮಭಿರಾಕುಲೀಕೃತಸಮಸ್ತಜನೋ ವಿಚಚಾರ ಯಃ ।
ಕ್ವಚಿದಮುಂ ನಿಜಘಾಂಸುರಸಾಂತಿಮಾನುಪಸಸರ್ಪ ಸ
ಸರ್ಪಮಯೋsಸುರಃ ॥
ಮ ॥ ವಿ ॥–ಸರ್ಗ 3 ಶ್ಲೋಕ 38

ಗರುಡಮಂತ್ರ ಜಪಿಸಿದ್ದರು ! ಇದನ್ನು ನೋಡಿ ವಾಸುದೇವನು ಅಲೌಕಿಕ ನಗೆ ನಕ್ಕನು, ಅಷ್ಟೆ.

ಇದುವರೆಗೆ ಮನೆಯಲ್ಲಿ ವಾಸುದೇವನ ಬಾಲಲೀಲೆಗಳನ್ನು ನೋಡಿ ಸಂತೋಷಪಡುತ್ತಿದ್ದ ಆ ದಂಪತಿಗಳಿಗೆ ಈಗ ವಿರಹತಾಪ ಕಾದಿತ್ತು.

ಭಟ್ಟರು ಉಪನೀತನಾದ ಮಗನನ್ನು ಸಮೀಪದ ಊರಿನಲ್ಲಿ ಗುರು ಕುಲ ನಡೆಸುತ್ತಿದ್ದ ತೋಂಟತಿಲ್ಲಾಯರೆಂಬ ವಿದ್ವಾಂಸರ ಬಳಿಗೆ ವಿದ್ಯೆ ಕಲಿಯಲು ಬಿಡಲು ನಿಶ್ಚಯಿಸಿದರು. ಮೊದಲು ಈ ವಾರ್ತೆ ಕೇಳಿ ವೇದವತಿ–ಕಲ್ಯಾಣಿಯರಿಗೆ ಅಪಾರ ದುಃಖವಾಯಿತು. ಆದರೆ ಪ್ರತಿ ಅನ ಧ್ಯಯನದ ದಿನ ಊರಿಗೆ ಬಂದು ತಂದೆತಾಯಿಗಳನ್ನು ಮಾತನಾಡಿಸಿಕೊಂಡು ಹೋಗುವುದಾಗಿ ವಾಸುದೇವನು ವಚನ ಕೊಟ್ಟಮೇಲೆ ಅವರು ಸಂತೋಷ ದಿಂದಲೇ ಆಶೀರ್ವಾದ ಮಾಡಿ ಅನುಮತಿ ಇತ್ತರು.

ಅಲ್ಲದೆ ವಿಮಾನಗಿರಿ ಇದ್ದ ಕುಂಜಾರಿನ ತೋಂಟತ್ತಿಲ್ಲಾಯರ ಗುರುಕುಲ ಬೆಳ್ಳೆಗೆ ಎರಡು ಮೈಲಿ ದೂರ. ನೆನೆಸಿಕೊಂಡಾಗ ತಂದೆ ತಾಯಿಗಳು ಅಲ್ಲಿಗೆ ಬಂದು ಮಗನನ್ನು ನೋಡಿಕೊಂಡು ಹೋಗಬಹುದಿತ್ತು. ಹೀಗಾಗಿ ಅವರು ಸಂತೋಷದಿಂದಲೇ ಒಂದು ಶುಭದಿನ ವಾಸುದೇವ ನನ್ನು ಕುಂಜಾರಿನ ಗುರುಕುಲಕ್ಕೆ ಕರೆತಂದು, ಗುರುಗಳಾದ ತೋಂಟತಿಲ್ಲಾ ಯರಿಗೆ ಒಪ್ಪಿಸಿದರು. ಅಲ್ಲಿಂದ ಹೋಗುವಾಗ ಅವರು ಗದ್ಗದ ಕಂಠದಿಂದ,

"ಸ್ವಾಮಿ, ಈ ಮಗು ಇನ್ನು ಮೇಲೆ ನಮ್ಮ ಮಾಣಿಯಲ್ಲ, ನಿಮ್ಮವನು. ಇವನಿಂದ ನಿಮಗೆ ಏನಾದರೂ ತೊಂದರೆಯಾದರೆ ಔದಾರ್ಯ ದಿಂದ ಕ್ಷಮಿಸಬೇಕು. ಇವನಿಗೆ ವಿದ್ಯಾಬುದ್ಧಿಗಳನ್ನು ಕಲಿಸಿಕೊಟ್ಟು ಕಾಪಾಡ ಬೇಕು"— ಎಂದು ಹೇಳಿ ಬೀಳ್ಕೊಂಡರು.1

ಹೀಗೆ ವಾಸುದೇವನಿಗೆ ಜೀವನದಲ್ಲಿ ಹೊಸಯುಗ ಆರಂಭವಾಯಿತು.

---

1) ಕರತಲೇ ಕಂದುಕವತ್ಸದಾ ಸಕಲಯಾ ಕಲಯಾ ಸಹ ವಿದ್ಯಯಾ ।
ಅರಿಧರೇಣ ಸಮಂ ಸ್ಫುರಿತಂ ಗುರೋರ್ಮನಸಿ ತಸ್ಯ ವಿಡಂಬಯತೋ ಜನಾನ್ ॥
ಮ ॥ ವಿ ॥ ಸರ್ಗ–3–ಶ್ಲೋಕ 42

# ಗುರುವಿಗೇ ಗುರುವಾದ ಶಿಷ್ಯ

ಕುಂಜಾರು ತೋಂಟತಿಲ್ಲಾಯರ ಗುರುಕುಲವು ಆ ಪ್ರಾಂತ್ಯಕ್ಕೆಲ್ಲಾ ಸುಪ್ರಸಿದ್ಧವಾಗಿತ್ತು. ಇದಕ್ಕೆ ಅನೇಕ ಕಾರಣಗಳಿದ್ದವು. ತೋಂಟತಿಲ್ಲಾಯರು ಸಂಸ್ಕೃತ–ಪ್ರಾಕೃತಗಳಲ್ಲಿ ಉದ್ದಾಮ ಪಂಡಿತರಾಗಿದ್ದರು. ಅವರಿಗೆ ಗೊತ್ತಿಲ್ಲದ ಶಾಸ್ತ್ರವಾಗಲೀ ಸಾಹಿತ್ಯವಾಗಲೀ ಯಾವುದೂ ಇರಲಿಲ್ಲ. ಅವರು ನಡೆಸುತ್ತಿದ್ದ ಪಾಠಶಾಲೆಯನ್ನು ಅವರ ಅಭಿಮಾನಿಗಳು ಗುರುಕುಲವೆಂದು ಕರೆಯುತ್ತಿದ್ದರು.

ಆಚಾರ್ಯರು ತಮ್ಮನ್ನು ಸಂಸ್ಕೃತದಲ್ಲಿ ಪೂಗವನಾನ್ವಯಜರೆಂದು ಹೆಮ್ಮೆಯಿಂದ ಕರೆದುಕೊಳ್ಳುತ್ತಿದ್ದರು. ಅವರ ಹಿರಿಯರು ಯಾರೋ ಒಬ್ಬರು ಹತ್ತಾರು ಎಕರೆಗಳಷ್ಟು ಅಡಕೆ ಹಾಗೂ ತೆಂಗಿನ ತೋಟದ ಒಡೆಯರಾಗಿದ್ದರು. ಶ್ರೀಮಂತರೂ ಆಗಿದ್ದ ಅವರು ವೇದಾಧ್ಯಯನಕ್ಕೆ ಹೆಸರಾಗಿದ್ದರು. ಅವರು ಬಡವರ ಮಕ್ಕಳನ್ನು ಮನೆಯಲ್ಲಿ ಇರಿಸಿಕೊಂಡು ಪಾಠ ಹೇಳಿ ಕೊಟ್ಟು ಜೀವನಕ್ಕೆ ಒಂದು ದಾರಿ ಮಾಡಿಕೊಟ್ಟು ಕಳುಹಿಸುತ್ತಿದರು. ಹೀಗಾಗಿ ಅವರು ವಾಸಿಸುತ್ತಿದ್ದ ತೋಟದ ಮನೆಯು ನಿಜವಾಗಿಯೂ ಒಂದು ಋಷ್ಯಾಶ್ರಮದಂತೆ ನಯನಮೋಹಕವಾಗಿ ಕಂಗೊಳಿಸುತ್ತಿತ್ತು.

ತೋಂಟತಿಲ್ಲಾಯರ ಮನೆಯಲ್ಲಿ ಸ್ವಜನರಿಗಿಂತ ಹೊರಗಿನಿಂದ ಬಂದು ವಿದ್ಯೆಯನ್ನು ಕಲಿಯುತ್ತಿದ್ದವರೇ ಹೆಚ್ಚಾಗಿರುತ್ತಿದ್ದರು. ಅವರು ತೋಂಟತಿಲ್ಲಾಯರ ಅಭಿಮಾನ ಪುತ್ರರು. ಅವರ ಗುರುಕುಲದಲ್ಲಿ ವಾಸುದೇವನಂತಹ ಐದಾರು ವರ್ಷದ ಹುಡುಗರಿಂದ ತೊಡಗಿ ಇಪ್ಪತ್ತೈದು ವರ್ಷದ ಯುವಕರವರೆಗೂ ವಿವಿಧ ಶಾಸ್ತ್ರಪಾಠ ಕಲಿಯುತ್ತಿದ್ದರು.

ಇವರಿಗೆಲ್ಲಾ ಅಲ್ಲಿ ಊಟ, ವಸತಿಗಳನ್ನೇರ್ಪಡಿಸಿದ್ದರು. ಅವರು ಗುರುಗಳ ಸೇವೆಯನ್ನು ತಮ್ಮದೇ ಆದ ರೀತಿಯಲ್ಲಿ ಮಾಡುತ್ತಿದ್ದರು. ಅಂದರೆ ಗುರುಗಳ ತೋಟದಲ್ಲಿ ಅಡಕೆ ಮರಕ್ಕೆ ನೀರು ಹಾಯಿಸುವುದು, ಕಂಗು, ತೆಂಗುಗಳನ್ನು ಫಲ ಬಿಟ್ಟಾಗ ಕೀಳುವುದು, ಅವುಗಳನ್ನು ಸಂತೆಗೆ ಒಯ್ದು ವಿಕ್ರಯ ಮಾಡುವುದು, ಬತ್ತದ ಗದ್ದೆಗೆ ನೀರು ಹಾಯಿಸುವುದು, ಕಳೆ ಕೀಳಲು ನೆರವಾಗುವುದು, ಕಣದಲ್ಲಿ ಧಾನ್ಯ ಬೇರ್ಪಡಿಸುವುದು, ಅವು

ಗಳನ್ನು ಪೆಂಡಿ ಕಟ್ಟುವುದು, ಹುಲ್ಲಿನ ಬಣವೆ ಹಾಕುವುದು - ಹೀಗೆ ಹತ್ತಾರು ಒಕ್ಕಲುಮಕ್ಕಳ ಕೆಲಸವನ್ನು ಗುರುಕುಲದ ವಿದ್ಯಾರ್ಥಿಗಳೇ ಗುರುಸೇವಾದೀಕ್ಷರಾಗಿ ನಿರ್ವಹಿಸುತ್ತಿದ್ದರು. ಇದರಿಂದ ಗುರುಗಳು ಸಂತೃಪ್ತರಾಗಿ ಅವರಿಗೆ ಹಗಲುರಾತ್ರಿಯೆನ್ನದೆ ವಿದ್ಯಾದಾನ ಮಾಡುತ್ತಿದ್ದರು.

ವಾಸುದೇವನು ಅವರ ಗುರುಕುಲಕ್ಕೆ ಸೇರಿದಾಗ, ಅಲ್ಲಿದ್ದ ವಿದ್ಯಾರ್ಥಿಗಳಲ್ಲಿ ಅವನೇ ಚಿಕ್ಕವನು. ಇದರಿಂದ ಕೆಲವು ವಿದ್ಯಾರ್ಥಿಗಳಿಗೆ ವಾಸುದೇವನನ್ನು ಕಂಡರೆ ಒಂದು ರೀತಿಯ ಬಾಲಕನೆಂಬ ತಚ್ಛ ಭಾವನೆ. ಅವನನ್ನು ಅವರು ಹಗುರವಾಗಿ ನಡೆಸಿಕೊಂಡಾಗ ವಾಸುದೇವನು ಎಂಥ ಅಸಾಮಾನ್ಯ ವ್ಯಕ್ತಿ ಎಂಬುದನ್ನು ತೋರಿಸಿದ್ದನು.

ವಾಸುದೇವನು ಓದಿಗಿಂತ ಹೆಚ್ಚಾಗಿ ಅಂಗಸಾಧನೆಯಲ್ಲಿಯೇ ಹೆಚ್ಚಿನ ಸಮಯ ಕಳೆಯುತ್ತಿದ್ದನು. ಅವನಿಗೆ ಓಡುವುದು, ಹಾರುವುದು, ಮಲ್ಲ ಯುದ್ಧ, ಮರ ಹತ್ತುವುದು, ಮಂಗನಂತೆ ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಗೆ ಜಿಗಿಯುವುದು, ಭಾರವಾದ ವಸ್ತುಗಳನ್ನು ಎತ್ತುವುದು — ಹೀಗೆ ಅನೇಕ ಬಗೆಯ ಶೌರ್ಯಪ್ರದರ್ಶನದ ಆಟಗಳೆಂದರೆ ಅಪಾರ ಪ್ರೀತಿ.

ಆಗಾಗ ತೋಂಟತಿಲ್ಲಾಯರು ಶಿಷ್ಯರಿಗೆ ಇಂಥ ದೇಹಶ್ರಮದ ಸ್ಪರ್ಧೆಗಳನ್ನು ಏರ್ಪಡಿಸುತ್ತಿದ್ದರು. ಹುಡುಗರಿಗೆ ಬೇರೆ, ದೊಡ್ಡವರಿಗೆ ಬೇರೆ ಹೀಗೆ ಸ್ಪರ್ಧೆಗಳನ್ನು ಏರ್ಪಡಿಸಿದ್ದರು. ವಾಸುದೇವನು ದೊಡ್ಡವರಿಗಾಗಿ ಏರ್ಪಡಿಸಿದ ಸ್ಪರ್ಧೆಗಳಲ್ಲಿಯೂ ಜಯಗಳಿಸುತ್ತಿದ್ದನು. ಇದರಿಂದ ಅವನು ಕೆಲವರ ಅಭಿಮಾನಕ್ಕೆ ಪಾತ್ರನಾದರೆ ಹಲವರ ಅಸೂಯೆ ದ್ವೇಷಗಳಿಗೆ ಕಾರಣನಾದನು. ಅವರು ಗುರುಗಳ ಬಳಿ ಅವನ ವಿರುದ್ಧ ಚಾಡಿ ಹೇಳುತ್ತಿದ್ದರು ; ಅವನ ವಿರುದ್ಧ ಅವರ ಮನಸ್ಸನ್ನು ಕೆಡಿಸಲು ಪ್ರಯತ್ನಿಸುತ್ತಿದ್ದರು.

ಒಂದು ದಿನ ವಾಸುದೇವನಿಂದ ಪರಾಜಿತನಾದ ಒಬ್ಬ ಶಿಷ್ಯನು ಗುರುಗಳಲ್ಲಿ ಅವನ ವಿರುದ್ಧ ದೂರು ಹೇಳಿದನು.

"ಗುರುಗಳೇ, ನೀವು ವಾಸುದೇವನನ್ನು ಊರಿಗೆ ಹಿಂದಕ್ಕೆ ಕಳುಹಿಸಿಬಿಡುವುದೇ ಲೇಸು. ಏಕೆಂದರೆ ಅವನು ಒಂದು ಪಾಠವನ್ನೂ ಸರಿಯಾಗಿ ಗಟ್ಟಿ ಮಾಡುವುದಿಲ್ಲ. ಕೇಳಿದರೆ ತನಗೆ ಎಲ್ಲವೂ ಬರುತ್ತದೆಂದು ಹೇಳುತ್ತಾನೆ. ಬೇಕಾದರೆ ನೀವೇ ಪರೀಕ್ಷಿಸಿ"—ಎಂದನು.

ಆದರೂ ಆಚಾರ್ಯರು ವಾಸುದೇವನನ್ನು ಕರೆಸಿಕೊಂಡು ತಾವು ಹೇಳಿಕೊಟ್ಟಿದ್ದ ಈಶಾವ್ಯಾಸ್ಯೋಪನಿಷತ್ತಿನ ಸಾರವೇನು ಎಂದು ಕೇಳಿದರು.

ಅದಕ್ಕೆ ವಾಸುದೇವನು ಅರಳು ಹುರಿದಂತೆ ಬಡಬಡನೆ ಹೇಳಿದನು,

" ಈಶಾವಾಸ್ಯಮಿದಂ ಸರ್ವಮ್ " ಈ ಮಾತಿನ ಅರ್ಥ :- ತತ್ ಸೃಷ್ಟ್ವಾ ತದೇವ ಅನುಪ್ರಾವಿಶತ್ ಎಂಬ ಶ್ರುತಿಯಂತೆ ವಿಶ್ವದಲ್ಲಿಯ ಸಕಲ ಚೇತನಾಚೇತನ ವಸ್ತುಗಳೂ ಪರಮಾತ್ಮನ ಆವಾಸಸ್ಥಾನಗಳಾಗಿವೆ. ಇದನ್ನು ಈ ಶ್ರುತಿ ಸಾರುತ್ತದೆ, "ಕೋನ್ಯಾಹ್ಯೇವಾನ್ಯಾತ್ ಕಃ ಪ್ರಾಣ್ಯಾತ್" ಎಂಬ ಶ್ರುತಿಯಂತೆ ಪರಮಾತ್ಮನಾದ ಶ್ರೀಮನ್ನಾರಾಯಣನು ಸರ್ವತಂತ್ರ ಸ್ವತಂತ್ರನೆಂಬುದನ್ನು ಈ ತಿಳಿಸುವುದೇ ಉಪನಿಷತ್ತಿನ ಸಾರ".

" ಮಾ ಗೃಧ "

"ಹಾಗೆಂದರೆ ಏನು ?"

"ಇತರರನ್ನು ಯಾವುದಕ್ಕೂ ಯಾಚಿಸಬೇಡ, ಎಲ್ಲವೂ ಆ ಪರಮಾತ್ಮನದೇ ಆಗಿರುವುದರಿಂದ ಕೊಡಲು ಸಮರ್ಥನು ಅವನೊಬ್ಬನೇ ಹೊರತು ಅನ್ಯರಲ್ಲ. ಆದುದರಿಂದ ಇತರರ ಬಳಿ ಕೈಯೊಡ್ಡಬೇಡ"

"ಭಗವಂತನ ಇಚ್ಛೆ ಹಾಗಿದ್ದರೆ, ಅಂತೇ ಆಗಲಿ"

—ಎಂದು ಹೇಳಿ ಎಂಟು ದಿನಗಳವರೆಗೆ ವಾಸುದೇವನು ಕೇವಲ ತರಗುಎಲೆ ತಿಂದು ನೀರನ್ನು ಕುಡಿದುಕೊಂಡು ಇದ್ದುಬಿಟ್ಟನು.

ಕಡೆಗೆ ತೋಂಟತಿಲ್ಲಾಯರೇ ಸೋತು ಅವನಿಗೆ ಶರಣುಬಂದು ಊಟ ಮಾಡಲು ಒಪ್ಪಿಸಬೇಕಾದರೆ ಬಹುಪ್ರಯತ್ನ ಬೇಕಾಯಿತು.

ವಾಸುದೇವನಿಗೆ ಈಜುವುದೆಂದರೆ ತುಂಬಾ ಆಪ್ಯಾಯಮಾನ. ಒಮ್ಮೆ ನೀರಿಗೆ ಇಳಿದನೆಂದರೆ ಅವನನ್ನು ಅಲ್ಲಿಂದ ಏಳಿಸಬೇಕಾದರೆ ಗೆಳೆಯರಿಗೆ ಸಾಕುಸಾಕಾಗುತ್ತಿತ್ತು. ಒಮ್ಮೆ ನೀರಿಗಿಳಿದ ಇವನಿಗೆ ಸ್ನೇಹಿತರು ಕೂಡಿ

ಕೊಂಡು ಬೊಗಸೆ ಬೊಗಸೆಗಳಲ್ಲಿ ನೀರನ್ನು ಎರಚಿದರು. ನೀರಿನಿಂದ ಕಣ್ಣುಗಳಿಗೆ ತೊಂದರೆಯಾದರೂ ಮುಖ ಮಾತ್ರ ಬಾಡಲಿಲ್ಲ. ಈ ಸ್ಪರ್ಧೆಯಲ್ಲಿ ಅವನೇ ಜಯಶಾಲಿಯಾದನು.[1]

ಇನ್ನೊಮ್ಮೆ ವಾಸುದೇವನು ತನ್ನನ್ನು ಮಲ್ಲಯುದ್ಧದಲ್ಲಿ ನೆಲಕ್ಕೆ ಕೆಡವುವವರಿಗೆ ಬಹುಮಾನ ನೀಡುವುದಾಗಿ ಪ್ರಕಟಿಸಿದನು. ಹತ್ತು ಜನ ಯುವಕರು ಒಟ್ಟಿಗೆ ಬಂದು ಅವನ ಮೇಲೆ ಎರಗಿದ್ದರೂ ವಾಸುದೇವನು ಮಾತ್ರ ಬಂಡೆಗಲ್ಲಿನಂತೆ ಚಲಿಸದೆ ನಿಂತಿದ್ದನು. ಎಷ್ಟೆಂದರೂ ಅವನು ಹಿಂದೆ ಭೀಮನಾಗಿ ಅವತರಿಸಿದ್ದನಲ್ಲವೆ ?

ಅವನ ಈ ಎಲ್ಲ ನಡೆವಳಿಕೆ ಎಲ್ಲರಿಗೂ ವಿಸ್ಮಯವನ್ನುಂಟುಮಾಡಿತ್ತು. ಅವರು ಇವನನ್ನು ದೇವತೆಯೋ ಮನುಷ್ಯನೋ ಎಂದು ಅಚ್ಚರಿಯಿಂದ ನೋಡುವಂತೆ ಆಗಿತ್ತು.

ಒಂದು ದಿನ ತೋಟಂತಿಲ್ಲಾಯರು ವೇದಪಾಠವನ್ನು ಹೇಳಿಕೊಡುತ್ತಿದ್ದಾಗ ವಾಸುದೇವನು ಏನನ್ನೋ ಯೋಚಿಸುತ್ತಾ ಕುಳಿತಿದ್ದನ್ನು ನೋಡಿ ಕೋಪಗೊಂಡು ಹೇಳಿದರು : "ಮೂರ್ಖಾ, ನೀನು ಯಾವಾಗಲೂ ಪಾಠಪ್ರವಚನಗಳಲ್ಲಿ ಉದಾಸೀನನಾಗಿರುವೆ. ನಿನ್ನ ಸ್ನೇಹಿತರಂತೆ ನೀನೇಕೆ ಮನಸ್ಸುಕೊಟ್ಟು ಕೇಳುತ್ತಿಲ್ಲ ?"

---

1) ಪ್ಲವನತೇಜಸಿ ಹಂತ ನ ಕೇವಲಂ ವಿಜಿತವಾನ್ ಸ ತದಾ ಸಕಲಾನ್ ಜನಾನ್ ।
ಪ್ರಭುನಿದೇಶಕರೋ ಹನುಮತ್ತನೌ ನನು ಜಿಗಾಯ ಸ ವಾಲಿಸುತಾದಿಕಾನ್ ॥
ಗ್ರಹಣನಿಗ್ರಹಣೇ ದೃಢೇ ಗುರುಭರೋದ್ಧರಣಾದಿವಿಧೌ ಪಟೌ ।
ಇಹ ವಿಬಾವುಪಚಾರಧಿಯಾ ನೃಣಾಮ್ಯುತಮುಯಂ ನನು ಭೀಮ ಇತೀರಿತಮ್ ॥
ಅಥಕಥಾಚನ ಸೋಽಧ್ಯಯನಾಂತರೇ ತಮುವದತ್ಕುಪಿತೋಽನ್ಯಮನಸ್ವಿನಮ್ ।

ಮುಂದಿನ ಪುಟಕ್ಕೆ

ಅದಕ್ಕೆ ವಾಸುದೇವನು ಹೀಗೆ ಉತ್ತರಿಸಿದ : "ಗುರುಗಳೇ, ವೇದ ಮಂತ್ರವನ್ನು ಹೇಳಿಕೊಡುವಾಗ ಸಂಪ್ರದಾಯದಂತೆ ಋಕ್ಕಿನ ಪಾದಭಾಗ ಅನಂತರ ಅರ್ಧಭಾಗ, ತರುವಾಯ ಪೂರ್ತಿಭಾಗ, ಹೇಳಿಕೊಟ್ಟು ಅದನ್ನು ಆವೃತ್ತಿ ಮಾಡುವುದು ನನಗೆ ಸರಿಕಾಣುತ್ತಿಲ್ಲ. ಆದುದರಿಂದ ನನಗೆ ಔದಾಸೀನ್ಯ !"

ಇದನ್ನು ಕೇಳಿ ಕುಪಿತರಾದ ತೋಂಟಿಲ್ಲಾಯರು : "ಹಾಗಾದರೆ ಈಗ ನಾನು ಹೇಳಿಕೊಡುತ್ತಿರುವ ಋಕ್ಕಿನ ಶಾಂತಿಮಂತ್ರಗಳನ್ನು ಹೇಳು, ನೋಡೋಣ."

ಗುರುಗಳಾದ ತೋಂಟಿಲ್ಲಾಯರು ಶಿಷ್ಯರಿಗೆ ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯನ್ನು ಉಪದೇಶಿಸುತ್ತಿದ್ದರು. ಈ ಉಪನಿಷತ್ತು ಕೃಷ್ಣ ಯಜುರ್ವೇದದ ತೈತ್ತೀರಿಯ ಅರಣ್ಯಕದ 7–8–9 ನೇ ಅಧ್ಯಾಯಗಳಲ್ಲಿ ಬರುತ್ತದೆ. ಇದರ ಹತ್ತನೆಯ ಅಧ್ಯಾಯವೇ ನಾರಾಯಣ ಉಪನಿಷತ್ತು. ಗುರುಗಳು ಈ ಉಪನಿಷತ್ತಿನ ದ್ರಷ್ಟಾರರಾದ ನಾಲ್ವರು ಋಷಿಗಳ ವಿಷಯ ಗಳನ್ನಷ್ಟೇ ಹೇಳಿದ್ದರು. ಅವರು ಸೂರ್ಯಮಂಡಲಾಂತರ್ಗತ ವಿಷ್ಣು, ಚತುರ್ಮುಖ ಬ್ರಹ್ಮ, ವರುಣ ಮತ್ತು ಭೃಗು. ಇದಕ್ಕೆ ಅನ್ನಮಯಾದಿ ರೂಪಿಯಾದ ಪರಮಾತ್ಮನೇ ದೇವತೆ.

ವಾಸುದೇವನಿಗೆ ಇಷ್ಟು ಪ್ರಶ್ನೆ ಕೇಳಿದ್ದೇ ಸಾಕು, ಅವನು ಈ ಉಪ ನಿಷತ್ತಿನ ಶಾಂತಿಮಂತ್ರವನ್ನು ಹೇಳಿದುದಲ್ಲದೆ ಗುರುಗಳು ಹೇಳಿಕೊಡದೆ ಯಿದ್ದ ವಾಯುದೇವರ ಸ್ತುತಿಯನ್ನೂ ಅಸ್ಖಲಿತ ವಾಣಿಯಿಂದ ಹೇಳಿದನು.

"ಓಂ ಶಂನ್ನೋ ಮಿತ್ರಃ ಶಂ ವರುಣಃ । ಶಂನ್ನೋ ಭವತ್ವರ್ಯಮಾ ಶಂನ ಇಂದ್ರೋ ಬೃಹಸ್ಪತಿಃ । ಶಂನ್ನೋ ವಿಷ್ಣುರುರುಕ್ರಮಃ ।" ಎಂದು ಆರಂಭಿಸಿ ವಾಯುವನ್ನು ಕುರಿತು ಉಪ ನಿಷದ್ವಾಕ್ಯಗಳನ್ನು ಘಂಟಾನಾದದಂತೆ ಅಸ್ಖಲಿತವಾಗಿ ಉದ್ಘೋಷಿಸಿದನು :

---

ಪಠಸಿ ನೋ ಶಠ ತೇ ಸಖಿಭಿಃ ಸಮಂ ಕಿಮಿತಿ

ನಿತ್ಯಮುದಾಸಿತಧೀರಿತಿ ॥

ಮ ॥ ವಿ ॥ ಸರ್ಗ–3–ಶ್ಲೋಕ 45–49

"ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಂ । ಅವತು ವಕ್ತಾರಂ । ಓಂ ಶಾಂತಿಃ ಶಾಂತಿಃ ಶಾಂತಿಃ ।।" ಎಂದು ಉಪನಿಷತ್ತಿನ ಶಾಂತಿ ಮಂತ್ರಗಳನ್ನು ಹೇಳಿ ಅವುಗಳ ಅರ್ಥವನ್ನೂ ವಿವರಿಸಿದನು.

"ಇಲ್ಲಿ ವಾಯುದೇವರನ್ನು ಬ್ರಹ್ಮಣೇ ಎಂಬ ವಿಶೇಷಣದಿಂದ ವಂದಿಸಲಾಗಿದೆ. ವಾಯುದೇವರು ನೀವು, ಜ್ಞಾನಾದಿಗುಣಬೃಂಹಿತರು. ಬ್ರಹ್ಮಪದವಾಚ್ಯರು. ನೀವು ಪ್ರತಿಯೊಂದು ಅಕ್ಷರ ಅಂದರೆ ಇಂದ್ರಿಯದಲ್ಲಿ ಇದ್ದುಕೊಂಡು ಪ್ರೇರಕರಾಗಿದ್ದೀರಿ. ನೀವು ಋತ ಅಂದರೆ ಯಥಾರ್ಥ ಜ್ಞಾನ ಉಳ್ಳವರು. ಸತ್ಯ ಅಂದರೆ ಯಥಾರ್ಥವಕ್ತಾ ಮತ್ತು ಕರ್ತಾ. ಅಂಥ ನೀವು ನಮ್ಮನ್ನು ಕಾಪಾಡಲಿ"

ತೋಂಟತಿಲ್ಲಾಯರು ಅವಾಕ್ಕಾಗಿ ಕುಳಿತು ಶಿಷ್ಯನ ಶಾಸ್ತ್ರಪ್ರೌಢಿಮೆಯನ್ನು ನೋಡಿ ಆನಂದಿಸಿದರು. ಅವರು ತಾವು ಹೇಳಿಕೊಡದೆ ಇದ್ದ ಈ ಸೂಕ್ತ ಭಾಗವು ಶಿಷ್ಯನಿಗೆ ಹೇಗೆ ಪಾಠವಾಯಿತು ? ಎಂಬ ಗೊಂದಲಕ್ಕೆ ಬಿದ್ದರು.

"ಗುರುಗಳೇ, ಇದರಲ್ಲಿ ಆಶ್ಚರ್ಯವೇನೂ ಇಲ್ಲ. ನಾನು ಇದನ್ನೆಲ್ಲಾ ಹಿಂದಿನಜನ್ಮದಲ್ಲಿಯೇ ಕಲಿತಿದ್ದೇನೆ. ಒಮ್ಮೆ ಜ್ಞಾಪಿಸಿಕೊಂಡರೆ ಸಾಕು ; ತಾನಾಗಿ ಋಕ್ಕುಗಳು ಬಾಯಿಗೆ ಬರುತ್ತವೆ" ಎಂದು ವಾಸುದೇವನು ಹೇಳಿದ. ಇವನು ಸಾಮಾನ್ಯ ಬಾಲಕನಲ್ಲ, ಇಂಥವನಿಗೆ ತಾವು ಹೇಳಿಕೊಡಬೇಕಾದುದೇನೂ ಉಳಿದಿಲ್ಲವೆಂದು ಗುರುಗಳು ಭಾವಿಸಿದರು.

ಇದುವರೆಗೆ ವಾಸುದೇವನ ವಿರುದ್ಧ ಚಾಡಿ ಹೇಳಿದ್ದವರಿಗೆಲ್ಲಾ ಗುರುಗಳಿಂದ ತೇಜೋವಧೆಯಾಯಿತು. ಇನ್ನು ಮುಂದೆ ಅವರ ಶಿಷ್ಯರು ವಾಸುದೇವನ ತಂಟೆಗೆ ಬರುವುದನ್ನು ಸಂಪೂರ್ಣವಾಗಿ ನಿಲ್ಲಿಸಿದರು.

## ಗುರುದಕ್ಷಿಣೆ

ವಾಸುದೇವನು ತೋಂಟತಿಲ್ಲಾಯರ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಆಗಾಗ ಅವನು ತನ್ನ ತಂದೆತಾಯಿಗಳನ್ನು ನೋಡಲು

ಬೆಳ್ಳಿಗೆ ಹೋಗಿಬರುತ್ತಿದ್ದನು. ಕೆಲವು ಅನಧ್ಯಯನದ ದಿನಗಳಲ್ಲಿ ಗುರುಗಳ ಅನುಮತಿಯನ್ನು ಪಡೆದು ಗೆಳೆಯರಿಂದ ಕೂಡಿಕೊಂಡು ದುರ್ಗಾಬೆಟ್ಟಕ್ಕೆ ಹೋಗಿ ಅಲ್ಲಿನ ತೀರ್ಥಗಳಲ್ಲಿ ಮಿಂದು ದೇವತೆಗಳ ದರ್ಶನ ಪಡೆದು ಬರುತ್ತಿದ್ದನು.

ಕುಂಜಾರುಬೆಟ್ಟವನ್ನು ವಿಮಾನಗಿರಿಯೆಂದೂ ಕರೆಯುತ್ತಾರೆ ಇಲ್ಲಿ ಪರಶುರಾಮನು ತನ್ನ ತಾಯಿಯ ಸಲುವಾಗಿ ನಿರ್ಮಿಸಿದ ಒಂದು ದುರ್ಗಾ ದೇವಾಲಯವಿದೆ. ಇದೊಂದು ಪವಿತ್ರವಾದ ಗುಡಿ. ತಾಯಿಯ ಸ್ನಾನಕ್ಕೆಂದು ಪರಶುರಾಮನೇ ತನ್ನ ಆಯುಧಗಳಿಂದ ನಿರ್ಮಿಸಿದನೆಂದು ಹೇಳಲಾದ ಪರಶ್ವಧತೀರ್ಥ, ಗದಾತೀರ್ಥ, ಧನುಸ್ತೀರ್ಥ ಮತ್ತು ಬಾಣ ತೀರ್ಥಗಳಲ್ಲಿ ಮಿಂದವರಿಗೆ ಸಮಸ್ತ ಪಾಪಗಳು ಪರಿಹಾರವಾಗುವುವೆಂಬ ನಂಬಿಕೆ ಇಂದೂ ಇದೆ.

ಈ ತೀರ್ಥಗಳಲ್ಲಿ ಈಜುವುದೆಂದರೆ[1] ವಾಸುದೇವನಿಗೆ ಪರಮಪ್ರೇಮ. ಅವನು ಸಾಮಾನ್ಯವಾಗಿ ಒಂಟಿಯಾಗಿಯೇ ಇರುತ್ತಿದ್ದರೂ ತೋಂಟತಿಲ್ಲಾಯರ ಮಗ ನಾರಾಯಣನ ಜೊತೆಯಲ್ಲಿ ಮಾತ್ರ ವಿಶೇಷ ಸ್ನೇಹ ವಿತ್ತು. ಗುರುಪುತ್ರನಾದ ಅವನನ್ನು ವಾಸುದೇವನು ವಿನೋದಕ್ಕೆ ಪಂಡಿತಪುತ್ರನೆಂದು ಪ್ರೇಮಪೂರ್ವಕವಾಗಿ ಹಾಸ್ಯಮಾಡುತ್ತಿದ್ದನು.

ಈ ಗುರುಪುತ್ರನಿಗೆ ವಾಸುದೇವನಿಗಿಂತ ಎರಡರಷ್ಟು ವಯಸ್ಸು ಆಗಿದ್ದರೂ ಇಬ್ಬರಲ್ಲೂ ಪೂರ್ವಜನ್ಮದ ಋಣಾನುಬಂಧದಿಂದ ವಿಶೇಷವಾದ ಪ್ರೀತಿ ವಿಶ್ವಾಸಗಳು ಇದ್ದವು.

ಬಾಲಕ ತೋಂಟತಿಲ್ಲಾಯನನು – ನಾರಾಯಣನು–ಮನೆಯಲ್ಲಿ ತನಗಾಗಿ ಮಾಡಿದ ವಿಶೇಷ ತಿಂಡಿತಿನಸುಗಳನ್ನು ಬಚ್ಚಿಟ್ಟುಕೊಂಡು ವಾಸುದೇವನಿಗೆ

---

(1 ಜಲವಿಹಾರಪರಾಜಯಿಭಿಃ ಸ್ಪೃಧಾ
ಸಖಿಭಿರೀರಿತವಾರಿಪರಿಶ್ರಿತಮ್ ।
ವದನಮಾಕುಲಲೋಚನಮಾದಧೇ ಸ್ಮಿತಮಮುಷ್ಯ
ಹಿ ಕಂಚನ ವಿಭ್ರಮಂ ॥
ಮ ॥ ವಿ ॥ ಸರ್ಗ–3–ಶ್ಲೋಕ–46

ತಂದು ಕೊಡುತ್ತಿದ್ದನು. ತೋಟದಲ್ಲಿ ಬಿಡುವ ಬಾಳೆಹಣ್ಣು, ಮಾವಿನ ಹಣ್ಣು, ಹಲಸಿನಹಣ್ಣುಗಳು ಭಾರೀ ಪ್ರಮಾಣದಲ್ಲಿ ಈ ವೀರವಟುಗಳ ಉದರವನ್ನೇ ಸೇರುತ್ತಿದ್ದವು. ಆ ಗುರುಕುಲದಲ್ಲಿ ಹಣ್ಣುಗಳನ್ನು ತಿನ್ನುವುದರಲ್ಲಿ, ಹಾಲನ್ನು ಕುಡಿಯುವುದರಲ್ಲಿ, ವಾಸುದೇವನನ್ನು ಸ್ಪರ್ಧೆಯಲ್ಲಿ ಹಿಂದೆ ಹಾಕುವವರು ಯಾರೂ ಇರಲೇ ಇಲ್ಲ.

ಎಲ್ಲರೂ ವಾಸುದೇವನನ್ನು ಕಲಿಯುಗದ ವೃಕೋದರನೆಂದೇ ಹಾಸ್ಯ ಮಾಡುತ್ತಿದ್ದರು. ಇದನ್ನು ಕೇಳಿ ವಾಸುದೇವನಿಗೆ ಪೂರ್ವಜನ್ಮದ ಸ್ಮರಣೆ ಬಂದಂತೆ ಆಗಿ ಸಂತೋಷದಿಂದ ಮೈ ನಿಮಿರುತ್ತಿತ್ತು.

ಒಮ್ಮೊಮ್ಮೆ ತೋಂಟತಿಲ್ಲಾಯರ ಮಗನೂ ವಾಸುದೇವನೂ ಬುತ್ತಿ ಕಟ್ಟಿಕೊಂಡು ಬೆಟ್ಟಗುಡ್ಡಗಳಲ್ಲಿ ತಿರುಗಾಡಿ ಊಟಮಾಡಿ ಬರುತ್ತಿದ್ದರು.

ಹೀಗೆ ಆವರು ಕುಂಜಾರುಬೆಟ್ಟಕ್ಕೆ ಹೋಗಿ ಅಲ್ಲಿ ಮಧ್ಯಾಹ್ನವೆಲ್ಲಾ ಸುತ್ತಾಡಿ, ಸಿಕ್ಕಿದೆಡೆ ನೀರು ಕುಡಿದು, ಸಂಜೆ, ಮನೆಗೆ ಹಿಂದಿರುಗುತ್ತಿದ್ದಾಗ, ಒಂದುದಿನ ತೋಂಟತಿಲ್ಲಾಯರ ಮಗನಿಗೆ ದಾರಿಯಲ್ಲಿ ವಿಪರೀತ ತಲೆನೋವು ಬಂದಿತು. ಒಂದು ಹೆಜ್ಜೆ ಮುಂದಿಡುವುದೂ ಅವನಿಗೆ ಸಾಧ್ಯವಿಲ್ಲವಾಯಿತು.

"ವಾಸುದೇವ, ನೀನು ಮನೆಗೆ ಹೋಗಿ ಅಪ್ಪನಿಗೆ ತಿಳಿಸು. ನಾನು ಈ ತಲೆ ಸಿಡಿತದಿಂದ ಬದುಕುವುದಿಲ್ಲ. ಖಂಡಿತ ಸಾಯುತ್ತೇನೆ. ನಾನು ಸಾಯುವ ಮುನ್ನ ನನ್ನ ತಾಯಿ ತಂದೆಗಳ ಮುಖ ನೋಡಬೇಕೆಂದಿದ್ದೇನೆ, ಇಷ್ಟು ಉಪಕಾರ ಮಾಡು"

—ಎಂದು ತಲೆಯನ್ನು ಗಟ್ಟಿಯಾಗಿ ತನ್ನ ಕೈಗಳಿಂದ ಅಮುಕಿಕೊಂಡು, ಕಂಬನಿ ಮಿಡಿಯುತ್ತಾ ಗುರುಪುತ್ರ ಹೇಳಿದನು.

"ಅಯ್ಯಾ ನಾರಾಯಣ, ಹೆದರಬೇಡ. ನಿನಗೆ ಏನೂ ಆಗುವುದಿಲ್ಲ. ನೀನು ಸಾಯುವುದೂ ಇಲ್ಲ. ಈ ತಲೆನೋವನ್ನು ನಾನು ವಾಸಿ ಮಾಡುತ್ತೇನೆ. ನಾವು ಕ್ಷೇಮವಾಗಿ ಮನೆ ಸೇರುತ್ತೇವೆ. ನೀನು ಯೋಚನೆ ಮಾಡಲೇಬೇಡ" ಎಂದು ವಾಸುದೇವನು ಎಷ್ಟು ಸಮಾಧಾನ ಪಡಿಸಿದರೂ ಅವನು ಕೇಳಲಿಲ್ಲ

"ಆಗಲಿ, ನೀನು ನನ್ನ ಬೆನ್ನಿನ ಮೇಲೆ ಹತ್ತಿಕುಳಿತುಕೋ. ನಾನು ನಿನ್ನನ್ನು ನಿಮ್ಮ ಮನೆಗೆ ಸುಖವಾಗಿ ತಲುಪಿಸುತ್ತೇನೆ."

"ಏನು, ನೀನು ನನ್ನನ್ನು ನಿನ್ನ ಬೆನ್ನು ಮೇಲೆ ಎತ್ತಿಕೊಂಡು ಹೋಗುತ್ತೀಯ? ನಿನ್ನ ಕೈಲಿ ಇದು ಸಾಧ್ಯವೇ?"

"ಸಾಧ್ಯವೋ ಅಸಾಧ್ಯವೋ ನೀನೇ ನೋಡುವಿಯಂತೆ. ಬಾ, ನನ್ನ ಬೆನ್ನನ್ನೇರು" ಎಂದು ವಾಸುದೇವನು ಮಂಡಿಯೂರಿ ಕುಳಿತುಕೊಂಡನು.

ಆದರೆ ತನಗಿಂತಲೂ ವಯಸ್ಸಿನಲ್ಲೂ, ಆಕೃತಿಯಲ್ಲೂ ಚಿಕ್ಕವನಾದ ವಾಸುದೇವನ ಬೆನ್ನಿನ ಮೇಲೆ ಏರಿ ಕುಳಿತುಕೊಳ್ಳಲು ಗುರುಪುತ್ರನು ನಾಚಿದನು; ಆದರೆ ಅವನ ತಲೆ ಸಿಡಿತ ಮಾತ್ರ ನಿಲ್ಲಲೇ ಇಲ್ಲ. ಅವನು ತಲೆನೋವಿನಿಂದ ತಾಯಿತಂದೆಗಳನ್ನು ಕೂಗಿಕೊಂಡು ಚೀರುತ್ತಿದ್ದನು. ಇದನ್ನು ಕೇಳಿ ವಾಸುದೇವನಿಗೆ ಬಹುಸಂಕಟವಾಯಿತು. ಇಂಥ ಕಷ್ಟದ ಸ್ಥಿತಿಯಲ್ಲೂ ಮನುಷ್ಯನು ದೇವರ ಸ್ಮರಣೆಮಾಡುವುದಿಲ್ಲವಲ್ಲಾ ಎಂದು ಆಶ್ಚರ್ಯವೂ ಆಯಿತು.

"ನಾರಾಯಣ, ನೀನು ನಾನು ಹೇಳಿದಂತೆ ನಡೆಯುವುದಾದರೆ ನಿನ್ನ ತಲೆಯ ನೋವನ್ನು ವಾಸಿಮಾಡುತ್ತೇನೆ."

"ಆಗಲಿ, ನಾನೇನು ಮಾಡಬೇಕು ಹೇಳು, ಮಾಡುತ್ತೇನೆ."

"ನೀನು ಅನಂತಾಸನಸ್ವಾಮಿಯನ್ನು ಕುರಿತು ಧ್ಯಾನ ಮಾಡು. ಹರಿ, ನಾರಾಯಣ, ಗೋವಿಂದ, ಮುಕುಂದ—ಹೀಗೆ ನಿನಗೆ ತಿಳಿದಿರುವ ಹರಿನಾಮಸ್ಮರಣೆಯನ್ನು ಒಂದೇಮನಸ್ಸಿನಿಂದ ಮಾಡು. ನಿನ್ನ ತಲೆಯ ಶೂಲೆ ಆದೇ ವಾಸಿಯಾಗುತ್ತದೆ."

ಈ ಮಾತು ಕೇಳಿ ಅವನು ನಕ್ಕನು.

"ಏಕೆ ನಗುತ್ತಿ ?"

ವಾಸುದೇವ, ನಿನಗೆ ನನ್ನ ತಲೆಶೂಲೆಯ ಸಂಗತಿ ಸರಿಯಾಗಿ ತಿಳಿದಂತಿಲ್ಲ. ಇದು ನನ್ನ ಜನ್ಮಕ್ಕೆ ಅಂಟಿರುವ ಬೇನೆ. ನಾನು ಒಂದು ವರ್ಷದ ಶಿಶುವಾಗಿರುವಾಗಿನಿಂದಲೂ ಅಂಟಿರುವ ಪಿಶಾಚಿ. ಇಂಥದನ್ನು ನೀನು ನಿವಾರಿಸಬಲ್ಲೆಯಾ ?"

"ಖಂಡಿತವಾಗಿ ವಾಸಿಯಾಗುತ್ತದೆ. ಆದರೆ ನೀನು ನಾನು ಹೇಳಿದಂತೆ ಕೇಳಬೇಕು, ಅಷ್ಟೆ. ನಿನ್ನ ಈ ವ್ಯಾಧಿಯ ವಿಷಯ ನಿನಗಿಂತ ನನಗೇ ಚನ್ನಾಗಿ ತಿಳಿದಿದೆ. ನೀನು ಹಿಂದಿನ ಜನ್ಮದಲ್ಲಿ ಒಂದು ದೇವಸ್ಥಾನದ ಪೂಜಾರಿಯಾಗಿದ್ದಿ. ಅಲ್ಲಿ ದೇವರ ನೈವೇದ್ಯವನ್ನು ಬೇಡಲು ಬಂದ ಭಿಕ್ಷುಕನೊಬ್ಬನನ್ನು ನೀನು ಚೆನ್ನಾಗಿ ಬೈದು ಹೊರಗೆ ಅಟ್ಟಿದ್ದಿ. ಹಸಿವಿನಿಂದ ಕಾಲಿಗೆ ಬೀಳಲು ಬಂದ ಅವನನ್ನು ಎಡಗಾಲಿನಿಂದ ತಲೆಗೆ ಒದ್ದೆ. ಅವನು ಆ ಪೆಟ್ಟಿನಿಂದ ನರಳಿ ಮೃತನಾದ. ಅವನ ಶಾಪದ ಫಲವನ್ನು ನೀನು ಈ ಜನ್ಮದಲ್ಲಿ ಅನುಭವಿಸುತ್ತಾ ಇದ್ದಿ.

"ಆದರೆ ನೀನು ಪರಮಾತ್ಮನಿಗೆ ಭಕ್ತಿಯಿಂದ ಸಲ್ಲಿಸಿದ ಸೇವೆ ವ್ಯರ್ಥವಾಗಲಿಲ್ಲ, ಅಂತಲೇ ಈ ಜನ್ಮದಲ್ಲಿ ಇಲ್ಲಿ ತೋಂಟತಿಲ್ಲಾಯರ ಮಗನಾಗಿ ಹುಟ್ಟಿರುವಿ. ಆದರೆ ನೀನು ಮಾಡಿದ ಒಂದು ನೀಚ ಕೆಲಸದಿಂದ ಈ ತಲೆಯ ನೋವು ಜನ್ಮಕ್ಕೆ ಅಂಟಿದ ಬೇನೆಯಾಗಿ ನಿನ್ನನ್ನು ಕಾಡುತ್ತಾ ಬಂದಿದೆ. ಈಗ ನಾನು ಹೇಳಿದಂತೆ ಹರಿನಾಮಸ್ಮರಣೆ ಮಾಡಿದರೆ ನಿನ್ನ ವ್ಯಾಧಿಯನ್ನು ಈಗಲೇ ವಾಸಿಮಾಡುತ್ತೇನೆ."

ಗುರುಪುತ್ರನು, ವಾಸುದೇವನು ಹೇಳಿದಂತೆ ಪದ್ಮಾಸನ ಹಾಕಿಕೊಂಡು ಭಗವಂತನ ಸ್ಮರಣೆ ಮಾಡುತ್ತಾ ಕಣ್ಮುಚ್ಚಿ ಕುಳಿತುಕೊಂಡನು.1

ವಾಸುದೇವನು ಅಲ್ಲಿಯ ಪೊದೆಯ ಬಳಿಗೆ ಹೋಗಿ ಯಾವುದೋ ಸೊಪ್ಪನ್ನು ತಂದು ಅದನ್ನು ಹಿಂಡಿ ರಸ ತೆಗೆದನು. ಅವನ ಎರಡು ಕಿವಿಗಳಿಗೂ ಒಂದೆರಡು ತೊಟ್ಟು ಹಾಕಿದನು. ಧನ್ವಂತರಿ ಮಂತ್ರ ಹೇಳಿಕೊಂಡು ತನ್ನ ಬಾಯಿಂದ ಅವನ ಕಿವಿಗಳಲ್ಲಿ ಗಾಳಿಯನ್ನು ಊದಿದನು. ಅದೇನು

---

1) ಪ್ರಿಯವಯಸ್ಯಶಿರೋಗುರುವೇದನಾ-
ಮಮುಶಯತ್ಸಹಜಾಮಪಿ ದುಃಸಹಾಮ್ ।
ಸ ವಿಪಿನೇ ವಿಜನೇ ಮುಖಮಾಯುನಾ
ಶ್ರವಣಗೋಚರಿತೇನ ಕದಾಚನ ॥

ಮ ॥ ವಿ ॥ ಸರ್ಗ-3-ಶ್ಲೋಕ-53

ಆಶ್ಚರ್ಯ ! ಹೀಗೆ ಮಾಡಿದ ಕೂಡಲೇ ಗುರುಪುತ್ರನು ಪ್ರಜ್ಞಾಶೂನ್ಯನಾಗಿ ಬಿದ್ದನು. ವಾಸುದೇವನು ಅವನನ್ನು ಬೆನ್ನಿಗೇರಿಸಿಕೊಂಡು ಊರಿನ ವರೆಗೂ ಹೊತ್ತು ತಂದು ತೋಟದ ಮನೆಯ ಬಳಿ ಮಲಗಿಸಿದನು. ಅಲ್ಲಿ ಇಳಿಸುದುದೇ ತಡ ಗುರುಪುತ್ರನಿಗೆ ಪ್ರಜ್ಞೆ ಮರುಳಿತು.

ಆವನು ಎಚ್ಚೆತ್ತು ಸುತ್ತಲೂ ನೋಡಿದನು. ಅವನಿಗೆ ತಲೆ ನೋವು ಇರಲಿಲ್ಲ. ವಾಸುದೇವನ ಕೃಪೆಯಿಂದ ಅದು ವಾಸಿಯಾಗಿತ್ತು. ಆವನಿಗೆ ಇದೆಲ್ಲ ವಿಸ್ಮಯವಾಗಿತ್ತು. ಅವನು ವಾಸುದೇವನಿಗಾಗಿ ಹುಡುಕಿದ. ಸಮೀಪದಲ್ಲೆಲ್ಲೂ ಕಾಣಲಿಲ್ಲ.

ಅವನು ಎದ್ದು ಮನೆಗೆ ಹೋಗಬೇಕೆಂದಿರುವಾಗ ತನ್ನ ತಂದೆ ತಾಯಿಗಳೊಡನೆ ವಾಸುದೇವನು ಬರುತ್ತಿರುವುದು ದೂರದಿಂದಲೇ ಕಾಣಿಸಿತು.

ತೋಂಟತಿಲ್ಲಾಯರು ನಡೆದ ಎಲ್ಲ ಸಂಗತಿಯನ್ನು ಮಗನಿಂದ ಕೇಳಿದ ಮೇಲೆ ಅವರಿಗೆ ತಮ್ಮ ಕಿವಿಯನ್ನು ತಾವೇ ನಂಬಲಾಗಲಿಲ್ಲ.

ವಾಸುದೇವನ ಕೃಪೆಯಿಂದ ತಮ್ಮ ಮಗನನ್ನು ಬಾಲ್ಯದಿಂದಲೂ ಪೀಡಿಸುತ್ತಿದ್ದ ತಲೆಯ ನೋವು ನಿವಾರಣೆಯಾದುದನ್ನು ಕೇಳಿ ಅವರಿಗೆ ವಾಸುದೇವನ ಬಗೆಗೆ ಹೆಚ್ಚು ಪೂಜ್ಯಭಾವನೆ ಉಂಟಾಯಿತು. ಅವನು ತಮ್ಮ ಪಾಲಿನ ಭಾಗ್ಯದೇವತೆ ಎಂದು ಆ ಸಂಪತಿಗಳು ಆನಂದದಿಂದ ಕೊಂಡಾಡಿದರು.

ಈ ಘಟನೆ ಗುರುಕುಲದ ಹುಡುಗರಿಗೆ ತಿಳಿದು ಅವರ ಅಭಿಪ್ರಾಯದಲ್ಲಿ ವಾಸುದೇವನು ಒಬ್ಬ ಅಸದೃಶ ಪವಾಡಪುರುಷನಾದನು.

ಆವನ ವಿಷಯದಲ್ಲಿ ಅವರಿಗೆ ಆದರ ಗೌರವಗಳು ಇನ್ನೂ ಹೆಚ್ಚಿದವು.

ವಾಸುದೇವನ ವಿಶೇಷ ಶಕ್ತಿ ಸಾಮರ್ಥ್ಯಗಳು ಇಲ್ಲಿಗೇ ಮುಗಿಯಲಿಲ್ಲ.

ಆ ವರ್ಷ ಮಳೆ ಬರಲಿಲ್ಲ. ತೋಟದ ಬಾವಿಯು-ಎಂದೂ ತಳ ಕಾಣದಿದ್ದ ನೀರಿನ ಒರತೆಯಿಂದ ಕೂಡಿದ್ದ ಬಾವಿಯು-ಬತ್ತಿಹೋಗಿತ್ತು. ತೋಟದ ಗಿಡ ಮರಗಳು ನೀರಿಲ್ಲದೆ ಒಣಗಿ ಹೋಗುವಂತೆ ಆದವು. ಮಳೆಗಾಲ ಸಮೀಪಿಸಿದ್ದರೂ ಯಾಕೋ ವರುಣ ದೇವನ ದಯೆ ಬಂದಿರಲಿಲ್ಲ. ತೊಟ್ಟು ಹನಿಯೂ ಇಲ್ಲದೆ ಹೊಲಗದ್ದೆಗಳು ನೀರಿಗಾಗಿ ಬಾಯಿ ತೆರೆದಂತೆ, ಬಿರುಕು ಬಿಟ್ಟಿದ್ದವು.

ಇಂಥ ಜಲಕ್ಷಾಮ ಪರಿಸ್ಥಿತಿಯಲ್ಲಿ ಗುರುಕುಲದ ಹುಡುಗರು ನೀರಿಗಾಗಿ ಪರದಾಡಬೇಕಾದ ಶೋಚನೀಯ ಸ್ಥಿತಿ ಬಂದಿತ್ತು.

ಇದನ್ನು ಸಹಿಸಲಾರದೆ ವಾಸುದೇವನು ಗೆಳೆಯರನ್ನು ಕಟ್ಟಿಕೊಂಡು ತೋಟದಲ್ಲಿ ಒಂದು ಸ್ಥಳ ಗುರುತು ಮಾಡಿ ಅಲ್ಲಿ ಭಾವಿ ಆಗೆಯಲು ಹೇಳಿದನು.

ಅಲ್ಲಿ ನಾಲ್ಕಾರು ಅಡಿ ಭೂಮಿಯನ್ನು ತೋಡಿದರೂ ನೀರು ಕಾಣಿಸಿಕೊಳ್ಳಲಿಲ್ಲ, ಅನಂತರ ವಾಸುದೇವನೇ ಹಾರೆಯನ್ನು ತೆಗೆದುಕೊಂಡು ಅಲ್ಲಿಂದ ತೋಟದ ಬಾವಿಯವರೆಗೆ ಒಂದು ಕಾಲುವೆ ತೋಡಿದನು. ಕಾಲುವೆ ಯಲ್ಲಿ ಅವನು ಒಂದು ಕೋಲಿನಿಂದ ಗೆರೆಯನ್ನು ಎಳೆದನು. ಅನಂತರ ಮೂರು ಬಾರಿ ವರುಣಸೂಕ್ತ, ಗಂಗಾಸ್ತವನ ಹೇಳಿಕೊಂಡು ಹಳ್ಳದ ಒಂದು ಭಾಗವನ್ನು ಹೆಬ್ಬೆರಳಿನಿಂದ ಒತ್ತಿದನು. ಆ ಸ್ಥಳದಲ್ಲಿ ಒಂದು ಕುಳಿ ಬಿದ್ದು, ಅಲ್ಲಿಂದ ಗುಪ್ತಗಾಮಿನಿಯಾಗಿದ್ದ ಗಂಗೆಯು ಜುಳುಜುಳನೆ ಮೇಲಕ್ಕೆ ಹರಿದು ಬಂದಳು. ಬರಿದಾದ ತೋಟದ ಬಾವಿಯನ್ನು ತುಂಬಿಕೊಂಡು ಕಾಲುವೆಯ ಮೂಲಕ ತೋಟವನ್ನೂ ಹರಿಸಿದಳು.

ಅಲ್ಲಿ ಈ ದೃಶ್ಯವನ್ನು ಕಂಡಮೇಲೆ ವಾಸುದೇವನು ಮನುಷ್ಯನಾಗಿ ಕಾಣ ಲಿಲ್ಲ. ಅವನು ಅವತಾರಪುರುಷನಾಗಿಯೇ ಕಾಣಿಸಿದನು. ಎಲ್ಲರೂ ಅವನಿಗೆ ವಂದಿಸಿ ಆವನ ಮಹಿಮೆಯನ್ನು ಕೊಂಡಾಡಿದರು.

ವಾಸುದೇವನಿಗೆ ಚಿಕ್ಕವಯಸ್ಸು. ಈ ಅವಧಿಯಲ್ಲಿ ಅವನು ಗುರುಕುಲದಲ್ಲಿ ಹನ್ನೆರಡುವರ್ಷಗಳಲ್ಲಿ ಕಲಿಯಬೇಕಾದುದನ್ನೆಲ್ಲಾ ಕೇವಲ ನಾಲ್ಕು ವರ್ಷಗಳಲ್ಲಿಯೇ ಕಲಿತು ಮುಗಿಸಿದ್ದನು.

ಇನ್ನು ಅವನಿಗೆ ಹೇಳಿಕೊಡಬೇಕಾದದ್ದು ತಮ್ಮಲ್ಲಿ ಏನೂ ಉಳಿದಿಲ್ಲ ವೆಂದೂ, ಗುರುಕುಲದಿಂದ ಅವರ ಹುಡುಗನನ್ನು ಮನೆಗೆ ಕರೆದುಕೊಂಡು ಹೋಗ ಬಹುದೆಂದೂ ತೋಂಟತಿಲ್ಲಾಯರು ಮಧ್ಯಗೇಹಭಟ್ಟರಿಗೆ ಹೇಳಿ ಕಳುಹಿಸಿದರು.

ಅದರಂತೆ ತಮ್ಮ ಹುಡುಗನನ್ನು ಮನೆಗೆ ಕರೆದೊಯ್ಯಲು ಮಾತಾಪಿತೃ ಗಳು ಬಂದರು.

ವಾಸುದೇವನು, ನಾಲ್ಕುವರ್ಷ ಒಡನಾಡಿಗಳಾಗಿದ್ದ ಮಿತ್ರರನ್ನೂ, ತಾಯಿತಂದೆಗಳಿಗಿಂತಲೂ ಅತಿಶಯವಾಗಿ ನೋಡಿಕೊಂಡಿದ್ದ ಗುರುಗಳಾದ

ತೋಂಟತಿಲ್ಲಾಯ ದಂಪತಿಗಳನ್ನೂ, ಸೋದರವಾತ್ಸಲ್ಯದಿಂದ ನಡೆಸಿಕೊಂಡಿದ್ದ ಗುರುಪುತ್ರ ನಾರಾಯಣನನ್ನೂ ಬಿಟ್ಟು ಊರಿಗೆ ಹಿಂದಿರುಗಲು ಕಾಲು ಬರಲೇ ಇಲ್ಲ.

ತನಗೆ ವಿದ್ಯೆ ಹೇಳಿಕೊಟ್ಟ ಗುರುಗಳಿಗೆ ಯಾವ ರೂಪದಲ್ಲಾದರೂ ಗುರು ದಕ್ಷಿಣೆಯನ್ನು ಒಪ್ಪಿಸಲು ವಾಸುದೇವನು ನಿಶ್ಚಯಿಸಿದನು,

ಈ ವಿಷಯವನ್ನು ಅವನು ವಿನಯದಿಂದ ಗುರುಗಳ ಮುಂದೆ ನಿವೇದಿಸಿ ಕೊಳ್ಳಲು ಅವರು ನಗುತ್ತಾ ತಮ್ಮ ಮನದ ಅಭಿಲಾಷೆ ತಿಳಿಸಿದರು.

"ವಾಸುದೇವ, ನೀನು ಸಾಮಾನ್ಯ ಬಾಲಕನಲ್ಲ. ಸರ್ವಜ್ಞನೆಂಬುದು ನನಗೆ ತಿಳಿದಿದೆ. ನೀನು ನನ್ನದೊಂದು ಅಭಿಲಾಷೆ ಈಡೇರಿಸಿ ಕೊಡಬೇಕು."

"ಅಪ್ಪಣೆಯಾಗಲಿ ಗುರುದೇವ."

"ನನಗೆ ಬಹಳ ದಿನಗಳಿಂದ ಐತರೇಯಉಪನಿಷತ್ತಿಗೆ ವಿಷ್ಣುಪರ ವಾದ ಒಂದು ವ್ಯಾಖ್ಯಾನವನ್ನು ನಿನ್ನಿಂದ ತಿಳಿಯಬೇಕೆಂಬ ಆಸೆ ಇದೆ. ಇದನ್ನು ನೀನು ಈಡೇರಿಸಿಕೊಟ್ಟರೆ ಅದೇ ನೀನು ನನಗೆ ಸಲ್ಲಿಸಬೇಕಾ ಗಿರುವ ಗುರುದಕ್ಷಿಣೆ"—ಎಂದು ತೋಂಟತಿಲ್ಲಾಯರು ಹೇಳಿದರು.

ಈ ಮಾತು ಕೇಳಿ ವಾಸುದೇವನಿಗೆ ಅತೀವ ಹರ್ಷವಾಯಿತು. ಅವನಿಗೆ ದಶೋಪನಿಷತ್ತುಗಳಿಗೆ ವಿಷ್ಣುಪರವಾದ, ಹರಿಸರ್ವೋತ್ತಮತ್ವ ವನ್ನು ತಿಳಿಸುವ ಒಂದು ವ್ಯಾಖ್ಯಾನಮಾಲೆ ಬರೆಯಬೇಕೆಂಬ ಅಭಿಲಾಷೆ ಬಹಳ ದಿನಗಳಿಂದ ಇತ್ತು. ಅದು ಗುರುಗಳ ಅನುಗ್ರಹದಿಂದ ಈಡೇರುವ ಕಾಲ ಸನ್ನಿಹಿತವಾದಂತೆ ತೋರಿತು ಅವನು ಸಂತೋಷದಿಂದ ಐತರೇಯ ಉಪನಿಷತ್ತಿನ ವ್ಯಾಖ್ಯಾನ ಆರಂಭಿಸಿದನು.

ಅದನ್ನು ವಾಸುದೇವನು ಸಂತೋಷದಿಂದಲೇ ಮುಗಿಸಿ, ಗುರುಗಳಿಗೆ ದಕ್ಷಿಣೆಯಾಗಿ ಸಮರ್ಪಿಸಿದನು.[1]

---

1) ಸಾಕ್ಷಾದಥೋಪನಿಷದೋ ವಿಬುರೈತರೇಯ್ಯಾಃ
ಪಾಠಚ್ಛಲೇನ ವಿಜನೇಽರ್ಥರಸಾನ್ ಬ್ರುವಾಣಃ ।
ಅಧ್ಯಾಪಕಾಯ ವಿತತಾರ ವಿಮೋಕ್ಷಭೀಜಂ
ಗೋವಿಂದಭಕ್ತಿಮುಚಿತಾಂ ಗುರುದಕ್ಷಿಣಾಂ ಸಃ ॥

ಮ ॥ ವಿ ॥ ಸರ್ಗ ॥ 3–ಶ್ಲೋಕ 55

ಈ ಉಪನಿಷತ್ತನ್ನು ಇತರಾದೇವಿಯ ಮಗನಾದ ಮಹೀದಾಸನೆಂಬ ವಿಷ್ಣುರೂಪಿಯು ಕಂಡುಕೊಂಡಿದ್ದನು. ಅವನ ಹೆಸರಿನಿಂದಾಗಿ ಐತರೇಯೋಪನಿಷತ್ತೆಂದೆನಿಸಿದೆ.

ಈ ಉಪನಿಷತ್ತು ಋಗ್ವೇದದ ದ್ವಿತೀಯಾರಣ್ಯಕದಲ್ಲಿ ಬರುತ್ತದೆ.

ಇದರಲ್ಲಿ ದ್ವೈತಸಿದ್ಧಾಂತದಲ್ಲಿ ಮುಖ್ಯವಾದ ಶ್ರೀಹರಿಸರ್ವೋತ್ತಮತ್ವದ ಬಗೆಗೆ ಅನೇಕ ದೃಷ್ಟಾಂತಗಳೂ, ಸೂಕ್ತಿಗಳೂ ದೊರಕುತ್ತವೆ.

ಈ ಉಪನಿಷತ್ತನ್ನು ವಾಸುದೇವನು—

"ನಾರಾಯಣಂ ನಿಖಿಲಪೂರ್ಣಗುಣೈಕದೇಹಂ ಸರ್ವಜ್ಞಮಚ್ಯುತ-ಮಪೇತಸಮಸ್ತದೋಷಂ | ಪ್ರಾಣಸ್ಯ ಸರ್ವಚಿದಚಿತ್ಪರಮೇಶ್ವರಸ್ಯ ಸಾಕ್ಷಾ-ದಧೀಶ್ವರಮಿಯಾಂ ಶರಣಂ ರಮೇಶಂ ||" ಎಂಬ ಮಂಗಳ ಶ್ಲೋಕದಿಂದ ಆರಂಭಿಸಿ, ಬಳಿತ್ಥಾ ಸೂಕ್ತ ಮತ್ತು ಅದರ ಅರ್ಥವಿವರಣೆಗಳೊಡನೆ ವ್ಯಾಖ್ಯಾನವನ್ನು ಮುಗಿಸಿದ್ದನು.

ಈ ವ್ಯಾಖ್ಯಾನದ ಅಮೂಲ್ಯ ಸಂದೇಶವನ್ನು ಕೇಳಿ ಗುರುಗಳಾದ ತೋಂಟತಿಲ್ಲಾಯರು ಆನಂದಭಾಷ್ಪ ಸುರಿಸುತ್ತಾ

"ವಾಸುದೇವ, ನೀನು ವಯಸ್ಸಿನಿಂದ ಚಿಕ್ಕವನಿರಬಹುದು, ಆದರೆ ಜ್ಞಾನದಿಂದ ವೃದ್ಧನಾಗಿರುವಿ. ನಿನಗೆ ನಮಸ್ಕಾರ ಎಂದು ಹೇಳಿದರೆ ಆಶ್ರೇಯಸ್ಸಾಗುತ್ತದೆಂದು ಹೆದರಿ, ಶ್ರೀಹರಿಯ ಸಂಪೂರ್ಣ ಅನುಗ್ರಹ ನಿನ್ನ ಮೇಲೆ ಇರಲೆಂದು ಆಶೀರ್ವದಿಸುತ್ತೇನೆ. ನಿನ್ನಂಥ ಶಿಷ್ಯೋತ್ತಮನಿಗೆ ವಿದ್ಯೆ ಹೇಳಿಕೊಟ್ಟದ್ದು ಸಾರ್ಥಕವಾಯಿತು."—ಎಂದು ಹೇಳಿ ಗುರುದಕ್ಷಿಣೆಯಾಗಿ ಐತರೋಪನಿಷತ್ತಿನ ಅರ್ಥವನ್ನು ಶಿಷ್ಯನಿಂದ ಸ್ವೀಕರಿಸಿದರು.

# ಮರಳಿ ಮನೆಗೆ

ವಾಸುದೇವನು ತೋಂಟತಿಲ್ಲಾಯರ ಗುರುಕುಲದಲ್ಲಿ ತನ್ನ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಮರಳಿ ಮನೆಗೆ ಹಿಂತಿರುಗಿದ್ದನು 1 ಈಗ ಅವನು ಮೊದಲಿನ ವಾಸುದೇವನಾಗಿರಲಿಲ್ಲ. ಅವನು ಗುರುಕುಲದಲ್ಲಿ ಕಳೆದ ನಾಲ್ಕು ವರ್ಷಗಳಲ್ಲಿ ಸಮಸ್ತಶಾಸ್ತ್ರಗಳನ್ನೂ. ವೇದಗಳನ್ನೂ, ಷಡ್ದರ್ಶನಗಳನ್ನೂ, ಚೆನ್ನಾಗಿ ಅಭ್ಯಾಸ ಮಾಡಿ ವಿದ್ವಾಂಸನಾಗಿ ಹಿಂತಿರುಗಿದ್ದನು. ಇಷ್ಟು ಚಿಕ್ಕ ವಯಸ್ಸಿನಲ್ಲಿ ದುರ್ಗಮವಾಗಿದ್ದ ವೈದಿಕ ಶಾಸ್ತ್ರ ಸಮುಚ್ಚಯವೆಂಬ ಕೋಟೆಯನ್ನು ಒಡೆದು ಪ್ರವೇಶಿಸಿ, ಅದ್ವೈತ ಮತವನ್ನು ಖಂಡಿಸಲು ಬೇಕಾದ ಕೈದುಗಳನ್ನೂ— ಪಾಂಡಿತ್ಯ ಜ್ಞಾನವನ್ನೂ —ಪಡೆದುಕೊಂಡಿದ್ದನು. ಈಗ ಅವನು ಎಂಥ ಪಂಡಿತನನ್ನಾದರೂ ವಾದದಲ್ಲಿ ಎದುರಿಸಲು ಬೇಕಾದ ಧೈರ್ಯವನ್ನೂ, ಕುಶಾಗ್ರಮತಿಯನ್ನೂ, ತರ್ಕಚಾತುರ್ಯವನ್ನೂ ಪಡೆದಿದ್ದನು ; ವೇದಸಮ್ಮತವೂ ಶಾಸ್ತ್ರಸಮ್ಮತವೂ ಆದ ತತ್ತ್ವವಾದವನ್ನು ಸಭೆಗಳಲ್ಲಿ ಮಂಡಿಸಬಲ್ಲವನಾಗಿದ್ದನು. ಅವನ ನಿಖರವಾದ ತತ್ತ್ವಜ್ಞಾನ, ಅದ್ಭುತವಾದ ಸ್ಮರಣ ಶಕ್ತಿ, ನಿಶಿತವಾದ ತರ್ಕಬದ್ಧವಾದ, ಎಂಥ ವರನ್ನಾಗಲೀ ದಿಗ್ಮೂಢಗೊಳಿಸುತ್ತಿತ್ತು.

ವಾಸುದೇವನು ಗುರುಕುಲದಲ್ಲಿ ಕಲಿತು ಬಂದ ವಿದ್ಯೆ ಈ ಜನ್ಮದಲ್ಲಿ ಕಲಿತ ವಿದ್ಯೆಯಾಗಿರಲಿಲ್ಲ. ಅದು ಅವನಿಗೆ ಜನ್ಮ ಜನ್ಮಾಂತರದಲ್ಲಿ ಬಂದಿದ್ದ ವಿದ್ವತ್ತಾಗಿತ್ತು. ಇಲ್ಲದಿದ್ದರೆ ಕೇವಲ ಹತ್ತು ವರ್ಷಕ್ಕೆ ಆಗಮ ದರ್ಶನಗಳಲ್ಲಿ ಇಂತಹ ಪ್ರೌಢಿಮೆ ಪಡೆಯುವುದೆಂದರೆ ಸಾಧ್ಯವೇ ?

---

1) ಅಯಿ ಸ್ವಾಮಿನ್ ದುಷ್ಪ್ರಾಪ್ಯಮಯ ದಮಯ ವ್ಯಕ್ತಮಚಿರಾ–
ದ್ಗುಣಾನ್ ಗೂಢಾನ್ವಿಷ್ಣೋಃ ಕಥಯ ಕಥಯ ಸ್ವಾನ್
ಪ್ರಮದಯನ್ ।
ತದಾನಂದಂ ತನ್ವನ್ನಿತಿ ಸುಮನಸಾಂ ಸೋಽನುಸರತಾ–
ಮನುಜ್ಞಾಮಾದತ್ತ ತ್ರಿಭುವನಗುರುರ್ಬ್ರಾಹ್ಮಣಗುರೋಃ ॥
ಮ ॥ ವಿ ॥ ಸರ್ಗ–3–ಶ್ಲೋಕ 56

ಮಗನು ಅತ್ಯಲ್ಪ ಕಾಲದಲ್ಲಿ ದೊರಕಿಸಿಕೊಂಡಿದ್ದ ವಿದ್ವತ್ತು, ಶಾಸ್ತ್ರ ಜ್ಞಾನ ಮಧ್ಯಗೇಹಭಟ್ಟರಿಗೆ ಒಂದು ರೀತಿಯ ವೈಯುಕ್ತಿಕ ಸಂತೋಷಕ್ಕೆ ಕಾರಣವಾಗಿತ್ತು. ಮಧ್ಯಗೇಹಭಟ್ಟರದು ಹಳೆಯ ಕಾಲದ ಸಾಮಾನ್ಯ ಪಾಂಡಿತ್ಯ ಮಾತ್ರ. ಪೌರಣಿಕರಾಗಲು ಬೇಕಾದಷ್ಟು ಶಾಸ್ತ್ರ ಜ್ಞಾನ ಅವರಲ್ಲಿತ್ತು, ಅಷ್ಟೆ.

ಅವರಿಗೆ ಯೋಗ್ಯ ಗುರುಗಳಲ್ಲಿ ಅಧ್ಯಯನವೇನೋ ಆಗಿತ್ತು; ಅದ್ವೈತಸಿದ್ಧಾಂತದಲ್ಲಿ ಅಷ್ಟಾಗಿ ನಂಬಿಕೆ ಶ್ರದ್ಧೆಗಳು ಇರಲಿಲ್ಲ. ಅವರು ಅದ್ವೈತಿಗಳಾದರೂ ಭಾಗವತಸಂಪ್ರದಾಯವನ್ನು ಅನುಸರಿಸುತ್ತಿದ್ದರು. ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದಿದ್ದರು. ಏಕೆ ಅವನು ಶ್ರೇಷ್ಠ ನೆಂಬುದು ತಿಳಿದಿರಲಿಲ್ಲ. ದೃಶ್ಯಾತ್ಮಕವೂ, ಅನುಭವವೇದ್ಯವೂ ಆದ ಈ ಜಗತ್ತನ್ನು ಅದ್ವೈತಿಗಳು ಸುಳ್ಳು ಎಂದು ಹೇಳುತ್ತಿದ್ದ . ಮಾತಿನಲ್ಲಿ ನಂಬಿಕೆ ಹುಟ್ಟಿರಲಿಲ್ಲ. ಜೀವಬ್ರಹ್ಮರು ಒಂದೇ ಎಂದು ಹೇಳುವ ಅವರ ಐಕ್ಯವಾದದಲ್ಲಿ ಹುರುಳಿಲ್ಲವೆಂದು ಅನಿಸಿದ್ದರೂ ಅದನ್ನು ಸಮರ್ಥಿಸುವ ದಾರಿ ತಿಳಿದಿರಲಿಲ್ಲ. ಜೀವ ಜೀವಿಗಳ ಸಂಸಾರದಲ್ಲಿ ಭೇದವಿರುವುದನ್ನು ಪ್ರತ್ಯಕ್ಷ ವಾಗಿ ಗುರುತಿಸಿದ್ದರೂ, ಇದನ್ನು ಸುಳ್ಳೆಂದು ಒಪ್ಪಿಕೊಳ್ಳುವುದು ಕಷ್ಟ ವಾಗಿತ್ತು. ಇನ್ನು ಮೋಕ್ಷದಲ್ಲೂ "ಅಹಂ ಬ್ರಹ್ಮಾಸ್ಮಿ" ಎಂದುಕೊಳ್ಳುವ ಜೀವಾತ್ಮ ಮೋಕ್ಷದ ಸುಖಾನುಭವವನ್ನು ಹೊಂದುವುದಾದರೂ ಹೇಗೆ? —ಎಂಬಿವೇ ಪ್ರಶ್ನೆಗಳು ಅವರ ಮನಸ್ಸಿನಲ್ಲಿ ಒಮ್ಮೆ ಸುಳಿದು ಮರೆಯಾಗು ತ್ತಿದ್ದವು, ಇವುಗಳಿಗೆ ಯೋಗ್ಯವಾದ ಉತ್ತರವನ್ನು ಕೊಡಬಲ್ಲವರು ಅವರಿಗೆ ಇನ್ನೂ ದೊರಕಿರಲಿಲ್ಲ.

ಮಧ್ಯಗೇಹಭಟ್ಟರು ಇಂಥ ಗೊಂದಲಮಯ ಮನಸ್ಸಿನಲ್ಲಿ ಇರುವಾಗ ಭಾನುಸಿಂಹನೆಂಬ ಒಬ್ಬ ಕೇರಳದ ಅದ್ವೈತಮತದ ವಿದ್ವಾಂಸನು ಯಾವುದೋ ಕಾರ್ಯಾರ್ಥವಾಗಿ ಬೆಳ್ಳೆಗೆ ಬಂದಿದ್ದನು. ಒಂದೆರಡು ದಿನ ಭಟ್ಟರ ಮನೆಯಲ್ಲಿ ಅವನು ಅವರ ಅತಿಥಿಯಾಗಿಯೂ ತಂಗಿದ್ದನು.

ಭಾನುಸಿಂಹನು ಪ್ರತಿವಾದಿಭಯಂಕರನೆಂಬ ಬಿರುದನ್ನು ಪಡೆದಿದ್ದನು. ಅವನು ಷಡ್ದರ್ಶನಗಳನ್ನು ಚನ್ನಾಗಿ ತಿಳಿದಿದ್ದನು. ಅವನಿಗೆ ಜೈನ ಬೌದ್ಧರ

ಶೂನ್ಯ ವಾದವನ್ನು ಹರಿದು ಹೇಗೆ ಗಾಳಿಪಟ ಮಾಡುವುದೆಂಬುದೂ ಗೊತ್ತಿತ್ತು. ಆವನ ಹರಿತವಾದ ತರ್ಕ, ವಿಸ್ತಾರವಾದ ಪಾಂಡಿತ್ಯ, ಅದ್ವೈತವಾದ ವನ್ನು ಮಂಡಿಸುವುದರಲ್ಲಿ ಇದ್ದ ಚತುರತೆ ಇವು ಅದ್ಭುತವಾಗಿದ್ದುವು.

ಮಧ್ಯಗೇಹಭಟ್ಟರಿಗೆ ಭಾನುಸಿಂಹನಲ್ಲಿ ತಮ್ಮ ಸಂದೇಹಗಳನ್ನು ತೋಡಿಕೊಳ್ಳಲು ಸಂಕೋಚ. ಅವನ ವಾಗ್ಬಾಣಗಳಿಂದ ತಾವು ಎಲ್ಲಿ ಅಪ ಮಾನಿತರಾಗುವೆವೋ ಎಂಬ ಕಳವಳ. ಆದರೂ ಅವರ ಭಾಗವತಧರ್ಮ ವನ್ನು ನೋಡಿದ್ದ ಭಾನುಸಿಂಹನು ಅವರಿಗೆ ಅದ್ವೈತದ ಹಿರಿಮೆಯನ್ನು ತಿಳಿಸಲೆಂಬಂತೆ ವೇದಗಳಲ್ಲಿ ಬಂದಿರುವ ಅದ್ವೈತಪರ ಕೆಲವು ವಾಕ್ಯಗಳನ್ನು ಅವರ ಮುಂದೆ ಉಲ್ಲೇಖಿಸಿ ಅರ್ಥ ಹೇಳಿದನು.

"ಅಹಂ ಬ್ರಹ್ಮಾಸ್ಮಿ" (ನಾನು ಬ್ರಹ್ಮನೇ ಆಗಿದ್ದೇನೆ) ಎಂದು ಬೃಹದಾ ರಣ್ಯಕೋಪನಿಷತ್ತಿನಲ್ಲೂ" ತತ್ತ್ವಮಸಿ"(ಆಬ್ರಹ್ಮನು ನೀನು)ಎಂದು ಛಾಂದೋ ಗ್ಯೋಪನಿಷತ್ತಿನಲ್ಲೂ "ನೇಹ ನಾನಾಸ್ತಿ ಕಿಂಚನ" (ಬೇರೆ ಬೇರೆಯಾದ ಪದಾರ್ಥ ಗಳೆಂಬುದೇ ಈ ಲೋಕದಲ್ಲಿ ಇಲ್ಲ) ಎಂದು ಬೃಹದಾರಣ್ಯಕೋಪನಿಷತ್ತಿನಲ್ಲೂ "ಮಾಯಾಮಾತ್ರಮಿದಂ ದ್ವೈತಂ, ಅದ್ವೈತಂ ಪರಮಾರ್ಥತಃ" (ಈ ದ್ವೈತ ಭಾವನೆ ಮಾಯೆ ಅಥವಾ ಅವಿದ್ಯೆಯಿಂದ ಕಲ್ಪಿತವಾದುದು, ಅದ್ವೈತವೇ ಪರಮಾರ್ಥ) ಎಂದು ಮಾಂಡೂಕೋಪನಿಷತ್ತಿನಲ್ಲೂ, "ಪ್ರಪಂಚೋ ಯದಿ ವಿದ್ಯೇತ" ಈ ಪ್ರಪಂಚವು ವಾಸ್ತವವಾಗಿ ಇರುವುದಾದರೆ) ಎಂದು ಮಾಂಡೂಕ್ಯ ದಲ್ಲೂ, "ಸರ್ವಂ ಖಲ್ವಿದಂ ಬ್ರಹ್ಮ" (ಇದೆಲ್ಲವೂ ಬ್ರಹ್ಮನೇ) ಎಂದು ಉಪ ನಿಷತ್ತುಗಳಲ್ಲೂ, ಬ್ರಹ್ಮಸೂತ್ರಗಳಲ್ಲೂ ಹೇಳುತ್ತಿರುವಾಗ, ಭಗವದ್ಗೀತೆಯೂ ಘೋಷಿಸುತ್ತಿರುವಾಗ ಅದ್ವೈತವಾದವನ್ನು ನಿರಾಕರಿಸಿ ದ್ವೈತವಾದವನ್ನು ಒಪ್ಪಿಕೊಳ್ಳುವುದು ಹೇಗೆ ?

ಅದ್ವೈತಕ್ಕೆ ಶ್ರುತಿ, ಸ್ಮೃತಿ, ಮಹಾಭಾರತ, ಭಗವದ್ಗೀತೆ, ಪಂಚರಾತ್ರಾಗಮಗಳು ಮತ್ತು ಪುರಾಣಗಳು ಆಧಾರವಾಗಿರುವಂತೆ ದ್ವೈತಕ್ಕೂ ಆಧಾರವನ್ನು ಒದಗಿಸಬಲ್ಲವೆ ?—ಎಂದು ಮೊದಲೇ ದ್ವೈತ ತತ್ತ್ವದಲ್ಲಿ ಸಂಶಯಗೊಂಡಿದ್ದ ಮಧ್ಯಗೇಹಭಟ್ಟರನ್ನು ಮತ್ತಷ್ಟು ಸಂಶಯದ ಸುಳಿಗೆ ಸಿಕ್ಕಿಸಿ ಹೊರಟುಹೋಗಿದ್ದ.

ಈ ಎಲ್ಲಾ ಸಂಗತಿಯನ್ನು ಭಟ್ಟರು ಮಗನಿಗೆ ತಿಳಿಸಿದಾಗ ವಾಸುದೇವನಿಗೆ ಸಂತೋಷ ಆಶ್ಚರ್ಯಗಳು ಏಕಕಾಲದಲ್ಲಿ ಉಂಟಾದವು.

ವಾಸುದೇವನಿಗೆ ತನ್ನ ಅವತಾರದಕಾರ್ಯದ ಪ್ರಥಮ ಪ್ರಯತ್ನವನ್ನು ಮನೆಯಿಂದಲೇ ಆರಂಭಿಸಬೇಕೆಂದು ಅನಿಸಿತು.

ಅವನು ತಂದೆಯೊಡನೆ ಕುಳಿತು ಭಾನುಸಿಂಹನು ಹೇಳಿದ ಅದ್ವೈತ ಪರ ಶ್ರುತಿ, ಸ್ಮೃತಿ ವಾಕ್ಯಗಳಿಗೆ ಸರಿಯಾದ ಅರ್ಥ ಹೇಳಿದನು. ಇಂಥ ನೂರಾರು ವಾಕ್ಯಗಳು ದ್ವೈತ ಪರವಾಗಿ ಅದೇ ಸ್ಮೃತಿಗಳಿಂದ ನೀಡಬಹುದೆಂದು ಹೇಳಿ ಬಾದರಾಯಣರ ಬ್ರಹ್ಮಸೂತ್ರಗಳಿಂದಲೂ, ಭಗವದ್ಗೀತೆಯಿಂದಲೂ ಉದಾಹರಣೆಗಳನ್ನು ತೋರಿಸಿದನು.

"ಅಹಂ ಬ್ರಹ್ಮಾಸ್ಮಿ," "ಪ್ರಪಂಚೋ ಯದಿ ವಿದ್ಯೇತ", "ಸೋऽಹಂ" ಮುಂತಾದ ಅಭೇದ ಶ್ರುತಿ, ಸ್ಮೃತಿ ವಾಕ್ಯಗಳಿಗೆ ಸರಿಯಾದ ಸಂದರ್ಭವನ್ನು ಹೇಳಿ ದ್ವೈತಪರವಾದ ಅರ್ಥವನ್ನು ವಾಸುದೇವನು ನೀಡಿದನು. ವಿದ್ಯೆ ಕಲಿಸಿ ಕೊಟ್ಟ ಗುರುಗಳಿಗೆ ವೈಷ್ಣವ ಭಕ್ತಿ ಎಂಬ ಗುರುಕಾಣಿಕೆ ಕೊಟ್ಟಂತೆ, ಜನ್ಮ ಕೊಟ್ಟ ತಂದೆಗೆ ದ್ವೈತ ತತ್ತ್ವದ ಮಕರಂದವನ್ನು ಭಕ್ತಿ ಪುರಸ್ಸರವಾಗಿ ಅರ್ಪಿಸಿ ಪಿತೃಋಣ ತೀರಿಸಿದನು.

## ಸಂಸಾರವೋ ಸಂನ್ಯಾಸವೋ ?

ವಾಸುದೇವನ ಜೀವನದಲ್ಲಿ ಒಂದು ಮಹತ್ವದ ತೀರ್ಮಾನ ಕೈಗೊಳ್ಳುವ ಘಟ್ಟ ಮುಟ್ಟಿತ್ತು. ಅವನ ಜೀವನ ಒಂದು ತಿರುಗಣೆಯಲ್ಲಿ ನಿಂತಿತ್ತು. ಸಂಸಾರವೋ ಸಂನ್ಯಾಸವೋ ಎಂಬ ಸಮಸ್ಯೆ ಎದುರುಗೊಂಡಿತ್ತು.

ವಾಸುದೇವನ ಮುಂದೆ ಇದೊಂದು ಮಹಾಸಮಸ್ಯೆಯಾಗಿ ನಿಂತಿತ್ತು. ಯಾವ ವೈದಿಕಧರ್ಮದ ಪುನರುದ್ಧಾರದ ಕಾರ್ಯಕ್ಕಾಗಿ— ದ್ವೈತಮತ ಸ್ಥಾಪನೆಗಾಗಿ—ಸಚ್ಛಾಸ್ತ್ರ ತತ್ತ್ವವಾದಗಳ ಪ್ರಚಾರಕ್ಕಾಗಿ ತನ್ನ ಅವತಾರವಾಗಿತ್ತೋ ಅದನ್ನು ಕಾರ್ಯರೂಪಕ್ಕೆ ತರುವ ಸಲುವಾಗಿ ಶ್ರೇಷ್ಠವಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸುವುದೇ ? ಅಥವಾ ತಾಯಿತಂದೆಗಳ ಅಭಿಲಾಷೆ

ಯಂತೆ ಯೋಗ್ಯ ಕನ್ಯೆಯನ್ನು ವಿವಾಹವಾಗಿ ಗೃಹಸ್ಥಾಶ್ರಮ ಸ್ವೀಕರಿಸಿ ಸಂಸಾರಿಯಾಗುವುದೇ ?

ಈ ಪ್ರಶ್ನೆಯನ್ನು ಅವನು ಈಗ ಅಂತಿಮವಾಗಿ ತೀರ್ಮಾನಿಸಲೇಬೇಕಾಗಿ ಬಂದಿತ್ತು.

ತಂದೆ ಮಧ್ಯಗೇಹಭಟ್ಟರಿಗೆ ತಮ್ಮ ಸುಪುತ್ರನು ವಿದ್ಯಾಪ್ರೌಢಿಮೆಗಳ ಪ್ರಭಾವದಿಂದ ಜೀವನದಲ್ಲಿ ಕೀರ್ತಿ ಪ್ರತಿಷ್ಠೆಗಳನ್ನು ಪಡೆದು, ಎಲ್ಲರಿಂದಲೂ ಗೌರವಿಸಲ್ಪಡುವುದನ್ನು ತಾವು ನೋಡುವ ಹಂಬಲ.

ತಾಯಿ ವೇದವತಿಗೆ ವಾಸುದೇವನು ವಿವಾಹವಾಗಿ ಮನೆಗೊಬ್ಬಳು ಸುಲಕ್ಷಣ ಸೊಸೆ ಬಂದು ಮನೆಯ ತುಂಬಾ ಮುದ್ದಾದ ಮಕ್ಕಳನ್ನು ನೋಡುವ ಭಾಗ್ಯ ತನ್ನದಾಗಲೆಂಬುವ ಆಸೆ.

ಸೋದರಿ ಕಲ್ಯಾಣಿಗೆ ತನ್ನ ಸೋದರ ಪ್ರತಿವಾದಿಭಯಂಕರನಾಗಿ ಅವನ ಕೀರ್ತಿ ಆಸೇತು ಹಿಮಾಲಯ ಪರ್ಯಂತ ಹರಡಿ, ಧನಕನಕ ವಸ್ತು ವಾಹನಾದಿಗಳಿಂದ ಮೆರೆಯಲಿ ಎಂಬ ಮಹತ್ವಾಕಾಂಕ್ಷೆ.

ಈ ಮೂವರೂ ತಮ್ಮದೇ ಆದ ಸ್ವಾರ್ಥದೃಷ್ಟಿಯಿಂದ ವಾಸುದೇವನ ಭವಿಷ್ಯದ ಬಗೆಗೆ ಕನಸಿನ ಅರಮನೆ ಕಟ್ಟಿದ್ದರು ; ಕನಸಿನ ಲೋಕದಲ್ಲೂ ವಿಹರಿಸುತ್ತಿದ್ದರು. ಆದರೆ ವಾಸುದೇವನು ಮಾತ್ರ ಈ ವಯಸ್ಸಿಗೇ ವೈರಾಗ್ಯ ಹೊಂದಿ ತನ್ನ ಬದುಕನ್ನು ಶ್ರೀಹರಿಗೇ ಸಮರ್ಪಿಸಿದ್ದನು. ಅವನು ಸಂಕಲ್ಪಿಸಿದ್ದ ಕಾರ್ಯಕ್ಕೆ ಸಾಧಕನಾಗಲು ನಿಶ್ಚಯಿಸಿದನು.

ಜೈನತೀರ್ಥಂಕರರ ಚರಿತ್ರೆಗಳಲ್ಲಿ ವೈರಾಗ್ಯಕ್ಕೆ ಕಾರಣವಾಗುವ ಅನೇಕ ಸಂಗತಿಗಳ ಉಲ್ಲೇಖ ಬರುತ್ತದೆ. ಆದಿತೀರ್ಥಂಕರನೆನಿಸಿದ ಪುರುದೇವ ನಿಗೆ ಜೀವನದಲ್ಲಿ ವೈರಾಗ್ಯ ಹುಟ್ಟಲು ರಂಗಸ್ಥಳದಲ್ಲಿ ನರ್ತಿಸುತ್ತಿದ್ದ ನೀಲಾಂಜನೆ ಎಂಬ ನರ್ತಕಿಯ ಅಕಾಲ ಮರಣ ಕಾರಣವಾಯಿತಂತೆ. ಅಂತಹವಳದೇ ಬೇರೊಂದು ಹೆಣ್ಣನ್ನು ನಿರ್ಮಿಸಿ, ದೇವೇಂದ್ರನು ನಾಟ್ಯದ ರಸಾಭಾಸ ತಪ್ಪಿಸಿದ್ದರೂ ಪುರುದೇವನಿಗೆ ಜೀವನದ ಅಧ್ರುವತೆಯ ಬಗೆಗೆ ಮನದಟ್ಟಾಗಿ ಹೋಗಿತ್ತು. ಅವನು ತನ್ನ ಸಮಸ್ತ ರಾಜ್ಯವೈಭವವನ್ನು ತೊರೆದು ಕಾಡಿಗೆ ಹೋಗಿ ತಪಸ್ಸಿಗೆ ಕುಳಿತನೆಂದು ಆದಿಪುರಾಣದಲ್ಲಿ ಹೇಳಿದೆ.

ಇನ್ನೊಬ್ಬ ತೀರ್ಥಂಕರನಿಗೆ ನೆಲಕ್ಕೆ ಬಿದ್ದ ಮರ ನೋಡಿ ವೈರಾಗ್ಯ ಪ್ರಾಪ್ತ ವಾಯಿತು. ಮತ್ತೊಬ್ಬನಿಗೆ ತನ್ನ ತಲೆಯ ಕೂದಲು ಬೆಳ್ಳಗಾದುದಕ್ಕೆ, ಬೇರೊಬ್ಬನಿಗೆ ತಾನು ಮುಡಿದ ಹೂ ಬಾಡಿಹೋದುದಕ್ಕೆ ವೈರಾಗ್ಯ ಉಂಟಾಗಿತ್ತು. ಅಂತೆಯೇ ಸಿದ್ಧಾರ್ಥನಿಗೆ ವಯೋವೃದ್ಧನನ್ನೂ, ಸಂನ್ಯಾಸಿ ಯನ್ನೂ, ಹೆಣವನ್ನೂ ನೋಡಿ ವೈರಾಗ್ಯ ಪ್ರಾಪ್ತವಾಗಿತ್ತು.

ಹರಿದಾಸ ದೀಕ್ಷೆಯನ್ನು ಸ್ವೀಕರಿಸಿದ್ದ ಪುರಂದರದಾಸರಿಗೆ ಪತ್ನಿಯ ಮೂಗುತಿ ವೈರಾಗ್ಯಕ್ಕೆ ಕಾರಣವಾದರೆ, ಕರ್ಜಗಿ ದಾಸಪ್ಪನಿಗೆ ಜಗನ್ನಾಥದಾಸರು ಕೇಳಿದ ಒಂದು ಪ್ರಶ್ನೆ—ಇನ್ನೂ ಹೆಣ್ಣಿನ ಚಪಲ ಬಿಡಲಿಲ್ಲವೇ ? ಎಂಬ ಸಾಮಾನ್ಯ ಪ್ರಶ್ನೆ ಹರಿದಾಸದೀಕ್ಷೆ ಸ್ವೀಕರಿಸಲು ಕಾರಣವಾಯಿತು

ವಿಷ್ಣುತೀರ್ಥರೆನಿಸಿದ ಜಯತೀರ್ಥಾಚಾರ್ಯರು, ಬೀದಿಯಲ್ಲಿ ಹೋಗು ತ್ತಿದ್ದ ಹರಿದಾಸರೊಬ್ಬರು ಹೇಳಿಕೊಳ್ಳುತ್ತಿದ್ದ "ಮಂಚ ಬಾರದು, ಮಡದಿ ಬಾರದು, ಕಂಚುಕನ್ನಡಿ ಬಾರದು" ಎಂಬ ಪದ ವಿರಕ್ತಿಯನ್ನುಂಟುಮಾಡಿತ್ತು.

ಇಂಥ ಯಾವ ಘಟನೆಯೂ ವಾಸುದೇವನ ಜೀವನದಲ್ಲಿ ನಡೆಯ ದಿದ್ದರೂ ಹುಟ್ಟಿದ ದಿನದಿಂದಲೂ ಅಪರೋಕ್ಷಜ್ಞಾನಿಯಾಗಿದ್ದ ಅವನನ್ನು ಎಂದಿಗೂ ಪ್ರಕೃತಿ ತನ್ನ ಮಾಯೆಯಿಂದ ಸೆಳೆಯಲು ಸಮರ್ಥಳಾಗಿರಲಿಲ್ಲ.

ತನ್ನ ಹಿಂದಿನ ಅವತಾರದ್ವಯಗಳಲ್ಲಿ ಮಾಡಿದ್ದ ಕಾರ್ಯಗಳೂ, ಈ ಮಧ್ವಾವತಾರದಲ್ಲಿ ಮಾಡಬೇಕಾಗಿದ್ದ ಕಾರ್ಯಗಳೂ ಸದಾ ವಾಸುದೇವನ ಕಣ್ಣುಮುಂದೇ ಇರುತ್ತಿದ್ದವು. ಅವನು ತನ್ನ ಅವತಾರದ ಪರಮ ಸಾಧನೆಗಾಗಿ ಸಿದ್ಧನಾಗುತ್ತಿದ್ದನು.

ಪೂರ್ಣಪ್ರಜ್ಞನಾಗಿದ್ದ ವಾಸುದೇವನಿಗೆ ಶ್ರೀಹರಿಯು ನಿಯೋಜಿಸಿದ್ದ ಕಾರ್ಯದ ಹೊರತು ಬೇರೆ ಚಿಂತೆಯೇ ಇರಲಿಲ್ಲ. ಅವನು ತನ್ನ ತಂದೆ ತಾಯಿಗಳು ತನ್ನನ್ನು ವಿವಾಹಾದಿ ಬಂಧನಕ್ಕೆ ಸಿಕ್ಕಿಸುವ ಮೊದಲೇ ತನ್ನ ಮಾರ್ಗವನ್ನು ನಿಶ್ಚಯಿಸಿಕೊಂಡಿದ್ದನು ತನಗೆ ಯತಿದೀಕ್ಷೆಯನ್ನು ಕೊಡಬಲ್ಲ ಯೋಗ್ಯ ಗುರುಗಳನ್ನು ಶೋಧಿಸತೊಡಗಿದ್ದನು.

ವೈದಿಕಧರ್ಮದಲ್ಲಿ ತುರೀಯಾಶ್ರಮವೆನಿಸುವ ಸಂನ್ಯಾಸಾಶ್ರಮಕ್ಕೆ ಶ್ರೇಷ್ಠಸ್ಥಾನ ನೀಡಲ್ಪಟ್ಟಿದೆ. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ

ಆಶ್ರಮಗಳಿಗಿಂತಲೂ ಈ ಸಂನ್ಯಾಸ ಆಶ್ರಮವನ್ನು ಅದು ಶ್ರೇಷ್ಠವೆಂದು ಎತ್ತಿಹಿಡಿದಿದೆ

ಐಹಿಕ ಸುಖಗಳು—ಅವು ಸ್ವರ್ಗಾದಿ ಸುಖಭೋಗಗಳೇ ಇರಲಿ—ಕಡೆಗೆ ದುಃಖವನ್ನುಂಟುಮಾಡುತ್ತವೆ. ಆದುದರಿಂದ ಅವುಗಳಲ್ಲಿ ವೈರಾಗ್ಯ ತಳೆಯಬೇಕು.

ಮುಕ್ತಿಗೆ ಸೋಪಾನವಾಗುವ ಅಪರೋಕ್ಷ ಜ್ಞಾನಕ್ಕೆ ಸಾಧನವು ವೈರಾಗ್ಯವೇ. ಇಂಥ ವೈರಾಗ್ಯವು ಜೀವಿಗೆ ಸಾಂಸಾರಿಕ ದುಃಖ ನಿರಾಶೆಗಳಿಂದಲೂ, ಸಜ್ಜನರ ಸಹವಾಸ, ಸದ್ಗ್ರಂಥಪಠಣದಿಂದಲೂ ಹುಟ್ಟುವುದು.

ಇಂಥ ವೈರಾಗ್ಯವು ಎಲ್ಲರಿಗೂ ದೊರಕುವುದಿಲ್ಲ. ಭಗವಂತನ ಪ್ರಸಾದ, ಭಗವಂತನಲ್ಲಿ ಭಕ್ತಿ, ಭಗವಂತನ ಉಪಾಸನೆಗಳೆಂಬುದು ವೈರಾಗ್ಯಕ್ಕೆ ಮುಖ್ಯ ಮೆಟ್ಟಲುಗಳು. ಅಂಥ ವೈರಾಗ್ಯವು ಮುಕ್ತಿಯನ್ನು ದೊರಕಿಸಿಕೊಡುತ್ತದೆ.

ಹಿಂದೂ ಸಮಾಜದಲ್ಲಿ ಸಂನ್ಯಾಸಿಗೆ ಅತ್ಯುನ್ನತ ಸ್ಥಾನ ಕೊಡಲಾಗಿದೆ. ಸಂನ್ಯಾಸಿಯನ್ನು–ಅವನ ದಂಡವನ್ನು–ಸ್ಪರ್ಶ ಮಾಡಿದರೆ ಜನರು ಮುಕ್ತರಾಗುತ್ತಾರೆ; ಅವರ ಪಾಪಗಳು ತೊಡೆಯುತ್ತವೆ. ಅವರಿಗೆ ಬಿಕ್ಷೆ ನೀಡಿದರೆ ಅಶ್ವಮೇಧಯಾಗದ ಫಲ ದೊರಕುವುದೆಂದು ಬ್ರಹ್ಮವೈವರ್ತಪುರಾಣದಲ್ಲಿ ಹೇಳಿದೆ.

ಇಂಥ ಶ್ರೇಷ್ಠ ಯತ್ಯಾಶ್ರಮವನ್ನು ಸ್ವೀಕರಿಸಲು ವಾಸುದೇವನು ನಿಶ್ಚಯಿಸಿದ್ದನು.

ಈ ಸಂಗತಿಯನ್ನು ಕೇಳಿ ಮಧ್ಯಗೇಹಭಟ್ಟರು ಹೌಹಾರಿದರು. ಅವರು ವಾಸುದೇವನ ಬಗ್ಗೆ ಕಟ್ಟಿದ್ದ ಸ್ವಪ್ನಸೌಧ ಕುಸಿದು ಬಿದ್ದಿತ್ತು.

ಆ ಭಟ್ಟದಂಪತಿಗಳು ತಮ್ಮ ಅಭಿಮಾನದ ಪುತ್ರನಿಂದ ಇಂಥ ಕಾರ್ಯವನ್ನು ನಿರೀಕ್ಷಿಸಿರಲಿಲ್ಲ.

ವಾಸುದೇವನು ತಂದೆಯನ್ನು ಸಂತೈಸುವಂತೆ ಹೇಳಿದನು :

"ಪಿತೃದೇವ, ಮಾನವನಾಗಿ ಹುಟ್ಟಿದ ಜೀವನಿಗೆ ತನ್ನ ಜನ್ಮಕ್ಕೆ ಕಾರಣೀಭೂತನಾದ ಭಗವಂತನಲ್ಲಿ ಭಕ್ತಿ ಒಂದಲ್ಲ ಒಂದು ದಿನ ಉಂಟಾಗಲೇ ಬೇಕು. ಅಪರೋಕ್ಷಜ್ಞಾನಿಗಳೆಲ್ಲರೂ ಹೀಗೆಯೇ ನಡೆದಿದ್ದಾರೆ. ವೈರಾಗ್ಯ ದಿಂದ ವಿಷಯಸುಖವನ್ನು ನಿಗ್ರಹಿಸಲು ಸಾಧ್ಯವಾಗುತ್ತದೆ. ಆದುದ ರಿಂದ ನನ್ನ ಸ್ವಭಾವಕ್ಕೆ ಸಹಜವೂ, ನನಗೆ ಅಪ್ಯಾಯಮಾನವೂ ಆಗಿರುವ ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ನಿಶ್ಚಯಿಸಿದ್ದೇನೆ, ನೀವು ಸಂತೋಷದಿಂದಲೇ ಅನುಮತಿಯನ್ನು ನಿಡಿ ಅನುಗ್ರಹಿಸಬೇಕು. "

"ವಾಸುದೇವ, ನಾವು ವಂಶೋದ್ಧಾರಕನಾಗುವ ಮಗನು ಹುಟ್ಟ ಬೇಕೆಂದು ಹನ್ನೆರಡು ವರ್ಷಗಳ ಕಾಲ ಅನಂತಾಸನಸ್ವಾಮಿಯನ್ನು ಕುರಿತು ಕಠಿಣತಪಸ್ಸು ಮಾಡಿದ್ದು ಇದಕ್ಕಾಗಿಯೇ"–ಎಂದು ಗದ್ಗದಕಂಠದಿಂದ ತಾಯಿ ವೇದವತಿಯು ಕಂಬನಿ ಕೋಡಿಹರಿಸಿದಳು.

"ಮಾತೃದೇವಿ, ನೀವು ಕಣ್ಣೀರು ಸುರಿಸಿದರೆ ನನಗೆ ಶ್ರೇಯಸ್ಸಾಗುವುದಿಲ್ಲ. ನೀವು ನನ್ನನ್ನು ಹರಸಿ ಕಳುಹಿಸದಿದ್ದರೆ ನನ್ನ ಇಷ್ಟಾರ್ಥವೂ ಸಾಧನೆಯಾಗು ವುದಿಲ್ಲ. ಮನುಷ್ಯನಾಗಿ ಜಗತ್ತಿನಲ್ಲಿ ಹುಟ್ಟಿದಮೇಲೆ ಅವನು ಪುರುಷಾರ್ಥ ಸಾಧನೆಗೆ ಯತ್ನ ಮಾಡಲೇಬೇಕು. ಕೆಲವರು ಧರ್ಮಮೋಕ್ಷಕಾಮಿಗಳಾಗಿದ್ದರೆ, ಮತ್ತೆ ಕೆಲವರು ಅರ್ಥಕಾಮಿಗಳಾಗಿರುತ್ತಾರೆ. ನೀವು ದಯವಿಟ್ಟು ನನಗೆ ಸಂನ್ಯಾಸಾಶ್ರಮ ಸ್ವೀಕರಿಸಲು ಅನುಮತಿಯನ್ನು ನೀಡಿ ಆಶೀರ್ವದಿಸಬೇಕು"— ಎಂದು ವಾಸುದೇವ ವಿಚಲಿತನಾಗದೆ ಹೇಳಿದನು.

" ನೀನು ಸಂನ್ಯಾಸಾಶ್ರಮ ಸ್ವೀಕರಿಸಿದರೆ ನಮ್ಮ ಗತಿ ? "

" ನಿಮಗೆ ಗತಿ ಕಾಣಿಸುವ ಒಬ್ಬ ಸುಪುತ್ರನು ಸಧ್ಯದಲ್ಲಿಯೇ ಹುಟ್ಟು ತ್ತಾನೆ. ಆವನಿಂದ ನಿಮ್ಮ ಕೆಲವು ಇಷ್ಟಾರ್ಥಗಳು ಕೈಗೂಡುತ್ತವೆ. "

" ಅಲ್ಲಿಯವರೆಗಾದರೂ ನೀನು ಮನೆಯಲ್ಲಿ ಉಳಿಯುವ ವಚನ ಕೊಡು " ತಾಯಿ ಕೇಳಿದಳು— ಹತಾಶಾಭಾವದಿಂದ.

" ಇರುತ್ತೇನೆ. ನಿಮಗೆ ಸುಪುತ್ರನು ಜನಿಸಿ, ಉಪನೀತನಾದ ನಂತರ, ನನಗೆ ಸಂನ್ಯಾಸಾಶ್ರಮದೀಕ್ಷೆ ಕೊಡಬಲ್ಲ ಯೋಗ್ಯ ಗುರುಗಳು ದೊರಕುವವರೆಗೆ ನಾನು ಮನೆಯಲ್ಲಿ ಇರುತ್ತೇನೆ."

ಎಂದು ನಿರ್ಧಾರದ ಧ್ವನಿಯಲ್ಲಿ ವಾಸುದೇವನು ನುಡಿದನು. ಮಧ್ಯ ಗೇಹಭಟ್ಟರು ವೇದವತಿಯನ್ನು ನೋಡಿ ದೀರ್ಘವಾದ ನಿರಾಶೆಯ ನಿಟ್ಟುಸಿರು ಬಿಟ್ಟರು. ಈ ಸಂದರ್ಭದಲ್ಲಿ ವಾಸುದೇವನು ಪುನಃ ಹೀಗೆ ಹೇಳಿದನು, "ನೀವು ನನಗೆ ಸಂನ್ಯಾಸಾಶ್ರಮ ಸ್ವೀಕರಿಸಲು ಸಂತೋಷದಿಂದಲೇ ಆಶೀರ್ವಾದ ಪೂರ್ವಕವಾಗಿ ಅನುಮತಿಯನ್ನು ಕೊಡದೇ ಇದ್ದರೆ ನಾನು ಈ ದೇಶದಿಂದ ಅತಿ ದೂರದೇಶಕ್ಕೆ ಹೊರಟು ಹೋಗುತ್ತೇನೆ. ಪುನಃ ನಿಮ್ಮನ್ನು ನೋಡುವುದೇ ಇಲ್ಲ. ಹಾಗಲ್ಲದೆ ಸಂತೋಷದಿಂದಲೇ ಒಪ್ಪಿಗೆ ಕೊಟ್ಟರೆ, ನಾನು ಯತಿಯಾಗಿ ಉಡುಪಿಯಲ್ಲಿರುತ್ತೇನೆ, ನೀವು ನನ್ನನ್ನು ಆಗಾಗ ನೋಡುತ್ತಿರಬಹುದು,"

ಭಟ್ಟ ದಂಪತಿಗಳು ಈ ವಿಷಯದಲ್ಲಿ ದೀರ್ಘಾಲೋಚನೆ ಮಾಡಿ, ಈಗ ನಾವು ನಮ್ಮ ವಾಸುದೇವನಿಗೆ ಸಂನ್ಯಾಸಾಶ್ರಮಕ್ಕೆ ಒಪ್ಪಿಗೆ ಕೊಡದೇ ಇದ್ದರೆ, ಅವನು ದೂರ ದೇಶಕ್ಕೆ ಹೊರಡುವುದು ಖಂಡಿತ ಅವನ ಮುಖ ದರ್ಶನವೇ ಇಲ್ಲದೇ ಹೋಗುತ್ತದೆ. ಒಪ್ಪಿಗೆ ಕೊಟ್ಟ ಪಕ್ಷದಲ್ಲಿ ಯತಿಯಾಗಿ ಉಡುಪಿಯಲ್ಲಿರುತ್ತಾನೆ. ಆಗಾಗ್ಗೆ ಅವನನ್ನು ನೋಡುತ್ತಿರಬಹುದು ಎಂದು ನಿಶ್ಚಯಿಸಿ ಸಂತೋಷದಿಂದಲೇ ಆಶೀರ್ವಾದಪೂರ್ವಕವಾಗಿ ಯತ್ಯಾಶ್ರಮ ಸ್ವೀಕಾರಕ್ಕೆ ಸಮ್ಮತಿಸಿದರು.

## ಗುರುಗಳ ಶೋಧನೆಯಲ್ಲಿ

ವಾಸುದೇವನು ಒಮ್ಮೆ ಯಾವುದೇ ಒಂದು ವಿಷಯದಲ್ಲಿ ನಿರ್ಧಾರಕ್ಕೆ ಬಂದ ಮೇಲೆ ಅದರಿಂದ ಅವನನ್ನು ಹಿಮ್ಮೆಟ್ಟಿಸಲು ಯಾರಿಂದಲೂ ಸಾಧ್ಯವಿಲ್ಲವೆಂಬುದು ಎಲ್ಲರಿಗೂ ತಿಳಿದಿತ್ತು. ಹೀಗಾಗಿ ಮಧ್ಯಗೇಹಭಟ್ಟರೂ ವೇದವತಿಯೂ ಈ ಬಗ್ಗೆ ವಾಸುದೇವನನ್ನು ತನ್ನ ನಿರ್ಧಾರ ಕೈಬಿಡಲು ಪುನಃ ಒತ್ತಾಯ ಮಾಡಲಿಲ್ಲ. ಅವರು ತಮ್ಮ ದುಃಖವನ್ನು ಮೌನವಾಗಿ ಅನುಭವಿಸುತ್ತಾ ಕಾಲ ಕಳೆಯುತ್ತಿದ್ದರು.

ವಾಸುದೇವನಿಗೆ ಉಡುಪಿಯ ಅನಂತಾಸನದೇವಾಲಯದಲ್ಲಿ ಅಚ್ಯುತಪ್ರೇಕ್ಷರೆಂಬ ಮಹಾಮಹಿಮರೊಬ್ಬರು ಬಂದು ಬೀಡುಬಿಟ್ಟಿದ್ದಾರೆಂದು ತಿಳಿಯಿತು. ಅವರನ್ನು ಕಂಡು ಅವರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ನಿಶ್ಚಯಿಸಿ ಮನೆಯಿಂದ ಉಡುಪಿಗೆ ಹೊರಟನು.

ಇತ್ತೀಚಿನ ದಿನಗಳಲ್ಲಿ ವಾಸುದೇವನಿಗೆ ಪೂರ್ಣಬೋಧನಾಗುವ ಕಾಲ ಹತ್ತಿರ ಬರುತ್ತಿದೆ ಎಂಬಂತೆ ಒಂದು ದಿವ್ಯಾನುಭವವು ಉಂಟಾಗಿತ್ತು. ಆವನು ತೋಂಟತಿಲ್ಲಾಯರ ಗುರುಕುಲದಿಂದ ಮನೆಗೆ ಹಿಂದಕ್ಕೆ ಬಂದ ದಿನದಿಂದಲೂ ತನ್ನ ಕಣ್ಣಿಗೆ ಬಿದ್ದ ಪ್ರತಿಯೊಂದು ವಸ್ತುವಿನಲ್ಲಿ—ಚೇತನಾಚೇತನ ವಸ್ತುಗಳಲ್ಲಿ ಶ್ರೀಹರಿಯ ರೂಪವನ್ನೇ ಕಾಣುತ್ತಿದ್ದನು.

ದೈತ್ಯ ಬಾಲಕ, ಭಕ್ತಶ್ರೇಷ್ಠ ಪ್ರಹ್ಲಾದನಂತೆ ಅಣುರೇಣುತೃಣಕಾಷ್ಟ ಗಳಲ್ಲಿ ಭಗವಂತನಾದ ಶ್ರೀಮಹಾವಿಷ್ಣುವಿನ ರೂಪವನ್ನೇ ಕಾಣುತ್ತಿದ್ದನು ಈಶಾವಾಸ್ಯೋಪನಿಷತ್ತಿನ ಪ್ರಥಮ ಮಂತ್ರವು ಈಗ ಆವನಿಗೆ ಆನುಭವ ವೇದ್ಯವಾಗಿತ್ತು.

ಊಟಮಾಡಲು ಕುಳಿತರೆ ಅನ್ನವು ವಿಷ್ಣುರೂಪದಿಂದ ಕಾಣಿಸುತ್ತಿತ್ತು. ಅದನ್ನು ಬಡಿಸಿದ್ದ ಎಲೆಯಲ್ಲಿ ವಿಷ್ಣುರೂಪ ಕಾಣಿಸುತ್ತಿತ್ತು. ಅನ್ನವನ್ನು ಬಡಿಸಲು ಉಪಯೋಗಿಸುತ್ತಿದ್ದ ತಟ್ಟೆ ಪಾತ್ರೆ, ಅದನ್ನು ಬಡಿಸುತ್ತಿದ್ದ ತನ್ನ ತಾಯಿ—ಮನೆಯಲ್ಲಿದ್ದ ಸಮಸ್ತ ವಸ್ತುಗಳಲ್ಲೂ, ದನಕರುಗಳು ಮೊದಲುಗೊಂಡು ಪ್ರತಿಯೊಂದು ಜಡ-ಚೈತನ್ಯ ವಸ್ತುಗಳೆಂಬ ಭೇದವಿಲ್ಲದೆ ಪ್ರತಿಯೊಂದರಲ್ಲೂ ಸರ್ವವ್ಯಾಪಿಯಾದ ಶ್ರೀ ವಿ ಷ್ಣು ವಿ ನ ರೂಪವೇ ಕಾಣುತ್ತಿತ್ತು.

ಹೀಗಾಗಿ ಅವನು ಪ್ರತಿಯೊಂದು ವಸ್ತುವಿಗೂ, ವ್ಯಕ್ತಿಗೂ ನಮಸ್ಕಾರವಿಲ್ಲದೆ ಯಾವ ಕೆಲಸಕ್ಕೂ ಪ್ರಸಕ್ತನಾಗುತ್ತಿರಲೇ ಇಲ್ಲ.

ಇದನ್ನು ನೋಡಿ ಮಧ್ಯಗೇಹಭಟ್ಟರಿಗೆ ಆಶ್ಚರ್ಯವೆನಿಸಿತು.

"ಯಾಕೆ ನೀನು ಹೀಗೆ ಕಂಡ ಕಂಡ ವಸ್ತುಗಳಿಗೆಲ್ಲ ಕೈಮುಗಿದು ನಮಸ್ಕಾರ ಮಾಡುತ್ತಿ ?" ಎಂದು ಮಗನನ್ನು ಕೇಳಿದರು.

"ವಿಷ್ಣು ಎಂಬ ಶಬ್ದಕ್ಕೆ ಸರ್ವವ್ಯಾಪಕನು, ದೇಶಕಾಲವಸ್ತುಗಳಿಂದ ಅಪರಿಚ್ಛಿನ್ನನಾಗಿರುವವನು ಎಂದು ಅರ್ಥವೆಂದು ಶಾಸ್ತ್ರಗಳು ಸಾರುತ್ತಿವೆ, "ಯಚ್ಚ ಕಿಂಚಿಜ್ಜಗತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ," ಅಂದರೆ ಇಡೀ ಜಗತ್ತನ್ನು—ಜಗತ್ತಿನಲ್ಲಿ ಏನೆಲ್ಲವನ್ನು ನಾವು ನೋಡುತ್ತೇ

ವೆಯೋ ಮತ್ತು ಏನೆಲ್ಲವನ್ನು ನಾವು ಕೇಳುತ್ತೇವೆಯೋ ಅದೆಲ್ಲದರಲ್ಲಿ— ಒಳಗೂ ಹೊರಗೂ ನಾರಾಯಣನು ವ್ಯಾಪಕವಾಗಿ ಇರುವನೆಂದು ಬೃಹನ್ನಾರಾಯಣೋಪನಿಷತ್ತು ಹೇಳುತ್ತದೆ. ನಾನು ಈ ಉಪನಿಷದ್ವಾಕ್ಯವನ್ನು ಅನುಭವದಿಂದ ತಿಳಿಯುತ್ತಿದ್ದೇನೆ. ಆದುದರಿಂದ ಇಡೀ ಜಗತ್ತು ವಿಷ್ಣುರೂಪವಾಗಿಯೇ ನನಗೆ ಗೋಚರವಾಗುತ್ತಿದೆ. ಅಂತೆಯೇ ಪ್ರತಿಯೊಂದು ವಸ್ತುವಿನಲ್ಲೂ ಅವನ ರೂಪವನ್ನು ನೋಡಿದಾಗ ನಮಸ್ಕಾರ ಮಾಡುತ್ತೇನೆ" ಎಂದು ವಾಸುದೇವನು ಹೇಳಿದಾಗ ತಂದೆಯು ದಿಙ್ಮೂಢರಾಗಿ ಕುಳಿತರು.

ಇಂಥ ಭಗವಂತನ ದಿವ್ಯಾನುಗ್ರಹದಿಂದ ಪೂರ್ಣಬೋಧನೂ, ಅಪರೋಕ್ಷಜ್ಞಾನಿಯೂ ಆದ ಮಗನಿಗೆ ಏನೆಂದು ಉತ್ತರ ಕೊಡಲು ಸಾಧ್ಯ ? ಅವರು ಮಗನನ್ನು ಮೌನವಾಗಿಯೇ ಆಶೀರ್ವದಿಸಿದರು.

ಅದ್ವೈತಮತದ ಪ್ರತಿಷ್ಠಾಪಕರಾದ ಶಂಕರಾಚಾರ್ಯರೂ ಸಹ ವಿಷ್ಣುಸಹಸ್ರನಾಮಸ್ತವಕ್ಕೆ ಭಾಷ್ಯವನ್ನು ರಚಿಸಿದ್ದಾರೆ. "ವೇದಗಳ ಸಹಸ್ರ ಶಾಖೆಗಳನ್ನು ತಿಳಿದಿರುವ ಸರ್ವಜ್ಞರೂ, ಸಾಕ್ಷಾತ್ ನಾರಾಯಣಸ್ವರೂಪಿಗಳೂ ಆದ ಭಗವಾನ್ ಕೃಷ್ಣದ್ವೈಪಾಯನರಿಂದ ಈ ವಿಷ್ಣುಸಹಸ್ರನಾಮಸ್ತವವು ಮಹಾಭಾರತದಲ್ಲಿ ರಚಿತಲ್ಪಟ್ಟಿದೆ ; ಸರ್ವಫಲ ಸಿದ್ಧಿಗಾಗಿ ಎಲ್ಲರೂ ಇದನ್ನು ಆದರದಿಂದ ಪಠಿಸಬೇಕು"— ಎಂದು ಅವರು ಹೇಳಿದ್ದಾರೆ.

ವಿಶಿಷ್ಟಾದ್ವೈತಮತವನ್ನು ಪ್ರತಿಷ್ಠಾಪಿಸಿದ ರಾಮಾನುಜಾಚಾರ್ಯರ ಆದೇಶದಂತೆ, ಅವರ ಶಿಷ್ಯ ಕೂರೇಶರ ಮಗ ಪರಾಂಕುಶರೆಂಬುವರೂ ಸಹ ವಿಷ್ಣುಸಹಸ್ರನಾಮಕ್ಕೆ ಭಗವದ್ಗುಣದರ್ಪಣವೆಂಬ ಭಾಷ್ಯವನ್ನು ರಚಿಸಿದ್ದಾರೆ.

ಭಗವಂತನಾದ ಶ್ರೀಮನ್ನಾರಾಯಣನ ಮಹಿಮೆಯನ್ನು ಕುರಿತು ವಿಷ್ಣುಸಹಸ್ರನಾಮಸ್ತೋತ್ರದ ಧ್ಯಾನ ಶ್ಲೋಕದಲ್ಲಿ ಹೀಗೆ ಉಕ್ತವಾಗಿದೆ :

"ಶಾಂತಾಕಾರನೂ, ಶೇಷಶಾಯಿಯೂ, ಪದ್ಮನಾಭನೂ, ಸುರರಿಗೆಲ್ಲ ಈಶ್ವರನೂ, ವಿಶ್ವಕ್ಕೆ ಅಧೀಶನೂ, ಆಕಾಶ ಸದೃಶನೂ, ಮೇಘವರ್ಣವುಳ್ಳವನೂ, ಶುಭ್ರವಾದ ಅಂಗಾಂಗವುಳ್ಳವನೂ, ಲಕ್ಷ್ಮೀಪತಿಯೂ, ತಾವರೆಯಂತೆ ಕಣ್ಣುಗಳುಳ್ಳವನೂ, ಯೋಗಿಯ, ಧ್ಯಾನದ ಮೂಲಕ ಹೊಂದ

ಲ್ಪಡುವವನೂ, ಸಂಸಾರ ಭಯವನ್ನು ನಾಶ ಮಾಡುವವನೂ, ಸಮಸ್ತ ಲೋಕಗಳಿಗೆ ಏಕನಾಥನೂ ಆಗಿರುವ ಶ್ರೀವಿಷ್ಣುವನ್ನು ನಮಸ್ಕರಿಸುತ್ತೇನೆ."

ಜಗತ್ತಿನ ಎಲ್ಲ ವಸ್ತುಗಳ ಸಾರಭೋಕ್ತನಾದ ಶ್ರೀವಿಷ್ಣುವನ್ನು "ಓಂಕಾರ" ಶಬ್ದವಾಚಕನಾಗಿರುವನೆಂದೂ, ಅವನನ್ನು ಹೊಂದಲು ಯೋಗ್ಯ ಗುರುಗಳಿಂದ ಉಪದೇಶ ಪಡೆದು, ಯತ್ಯಾಶ್ರಮ ಸ್ವೀಕರಿಸುವುದೊಂದೇ ಸಾಧನ ಮಾರ್ಗವೆಂದೂ ವಾಸುದೇವನು ನಿಶ್ಚಯಿಸಿದ್ದನು.

"ಓಂಕಾರವು" ಅ, ಉ, ಮ, ವರ್ಣಗಳಿಂದ ಕೂಡಿದೆ. ಇವುಗಳಲ್ಲಿ ಪ್ರತಿಯೊಂದು ವರ್ಣವೂ ಶ್ರೀವಿಷ್ಣುವಿನ ಮಹಿಮೆಯನ್ನೇ ಹೇಳಲು ಹೊರಟಿದೆ.

ಅವನು ಸರ್ವದೇಶಕಾಲಗಳಲ್ಲಿ ವ್ಯಾಪ್ತನಾಗಿದ್ದು ಸರ್ವಗುಣಪರಿಪೂರ್ಣನಾಗಿ ರುವುದರಿಂದಲೂ, ಸರ್ವತ್ರ ಪ್ರವಿಷ್ಟನಾಗಿರುವುದರಿಂದಲೂ "ಓಂ" ಎನಿಸುತ್ತಾನೆ,

ಅವನು ಸರ್ವರಿಂದ ಅತ್ಯಂತ ಭಿನ್ನನಾಗಿರುವುದರಿಂದ "ಅ" ಕಾರನೂ. ಬ್ರಹ್ಮಾದಿಗಳಿಗಿಂತಲೂ ಉತ್ಕೃಷ್ಟನಾಗಿರುವುದರಿಂದ "ಉ" ಕಾರನೂ, ಸಮಸ್ತ ವೇದಗಳಿಂದಲೇ ತಿಳಿಯಲ್ಪಡುವವನಾದುದರಿಂದಲೂ, ಜ್ಞಾನಸ್ವರೂಪನಾದುದ ರಿಂದಲೂ "ಮ" ಕಾರನೂ ಆಗಿರುವನೆಂದು ಶ್ರುತಿ, ಸ್ಮೃತಿಗಳು ತಿಳಿಸುತ್ತವೆ.

ಇಂಥ "ಓಂಕಾರವನ್ನು"–ಪ್ರಣವಮಂತ್ರವನ್ನು–ಯೋಗ್ಯ ಗುರು[1] ಗಳಿಂದ ತಾನು ಉಪದೇಶ ಪಡೆಯದೆ, ಸಂನ್ಯಾಸಿಯಾಗದೆ ವಿಷ್ಣುದ್ವೇಷಿಗಳನ್ನು ನಿಗ್ರಹಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿದು ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ಅತ್ಯಂತಉತ್ಸುಕನಾಗಿದ್ದನು.

ಶ್ರೀಮನ್ನಾರಾಯಣನ ಅನುಗ್ರಹವಿಲ್ಲದೆ ಮಿಥ್ಯಾವಾದಗಳಾದ ಅದ್ವೈತ ವಿಶಿಷ್ಟಾದ್ವೈತಮತಗಳನ್ನೂ, ಜೈನ ಬೌದ್ಧರ ಶೂನ್ಯವಾದವನ್ನೂ, ಚಾರ್ವಾಕರ

---

1) ಗಕಾರಃ ಸಿದ್ಧಿದಃ ಪ್ರೋಕ್ತೋ ರೇಫಃ ಪಾಪಸ್ಯ ಹಾರಕಃ ।
ಉಕಾರೋ ವಿಷ್ಣುರವ್ಯಕ್ತಸ್ತ್ರಿತಯಾತ್ಮಾ ಗುರುಃ ಪರಃ ॥
ಶಾಂತೋ ದಾಂತಃ ಕುಲೀನಶ್ಚ ವಿನೀತಃ ಶುದ್ಧವೇಷವಾನ್ ।
ಶುದ್ಧಾಚಾರಃ ಸುಪ್ರತಿಷ್ಠಃ ಶುಚಿರ್ದಕ್ಷಃ ಸುಬುದ್ಧಿಮಾನ್ ॥

ಮುಂದಿನ ಪುಟಕ್ಕೆ

ನಾಸ್ತಿಕ ವಾದವನ್ನು ಖಂಡಿಸಲು ತತ್ತ್ವವಾದವೆಂಬ ಹರಿತವಾದ ಅಸ್ತ್ರವನ್ನು ಹೊಂದಲು ಸಾಧ್ಯವಿಲ್ಲವೆಂದು ತಿಳಿದಿದ್ದನು. ಅದಕ್ಕಾಗಿ ಸಂನ್ಯಾಸಾಶ್ರಮ ಸ್ವೀಕರಿಸಲು ಸಂಕಲ್ಪಿಸಿದ್ದನು. ಆವನಿಗೆ ಉಡುಪಿಯ ಶ್ರೀ ಅನಂತಾಸನ ಸ್ವಾಮಿಯ ದೇವಾಲಯದಲ್ಲಿ ಅಚ್ಯುತಪ್ರೇಕ್ಷರೆಂಬ ಭಾಗವತ ಸಂಪ್ರದಾಯದ ಒಬ್ಬ ಸಂನ್ಯಾಸಿಗಳು ಬಂದು ಬಿಡಾರ ಹೂಡಿರುವರೆಂದೂ, ಅವರು ಅದ್ವೈತ ಮತವನ್ನು ಖಂಡಿಸಿ ದ್ವೈತಮತವನ್ನು ಸ್ಥಾಪಿಸಬಲ್ಲ ತನ್ನಂತಹ ಪ್ರತಿಭಾವಂತ ಶಿಷ್ಯನ ನಿರೀಕ್ಷೆಯಲ್ಲಿದ್ದಾರೆಂದೂ ಕೇಳಿದನು. ಒಂದು ದಿನ ವಾಸುದೇವನು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು, ತಂದೆತಾಯಿಗಳಿಗೆ ನಮಸ್ಕರಿಸಿ, ಆಶೀರ್ವಾದ ಪಡೆದು ಅವರನ್ನು ಬೀಳ್ಕೊಂಡು ಮನೆಯಿಂದ ಹೊರಟನು.

ವಾಸುದೇವನು ಹೀಗೆ ಸಂಸಾರದ ಬಂಧನವನ್ನು ಬಿಡಿಸಿಕೊಂಡು ಸಂನ್ಯಾಸಾಶ್ರಮ ಸ್ವೀಕಾರಕ್ಕಾಗಿ ಉಡುಪಿಗೆ ಬಂದನು.

---

ಆಶ್ರಮೀ ಧ್ಯಾನನಿಷ್ಠಶ್ಚ ಮಂತ್ರತಂತ್ರವಿಶಾರದಃ ।
ನಿಗ್ರಹಾನುಗ್ರಹೇ ಶಕ್ತೋ ಗುರುರಿತ್ಯಭಿಧೀಯತೇ ॥
ಉದ್ಧರ್ತುಂ ಚೈವ ಸಂಹರ್ತುಂ ಸಮರ್ಥೋ ಬ್ರಾಹ್ಮಣೋತ್ತಮಃ।
ತಪಸ್ವೀ ಸತ್ಯವಾದೀ ಚ ಗೃಹಸ್ಥೋ ಗುರುರುಚ್ಯತೇ ॥
ಕಲ್ಕತ್ತಾ ಮುದ್ರಣ ಶಬ್ದಕಲ್ಪದ್ರುಮ-ಪುಟ 340

2) ಸರ್ವಲಕ್ಷಣಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ ।
ಯದ್ಗುರುಃ ಸುಪ್ರಸನ್ನಸ್ಸನ್ನದ್ಯಾತ್ತನ್ನಾನ್ಯಥಾ ಭವೇತ್ ॥
(ಬ್ರಹ್ಮಸೂತ್ರಭಾಷ್ಯ ಅಧ್ಯಾಯ-3-ಪಾದ 3)

3) ಅಸಂಶಯಃ ಸಂಶಯಚ್ಛಿದ್ಗುರುರುಕ್ತೋ ಮನೀಷಿಭಿಃ ।
ತಸ್ಮಾದ್ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ॥

ಉಡುಪಿಯಲ್ಲಿ ಅನಂತಾಸನದೇವಾಲಯದಲ್ಲಿ ತಂಗಿದ್ದ ಅಚ್ಯುತ ಪ್ರೇಕ್ಷರು ನಿಜಕ್ಕೂ ವಾಸುದೇವನ ಆಗಮನದ ನಿರೀಕ್ಷಣೆಯಲ್ಲಿಯೇ ಇದ್ದರು.

ಇಂಥ ಶಿಷ್ಯನೊಬ್ಬನು ತಮಗೆ ಶೀಘ್ರದಲ್ಲಿಯೇ ದೊರಕುವನೆಂದು ಭಗವಂತನಿಂದ ಆದೇಶ ಪಡೆದಿದ್ದರು. ಅವನಿಂದ ತಾವು ಶ್ರೀ ದ್ವೈತಮತ ದೀಕ್ಷೆಪಡೆದು ಕೃತಕೃತ್ಯರಾಗಲು ಆಶಿಸುತ್ತಾ ಚಾತಕ ಪಕ್ಷಿಯಂತೆ ಕಾಯುತ್ತಿದ್ದರು.

ಅಚ್ಯುತಪ್ರೇಕ್ಷರು ವಾಸುದೇವನಿಗೆ ಗುರುವಾಗಲು ಎಲ್ಲ ರೀತಿಯಿಂದ ಅರ್ಹರಾಗಿದ್ದರು. ಅವರು ಜಿತೇಂದ್ರಿಯರೂ, ಶುದ್ಧರೂ, ಅತ್ಯಂತ ವೈರಾಗ್ಯ ಶಾಲಿಗಳೂ ಆಗಿದ್ದರು ಆವರು ಶ್ರೀನಾರಾಯಣನ ವಿಷಯಕವಾದ ತತ್ತ್ವ ಜ್ಞಾನವನ್ನು ಪಡೆದು ಭಾಗವತಧರ್ಮ ಸ್ವೀಕರಿಸಿದ್ದರು.

ಅವರ ವಿಷಯದಲ್ಲಿ ಒಂದು ಕಥೆ ಇತ್ತು. ಅವರು ಹಿಂದಿನ ಜನ್ಮದಲ್ಲಿ ಭುಕ್ತಿ ಮುಕ್ತಿಜ್ಞಾನಭಿಕ್ಷುವಾಗಿ, ಮನೆಯಿಂದ ಮನೆಗೆ ತಿರುಗುತ್ತಿದ್ದರಂತೆ ಹೀಗೆ ಒಂದು ದಿನ ಭಿಕ್ಷಾಟನೆಗೆ ಹೋಗಿದ್ದಾಗ ಶ್ರೀಕೃಷ್ಣನ ಭಕ್ತಳಾದ ದ್ರೌಪದಿಯ ಕೈಯಿಂದ ದಿವ್ಯಾನ್ನವನ್ನು ಪಡೆದು ಉಂಡರಂತೆ. ಇದರಿಂದ ಅವರ ಕರ್ಮ ನಶಿಸಿ, ಪಾಂಡವರ ಮನೆಯಲ್ಲಿ ಅವರು ಇದ್ದುಕೊಂಡು ಅವರನ್ನು ಸೇವಿಸಿ ಜನ್ಮ ಸಾರ್ಥಕಪಡಿಸಿಕೊಂಡರಂತೆ.2

---

1) ಗುರೋಃ ಕಿಲಾನ್ವೇಷಣವಾನ್ ಜಗದ್ಗುರು-
ಸ್ತದಾಜಗಾಮಾಖಿಲಲೋಕಶಿಕ್ಷಕಃ ॥
ಯತಿರ್ಯತಾತ್ಮಾ ಭುವಿ ಕಶ್ಚನಾಭವ
ದ್ವಿಭೂಷಣೋ ಭೂರಿವಿರಕ್ತಿಭೂಷಣಃ ।
ನನಾಮ ಮಾತ್ರಾಚ್ಯುತಿಮರ್ಥತೋಽಪಿ ಯಂ
ಜನೋಽಚ್ಯುತಪ್ರೇಕ್ಷಮುದಾಹರತ್ ಸ್ಫುಟಮ್ ॥
•ಮ ॥ ವಿ॥ ಸರ್ಗ 4-ಶ್ಲೋಕ 5-6-

2) ಪುರೈಷಕೃಷ್ಣಾಕರಸಿದ್ಧಶುದ್ಧಿಮ
ದ್ವರಾನ್ನಭುಕ್ತ್ಯಾ ಕಿಲ ಪಾಂಡವಾಲಯೇ ।
ವಿಶೋಧಿತಾತ್ಮಾ ಮಧುಕೃತ್ತ್ವವೃತ್ತಿಮಾಂ-
ಶ್ಚಕಾರ ಕಾಂಕ್ಷಿತ್ವರಿವತ್ಸರಾನ್ ಮುದಾ ॥
ಮ ॥ ವಿ ॥ ಸರ್ಗ-4-ಶ್ಲೋಕ -7

ಇದರ ಪರಿಣಾಮವಾಗಿ ಕಲಿಯುಗದಲ್ಲಿ ಶ್ರೀಮನ್ಮಧ್ವಾಚಾರ್ಯರಿಂದ ದ್ವೈತತತ್ತ್ವವನ್ನು ತಿಳಿಯಲು ಅಚ್ಯುತಪ್ರೇಕ್ಷರಾಗಿ ಅವತರಿಸಿದ್ದಾರೆಂದು ಜನ ಹೇಳುತ್ತಿದ್ದರು.

ಅವರು ಅದ್ವೈತಿಗಳಾಗಿದ್ದರೂ, ಅವರಿಗೆ ಉಪದೇಶ ನೀಡಿದ ಗುರುಗಳು ತಮ್ಮ ಅವಸಾನ ಕಾಲದಲ್ಲಿ ಶಿಷ್ಯರಾದ ಅಚ್ಯುತಪ್ರೇಕ್ಷರಿಗೆ ಹೀಗೆ ಉಪದೇಶಿದ್ದರು [1]:

"ಪ್ರಿಯ ಶಿಷ್ಯ ಅಚ್ಯುತಪ್ರೇಕ್ಷನೇ, ನನ್ನ ಈ ಮಾತನ್ನು ಗಮನವಿಟ್ಟು ಕೇಳು. ಮಾಯಾವಾದಿಗಳು ನಾನೇ ಬ್ರಹ್ಮ (ದೇವರು) ಎಂದುಕೊಳ್ಳುತ್ತಾ ಸರ್ವವೂ ಬ್ರಹ್ಮಮಯವೆಂದು ಹೇಳಿಕೊಂಡು ಅದ್ವೈತಸಿದ್ಧಾಂತವನ್ನು ಪ್ರತಿಪಾದಿಸಿದರೂ, ಇದನ್ನು ಯುಕ್ತಿಯುಕ್ತವಾಗಿ ಸಿದ್ಧಾಂತಗೊಳಿಸಲು ಆಗುವುದಿಲ್ಲ. ಆದುದರಿಂದ ನೀನು ಅದ್ವೈತಮತವನ್ನು ಆಶ್ರಯಿಸಬೇಡ.

"ಅಲ್ಲದೆ ಮಾಯಾವಾದಿಗಳು ಜೀವಬ್ರಹ್ಮೈಕ್ಯವನ್ನು ಉಪಾಸನೆ ಮಾಡಬೇಕೆಂದು ಹೇಳಿದ್ದಾರೆ. ಇದು ನನ್ನ ಗುರುಗಳಿಗೂ, ಅವರಿಗಿಂತ ಹಿಂದಿನವರಾದ ಯಾರಿಗೂ ಅನುಭವದಿಂದ ಪ್ರತ್ಯಕ್ಷವಾಗಿಲ್ಲ. ಆದುದರಿಂದ ನೀನು ಅದ್ವೈತಮತವನ್ನು ತ್ಯಜಿಸಿ ಮುಕ್ತಿಯನ್ನೀಯುವ ತತ್ತ್ವವಾದ ದ್ವೈತಮತವನ್ನು ಸೇವಿಸು. ನಿನಗೆ ಇಂಥ ದ್ವೈತತತ್ತ್ವಜ್ಞಾನ ನೀಡುವ ಶಿಷ್ಯನೊಬ್ಬನು ಶೀಘ್ರದಲ್ಲಿಯೇ ದೊರಕುತ್ತಾನೆ."

---

1) ಅಹಂ ಸ್ವಯಂ ಬ್ರಹ್ಮ ನ ಕಾಚಿದಸ್ತಿ ಮ- –
ತ್ಪರಂವಿಜೃಂಭೇತ ಯದಾ ಸ್ಫುಟಂ ಚಿತಿಃ ।
ಇತೀಹ ಮಾಯಾಸಮಯೋಪಪಾದಿತಂ
ನಿರನ್ವಯಂ ಸುವ್ರತ ಮಾ ಸ್ಮ ವಿಶ್ವಸೀಃ ॥
ಯದೇತ ದಾತ್ಮೈಕ್ಯಮುಪಾಸ್ತಿಚೋದಿತಂ
ನ ಮೇ ಗುರೋರಪ್ಯಪರೋಕ್ಷತಾಂ ಗತಂ ।
ಪುರಾತನಾನಾಮಪಿ ಸೌಮ್ಯ ಕುತ್ರಚಿ–
ತ್ತತೋ ಮುಕುಂದಂ ಭಜ ಸಂವಿದೇ ಮುದಾ ॥
ಮ ॥ ವಿ ॥ ಸರ್ಗ–4–ಶ್ಲೋಕ 9–11

ಹೀಗೆ ಉಪದೇಶಿಸಿ ಅವರ ಗುರುಗಳು ನಿರ್ಯಾಣ ಹೊಂದಿದ್ದರು.

ತಮ್ಮ ಗುರುಗಳ ಅಂತಿಮ ಉಪದೇಶದಂತೆ ಅಚ್ಯುತಪ್ರೇಕ್ಷರು ಲೋಕ ಸಂಗ್ರಹ ಕಾರ್ಯವನ್ನು ಮುಗಿಸಿಕೊಂಡು ಉಡುಪಿ ಕ್ಷೇತ್ರಕ್ಕೆ ಆಗಮಿಸಿ, ಅಲ್ಲಿ ಶ್ರೀಅನಂತಾಸನಸ್ವಾಮಿಯ ಮಂದಿರದಲ್ಲಿ ಬಿಡಾರ ಹೂಡಿದ್ದರು.

## ಭಗವತ್ಕಾರ್ಯ ಸಾಧಕ

ಮಾನವನಿಗೆ ದೇವರ ವಿಷಯದಲ್ಲಿ ಹೊರತು ಅನ್ಯ ವಿಷಯಗಳಲ್ಲಿ ಆಸಕ್ತಿ ಇಲ್ಲದಿದ್ದರೆ ಸ್ವಾಭಾವಿಕವಾಗಿಯೇ ದೇವರಲ್ಲಿ ಭಕ್ತಿಯುಂಟಾಗುವುದು. ಪ್ರಪಂಚದ ಜನರು ಪೂಜ್ಯರ ಆಚರಣೆಗಳನ್ನು ಅನುಸರಿಸಿ ತಾವೂ ಪೂಜ್ಯರಾಗುವರು. ಹೀಗೆ ದೊಡ್ಡವರ ನಡೆ ನುಡಿ ಇತರರಿಗೆ ಅನುಕರಣೀಯುವೆನಿಸುವುದು. ಲೋಕದಲ್ಲಿ ಜ್ಞಾನಿಗಳೆಂದೆನಿಸಿಕೊಂಡವರೆಲ್ಲರೂ ಚತುರಾಶ್ರಮಗಳಲ್ಲಿ ಶ್ರೇಷ್ಠವಾದ ತುರೀಯಾಶ್ರಮವನ್ನು ಕೈಗೊಂಡು ತಮ್ಮ ಆತ್ಮೋದ್ಧಾರ ಮಾಡಿಕೊಂಡಿರುವರು. ಇತರರ ಉದ್ಧಾರಕ್ಕೂ ಕಾರಣರಾಗಿರುವರು.

ಇಂಥ ಶ್ರೇಷ್ಠಚೇತನಗಳಲ್ಲಿ ಅಚ್ಯುತಪ್ರೇಕ್ಷರ ಚೇತನವೂ ಒಂದಾಗಿತ್ತು. ಅವರು ತಮ್ಮನ್ನು ದ್ವೈತಮತ ದೀಕ್ಷೆಗೆ ಪರಿವರ್ತಿಸುವ ಶಿಷ್ಯನನ್ನು ನಿರೀಕ್ಷಿಸುತ್ತಾ ಅನಂತಾಸನಸ್ವಾಮಿಯ ದೇವಾಲಯದಲ್ಲಿ ಬೀಡುಬಿಟ್ಟಿದ್ದರು. ಒಂದು ದಿನ ಅಲ್ಲಿ ದೇವರ ಪೂಜೆಯ ನಂತರ ಒಂದು ಅದ್ಭುತ ಘಟನೆ ಜರುಗಿತು.

ಆ ದಿನ ಅಚ್ಯುತಪ್ರೇಕ್ಷರು ದೇವರನ್ನು ಪೂಜಿಸಿ, ಅವನಿಗೆ ಅರ್ಪಿಸಿದ ನೈವೇದ್ಯವನ್ನು ಭುಂಜಿಸಿ ಧ್ಯಾನಾಸಕ್ತರಾಗಿ ಕುಳಿತಿದ್ದರು.

ಇದ್ದಕ್ಕಿದ್ದಂತೆ ಅವರ ಶಿಷ್ಯರಲ್ಲಿ ಒಬ್ಬನ ಮೇಲೆ ಅನಂತಾಸನ ಸ್ವಾಮಿಯ ಆವೇಶ ಬಂದು ಹೀಗೆ ಹೇಳತೊಡಗಿದನು :

"ಇಲ್ಲಿಗೊಬ್ಬ ಪವಾಡಪುರುಷ ಸಧ್ಯದಲ್ಲಿಯೇ ಬರಲಿದ್ದಾನೆ. 1 ಅವನಿಂದ ದ್ವೈತಮತವು ಪ್ರತಿಷ್ಠಾಪಿತವಾಗುತ್ತದೆ. ಅವನು ಅವತಾರಪುರುಷ, ಮಹತ್ಕಾರ್ಯ ಸಾಧನೆಗಾಗಿಯೇ ಅವತರಿಸಿದ್ದಾನೆ. ಅವನಿಂದ ಲೋಕ ಕಲ್ಯಾಣವೂ ಆಗುತ್ತದೆ, ಅವನು ಗುರುಗಳಿಗೇ ಗುರುವಾಗುತ್ತಾನೆ. ಅವನಿಂದಾಗಿ ನೀವೆಲ್ಲರೂ ನನ್ನನ್ನು ತಿಳಿದು ಜ್ಞಾನಿಗಳಾಗುತ್ತೀರಿ !"

ಈ ಮಾತನ್ನು ಕೇಳಿ ಅಚ್ಯುತಪ್ರೇಕ್ಷರು, ಆವೇಶಬಂದವನ ಮಾತುಗಳು ತಮ್ಮನ್ನೇ ಉದ್ದೇಶಿಸಿ ಹೇಳಿದುದೆಂದು ಗ್ರಹಿಸಿದರು. ಅವರ ಅಂಗಾಂಗಗಳು ಭಕ್ತಿಯ ಉದ್ರೇಕದಿಂದ ರೋಮಾಂಚನಗೊಂಡವು. ಅವರು ಅನಂತಾಸನ ಸ್ವಾಮಿಯನ್ನು ಮನಸ್ಸಿನಿಂದಲೇ ವಂದಿಸಿದರು.

ಭಗವಂತನ ಆದೇಶವೆಂದಿಗೂ ಸುಳ್ಳಾಗುವುದಿಲ್ಲ. ಅವನ ಭವಿಷ್ಯವಾಣಿ ಯಂತೆ ವಾಸುದೇವನು ಅಚ್ಯುತಪ್ರೇಕ್ಷರನ್ನು ಗುರುಗಳಾಗಿ ಸ್ವೀಕರಿಸಲು ನಿಶ್ಚಯಿಸಿ ಉಡುಪಿಗೆ ಬಂದು ಅನಂತೇಶ್ವರ ದೇವಾಲಯದಲ್ಲಿ ಅವರನ್ನು ಕಂಡನು.

ಅವರಿಬ್ಬರ ಸಮಾಗಮವು ವಿಂಧ್ಯಾದ್ರಿಯು ಹಿಮಾಲಯವನ್ನು ಸಂಗಮಿಸಿ ದಂತೆಯೂ, ಕಾವೇರಿಯು ಗಂಗೆಯನ್ನು ಬಂದು ಸೇರಿದಂತೆಯೂ ಆಗಿತ್ತು.

ವಾಸುದೇವನು ಬಂದು ಅಚ್ಯುತಪ್ರೇಕ್ಷರ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿದನು.

ಯತಿಶ್ರೇಷ್ಠರು ಅವನನ್ನು ಪ್ರೀತಿ ವಿಶ್ವಾಸಗಳಿಂದ ಮೇಲಕ್ಕೆತ್ತಿ ಕೂಡಿಸಿ, ಕುಶಲಪ್ರಶ್ನೆ ಅನಂತರ ಅವನು ಬಂದ ಕಾರ್ಯವನ್ನು ಕುರಿತು ಪ್ರಶ್ನಿಸಿದರು.

---

1) ಸುಭಕ್ತಿನಾ ತೇನ ಸ ಭಕ್ತವತ್ಸಲೋ
ನಿಷೇವಿತಸ್ತತ್ರ ಪರಂ ಬುಭುಕ್ಷಯಾ ।
ಭವಿಷ್ಯತಃ ಶಿಷ್ಯವರಾದ್ಧಿ ವಿದ್ಧಿ ಮಾಮಿ-
ತಿ ಪ್ರವಿಷ್ಟೋಽಪುರುಷಂ ತಮಭ್ಯಧಾತ್ ॥

ಮ ॥ ವಿ ॥ ಸರ್ಗ-4-ಶ್ಲೋಕ 13

"ಭಗವನ್, ತಾವು ನನಗೆ ಯತಿದೀಕ್ಷೆಯನ್ನು ಅನುಗ್ರಹಿಸಿ ಉದ್ಧಾರ ಮಾಡಬೇಕು"—ಎಂದು ವಿನಮ್ರನಾಗಿ ವಾಸುದೇವನು ಪ್ರಾರ್ಥಿಸಿದನು.

ಅವನ ವರ್ಚಸ್ವಿಯಾದ ಮುಖ, ವಿನಯ, ಗಾಂಭೀರ್ಯ, ಭಗವದ್ಭಕ್ತಿಯನ್ನು ನೋಡಿ, ಅಚ್ಯುತಪ್ರೇಕ್ಷರು ಆವೇಶದಲ್ಲಿ ಭಗವಂತನು ಸೂಚಿಸಿದ್ದ ಸಚ್ಛಿಷ್ಯನು ಇವನೇ ಎಂದು ದೃಢಪಡಿಸಿಕೊಂಡರು.

"ವಾಸುದೇವ, ಸಂನ್ಯಾಸಾಶ್ರಮವೆಂಬುದು ಅತ್ಯಂತ ಶ್ರೇಷ್ಠವಾದ ಆಶ್ರಮ. ಯತ್ಯಾಶ್ರಮಕ್ಕಿಂತ ಉತ್ತಮವಾದ ಪದವಿ ಈ ಲೋಕದಲ್ಲಿ ಜೀವಿಗೆ ಸಿಕ್ಕುವುದು ದುರ್ಲಭ. ಆದರೆ ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಕೆಲವು ವಿಧಿಗಳು ಇವೆ. ಯತಿಯಾಗುವವನು ಮೊದಲು ತಂದೆತಾಯಿಗಳ ಅನುಮತಿ ಮತ್ತು ಆಶೀರ್ವಾದಗಳನ್ನು ಪಡೆಯಬೇಕು. ಆನಂತರವೇ ಯತ್ಯಾಶ್ರಮದ ಇತರ ಸಂಸ್ಕಾರಗಳು ನಡೆಯುವುವು" ಎಂದರು.

"ಇವುಗಳ ಬಗ್ಗೆ ನೀವು ಆತಂಕಗೊಳ್ಳುವ ಕಾರಣವಿಲ್ಲ. ನಾನು ತಾಯಿ ತಂದೆಗಳ ಅನುಮತಿಯನ್ನೂ, ಆಶೀರ್ವಾದವನ್ನೂ ದೊರಕಿಸಿಕೊಂಡೇ ತಮ್ಮಲ್ಲಿಗೆ ಬಂದಿದ್ದೇನೆ"

—ಎಂದು ಪರಮನಮ್ರನಾಗಿ ವಾಸುದೇವನು ವಿಜ್ಞಾಪಿಸಿದನು.

"ಹಾಗಿದ್ದರೆ ಸಂತೋಷ. ಶೀಘ್ರದಲ್ಲಿಯೇ ನಿನಗೆ ಯತಿದೀಕ್ಷೆಯನ್ನು ಅನುಗ್ರಹಿಸುತ್ತೇವೆ. ಅಲ್ಲಿಯವರೆಗೆ ನೀನು ನಮ್ಮ ಬಳಿ ಇದ್ದುಕೊಂಡು ಶಾಸ್ತ್ರಾಧ್ಯಯನ, ಮತ್ತು ಭಗವಂತನ ಸೇವೆ ಮಾಡುತ್ತ ಇರು"—ಎಂದು ಹೇಳಿ ಅವನ ಯೋಗಕ್ಷೇಮವನ್ನು ನೋಡಿಕೊಳ್ಳಲು ತಮ್ಮ ಹಿರಿಯ ಶಿಷ್ಯರಿಗೆ ತಿಳಿಸಿ, ವಾಸುದೇವನನ್ನು ಅವರಿಗೆ ಒಪ್ಪಿಸಿದರು.

ಇದೇ ಸಮಯದಲ್ಲಿ ಬೆಳ್ಳೆಯಲ್ಲಿದ್ದ ಭಟ್ಟ ದಂಪತಿಗಳು, ವಾಸುದೇವನಿಗೆ ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಅನುಮತಿಯನ್ನಿತ್ತಿದ್ದರೂ, ಪುತ್ರಸ್ನೇಹಜನ್ಯ ಮೋಹದಿಂದ ಅಚ್ಯುಪ್ರೇಕ್ಷರನ್ನೇ ನೋಡಿ, ವಾಸುದೇವನ ನಿರ್ಧಾರವನ್ನು ಬದಲಾಯಿಸಲು ಸಾಧ್ಯವೇ ಎಂಬುದನ್ನು ಕೊನೆಯ ಸಲ ಪ್ರಯತ್ನಿಸೋಣವೆಂಬ ಅಭಿಪ್ರಾಯದಿಂದ, ಉಡುಪಿಗೆ ಬಂದರು. ವಾಸುದೇವನನ್ನೂ, ಅಚ್ಯುತಪ್ರೇಕ್ಷರನ್ನೂ ಕಂಡರು.

ಮಧ್ಯಗೇಹಭಟ್ಟರು ಅಚ್ಯುತಪ್ರೇಕ್ಷರನ್ನು 1 ಉದ್ದೇಶಿಸಿ "ಸ್ವಾಮಿ, ನಾವು ಪುತ್ರಭಿಕ್ಷೆ ಬೇಡಲು ಬಂದಿದ್ದೇವೆ"—ಎಂದು ನಿವೇದಿಸಿಕೊಂಡರು.

"ನಿಮ್ಮ ಪುತ್ರನು ನಿಮ್ಮ ಜೊತೆ ಹಿಂದಕ್ಕೆ ಬರುವುದಾದರೆ ಅಗತ್ಯವಾಗಿ ಕರೆದುಕೊಂಡು ಹೋಗಬಹುದು, ನಮ್ಮ ಆಕ್ಷೇಪಣೆ ಇಲ್ಲ"—ಎಂದು ಅಚ್ಯುತ ಪ್ರೇಕ್ಷರು ತಿಳಿಸಿದರು.

ಈ ಮಾತು ಕೇಳಿ ಮಧ್ಯಗೇಹಭಟ್ಟರಿಗೆ ಸಂತೋಷವಾಯಿತು. ಅವರು ಮಗನನ್ನು ಉದ್ದೇಶಿಸಿ ಹೇಳಿದರು. "ಮಗು, ನಾವು ವೃದ್ಧರು, ನಮ್ಮನ್ನು ಈ ವೃದ್ಧಾಪ್ಯದಲ್ಲಿ ಕಾಪಾಡುವವರು ಯಾರು? ನಾವು ಈ ಸ್ಥಿತಿಯಲ್ಲಿ ಬದುಕಿರುವಾಗ ನೀನು ಸಂನ್ಯಾಸಿಯಾಗುವುದು ಧರ್ಮವಲ್ಲ; ಇದು ಉಚಿತವೂ ಅಲ್ಲ."

ಆ ಮಾತಿಗೆ ವಾಸುದೇವನು ಕಂಠತಃಪ್ರತ್ಯುತ್ತರವನ್ನು ನೀಡದೆ ಕೇವಲ ಅನುಕಂಪದಿಂದಲೇ ತಾಯಿ ತಂದೆಗಳನ್ನು ನೋಡಿದನು.

---

1) ಸುತಂ ಯತೀಂದ್ರಾನುಚರಂ ವಿರಾಗಿಣಂ
ನಿಶಮ್ಯ ಸಂನ್ಯಾಸನಿಬದ್ಧಮಾನಸಮ್ ।
ಸುವತ್ಸಲಾ ರೂಪ್ಯತಲಾಲಯಸ್ಥಿತಂ
ವಿಯೋಗತಾಂತೌ ಪಿತರೌ ಸಮೀಯತುಃ ॥
ಸ ಜಾತಕೋಪಾಕುಲಿತೋಧರಾಸುರೋ
ಮಹಾತ್ಮನಾಂ ಲಂಘನಭೀರುರಪ್ಯಯಂ ।
ಸುತಸ್ಯ ಕೌಪೀನಧೃತೌ ಹಿ ಸಾಹಸ—
ಪ್ರತಾಪ್ಸ್ಯವೋ ಮೇ ದೃಢ ಇತ್ಯಭಾಷತ॥
ಬಹುಶ್ರುತತ್ವಾದ್ಯದಿ ತತ್ಸಹೇ ಬಲಾ—
ನ್ನ ಸಾ ಸವಿತ್ರೀ ವಿರಹಂ ಸಹೇತ ತೇ।
ಇತಿ ದ್ವಿಜೇನಾಭಿಹಿತೇऽನಮತ್ಸ ತಂ
ಭವಾನನುಜ್ಞಾಂ ಪ್ರದದಾತ್ವಿತಿ ಬ್ರುವನ್ ॥
ಮ ॥ ವಿ ॥ ಸರ್ಗ 4–ಶ್ಲೋಕ 15, 20, 24

ಅಷ್ಟರಲ್ಲಿ ಮಧ್ಯಗೇಹಭಟ್ಟರಿಗೆ ಅದೇನೆನಿಸಿತೋ, ಅವರು ಬಂದು ಮಗನಾದ ವಾಸುದೇವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

"ನಿನ್ನ ದಮ್ಮಯ್ಯ, ನೀನು ನಮ್ಮನ್ನು ಬಿಟ್ಟು ಹೋಗಬೇಡ, ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಡ. ವಂಶೋದ್ಧಾರಕನಾಗಿರುವ ನಿನ್ನ ಅಗಲಿಕೆಯನ್ನು ನಾವು ಸಹಿಸಲಾರೆವು"—ಎಂದು ಗೋಳಿಟ್ಟರು.

ಇದರಿಂದ ವಾಸುದೇವನ ಮನಸ್ಸು ಬದಲಾಯಿಸಿ ತಮ್ಮ ಹಿಂದೆ ಊರಿಗೆ ಬರಬಹುದೆಂದು ಅವರು ನಿರೀಕ್ಷಿಸಿದ್ದರು.

ವಾಸುದೇವನು ಮಾತ್ರ ನಿರ್ವಿಕಾರನಾಗಿಯೇ ಇದ್ದನು. ಹಿರಿಯರಾದ ತನ್ನ ತಂದೆಯು ಚಿಕ್ಕವನಾದ ತನ್ನನ್ನು ನಮಸ್ಕರಿಸಿದುದನ್ನು ನೋಡಿ ಅವನು ಹೇಳಿದ,

"ಪಿತೃದೇವ, ಲೋಕದಲ್ಲಿ ವೃದ್ಧರಿಗೆ ಕಿರಿಯರು ನಮಸ್ಕರಿಸುತ್ತಾರೆ. ಈಗ ನೀವು ನನಗೆ ನಮಸ್ಕಾರ ಮಾಡಿದಿರಿ. ಅಂದರೆ ನಾನು ನಿಮ್ಮ ದೃಷ್ಟಿಯಲ್ಲಿ ನಿಮಗಿಂತ ಶ್ರೇಷ್ಠನೆಂದು ಒಪ್ಪಿದಂತಾಯಿತು ನಿಮ್ಮ ಮಗನಾಗಿ ನಾನು ನಿಮಗಿಂತಲೂ ಶ್ರೇಷ್ಠನಾಗಿ ನಿಮ್ಮ ನಮಸ್ಕಾರ ಸ್ವೀಕರಿಸಬೇಕಾದರೆ ನಾನು ಸಂನ್ಯಾಸಿಯಾಗಲೇಬೇಕು ಭಗವಂತನಾದ ಅನಂತಾಸನಸ್ವಾಮಿಯು ನನ್ನ ಸಂನ್ಯಾಸಾಶ್ರಮಸ್ವೀಕಾರಕ್ಕೆ ತಾನಾಗಿ ನಿಮ್ಮಿಂದ ಸಮ್ಮತಿಯನ್ನು ಸೂಚಿಸಿದ್ದಾನೆ"

ಈ ಮಾತನ್ನು ಕೇಳಿ ಮಧ್ಯಗೇಹಭಟ್ಟರು ಜಣಕಾಲ ಬುಸುಗುಟ್ಟುವ ನಾಗರಹಾವನ್ನು ಮೆಟ್ಟಿದವರಂತೆ ನಿಶ್ಚೇಷ್ಟಿತರಾದರು.

ಅವರಿಗೆ ಅತ್ಯಂತ ನಿರಾಶೆಯು ಮಹಾಗವಿಯನ್ನು ಹೊಕ್ಕಂತಾಯಿತು.

ಅವರು ಪಂಡಿತರಾದರೂ ತಮ್ಮ ಮಗನ ಜಟಿಲವಾದ ಪ್ರಶ್ನೆಗೆ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ಆದರೂ ತಮ್ಮ ಕೊನೆಯ ಪ್ರಯತ್ನವನ್ನು ಮಾಡದೇ ಇರಲಿಲ್ಲ.

"ವಾಸುದೇವ, ನೀನು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರೆ ನಾವು ಬದುಕಿರುವುದಿಲ್ಲ"— ಎಂದು ಹೇಳಿ ತಮ್ಮ ಊರಾದ ಬೆಳ್ಳಿಗೆ ತೆರಳಿದರು.

ಒಂದೆರಡು ದಿನಗಳು ಕಳೆದವು.

ಅಲ್ಲಿಯೇ ಇದ್ದ ವಾಸುದೇವನನ್ನು ಕರೆದು ಅಚ್ಯುತಪ್ರೇಕ್ಷರು—

"ನೀನು ಅಂತಿಮವಾಗಿ ಏನು ನಿರ್ಧರಿಸಿರುವಿ? ಸಂನ್ಯಾಸವೋ ಅಥವಾ ಸಂಸಾರವೋ?"—ಎಂದರು.

"ತಮ್ಮ ಪಾದಕಮಲಗಳಲ್ಲಿ ವಾಸಿಸುವ ಮಧುಪ ನಾನು, ಅಂದ ಮೇಲೆ ನನಗೆ ಸಂಸಾರದಲ್ಲಿ ಮೋಹ ಹುಟ್ಟಲು ಸಾಧ್ಯವೇ ಇಲ್ಲ. ಭಟ್ಟದಂಪತಿಗಳು ನನ್ನ ಈ ಶರೀರಕ್ಕೆ ಕಾರಣರಾದ ಜನನೀಜನಕರೆಂಬುದೇನೋ ದಿಟ; ಆದರೆ ಈ ಆತ್ಮನಿಗೆ ಇಂಥ ಶರೀರಗಳು ಎಷ್ಟು ಒದಗಿ ಬಂದಿತ್ತೋ. ಅದನ್ನೆಲ್ಲಾ ಯೋಚಿಸಿನೋಡಿದರೆ, ನನ್ನ ಸಂನ್ಯಾಸಾಶ್ರಮಸ್ವೀಕಾರಕ್ಕೆ ಈಗಲೇ ಪ್ರಶಸ್ತಕಾಲ ಒದಗಿದೆ; ಗುರುದೇವರು ನನ್ನನ್ನು ಅನುಗ್ರಹಿಸಿ ಕಾಪಾಡಬೇಕು"

—ಎಂದು ವಿನಯದಿಂದಲೇ ಪ್ರಾರ್ಥಿಸಿದನು.

ಈ ಮಾತು ಕೇಳಿ ಅಚ್ಯುತಪ್ರೇಕ್ಷರಿಗೆ ಪರಮ ಸಂತೋಷವಾಯಿತು. ಈ ಚಿಕ್ಕ ಬಾಲಕನಿಂದ ಇಂಥ ಸದುತ್ತರ ಬರಬಹುದೆಂದು ಅವರು ನಿರೀಕ್ಷಿಸಿರಲೇ ಇಲ್ಲ.

ಎಲ್ಲವನ್ನು ಯೋಚಿಸಿ ಅಚ್ಯುತಪ್ರೇಕ್ಷರು ಹೇಳಿದರು: "ವಾಸುದೇವ, ನಾವು ನಿನಗೆ ಯತಿದೀಕ್ಷೆಯನ್ನು ಅನುಗ್ರಹಿಸುತ್ತೇವೆ; ಆದರೆ ನಿನಗೆ ಯೋಚಿಸಲು ಇನ್ನೂ ಮೂರು ದಿನಗಳ ಸಮಯ ಕೊಡುತ್ತಿದ್ದೇವೆ. ಯಾವುದನ್ನೂ ಚನ್ನಾಗಿ ಆಲೋಚಿಸಿ ತಿಳಿಸು. ಇದು ದುಡುಕುವ ಕಾರ್ಯವಲ್ಲ. ನಿನ್ನ ನಿರ್ಧಾರ ದೃಢವಾದರೆ ನೇತ್ರಾವತೀನದಿಯ ದಂಡೆಯಲ್ಲಿರುವ ಕಾತ್ಯಾಡಿ ಮಠದಲ್ಲಿ ನಿನಗೆ ಯತ್ಯಾಶ್ರಮವನ್ನು ಅನುಗ್ರಹಿಸುತ್ತೇವೆ"—ಎಂದು ತಮ್ಮ ಅಂತಿಮ ತೀರ್ಮಾನವನ್ನು ತಿಳಿಸಿದರು.

ಅದರಂತೆ ಗುರುಗಳು ತಮ್ಮ ಶಿಷ್ಯರನ್ನು ಕರೆದುಕೊಂಡು, ಆರಾಧ್ಯ ವಿಗ್ರಹಗಳೊಡನೆ, ಪಲ್ಲಕ್ಕಿಯನ್ನೇರಿ ನೇತ್ರಾವತೀ ನದಿಯನ್ನು ದಾಟಿ, ಕಾರೆ ಎಂಬ ಊರಿನ ಸಮೀಪದಲ್ಲಿದ್ದ ಕಾತ್ಯಾಡಿಮಠದಲ್ಲಿ ಬಿಡಾರ ಹೂಡಿದರು.

ಈ ಮೂರು ದಿನಗಳ ಅವಧಿಯ ಸುದ್ದಿಯನ್ನು ಕೇಳಿದ ಕೂಡಲೇ ಮಧ್ಯಗೇಹಭಟ್ಟರು ತಮ್ಮ ಪತ್ನಿಯೊಡನೆ ಮಗನು ಉಡುಪಿಗೆ ಬಂದು, ಸಂನ್ಯಾಸಿಯಾಗುವುದನ್ನು ತಡೆಯುಲು ಪ್ರಯತ್ನಿಸಿದರು.

ಅವರು ಮಗನನ್ನು ಪ್ರಾಪಂಚಿಕ ವಿಷಯಗಳಿಗೆ ಮನಸ್ಸು ಕೊಡುವಂತೆ ಮಾಡಲು, ತಾವು ಕಲಿತ ಬುದ್ಧಿಯನ್ನೆಲ್ಲಾ ವೆಚ್ಚಮಾಡಿದರೂ ವಾಸುದೇವನನ್ನು ಒಪ್ಪಿಸಲು ಸಾಧ್ಯವಾಗಲೇ ಇಲ್ಲ. ಕಡೆಗೆ ಹತಾಶರಾದ ಭಟ್ಟರು–

"ನೀನು ಸಂನ್ಯಾಸಾಶ್ರಮ ಸ್ವೀಕರಿಸಿದರೆ, ನಿನ್ನ ಕಣ್ಣೆದುರಿನಲ್ಲೇ ನಾವು ಪ್ರಾಯೋಪವೇಶದಿಂದ ಮರಣ ಹೊಂದುತ್ತೇವೆ, ಈಮಾತು ಖಂಡಿತ" —ಎಂದು ಆಣೆ ಇಟ್ಟರು.

ಆ ಪ್ರತಿಜ್ಞೆಯು ಕೇಳಿ ವೇದವತಿಯು ಗಡಗಡನೆ ನಡುಗಿದಳು.

ಈ ಮಾತನ್ನು ಕೇಳಿದ ಕೂಡಲೇ ವಾಸುದೇವನು ತಾನು ಹೊದ್ದಿದ್ದ ವಸ್ತ್ರವನ್ನು ಹರಿದು, ಅದರ ಒಂದು ತುಂಡನ್ನು ಕೌಪೀನವಾಗಿ ಧರಿಸಿದನು.

"ಪಿತೃದೇವ, ಈಗ ನೀವು ನಿಮ್ಮ ಶಪಥದ ಸಾಹಸಕ್ಕೆ ತೊಡಗಿರಿ"— ಎಂದನು. ಅವನ ಮಾತು ಕೇಳಿ ಭಟ್ಟದಂಪತಿಗಳಿಗೆ ಕಂಬನಿ ಕೋಡಿ ಹರಿಯಿತು.

"ಈಗ ನಾನು ಸಂನ್ಯಾಸಿಯಾದೆ. ಇದರಿಂದ ನನ್ನನ್ನು ವಿಮುಖಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ. ಆದರೆ ಒಂದು ಮಾತು. ನೀವು ಯಾವ ಕಾರಣಕ್ಕಾಗಿ ನನ್ನ ಸಂನ್ಯಾಸಾಶ್ರಮಕ್ಕೆ ಅಡ್ಡಿ ಬರುತ್ತಿದ್ದಿರೆಂಬ ಸಂಗತಿ ನನಗೆ ತಿಳಿದಿದೆ. ನೀವು ವೃದ್ಧಾಪ್ಯದಲ್ಲಿ ಒಬ್ಬ ಸಹಾಯಕನು ಬೇಕೆಂದಿರಿ. ಆಗಲಿ, ನೀವು ಈ ಶುಭಕಾರ್ಯಕ್ಕೆ ಒಪ್ಪಿದರೆ, ನಿಮ್ಮ ಸೇವೆಗೆ ಒದಗುವ ಒಬ್ಬ ಪುತ್ರನು ನಿಮಗೆ ಹುಟ್ಟುತ್ತಾನೆ" ಎಂದು ಹೇಳಿದ ಮೇಲೆ ಮಧ್ಯಗೇಹಭಟ್ಟರೂ, ವೇದವತಿಯೂ ವಾಸುದೇವನು ಸಂನ್ಯಾಸಿಯಾಗಲು ಸಮ್ಮತಿಸಿದರು.

ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಮುನ್ನ ತಂದೆತಾಯಿಗಳಿಗೆ ವಾಸುದೇವನು

---

ಅಥೋಪಗಮ್ಯೈಷ ಗುರುಂ ಜಗದ್ಗುರುಃ
ಪ್ರಸಾದ್ಯ ತಂ ದೇವವರಪ್ರಸಾದಿತಃ ।

ಮುಂದಿನ ಪುಟಕ್ಕೆ

ಒಂದು ವಿಷಯವನ್ನು ಸ್ಪಷ್ಟಪಡಿಸಿದ್ದನು. ತನಗೆ ಸಂನ್ಯಾಸಾಶ್ರಮಸ್ವೀಕಾರಕ್ಕೆ ಅನುಮತಿ ನೀಡದಿದ್ದರೆ ತಾನು ದೇಶಾಂತರ ಹೊರಟುಹೋಗುವುದಾಗಿಯೂ, ಆಗ ತನ್ನನ್ನು ನೋಡಲೂ ಅವರಿಗೆ ಸಾಧ್ಯವಾಗುವುದಿಲ್ಲವೆಂದೂ ಹೇಳಿದನು. ಅವರು ಅವನ ಸಂಕಲ್ಪಕ್ಕೆ ಸಮ್ಮತಿಸದೆ ಬೇರೆ ದಾರಿ ಕಾಣಲೇ ಇಲ್ಲ.

ಮಗನು ಸಂನ್ಯಾಸಿಯಾದರೂ ಸರಿ,1 ಸಂಸಾರದಲ್ಲಿದ್ದರೂ ಸರಿ, ಅವನನ್ನು ಆಗಾಗ ನೋಡಲು ಅವಕಾಶ ದೊರೆತರೆ ಅದೇ ತಮ್ಮ ಮಹಾಪುಣ್ಯವೆಂದು ತಿಳಿದ ಆ ದಂಪತಿಗಳು ವಾಸುದೇವನ ಯತಿದೀಕ್ಷೆಸ್ವೀಕಾರಕ್ಕೆ ಸಮ್ಮತಿಸಿದರು.

ಒಂದು ಶುಭದಿನ ವಾಸುದೇವನಿಗೆ ಅಚ್ಯುತಪ್ರೇಕ್ಷರು ಪರಮಹಂಸದೀಕ್ಷೆ ನೀಡಿ "ಪೂರ್ಣಪ್ರಜ್ಞ" ಎಂಬ ಯತಿನಾಮವನ್ನೂ ಕೊಟ್ಟರು.

ಹೀಗೆ ವಾಸುದೇವನು "ಪೂರ್ಣಪ್ರಜ್ಞ"ರೆಂಬ ಯತಿನಾಮದಿಂದ ಅತ್ಯಂತ ಶ್ರೇಷ್ಠವಾದ ತುರೀಯಾಶ್ರಮವನ್ನು ಸ್ವೀಕರಿಸಿ, ತನ್ನ ಜೀವಿತದ ಮುಖ್ಯ ಉದ್ದೇಶವಾದ ಭಗವತ್ಕಾರ್ಯಕ್ಕೆ ಸಾಧಕನಾದನು. ಇದೇ ರೀತಿಯಲ್ಲಿ ತನ್ನ ಹಿಂದಿನ ಎರಡು ಜನ್ಮಗಳಲ್ಲಿಯೂ ಭಗವತ್ಕಾರ್ಯಸಾಧಕನಾಗಿದ್ದನು.

---

ಸದಾ ಸಮಸ್ತಾಶ್ರಮಭಾಕ್ಸುರೇಶ್ವರೋ
ವಿಶೇಷತಃ ಖಲ್ವಭಜದ್ವರಾಶ್ರಮಂ ॥
ಕ್ರಿಯಾಕಲಾಪಂ ಸಕಲಂ ಸಕಾಲವಿದ್ಧಿ
ಧಾನಮಾರ್ಗೇಣ ವಿಧಾಯ ಕೇವಲಂ ।
ಸದಾ ಪ್ರಸನ್ನಸ್ಯ ಹರೇಃ ಪ್ರಸತ್ತಯೇ
ಮುಹುಃ ಸಮಸ್ತನ್ಯಸನಂ ಸಮಭ್ಯಧಾತ್ ॥
ಮ ॥ ವಿ ॥ ಸರ್ಗ-4,ಶ್ಲೋಕ 30-31

1) ವರಾಶ್ರಮಾಪ್ತಿಂ ಮಮ ಸಂವದಸ್ವ ಮಾಂ
ಕದಾಚಿದಪ್ಯಂಬ ಮದೀಚ್ಛಸೀಕ್ಷಿತುಂ ।
ಯದನ್ಯಥಾ ದೇಶಮಿಮಂ ಪರಿತ್ಯಜ—
ನ್ನ ಜಾತು ದೃಷ್ಟೇರ್ವಿಷಯೋ ಭವಾಮಿ ವಃ॥
ಮ ॥ ವಿ ॥ ಸರ್ಗ-4,ಶ್ಲೋಕ-28

# ವಾಸುದೇವನೇ—ಪೂರ್ಣಪ್ರಜ್ಞರು

ಗುರು ಎಂದರೆ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಿ ಸುಜ್ಞಾನವೆಂಬ ಬೆಳಕನ್ನು ನೀಡುವವನೆಂದು ಅರ್ಥ. ವೈದಿಕ ಹಿಂದೂ ಸಂಸ್ಕೃತಿಯಲ್ಲಿ ಗುರುವಿಗೆ ಶ್ರೇಷ್ಠವಾದ ಸ್ಥಾನವನ್ನು ಕೊಡಲಾಗಿದೆ. ಮಾತಾ ಪಿತೃಗಳ ಅನಂತರ ಗುರುವಿಗೇ ವಂದನೆಯನ್ನು ಮಾಡಬೇಕೆಂದು ಉಪನಿಷತ್ತು ಗಳು ತಿಳಿಸುತ್ತವೆ. ತಾತ್ತ್ವಿಕವಾಗಿ ವಿಚಾರ ಮಾಡಿದರೆ ಗುರು ಮಾತಾಪಿತೃಗಳಿ ಗಿಂತಲೂ ಶ್ರೇಷ್ಠನೆಂದೇ ಹೇಳಬೇಕು. ತಂದೆತಾಯಿಗಳಾದರೋ ನಶ್ವರವಾದ ದೇಹವನ್ನು ಕೊಡುತ್ತಾರೆ. ಗುರೂವಾದರೋ ಶಾಶ್ವತವಾದ ಸ್ವಸ್ವರೂಪ ಜ್ಞಾನವನ್ನು ಉಂಟುಮಾಡಿ ಮುಕ್ತಿಗೆ ಕಾರಣನಾಗುವನು,

ಇಂಥ ಅನ್ವರ್ಥನಾಮವುಳ್ಳ ಗುರುಗಳೊಬ್ಬರು ವಾಸುದೇವನಿಗೆ ದೊರಕಿದ್ದರು, ಅವರ ಕರಕಮಲಗಳಿಂದ ವಾಸುದೇವನು ಯತಿದೀಕ್ಷೆಯನ್ನು ಸ್ವೀಕರಿಸಿದ್ದನು. ಪೀಠಾಧಿಪತಿಗಳಿಗೆ ಕರಕಮಲಸಂಜಾತತ್ವ ಮುಖ್ಯ.

ಪ್ರತಿಯೊಂದು ಜೀವಿಯೂ ಮಾನವನಾಗಿ ಹುಟ್ಟಿದ ಮೇಲೆ ಒಂದಲ್ಲ ಒಂದು ದಿನ ವೈರಾಗ್ಯಶಾಲಿಯಾಗಲೇಬೇಕು. ಈ ವಿರಕ್ತಿ ಬಾಲ್ಯದಲ್ಲಿಯೇ ಬಂದರೆ ಅವನೇ ಪುಣ್ಯಶಾಲಿ. ಅದು ಸಂಸಾರವೆಂಬ ದುಃಖದಿಂದ ಪಾರು ಮಾಡುತ್ತದೆ. ಜನನಮರಣಗಳಿಗೆ ಹೇತುವಾದ ಕರ್ಮಬಂಧನದಿಂದ ಬಿಡುಗಡೆ. ಮಾಡುತ್ತದೆ ; ಮೋಕ್ಷ ಸಾಧನವಾಗುವ ವಿಶೇಷಜ್ಞಾನವನ್ನೂ ನೀಡುತ್ತದೆ.

ಸಂನ್ಯಾಸಾಶ್ರಮವು ಲೋಕಕ್ಕೇ ಅಭಯ ನೀಡುತ್ತದೆ. ಇಡೀ ಜಗತ್ತನ್ನು ತನ್ನದೆಂದು ಭಾವಿಸುತ್ತದೆ. ಸಂನ್ಯಾಸಿಯು ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವನ್ನೂ—ಅದು ಜಡವೇ ಆಗಿರಲಿ, ಚೈತನ್ಯದಿಂದಲೇ ಕೂಡಿರಲಿ—ಭಗವಂತನ ಆವಾಸಸ್ಥಾನವೆಂದು ತಿಳಿದು ಅವುಗಳ ಸೇವೆಯ ಮೂಲಕ "ಸರ್ವಂ ವಿಷ್ಣುಮಯಂ ಜಗತ್" ಎಂದು ಭಗವಂತನ ಉಪಾಸನೆ ಮಾಡುತ್ತಾನೆ.

ಇಂಥ ಶ್ರೇಷ್ಠವಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸಲು ವಾಸುದೇವನು ಸಂಕಲ್ಪಿಸಿದ್ದನು,

ವಿಧ್ಯುಕ್ತವಾಗಿ ಸಂನ್ಯಾಸಾಶ್ರಮ ಸ್ವೀಕಾರ ಮಾಡುವ ಕ್ರಮಗಳು ಶ್ರುತಿ, ಸ್ಮೃತಿಗಳಲ್ಲಿ ವಿವರವಾಗಿ ತಿಳಿಸಲಾಗಿವೆ.

ಸಂನ್ಯಾಸಿಯಾಗಲಪೇಕ್ಷಿಸುವವನು ಮೊದಲು ತಂದೆತಾಯಿಗಳ ಅನುಮತಿಯನ್ನು ಪಡೆದಿರಬೇಕು.

ಅನಂತರ ಶಾಸ್ತ್ರೋಕ್ತವಾಗಿ ವಪನ, ಆತ್ಮಶ್ರಾದ್ಧ, ಕಳಶಪೂಜೆ, ಹವನ ಹೋಮಾದಿಗಳನ್ನು ಮಾಡಿ ಪುರೋಹಿತರಿಂದ ದಂಡಸ್ವೀಕಾರ ಮಾಡಬೇಕು.

ಅದರಂತೆ ವಾಸುದೇವನು ಶ್ರೀಹರಿಯನ್ನು ಉದ್ದೇಶಿಸಿ ಪುರುಷ ಸೂಕ್ತಮಂತ್ರವನ್ನು ಜಪಿಸಿ, ಚರು, ಆಜ್ಯಗಳಿಂದ ಹೋಮ ಮಾಡಿದನು.

ಪಂಚಗವ್ಯ, ಪವಮಾನ, ಕೂಷ್ಮಾಂಡ, ತಿಲ ಮೊದಲಾದ ಪ್ರಾಯಶ್ಚಿತ್ತ ಹೋಮಗಳನ್ನೂ ಮಾಡಿದನು. ಬೋಧಾಯನ ಧರ್ಮಶಾಸ್ತ್ರದಲ್ಲಿ ತಿಳಿಸಿರುವ ಕ್ರಮದಿಂದ ಷೋಡಶಶ್ರಾದ್ಧಗಳನ್ನೂ ಮಾಡಿಕೊಂಡು ಶುಚಿರ್ಭೂತನಾದನು.

ಕಾತ್ಯಾಯನನು ಹೇಳಿರುವ ಕ್ರಮದಿಂದ ಹಿರಣ್ಯದಾನವನ್ನೂ ಮಾಡಿದನು.

ವಪನ ಮಾಡಿಸಿಕೊಂಡು ನೂರೆಂಟು ಆವರ್ತಿ ಗೋಮಯಮೃತ್ತಿಕೆಗಳಿಂದ ದೇಹವನ್ನು ಶುದ್ಧಿಗೊಳಿಸಿಕೊಂಡು ಸ್ನಾನವನ್ನೂ ಮಾಡಿದನು

ಇದಾದ ಮೇಲೆ ಗೋಘೃತಮಿಶ್ರಿತಕ್ಷೀರಪ್ರಾಶನ, ಮತ್ತು ತೌಕಲಹೋಮವನ್ನೂ ಮಾಡಿದನು.

ಅನಂತರ ಕಲಶಪೂಜೆ ಮಾಡಿದನು.

ಇಂಥ ಕಲಶಪೂಜೆಯಿಂದ ಕೀರ್ತಿ, ದೀರ್ಘಾಯುಸ್ಸು, ಬುದ್ಧಿಶಕ್ತಿ, ಧಾರಣಶಕ್ತಿ, ಶರೀರಕಾಂತಿ, ಐಶ್ವರ್ಯಾದಿಷಡ್ಗುಣಗಳು ಪ್ರಾಪ್ತವಾಗುವುವು. ಅಲ್ಲದೆ ಯೋಗ್ಯತಾಭಿವೃದ್ಧಿ, ಪಾಪಹಾನಿ, ಪುಣ್ಯಾಭಿವೃದ್ಧಿಗಳೂ ಉಂಟಾಗುವುವು.

ಹೀಗೆ ಹೋಮಾದಿಗಳನ್ನು ಮಾಡಿ ತನ್ನ ಬಗೆಗೆ ಅಂತಿಮಶ್ರಾದ್ಧವನ್ನೂ ಮಾಡಿಕೊಂಡನು; ಶಿಖೆ ಮತ್ತು ಜನಿವಾರಗಳನ್ನು ತ್ಯಜಿಸಿ, ದಂಡಧಾರಣ ಮಾಡಿ ಲೌಕಿಕಜೀವನಕ್ಕೆ ತಿಲಾಂಜಲಿಯನ್ನಿತ್ತನು.

ಸಂನ್ಯಾಸಿಜೀವನವು ಬಹು ಕಠಿಣವಾದ ತಪಶ್ಚರ್ಯೆ.

ವಾಸುದೇವನು ಗಂಧಲೇಪನಾದಿಗಳನ್ನೂ, ತಾಂಬೂಲ ಸುಖಶಯ್ಯೆಗಳನ್ನೂ ವರ್ಜಿಸಿದನು. ಅಜಿನದಂಡಕಮಂಡಲಗಳೇ ಅವನ ಭೂಷಣ

ಗಳಾದವು; ಅವುಗಳನ್ನು ಧರಿಸಿದ ಆವನ ಮುಖದಲ್ಲಿ ಲಕ್ಷ್ಮೀದೇವಿಯ ಮಂಗಳ ಮಯವಾದ ಕಾಂತಿ ತಾಂಡವಾಡುತ್ತಿತ್ತು.

ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ ಮೇಲೆ ಪೂರ್ಣಪ್ರಜ್ಞರು ಉಡುಪಿಗೆ ಬಂದು ಶ್ರೀಅನಂತಾಸನಸ್ವಾಮಿಯನ್ನು ಭಕ್ತಿಯಿಂದ ನಮಸ್ಕರಿಸಿದರು.

ಆ ಸಮಯದಲ್ಲಿ ಅನಂತಾಸನಸ್ವಾಮಿಯು ಅಲ್ಲಿದ್ದ ಒಬ್ಬ ವ್ಯಕ್ತಿಯ ಮೇಲೆ ಆವೇಶ ಬಂದು, ನಮಸ್ಕರಿಸಿದ ಪೂರ್ಣಪ್ರಜ್ಞರನ್ನು ಹಿಡಿದು ಎತ್ತಿ ಅಚ್ಯುತಪ್ರೇಕ್ಷರ ಬಳಿಗೆ ಬಂದು ಹೇಳಿದ :

"ಅಚ್ಯುತಪ್ರೇಕ್ಷಾ, ಇಗೋ ನೀನು ಬಹುಕಾಲದಿಂದ ನಿರೀಕ್ಷಿಸುತ್ತಿದ್ದ ಶಿಷ್ಯನು ನಿನಗೆ ದೊರಕಿದ್ದಾನೆ. ಅವನಿಂದ ನೀನು ವಿಷ್ಣುತತ್ತ್ವವನ್ನು ತಿಳಿದು ನನ್ನನ್ನು ಮಾಹಾತ್ಮ್ಯ ಜ್ಞಾನಪೂರ್ವಕವಾಗಿ ಸದೃಢ ಭಕ್ತಿಯಿಂದ ಸೇವಿಸು. ಇಂದಿನಿಂದ ಇವನು ಪೂರ್ಣಪ್ರಜ್ಞನಾದ ಆನಂದತೀರ್ಥ ಮಧ್ವ.[1] ಲೋಕಕ್ಕೆ ಸಚ್ಛಾಸ್ತ್ರಗಳಿಂದ ಸುಖವನ್ನು ಉಂಟುಮಾಡುವುದರಿಂದ ಸುಖತೀರ್ಥ, ಇವನು ಇಂದಿನಿಂದ ಲೋಕಗುರುವಾಗಿ ನನ್ನ ಕಾರ್ಯವನ್ನು ಸಾಧಿಸುವನು."

---

1) ಮಧ್ವಶಬ್ದ ನಿಷ್ಪತ್ತಿ ವಿಚಾರ.

ಮಧ್ವ ಆನಂದ ಉದ್ದಿಷ್ಟೋ ವೇತಿತೀರ್ಥಮುದಾಹೃತಂ ।
ಮಧ್ವ ಆನಂದತೀರ್ಥಸ್ಸ್ಯಾತ್ತೃತೀಯಾ ಮಾರುತೀ ತನುಃ ॥
ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ ।
ಯೋ ವೇದ ವೇದವಿತ್ಸ್ಯಾತ್ತತ್ತ್ವವಿತ್ತತ್ಪ್ರಸಾದತಃ ॥

ವೇದದಲ್ಲಿ ಮಧುಶಬ್ದಕ್ಕೆ ಆನಂದಪರವಾದ ಅರ್ಥವನ್ನು ಹೇಳಿದೆ.

ಬಳಿತ್ಥಾಸೂಕ್ತವು ಋಗ್ವೇದಲ್ಲಿ 141 ನೇಸೂಕ್ತ. ಆನಂದತೀರ್ಥರು ಸಪ್ರಮಾಣವಾಗಿ ಮಧು ಶಬ್ದಕ್ಕೆ ಆನಂದ ಪರ ಅರ್ಥವನ್ನು ಹೇಳಿರುತ್ತಾರೆ. ವ್ಯಾಕರಣರೀತ್ಯಾ ಮಧು ವ ಮಧುವ ಆಗಬೇಕು. ಆದರೆ ಮಹಾವ್ಯಾಕರಣ ರೀತ್ಯಾ ಉಕಾರಲೋಪದಿಂದ ಮಧು ವ ಮಧ್ವ ಎಂದಾಗುತ್ತದೆ.

(ಐತರೇಯಭಾಷ್ಯ–ಕುಂಭಕೋಣ ಮುದ್ರಣ ಪುಟ 417)

ಈ ಪಾತ್ರಿಯ ಬಾಯಲ್ಲಿ ಬಂದ ಮಾತುಗಳನ್ನು ಕೇಳಿ ಅಚ್ಯುತ ಪ್ರೇಕ್ಷರಿಗೆ ಸಂತೋಷಾತಿರೇಕದಿಂದ ಆನಂದಭಾಷ್ಪ ಸುರಿಯಿತು. ತಮ್ಮ ಬಹು ಕಾಲದ ನಿರೀಕ್ಷೆ ಈಡೇರಿದ ಬಗೆಗೆ ಸಂತೋಷ ತೃಪ್ತಿಗಳು ಉಂಟಾದವು.

ಪೂರ್ಣಪ್ರಜ್ಞರು ಮಾತ್ರ ಜಗತ್ತಿನ ಯಾವುದೇ ಸುಖದುಃಖಗಳನ್ನೂ ಆಸೆನಿರಾಶೆಗಳನ್ನೂ ಸಮ ರೀತಿಯಲ್ಲಿಯೇ ಪರಿಭಾವಿಸುವಂತೆ ನಿರ್ಲಿಪ್ತರಾಗಿ ಭಗವಂತನಿಗೆ ವಂದಿಸಿ, ಅನಂತರ ಗುರುಗಳಿಗೆ ನಮಸ್ಕರಿಸಿದರು.

ಹೀಗೆ ವಾಸುದೇವನು ತನ್ನ ಬಾಲ್ಯದಲ್ಲಿಯೇ ಲೋಕಗುರುವಾಗಿ, ಪೂರ್ಣಪ್ರಜ್ಞರೆನಿಸಿದರು.

ವಾಸುದೇವನಾಗಿದ್ದ ಬಾಲಕ ಪೂರ್ಣಪ್ರಜ್ಞರಾದ ಮೇಲೆ ಮಾಡಿದ ಮೊದಲನೆಯ ಕಾರ್ಯವೆಂದರೆ ಸರ್ವಪಾಪಗಳನ್ನೂ ನಾಶ ಮಾಡುವ ಶ್ರೀವಿಷ್ಣುಪಾದೋದಕವೆನಿಸಿದ ಗಂಗೆಯ ದಿವ್ಯಉದಕದಲ್ಲಿ ಸ್ನಾನ ಮಾಡ ಬೇಕೆಂದು ಸಂಕಲ್ಪ ಮಾಡಿದ್ದು.

ಪುಣ್ಯಸಂಚಯನಕ್ಕಾಗಿ, ದೇಹಶುದ್ಧಿಗಾಗಿ ತಪಸ್ಸನ್ನು ಕೈಗೊಳ್ಳುವ ಮೊದಲು ತಾವು ಗಂಗೆಯಲ್ಲಿ ಸ್ನಾನಮಾಡಿಬರಲು ಉತ್ತರಭಾರತದ ದೇಶಾಟನೆ ಕೈಗೊಳ್ಳಬೇಕೆಂದು ಪೂರ್ಣಪ್ರಜ್ಞರು ಯೋಚಿಸಿದರು. ಶ್ರೀ ಅನಂತಾಸನಸ್ವಾಮಿಯು ತನ್ನ ಭಕ್ತನ ವಿರಹವನ್ನು ತಾಳಲಾರನೆಂಬಂತೆ ಒಬ್ಬ ಭಕ್ತನ ಮೇಲೆ ಆವೇಶಬಂದು,

"ಪೂರ್ಣಪ್ರಜ್ಞಾ, ನೀನು ಪಾಪಹಾರಿಣಿಯಾದ ಗಂಗೆಯ ಸ್ನಾನಕ್ಕಾಗಿ ಕಾಶಿಕ್ಷೇತ್ರಕ್ಕೆ ಹೋಗಬೇಕಾದ ಆಗತ್ಯವಿಲ್ಲ. ನಿನ್ನ ಅಪೇಕ್ಷೆಯನ್ನು ಈಡೇರಿಸಲು ಗಂಗೆಯೇ ಇಲ್ಲಿನ ಅನಂತಸರೋವರದಲ್ಲಿ ಪ್ರತ್ಯಕ್ಷಳಾಗುತ್ತಾಳೆ. ನೀನು ಇಲ್ಲಿಯೇ ಗಂಗಾಸ್ನಾನ ಮಾಡಬಹುದು"—ಎಂದು ಹೇಳಿದನು.

ಅದರಂತೆ ಪೂರ್ಣಪ್ರಜ್ಞರು ಅನಂತಸರಸ್ಸಿನ ಪಾವಟಿಗೆಗಳ ಮೇಲೆ ನಿಂತುದೇ ತಡ, ಅವರು ಇಳಿದಲ್ಲಿ ಗಂಗೆಯು ಉದ್ಭವಳಾಗಿ ಅವರ ಪಾದ

ಕಮಲಗಳನ್ನು ತನ್ನ ನಿರ್ಮಲ ತೀರ್ಥದಿಂದ ಪಾವನಗೊಳಿಸಿದಳು.1

ಗಂಗೆಯಲ್ಲಿ ಸ್ನಾನಮಾಡಿ ಕೃತಕೃತ್ಯರಾಗಿ ಪೂರ್ಣಪ್ರಜ್ಞರು ತಾವು ಬಾಲಕರಾಗಿದ್ದಾಗ ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಮುಂಚೆ ರಚಿಸಿದ್ದ ಶ್ರೀಕಂದುಕ ಸ್ತುತಿಯನ್ನು ಹೇಳಿಕೊಳ್ಳುತ್ತಲೇ ಅನಂತಾಸನಸ್ವಾಮಿಯನ್ನು ಸೇವಿಸಿದರು.

ಪೂರ್ಣಪ್ರಜ್ಞರು ಪರಮಾತ್ಮನ ಆದೇಶದಂತೆ ಕುಮತ ಖಂಡನ ಮೂಲಕ ದ್ವೈತಮತ ಬೋಧನೆಗೆ ಆರಂಭಿಸಿದರು.

ಅವರು ಮಾಡಿದ ಮೊದಲನೆಯ ಕೆಲಸವೆಂದರೆ—

ಬಾಲಕನೆಂಬ ತಿರಸ್ಕಾರ ಭಾವದಿಂದ ತಮ್ಮೊಡನೆ ವಾದ ಮಾಡಲು ಬಂದ ಅದ್ವೈತಮತದ ಪಂಡಿತರನ್ನು ಜಯಿಸಿ, ಅವರಿಂದ ಜಯಪ್ರಶಸ್ತಿಗಳನ್ನು ದೊರಕಿಸಿಕೊಂಡದು.

ಅನಂತರ ಗುರುಗಳಾದ ಅಚ್ಯುತಪ್ರೇಕ್ಷರ ಅಪೇಕ್ಷೆಯಂತೆ ಜೀವ ಮತ್ತು ಬ್ರಹ್ಮರಿಗೆ ಭೇದವಿಲ್ಲವೆಂದು ವರ್ಣಿಸುವ ವಿಮುಕ್ತಾತ್ಮಯತಿಗಳಿಂದ ರಚಿತವಾದ "ಇಷ್ಟಸಿದ್ಧಿ" ಎಂಬ ಅದ್ವೈತ ತತ್ತ್ವಬೋದಕ ಗ್ರಂಥವನ್ನು ವಿಮರ್ಶಿಸಿದ್ದು:2

---

1) ತದಾಜ್ಞಯೋಪಾಗತಜಾಹ್ನವೀಜಲೇ
ಜನೋತ್ರ ಸಸ್ನೌ ಸಹಪೂರ್ಣಬುದ್ಧಿನಾ ।
ತತಃ ಪರಂ ದ್ವಾದಶವತ್ಸರಾಂತರೇ
ಸದಾವ್ರಜತ್ಸಾ ತದನುಗ್ರಹಾಂಕಿನೀ ॥

ಮ ॥ ವಿ ॥ ಸರ್ಗ 4—ಶ್ಲೋಕ 42

2) ಗುರೋಃ ಸ್ವಶಿಷ್ಯಂ ಚತುರಂ ಚಿಕೀರ್ಷತಃ
ಪ್ರಚೋದನಾಚ್ಛ್ರೋತುಮಿಹೋಪಚಕ್ರಮೇ ।
ಅಥೇಷ್ಟಸಿದ್ಧಿಶ್ಛಲಜಾತಿವಾರಿಧಿ—
ರ್ನಿರಾದರೇಣಾಪಿ ಮಹಾತ್ಮನಾಮುನಾ ॥

ಮ ॥ ವಿ ॥ ಸರ್ಗ 4–ಶ್ಲೋಕ–44

ಅವರು ಅದರ ಪ್ರಾರಂಭಮಂಗಳ ಶ್ಲೋಕದಲ್ಲೇ ಮುವತ್ತೆರಡು ದೋಷಗಳು ಇರುವುದನ್ನು ಪ್ರಕಟಿಸಿ ತಾವು ಸರ್ವಜ್ಞರೆಂಬುದನ್ನು ಲೋಕಕ್ಕೆ ತೋರಿಸಿದರು.

ಅಚ್ಯುತಪ್ರೇಕ್ಷರಿಗೆ ಇನ್ನೂ ಅದ್ವೈತಿಮತ ಮೋಹ ಪೂರ್ಣವಾಗಿ ಹೋಗಿರಲಿಲ್ಲ. ದ್ವೈತ ಸಿದ್ಧಾಂತದಲ್ಲಿ, ಪೂರ್ಣವಾಗಿ ನಂಬಿಕೆ ಹುಟ್ಟಿರಲಿಲ್ಲ.

ಶ್ರೀಬಾದರಾಯಣರು ಬ್ರಹ್ಮಸೂತ್ರಗಳನ್ನು ಮತ್ತು ಶ್ರೀಭಾಗವತ ಪುರಾಣವನ್ನೂ ರಚಿಸಿರುತ್ತಾರೆ. ಸ್ವಕೃತ ಬ್ರಹ್ಮಸೂತ್ರವ್ಯಾಖ್ಯಾನವೇ ಭಾಗವತ.

ಅಂತಲೇ ಅವರು ಭಾಗವತದ ಪಂಚಮಸ್ಕಂಧದಲ್ಲಿ ಋಷಭದೇವನು ಹೇಳಿದ್ದ ಒಂದು ಶ್ಲೋಕವನ್ನು ಹೇಳಿ, ಅದರ ಅರ್ಥವನ್ನು ವಿವರಿಸಲು ಹೇಳಿದರು.

ಪೂರ್ಣಪ್ರಜ್ಞರು ಆ ಶ್ಲೋಕವನ್ನು ಗಂಭೀರ ಧ್ವನಿಯಿಂದ ತಮ್ಮ ಮನಪಿನಿಂದಲೇ ಹೀಗೆ ಹೇಳಿದರು ;

ಸರ್ವತ್ರ ಮದ್ಭಾವ ವಿಚಕ್ಷಣೇನ ಜ್ಞಾನೇನ ವಿಜ್ಞಾನವಿರಾಜಿತೇನ ।
ಯೋಗೇನ ಧೃತ್ಯುದ್ಯಮಸತ್ವಯುಕ್ತೋ ಲಿಂಗಂ ವ್ಯಪೋಹೇ
ತ್ಕುಶಲೋऽಹಮಾಖ್ಯಂ ॥ 1

ಅಂದರೆ ಸರ್ವತ್ರ ಶ್ರೀಹರಿಯು ವ್ಯಾಪಕನಾಗಿದ್ದಾನೆ. ಎಲ್ಲರಿಗಿಂತ ಶ್ರೀವಿಷ್ಣುವು ಶ್ರೇಷ್ಠನೆಂಬ ಜ್ಞಾನವೇ ವಿಜ್ಞಾನ, ಅದೇ ಧ್ಯಾನ, ಅದೇ ತಪಸ್ಸು. ಇಂಥ ವೈಷ್ಣವ ಸಿದ್ಧಾಂತದಲ್ಲಿ ಆಸಕ್ತಿಯುಳ್ಳವನು ಸತ್ವಗುಣಗಳಿಂದ ಕೂಡಿ ಅಹಂಕಾರವೆಂಬ ಲಿಂಗ ಶರೀರವನ್ನು ತ್ಯಜಿಸುವನು.

ಪೂರ್ಣಬೋಧರ ಬಾಯಿಂದ ಓತಪ್ರೋತವಾಗಿ ಅಲಕನಂದಾನದಿಯ ಪ್ರವಾಹದಂತೆ ಬಂದ ಶ್ರೀಮದ್ಭಾಗವತದ ಪಂಚಮಸ್ಕಂದ ಶ್ಲೋಕಗಳನ್ನು ಕೇಳಿದ ಮೇಲೆ ಅಚ್ಯುತಪ್ರೇಕ್ಷರಿಗೆ ಆಶ್ಚರ್ಯವಾಯಿತು.

"ಪೂರ್ಣಪ್ರಜ್ಞರೇ ನೀವು ಇವನ್ನೆಲ್ಲಾ ಈ ಜನ್ಮದಲ್ಲಿ ಕಲಿತಿಲ್ಲ. ನಿಮಗೆ ಇದೆಲ್ಲ ಹೇಗೆ ತಿಳಿಯಿತು ?" ಎಂದು ಕುತೂಹಲದಿಂದ ಕೇಳಿದರು.

---

1) ಶ್ರೀಮದ್ಭಾಗವತ–ಸ್ಕಂಧ–5–ಅಧ್ಯಾಯ–5–ಶ್ಲೋಕ 13

"ನಾವು ಇದನ್ನೆಲ್ಲಾ ಹಿಂದಿನ ಜನ್ಮಗಳಲ್ಲಿಯೇ ಕಲಿತಿದ್ದೇವೆ" — ಎಂದು ಮುಗುಳ್ನಗೆ ನಕ್ಕರು ಪೂರ್ಣಪ್ರಜ್ಞರು. ಅವರ ಆ ನಗೆ ಶರತ್ಕಾಲದ ಬೆಳದಿಂಗಳಿನಂತೆ ಆಪ್ಯಾಯಮಾನವಾಗಿತ್ತು.

## ಪೂರ್ಣಪ್ರಜ್ಞರೇ ಆನಂದತೀರ್ಥರು

ಅಚ್ಯುತಪ್ರೇಕ್ಷರಿಗೆ ಪೂರ್ಣಪ್ರಜ್ಞರ ಅದ್ಭುತವಾದ ಶಾಸ್ತ್ರಜ್ಞಾನ, ಪ್ರೌಢಿಮೆಗಳು ಅಚ್ಚರಿಯನ್ನುಂಟುಮಾಡಿದ್ದವು. ಅದು ಈ ಜನ್ಮದಲ್ಲಿ ಅವರು ಪಡೆದ ಜ್ಞಾನವಲ್ಲವೆಂದು ಚೆನ್ನಾಗಿ ತಿಳಿದಿತ್ತು. ಇಲ್ಲದಿದ್ದರೆ ಇನ್ನೂ ಬಾಲ್ಯಾವಸ್ಥೆಯಲ್ಲಿರುವ ಈ ಹಸುಳೆಯು ಜಟಿಲವಾದ ವೇದಾಂತಶಾಸ್ತ್ರದ ಪ್ರಮೇಯಗಳನ್ನು ನೀರು ಕುಡಿದಂತೆ ವಿವರಿಸುವುದೆಂದರೇನು ? ಶ್ರುತಿ, ಸ್ಮೃತಿ, ಪುರಾಣಗಳಿಂದ ಉಪಷ್ಟಂಭಕವಾದ ಪ್ರಮೇಯಗಳ ಆಧಾರಗಳನ್ನು ಲೀಲಾಜಾಲವಾಗಿ ತೋರಿಸುವುದೆಂದರೇನು ? ಇವೆಲ್ಲ ಒಂದು ಜನ್ಮದ ಸಾಧನೆಯಲ್ಲ ; ಖಂಡಿತವಾಗಿಯೂ ಇದು ಜನ್ಮ ಜನ್ಮಾಂತರಗಳಿಂದ ಬಂದಿರುವ ಸಂಸ್ಕಾರದ ಫಲವೆಂದು ದೃಢವಾಗಿ ನಂಬಿದ್ದರು.[1]

ಇಂಥ ಪ್ರಿಯ ಶಿಷ್ಯನನ್ನು ತಮ್ಮ ಕಣ್ಣಿನಬೊಂಬೆಯಂತೆ ಜೋಪಾನವಾಗಿ ನೋಡಿ ಕೊಂಡಿದ್ದರು.

ಅವರಿಗೆ ತಮ್ಮ ಮಠದಲ್ಲಿ ಯಾವುದಕ್ಕೂ ಕೊರತೆಯಾಗದಂತೆ ಎಚ್ಚರ ವಹಿಸಿ ಏರ್ಪಡಿಸಿದ್ದರು

ಈಗ ಪೂರ್ಣಪ್ರಜ್ಞರಿಗೆ ಅಚ್ಯುತಪ್ರೇಕ್ಷರೇ ಗುರು, ತಂದೆ, ತಾಯಿ, ಬಂಧು, ಬಳಗ, ಮಿತ್ರ, ಸಖರಾಗಿದ್ದರು. ಅವರ ಪ್ರೀತಿಯ ರಕ್ಷಾಕವಚ ದಲ್ಲಿ ಪೂರ್ಣಪ್ರಜ್ಞರು ಶುಕ್ಲಪಕ್ಷದಚಂದ್ರನಂತೆ ದಿನಕ್ಕೆ ಒಂದೊಂದು ಕಳೆಗೂಡಿ ಪೂರ್ಣಚಂದ್ರನಾಗುತ್ತಾ ನಡೆದಿದ್ದರು.

---

1) ಅತ್ರ ಜನ್ಮನಿ ನ ಯತ್ಪರಿತಂ ತೇ ಜ್ಞೈತ್ರ ಭಾತಿ ಕಥಮಿತ್ಯಮುನೋಕ್ತೇ ।
ಪೂರ್ವಜನ್ಮಸು ಹಿ ವೇದ ಪುರೇದಂ ಸರ್ವಮಿತ್ಯಮಿತಬುದ್ಧಿರುವಾಚ ॥
ಮ ॥ ವಿ ॥ ಸರ್ಗ 4–ಶ್ಲೋಕ 53

ಜಗತ್ತಿನಲ್ಲಿ ಪ್ರತಿಯೊಂದರಲ್ಲಿಯೂ ದ್ವಂದ್ವವಿದೆ, ಕತ್ತಲೆ ಇದ್ದರೇನೇ ಬೆಳಕು. ಬೆಳಕು ಕತ್ತಲೆಗಳು ಒಟ್ಟಿಗೆ ಇರಲು ಸಾಧ್ಯವೇ ಇಲ್ಲ. ಅಂತೆಯೇ ಅಸತ್ಯವಿಲ್ಲದೆ ಸತ್ಯ ಗೋಚರಿಸದು. ಸತ್ಯದ ಸಾಕ್ಷಾತ್ಕಾರವಾಗಬೇಕಾದರೆ ಅಸತ್ಯದ ಹಿನ್ನಲೆ ಅತ್ಯಗತ್ಯ. ಪೂರ್ಣಪ್ರಜ್ಞರು ತಮ್ಮ ದ್ವೈತಸಿದ್ಧಾಂತವನ್ನು, ಶ್ರೀಹರಿಯ ಸರ್ವೋತ್ತಮತ್ವವನ್ನು ಎತ್ತಿ ಹಿಡಿಯುವ ತತ್ತ್ವವಾದವನ್ನು ಪ್ರತಿಷ್ಠಾಪಿಸಲು ಅದ್ವೈತಮತದ ಖಂಡನೆಯು ಅತ್ಯವಶ್ಯಕವಾಗಿತ್ತು

ಅವರು ಸಂನ್ಯಾಸಾಶ್ರಮ ಸ್ವೀಕರಿಸಿದ ವೇಳೆಗೆ ಶಂಕರಾಚಾರ್ಯರು ಪ್ರಚಾರ ಮಾಡಿದ್ದ ಅದ್ವೈತವೇದಾಂತತತ್ತ್ವವು ಭಾರತದಲ್ಲೆಲ್ಲಾ ತನ್ನ ಪ್ರಭಾವವನ್ನು ಬೀರುತ್ತಿತ್ತು. ಶಂಕರಾಚಾರ್ಯರು ಭಾರತದೇಶವನ್ನೆಲ್ಲಾ ಸಂಚರಿಸಿ ಉತ್ತರದಲ್ಲಿ ಬದರಿ, ಪಶ್ಚಿಮದಲ್ಲಿ ದ್ವಾರಕಾ, ದಕ್ಷಿಣದಲ್ಲಿ ಶೃಂಗೇರಿ. ಮತ್ತು ಪೂರ್ವದಲ್ಲಿ ಪುರಿಜಗನ್ನಾಥ ಕ್ಷೇತ್ರಗಳಲ್ಲಿ ತಮ್ಮ ಅದ್ವೈತ ಆಮ್ನಾಯಪೀಠಗಳನ್ನು ಸ್ಥಾಪಿಸಿ ಅದ್ವೈತಮತವು ಪ್ರಚಾರವಾಗಲು ಅನುಕೂಲ ವಾತಾವರಣವನ್ನು ನಿರ್ಮಾಣ ಮಾಡಿದ್ದರು.

ಅವರು ಜೈನ ಬೌದ್ಧರ ಶೂನ್ಯವಾದವನ್ನು ಖಂಡಿಸಿ ನಿರ್ಗುಣಬ್ರಹ್ಮ ಸಾಕ್ಷಾತ್ಕಾರವನ್ನು ಎತ್ತಿಹಿಡಿದು ವೇದಾಂತ ಧರ್ಮ ಪ್ರಚಾರಕ್ಕೆ ಬಲವಾದ ಬುನಾದಿಯನ್ನು ಹಾಕಿದ್ದರು. ಆದರೆ ಅವರು ಬೋಧಿಸಿದ ಅದ್ವೈತತತ್ತ್ವವು ಕೆಲವು ತೀಕ್ಷ್ಣಮತಿಗಳಿಗೆ ತನ್ನ ನಿಜ ರೂಪದಲ್ಲಿ ವ್ಯಕ್ತವಾಗಿತ್ತು. ಅವರು ಇದನ್ನು ಶುದ್ಧ ವೇದಾಂತ ತತ್ತ್ವವೆಂದು ಒಪ್ಪದೆ ಪ್ರಚ್ಛನ್ನ ಬೌದ್ಧ ಮತವೆಂದು ಟೀಕಿಸುತ್ತಿದ್ದರು. ಬೌದ್ಧರ ಶೂನ್ಯವಾದದ ನಿರ್ವಾಣಕ್ಕೂ ಅದ್ವೈತಮತೀಯರ ಮಾಯಾವಾದದ ಮುಕ್ತಿಗೂ ಯಾವುದೇ ವ್ಯತ್ಯಾಸ ವಿಲ್ಲವೆಂದು ಅವರು ಹೇಳುತ್ತಿದ್ದರು; ಆದರೆ ತಮ್ಮ ಈ ವಾದವನ್ನು ಸಮರ್ಥವಾದ ರೀತಿಯಲ್ಲಿ ಮಂಡಿಸಲು ಬೇಕಾದ ವಾಗ್ಝೋರಣೆಯಾಗಲೀ, ತರ್ಕವಾಗಲೀ, ಪಾಂಡಿತ್ಯವಾಗಲೀ, ಶ್ರುತಿ ಸ್ಮೃತಿ ಪುರಾಣ ಆಗಮಗಳ ಆಳವಾದ ಅಭ್ಯಾಸವಾಗಲೀ, ಇಲ್ಲದೆ, ದ್ವೈತ ವಾದವನ್ನು ಶಾಸ್ತ್ರೋಕ್ತವಾಗಿ ಮಂಡಿಸುವ ಸಮರ್ಥದಾರ್ಶನಿಕನ ಆಗಮನಕ್ಕಾಗಿ ಕಾಯುತ್ತಿದ್ದರು.

ಪೂರ್ಣಪ್ರಜ್ಞರು ಇಂಥ ದಾರ್ಶನಿಕರಾಗಿ ಉಡುಪಿಯಲ್ಲಿ ಅವತರಿಸಿದ್ದರು.

ಪೂರ್ಣಪ್ರಜ್ಞರ ಅತಿಮಾನುಷ ಶಾಸ್ತ್ರನೈಪುಣ್ಯವನ್ನು ಕೇಳಿ ಅವರ ಸಂಗಡ ವಾದಮಾಡುವುದಕ್ಕಾಗಿ ದೂರದ ನಾಡುಗಳಿಂದಲೂ ನಾನಾ ಶಾಸ್ತ್ರಗಳಲ್ಲಿ ಖ್ಯಾತ ವಿದ್ವಾಂಸರು ಬರ ತೊಡಗಿದರು.1

ಮೊದಲು ಬೌದ್ಧರಾಗಿದ್ದು ಅನಂತರ ಅದ್ವೈತಮತವನ್ನು ಸ್ವೀಕರಿಸಿದ್ದ ವಾದಿಸಿಂಹ ಮತ್ತು ಬುದ್ಧಿಸಾಗರರೆಂಬ ಮಹಾ ವಿದ್ವಾಂಸರು, ಪೂರ್ಣಪ್ರಜ್ಞರೊಡನೆ ವಾದಮಾಡಿ ಜಯಿಸಬೇಕೆಂಬ ಉದ್ದಿಶ್ಯದಿಂದಲೇ ಉಡುಪಿಗೆ ಬಂದರು.

ಇವರಲ್ಲಿ ವಾದಿಸಿಂಹನು ಹಿಂದೆ ವೈಶೇಷಿಕಮತದವನಾಗಿದ್ದನು. ಇವನನ್ನು ಬುದ್ಧಿಸಾಗರನು ತನ್ನ ತರ್ಕಶಾಸ್ತ್ರ ಕೌಶಲ್ಯದಿಂದ ಜಯಿಸಿ ಅವನಿಂದ ಜಯಪತ್ರ ಬರೆಸಿಕೊಂಡು ಶಿಷ್ಯನನ್ನಾಗಿ ಮಾಡಿಕೊಂಡಿದ್ದನು. ಮುಂದೆ ಅವರು ಅದ್ವೈತಮತವನ್ನು ಸ್ವೀಕರಿಸಿ ಪ್ರತಿವಾದಿಭಯಂಕರರೆನಿಸಿದ್ದರು. ಯುವಸಿಂಹದಂತೆ ಮೆರೆಯುತ್ತಾ, ವಾದಮಾಡಲು ದಿಗ್ದಂತಿ ಪಂಡಿತಮತ್ತಗಜಗಳನ್ನೇ ಹುಡುಕಿಕೊಂಡು ದೇಶವೆಲ್ಲ ಅಲೆಯುತ್ತಿದ್ದರು.

ಇಂಥವರಿಗೆ ನವದಾರ್ಶನಿಕ ಪೂರ್ಣಪ್ರಜ್ಞರೊಡನೆ ವಾದಕ್ಕಿಳಿಯುವುದು ಹೆಮ್ಮೆಯ ವಿಷಯವಾಗಿತ್ತು. ಕೇವಲ ಬಾಲಕರಾದ ಈ ಪೂರ್ಣಪ್ರಜ್ಞರನ್ನು ವಾದದಲ್ಲಿ ಗೆಲ್ಲುವುದು ಯಾವ ಸಾಹಸ ? ಎಂದು ವಿದ್ಯಾಮದದಿಂದ ಬೀಗುತ್ತಾ ಅವರು ಬಂದು ಅಚ್ಯುತಪ್ರೇಕ್ಷರ ಬಳಿ ಉದ್ಧಟರಾಗಿ ಕೈಕುಳಿತರು.

ಇವರನ್ನು ವಾದದಲ್ಲಿ ನಿಗ್ರಹಿಸಲು, ಅಚ್ಯುತಪ್ರೇಕ್ಷಕರು ಅವರ ಬತ್ತಳಿಕೆಯಿಂದ ನಿಶಿತವಾಗ್ಬಾಣಗಳನ್ನು ಹೊರತೆಗೆಯುವಂತೆ ಶಿಷ್ಯರಾದ ಪೂರ್ಣಪ್ರಜ್ಞರಿಗೆ ಹೇಳಿ

---

1) ಕದಾಚಿದತ್ರೋಪಯಯೌ ಯತಿಃ ಸಖಾ
ಗೋವಿಂದಬುದ್ಧೇರ್ಬಹುಶಿಷ್ಯ ಸಂವೃತಃ ।
ಅಮುಷ್ಯ ಶಿಷ್ಯಾ ಅನುಮಾನಶಿಕ್ಷಿತಾ
ಸ್ತದಾಜೀಗಿಷನ್ಗುರುಬುದ್ಧಿಮುದ್ಧತಾಃ ।

ಮ ||ವಿ|| ಸರ್ಗ-5-ಶ್ಲೋಕ-3

ಅವರೊಡನೆ ವಾದ ಮಾಡಲೂ ಆಜ್ಞಾಪಿಸಿಸಿದರು [1]

ವೈಶೇಷಿಕಸಿದ್ಧಾಂತವು ಕಣಾದರೆಂಬುವವರಿಂದ ಪ್ರತಿಷ್ಠಾಪಿಸಲ್ಪಟ್ಟ ಮತವಾಗಿದೆ.

ಕಣಾದರ ಸಿದ್ಧಾಂತದ ಪ್ರಕಾರ ಪ್ರಪಂಚವು ಅಣುಗಳಿಂದಲೇ ಸೃಷ್ಟಿ ಆಗಿದೆ, ಪಂಚಭೂತಗಳ ಸಂಯೋಗದಿಂದ ಚೇತನವು ಹುಟ್ಟುವುದಿಲ್ಲ. ಆತ್ಮವೆಂಬ ನಿತ್ಯವಸ್ತು ಬೇರೆ ಇದೆ, ಜ್ಞಾನಗೋಚರವಾದ ಈ ಜಗತ್ತು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮುದಾಯ ಮತ್ತು ಅಭಾವ ವೆಂಬ ಏಳು ವಿಧವಾಗಿದೆ ಎಂದು ತಿಳಿಸಿ, ಶಬ್ದಪ್ರಾಮಾಣ್ಯವನ್ನು ಒಪ್ಪಿದ್ದರು. ಇವರ ವಿಚಾರಧಾರೆಗೂ ಬೌದ್ಧರ ವಿಚಾರಧಾರೆಗೂ ಹೆಚ್ಚು ವ್ಯತ್ಯಾಸವಿಲ್ಲದುದರಿಂದ ಬುದ್ಧಿಸಾಗರನು ವಾದಿಸಿಂಹನನ್ನು ಸುಲಭವಾಗಿಯೇ ಜಯಿಸಿದ್ದನು.

ಬುದ್ಧಿಸಾಗರನು ಬೌದ್ಧಮತವನ್ನು ತ್ಯಜಿಸಿ, ಶಂಕರಾಚಾರ್ಯರ ಅದ್ವೈತ ಮತವನ್ನು ಸ್ವೀಕರಿಸಿದ್ದನು.

ಶಂಕರಾಚಾರ್ಯರು ಅದ್ವೈತಸಿದ್ಧಾಂತದಲ್ಲಿ ಸರ್ವವೂ ಬ್ರಹ್ಮಮಯ, ಜಗತ್ತು ಮಿಥ್ಯ, ಬ್ರಹ್ಮವೊಂದೇ ಸತ್ಯ. ಯಥಾರ್ಥಜ್ಞಾನ ಪಡೆದರೇ ಮಾಯಾವರಣ ಕಳಚಿ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ—ಎಂಬುದನ್ನು ಯುಕ್ತಿಯುಕ್ತವಾಗಿ ಬೋಧಿಸಿದ್ದರು.

---

1) ಸಮಸ್ತವಾದೀಂದ್ರಗಜಪ್ರಭಗಂದ
ಶ್ಚರನ್ನವನ್ಯಾಂಪ್ರತಿಪಕ್ಷಿಕಾಂಕ್ಷಯಾ ।
ವೇದದ್ವಿಷಾಂ ಯಃ ಪ್ರಥಮಃ ಸಮಾಯಯೌ
ಸವಾದಿಸಿಂಹೋತ್ರ ಸಬುದ್ಧಿಸಾಗರಃ ॥
ಸವಾದಿಸಿಂಹಸ್ಯ ಗಿರಂ ಗರೀಯಸೀಮ
ಖಂಡಯತ್ಖಂಡಿತಮಂಡಲಾಂತರೇ ।
ತೀಕ್ಷ್ಣೇನ ವಾಕ್ಯೇನ ಮಿತೇನ ವೇಗಿನಾ
ಗದಾಂ ಶರೇಣೇವ ವಿಶಾರದೋ ಮುಹುಃ ॥

ಮ ॥ ವಿ ॥ ಸರ್ಗ 5-ಶ್ಲೋಕ-8, 11

ಅದ್ವೈತಸಿದ್ಧಾಂತದ ಪ್ರಕಾರ ಚೇತನಾಚೇತನಾತ್ಮಕವಾದ ದೃಶ್ಯಪ್ರಪಂಚವು ಅಜ್ಞಾನ ಅಥವಾ ಮಾಯೆಯಿಂದ ಕಲ್ಪಿತವಾದುದು. ಅದು ಬ್ರಹ್ಮವಸ್ತುವಿನಲ್ಲಿ ಆರೋಪಿತವಾದುದೇ ಹೊರತು ಸತ್ಯವಲ್ಲ. ಬ್ರಹ್ಮವಸ್ತುವೊಂದೇ ಸತ್ಯ, ಜೀವನು ಬ್ರಹ್ಮಾಭೇದವನ್ನು ಹೊಂದುವುದೇ ಮುಕ್ತಿ ಎಂದು ಹೇಳಿದರು.

ಮೀಮಾಂಸಕರಾದ ಕುಮಾರಿಲಭಟ್ಟರಂತೆ ಶಂಕರಾಚಾರ್ಯರೂ ಪ್ರತ್ಯಕ್ಷ, ಅನುಮಾನ,ಆಗಮ, ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧಿ ಎಂಬ ಆರು ಪ್ರಮಾಣಗಳನ್ನು ಅಂಗೀಕರಿಸಿದ್ದರು.

ಶಂಕರಾಚಾರ್ಯರು ಅನೇಕ ಉಪನಿಷದ್ವಾಕ್ಯಗಳಿಂದ ಅದ್ವೈತಸಿದ್ಧಾಂತಕ್ಕೆ ಪ್ರಮಾಣಗಳನ್ನು ಸೂಚಿಸಿದ್ದರು. ಅವುಗಳಲ್ಲಿ ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ, ನೇಹ ನಾನಾಸ್ತಿ ಕಿಂಚನ, ಪರೇsವ್ಯಯೇ ಸರ್ವ ಏಕೀಭವಂತಿ—ಮುಂತಾದ ವಾಕ್ಯಗಳು ಜೀವಬ್ರಹ್ಮರ ಅಭೇದವನ್ನು ಹೇಳುವುದೆಂದು ತೋರಿಸಿಕೊಟ್ಟಿದ್ದರು. ಅವು ನಿರ್ಗುಣಬ್ರಹ್ಮನನ್ನು ಕುರಿತು ಹೇಳುತ್ತವೆ. "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಇತ್ಯಾದಿ ವಾಕ್ಯಗಳು ಬ್ರಹ್ಮ ಅಸತ್ಯನಲ್ಲ, ಬ್ರಹ್ಮನು ಜಡನಲ್ಲ, ಅವಧಿಯುಳ್ಳವನೂ ಅಲ್ಲವೆಂದು ಹೇಳುತ್ತವೆ. ಹೀಗಾಗಿ "ಮಾಯಾಮಾತ್ರಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ" ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆದುದರಿಂದ "ಜೀವೋ ಬ್ರಹ್ಮೈವ ನಾಪರಃ" ಎಂಬುವು ಅದ್ವೈತ ಸಿದ್ಧಾಂತದ ತಿರುಳೆಂದು ಹೇಳಿದರು.

ಈ ವಾದವನ್ನು ಖಂಡಿಸಲು ಪೂರ್ಣಪ್ರಜ್ಞರು ಅದೇ ಉಪನಿಷತ್ತುಗಳ ವಾಕ್ಯಗಳನ್ನು ಉದಾಹರಿಸಿ ಹೇಳಿದರು:

"ಅಖಂಡಬ್ರಹ್ಮವಸ್ತುವೊಂದೇ ಸತ್ಯವಾದಲ್ಲಿ ಅನಂತ ಪ್ರಾಣಿದೇಹಗಳಲ್ಲಿ "ನಾನು" ಎಂಬ ಅನುಭವಕ್ಕೆ ಗೋಚರಿಸುವ ಅಲ್ಪಜ್ಞತ್ವ, ಅಲ್ಪಶಕ್ತಿತ್ವ ಮೊದಲಾದ ಗುಣವಿಶಿಷ್ಟವಾದ ವಸ್ತು ಯಾವುದು ?"

"ಅವೇ ಉಪನಿಷದ್ವಾಕ್ಯಗಳು "ಯಚ್ಚಿಕೇತತತ್ಸತ್ಯಂ" ಎಂದು ಹೇಳುತ್ತವೆ. ಇದರ ಅರ್ಥ ಜಗತ್ತು ಸತ್ಯವೆಂದು ಹೇಳುವುದೇ ಆಗಿದೆ"—ಎಂಬುದನ್ನು ಯುಕ್ತಿಯುಕ್ತವಾಗಿ ಚತುರತೆಯಿಂದ ಪ್ರತಿಪಾದಿಸಿದರು.

"ಹಾಗಾದರೆ ಜಗತ್ತು ಸತ್ಯವಾದರೆ ಆಕಾಶ ಮೊದಲಾದವು ಸತ್ಯವೋ ? ಮಿಥ್ಯವೋ" ಪ್ರತಿಪಕ್ಷದವರು ಕೇಳಿದರು.

"ದೂರದಿಂದ ನೋಡಿದ ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿ ಇರುವುದೆಂದರೆ ಹೇಗೆ ಅಸತ್ಯವೋ, ಹೇಗೆ ಸತ್ಯವೋ ಹಾಗೆಯೇ, ಆಕಾಶ ಮೊದಲಾದ ವಸ್ತುಗಳ ಬಗೆಗೂ ಇದೆ. ಮಡಿಕೆಯು ಕಣ್ಣಿಗೆ ಕಾಣುವುದರಿಂದ ಅದು ಸತ್ಯವಾಗಿದೆ. ಅದರಿಂದ ನಾವು ನೀರನ್ನು ತುಂಬಿಕೊಂಡು ಬರುತ್ತೇವೆ. ಅಂದರೆ ಅದು ಅರ್ಥಕ್ರಿಯಾಕಾರಿ. ಅದರಂತೆ ಆಕಾಶ ಮೊದಲಾದ ವಸ್ತುಗಳೂ ಸತ್ಯವಾದುವು. ಎಂದು ಅನುಮಾನ ಪ್ರಮಾಣದಿಂದಲೇ ತಿಳಿಯಬಹುದು"— ಎಂದು ಪೂರ್ಣಪ್ರಜ್ಞರು ಪ್ರತ್ಯುತ್ತರ ಹೇಳಿದರು.

"ಆಕಾಶಾದಿಗಳು ಕಣ್ಣಿಗೆ ಕಾಣುವ ಕಾರಣ, ಭ್ರಾಂತಿಯಿಂದ ಮುತ್ತಿನ ಚಿಪ್ಪಿನಲ್ಲಿ ಕಾಣುವ ಬೆಳ್ಳಿಯಂತೆ ಅಸತ್ಯ ಏಕಾಗಿರಬಾರದು ?" ವಾದಿಗಳ ಮರು ಪ್ರಶ್ನೆ.

"ಆಕಾಶಾದಿಗಳು ಕಣ್ಣಿಗೆ ಕಾಣುವ ಕಾರಣ ಗಡಿಗೆ ಮೊದಲಾದುವುಗಳಂತೆ ಸತ್ಯವೇ ಏಕಾಗಬಾರದು?"–ಎಂದು ಪ್ರತಿವಾದವನ್ನು ಆಚಾರ್ಯರು ಹೇಳಿದರು.

"ನೀವು ಹೇಳುವ ಅನುಮಾನದಲ್ಲಿರುವ "ದೃಶ್ಯತ್ವಾತ್" ಎಂಬ ಹೇತುವು ಪಕ್ಷವಲ್ಲದ ಅಸತ್ಯವಾದ ಮುತ್ತಿನಲ್ಲಿ ಕಾಣುವ ಬೆಳ್ಳಿಯಲ್ಲಿದೆ ಅಂದರೆ ಅತಿವ್ಯಾಪ್ತಿ ಆಗುತ್ತದೆ. ಅನುಮಾನವು ದೂಷ್ಯವಾಗುತ್ತದೆ."

"ದೃಶ್ಯವಾಗಬೇಕಾದರೆ ಕಣ್ಣಿಗೂ ವಸ್ತುವಿಗೂ ಸಂಬಂಧವಿರಲೇಬೇಕು. ನೀವು ಹೇಳುವ ಶುಕ್ತಿರಜತವು—ಎಂದರೆ ಭ್ರಾಂತಿಯಿಂದ ಮುತ್ತಿನ ಚಿಪ್ಪಿನಲ್ಲಿ ಕಾಣುವ ಬೆಳ್ಳಿಗೂ ತಮ್ಮ ಕಣ್ಣಿಗೂ ಸಂಬಂಧವಿಲ್ಲ. ಆದುದರಿಂದ ದೃಶ್ಯವಿಲ್ಲ. ಆದಕಾರಣ ನೀವು ಹೇಳುವ ಅತಿವ್ಯಾಪ್ತಿಯೂ ಸರಿಯಲ್ಲ. ಅನುಮಾನವೂ ದೂಷ್ಯವಲ್ಲ" ಎಂದು ಆಚಾರ್ಯರು ಸಿದ್ಧಾಂತ ಪಡಿಸಿದರು. ಇದರಿಂದ ಪ್ರತಿವಾದಿಗಳು ಪರಾಜಿತರಾಗಿ ನಿರುತ್ತರರಾದರು.

ಈ ವಾದ ಪ್ರತಿವಾದಗಳ ವೈಖರಿಯನ್ನು ಕೇಳುತ್ತಿದ್ದ ಮಧ್ಯಸ್ಥರು ಪೂರ್ಣಪ್ರಜ್ಞರೇ ಜಯಿಸಿದರೆಂದು ಜಯಕಾರ ಘೋಷಿಸಿದರು.

ಹೀಗೆ ತಮ್ಮ ಸಂನ್ಯಾಸಾಶ್ರಮ ಸ್ವೀಕಾರಾನಂತರ ಪ್ರಥಮ ಹಂತದಲ್ಲೇ ಮಹಾದಿಗ್ದಂತಿ ಪಂಡಿತರನ್ನು ಜಯಿಸಿದ್ದ ಪೂರ್ಣಪ್ರಜ್ಞರನ್ನು ನೋಡಿ ಅಚ್ಯುತ ಪ್ರೇಕ್ಷರು ಅವರಿಗೆ ಶಂಖದಿಂದ ಶ್ರೀವಿಷ್ಣುಪಾದೋದಕವನ್ನು ಅಭಿಷೇಕ

ಮಾಡಿದರು ; ಆನಂದತೀರ್ಥರೆಂಬ ನೂತನ ನಾಮಧೇಯವನ್ನೂ ಇತ್ತರು. ಶ್ರೀಮನ್ನಾರಾಯಣರೂಪಿ ಶ್ರೀವಿಷ್ಣುವಿನ ಸರ್ವೋತ್ತಮತ್ವವನ್ನು ಎತ್ತಿ ಹಿಡಿದ ಅವರನ್ನು ಶ್ರೀಮಧ್ವಾಚಾರ್ಯರೆಂದೂ ಕರೆದು ಗೌರವಿಸಿದರು. ಅಂದಿನಿಂದ ಪೂರ್ಣಪ್ರಜ್ಞರು ಶ್ರೀಆನಂದತೀರ್ಥರೆಂದೂ, ಶ್ರೀಮಧ್ವಾಚಾರ್ಯರೆಂದೂ ಲೋಕದಲ್ಲಿ ವಿಖ್ಯಾತರಾದರು.

## ಪೂರ್ಣಪ್ರಜ್ಞರ ತೀರ್ಥಕ್ಷೇತ್ರಯಾತ್ರೆ

ಯತಿಯೇ ಆಗಲೀ ಗೃಹಸ್ಥನೇ ಆಗಲಿ ತೀರ್ಥಕ್ಷೇತ್ರ ಸಂಚಾರ ಕೈಗೊಳ್ಳದಿದ್ದರೆ ಅವನ ಜ್ಞಾನವು ಅಪೂರ್ಣವೆಂದು ಪ್ರಾಜ್ಞರ ಅಭಿಪ್ರಾಯ.

ಅದರಂತೆ ಅಚ್ಯುತಪ್ರೇಕ್ಷಕರು ಶಿಷ್ಯನನ್ನು ಕ್ಷೇತ್ರಯಾತ್ರೆಗೆ ಕಳುಹಿಸಿದರು.

ವಾಸುದೇವನನ್ನು ನೋಡುವವರೆಗೆ ಅಚ್ಯುತಪ್ರೇಕ್ಷರು ದ್ವೈತಮತ ಸರಿಯೋ ಅದ್ವೈತಮತ ಸರಿಯೋ ಎಂದು ಸಂದೇಹಗ್ರಸ್ತರಾಗಿದ್ದರು. ಅವರ ಗುರುಗಳು ತಮ್ಮ ಅವಸಾನಕಾಲದಲ್ಲಿ ಹೇಳಿದ್ದ ಮಾತು "ನಿನ್ನ ಪ್ರಿಯ ಶಿಷ್ಯನಿಂದ ನಿನಗೆ ಶ್ರೀಹರಿ ಸರ್ವೋತ್ತಮತ್ವವೆಂಬ ಸತ್ಸಿದ್ಧಾಂತ ತಿಳಿಯುತ್ತದೆ"–ಎಂಬ ಮಾತನ್ನು ಮರೆತಿರಲಿಲ್ಲ. ಶ್ರೀಅನಂತಾಸನಸ್ವಾಮಿ ನೀಡಿದ ಆದೇಶದಿಂದ ಅವರ ಒಲವು, ವಿಮುಕ್ತಾತ್ಮಯತಿಗಳಿಂದ ರಚಿತವಾಗಿದ್ದ "ಇಷ್ಟಸಿದ್ಧಿ" ಎಂಬ ಅದ್ವೈತ ಗ್ರಂಥದ ಪ್ರಥಮಮಂಗಳ ಶ್ಲೋಕದಲ್ಲಿಯೇ ಮೂವತ್ತೆರಡು ದೋಷಗಳಿರುವುದನ್ನು ಕೇಳಿದ ಮೇಲೆ ಅವರಿಗೆ ಅದ್ವೈತಮತದಲ್ಲಿ ನಂಬಿಕೆಯೇ ಹೋಯಿತು.

ಶ್ರೀಮದ್ಭಾಗವತದ ಸರಿಯಾದ ಅರ್ಥವನ್ನು ವಿವರಿಸುವುದರಲ್ಲಿ, ಗುರು ಶಿಷ್ಯರಿಗೆ ವಾದ ವಿವಾದಗಳಾಗಿದ್ದವು. ಅಚ್ಯುತಪ್ರೇಕ್ಷರು ಶಿಷ್ಯನಿಂದ ಪರಾಜಿತರಾಗಿ, ಅವನ ಅಸಾಧಾರಣ ಪ್ರಜ್ಞೆಯನ್ನು ನೋಡಿ ಅಚ್ಚರಿಗೊಂಡು ಆನಂದಪಟ್ಟಿದ್ದರು.

ಮುಂದೆ ಅವರು ಅದ್ವೈತಸಿದ್ಧಾಂತ ವಾದಿಗಳಾದ ವಾದಿಸಿಂಹ ಬುದ್ಧಿಸಾಗರರಂತಹ ಮಹಾ ಮೇಧಾವಿಗಳನ್ನು ವಾದದಲ್ಲಿ ಲೀಲಾಜಾಲವಾಗಿ ಪರಾಭವಗೊಳಿಸಿ ಅದ್ವೈತಸಿದ್ಧಾಂತವು ತರ್ಕಬದ್ಧವಾಗಿಲ್ಲವೆಂಬುದನ್ನು ತೋರಿಸಿದ ಮೇಲೆ, ಗುರುಗಳು ಶಿಷ್ಯರಿಗೆ ಸಂಪೂರ್ಣವಾಗಿ ಮನಃಪೂರ್ವಕವಾಗಿಸೋತು ದ್ವೈತಸಿದ್ಧಾಂತವನ್ನು ನಂಬಿದರು.

ಈಗ ಅಚ್ಯುತಪ್ರೇಕ್ಷರು ತಮ್ಮ ಶಿಷ್ಯರಾದ ಪೂರ್ಣಪ್ರಜ್ಞರ ಉಪದೇಶ ದಿಂದ ದ್ವೈತಸಿದ್ಧಾಂತದಲ್ಲಿ ಸಂಪೂರ್ಣ ನಂಬಿಕೆ ತಳೆದರು

ಹೀಗೆ ಶಿಷ್ಯನಿಂದ ಅವರು ಪರಾಜಿತರಾಗಿದ್ದರೂ, "ಪುತ್ರಾದಿಚ್ಛೇತ್ಪ ರಾಭವಂ, ಶಿಷ್ಯಾದಿಚ್ಛೇತ್ಪರಾಜಯಂ" ಎಂಬ ಆರ್ಯೋಕ್ತಿಯಂತೆ ಇದು ಅವರಿಗೆ ಸಂತೋಷವನ್ನುಂಟುಮಾಡುವ ವಿಷಯವೇ ಆಗಿತ್ತು.

ಈ ಎಲ್ಲ ಸಂಗತಿಯನ್ನು ಬೆಳ್ಳಿಯಲ್ಲಿದ್ದ ಮಧ್ಯಗೇಹಭಟ್ಟ ದಂಪತಿಗಳು ಕೇಳಿ ಸಂತೋಷೋದ್ರಿಕ್ತರಾದರು.

ವಾಸುದೇವನು ಹೇಳಿದ್ದಂತೆ ಭಟ್ಟದಂಪತಿಗಳಿಗೆ ಇನ್ನೊಬ್ಬ ಮಗನು ಹುಟ್ಟಿದ್ದನು. ಅವನು ತಂದೆ ತಾಯಿಗಳಿಗೆ ವೃದ್ಧಾಪ್ಯದಲ್ಲಿ ಊರುಗೋಲಾ ಗಿದ್ದನು. ಕಲ್ಯಾಣಿಗೆ ವಿವಾಹವಾಗಿ ಅವಳು ಅತ್ತೆಯ ಮನೆ ಸೇರಿದ್ದಳು. ಹೀಗೆ ವಾಸುದೇವನ ವಿಯೋಗ ದುಃಖವನ್ನು ಆ ತಾಯಿ ತಂದೆಗಳು ಭರಿಸಲಾ ಶಕ್ತರಾಗಿದ್ದರು.

ಈಗ ಅವರಿಗೆ ತಮ್ಮ ಮಗ ವಾಸುದೇವನು ಲೋಕೋತ್ತರ ಪ್ರಜ್ಞನೂ ಅವತಾರ ಪುರುಷನೂ ಆಗಿ, ಶ್ರೀಮಧ್ವಾಚಾರ್ಯರೆಂಬ ಹೆಸರಿನಿಂದ ಜಗದ್ವಂದ್ಯನೂ,ವಿಖ್ಯಾತನೂ ಆಗಿದ್ದಾನೆ. ಅದ್ವೈತ ಮತಪಂಡಿತರನ್ನು ವಾದ ದಲ್ಲಿ ಲೀಲಾಜಾಲವಾಗಿ ಸೋಲಿಸಿ, ದ್ವೈತ ಸಿದ್ಧಾಂತವನ್ನು ಸಮರ್ಥ ರೀತಿಯಲ್ಲಿ ಮಂಡಿಸುತ್ತಿದ್ದಾನೆಂಬ ಸಂಗತಿ ಕೇಳಿ ಹಿರಿಹಿರಿ ಹಿಗ್ಗಿದರು. ಉಡುಪಿಗೆ ಆಗಮಿಸಿ ಪೂರ್ಣಪ್ರಜ್ಞರನ್ನು ನೋಡಿ ನಮಸ್ಕಾರಮಾಡಿ ಆನಂದ ಸಮುದ್ರದಲ್ಲಿ ಮುಳುಗಿದರು ತಾವೂ ದ್ವೈತಸಿದ್ಧಾಂತವನ್ನೇ ನಂಬಿದರು.

ಪೂರ್ಣಪ್ರಜ್ಞರು ಪೂರ್ವಾಶ್ರಮದ ತಂದೆ ತಾಯಿಗಳನ್ನು ದ್ವೈತ ಸಿದ್ಧಾಂತದ ಉಪದೇಶದಿಂದ ಸಂತೋಷಪಡಿಸಿ, ಅವರನ್ನು ಊರಿಗೆ ಬೀಳ್ಕೊಟ್ಟರು. ಅವರಿಗೆ ಭಾರತದ ಎಲ್ಲ ಪುಣ್ಯತೀರ್ಥಕ್ಷೇತ್ರಗಳನ್ನೂ ನೋಡಿಬರುವ ಆಲೋಚನೆ ಉಂಟಾಯಿತು.

ಈ ತೀರ್ಥಕ್ಷೇತ್ರ ಯಾತ್ರೆಯ ನೆಪದಲ್ಲಿ ಪ್ರತಿವಾದಿಗಳನ್ನು ಗೆದ್ದು ಆ ಮೂಲಕ ದ್ವೈತಸಿದ್ಧಾಂತವನ್ನು ಭಾರತಾದ್ಯಂತ ಹರಡಬೇಕೆಂದೂ ತೀರ್ಮಾನಿ

ಸಿದರು.1

ಪೂರ್ಣಪ್ರಜ್ಞರು ತಮ್ಮ ಪರಿವಾರಸಹಿತವಾಗಿ ಉಡುಪಿಯಿಂದ ಹೊರಟು ಮೊದಲು ಕೇರಳ ದೇಶದಲ್ಲಿದ್ದ ವಿಷ್ಣುಮಂಗಳವೆಂಬ ಕ್ಷೇತ್ರಕ್ಕೆ ಆಗಮಿಸಿದರು.

ಈ ವಿಷ್ಣುಮಂಗಳಕ್ಷೇತ್ರವು ಇಂದೂ ಕೇರಳದಲ್ಲಿದೆ, ಇಲ್ಲಿ ಶ್ರೀವಿಷ್ಣುವಿನ ಸುಂದರವಾದ ಮಂದಿರವಿದೆ. ಹಿಂದಿನಿಂದಲೂ ಇದು ವೈಷ್ಣವರ ಪಾಲಿಗೆ ಮಹಾ ಪುಣ್ಯಕ್ಷೇತ್ರವೆಂದು ಖ್ಯಾತಿ ಪಡೆದಿದೆ. ಪೂರ್ಣಪ್ರಜ್ಞರು ಈ ಕ್ಷೇತ್ರಕ್ಕೆ ಬಂದು ಶ್ರೀವಿಷ್ಣುವನ್ನು ಭಕ್ತಿಯಿಂದ ಆರಾಧಿಸಿ ಶ್ರೀಅನಂತಪದ್ಮನಾಭ ಸ್ವಾಮಿಯು ನೆಲೆಸಿರುವ ತಿರುವನಂತಪುರಕ್ಕೆ ಹೊರಟರು. ಅದನ್ನು ಸಂದರ್ಶಿಸಿ ಅನಂತರ ಕನ್ಯಾಕುಮಾರಿ, ರಾಮೇಶ್ವರ ಯಾತ್ರೆಯನಂತರ ಉತ್ತರಭಾರತದ ದಿಗ್ವಿಜಯ ಯಾತ್ರೆಯನ್ನು ಕೈಗೊಳ್ಳಬೇಕೆಂದು ಸಂಕಲ್ಪಿಸಿದ್ದರು.

---

1) ಸತ್ಸಿದ್ಧಾಂತ—

ಬ್ರೂಯಾದಪಿ ಚ ಶಿಷ್ಯೇಭ್ಯಃ ಸತ್ಸಿದ್ಧಾಂತಮಹಾಪಯನ್ ।
ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಂ ॥
ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ ।
ಬ್ರಹ್ಮಾಸರಸ್ವತೀವೀಂದ್ರಶೇಷರುದ್ರಾಶ್ಚ ತತ್ ಸ್ತ್ರಿಯಃ ॥
ಶಕ್ರಕಾಮೌ ತದನ್ಯೇ ಚ ಕ್ರಮಾನ್ಮುಕ್ತಾಪಕೀತಿ ಚ ।
ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತಾ ಹರಿಣಾ ಸ್ವಯಂ ॥
ಏತದ್ವಿರೋಧಿ ಯತ್ಸರ್ವಂ ತಮಸೇಽಂಧಾಯ ಕೇವಲಂ ।

ವಿಷ್ಣುವಿನ ನಿರ್ದೋಷತ್ವವನ್ನೂ, ಅನಂತಕಲ್ಯಾಣಗುಣಪೂರ್ಣತ್ವವನ್ನೂ ತದನಂತರ ರಮಾದೇವಿಯ ನಿರ್ದೋಷತ್ವವನ್ನೂ, ಬ್ರಹ್ಮ, ಸರಸ್ವತಿ, ಗರುಡ, ಶೇಷ, ರುದ್ರ ಅವರ ಹೆಂಡತಿಯರು, ಇಂದ್ರಕಾಮರು ಇವರ ತಾರತಮ್ಯವು, ಇವುಗಳನ್ನು ಬೋಧಿಸುವ ಸಿದ್ಧಾಂತವೇ ಸತ್ಸಿದ್ಧಾಂತವು. ಈ ಬೋಧನೆಗೆ ವಿರೋಧವಾಗಿ ತಿಳಿಸುವ ಸಿದ್ಧಾಂತಗಳೇ ಅಂಧಮತಮಸ್ಸಿಗೆ ಕಾರಣವಾದುವು.

ಸಚ್ಛಾಸ್ತ್ರ—

ಮುಂದಿನ ಪುಟಕ್ಕೆ

ಪೂರ್ಣಪ್ರಜ್ಞರು ಈ ಯಾತ್ರಾ ನಿಮಿತ್ತದಿಂದ ಕೇರಳದಲ್ಲಿ ಸಂಚರಿಸುತ್ತಿದ್ದಾಗ ಶಂಕರಾಚಾರ್ಯನೆಂಬ ಒಬ್ಬ ಅದ್ವೈತವಾದಿಯು ಅವರನ್ನು ಒಂದು ಊರಿನಲ್ಲಿ ವಾದದಲ್ಲಿ ಎದುರಿಸಿದನು. ಈತನು ಅದ್ವೈತ ಮತವನ್ನು ಪ್ರಚುರಪಡಿಸಿದ್ದ ಆದಿಶಂಕರಾಚಾರ್ಯರ ಒಂದು ಪೀಠಕ್ಕೆ ಸೇರಿದ್ದವನು.

ಮಧ್ವಾಚಾರ್ಯರು ಅವನೊಡನೆ ವಾದಿಸಿ, ಆದಿಶಂಕರಾಚಾರ್ಯರು ಬ್ರಹ್ಮಸೂತ್ರಗಳಿಗೆ ನೀಡಿರುವ ಭಾಷ್ಯವು ಎಷ್ಟು ದೋಷಯುಕ್ತವೂ ಅಸಮಂಜಸವೂ ಆಗಿದೆ ಎಂಬುದನ್ನು ಸ್ಪಷ್ಟಪಡಿಸಿದರು.

ಮುಂದೆ ಲಿಕುಚ ವಂಶದಲ್ಲಿ ಹುಟ್ಟಿದ್ದ ಇನ್ನೊಬ್ಬ ಸಂನ್ಯಾಸಿಯು ಶ್ರೀ ಮಧ್ವಾಚಾರ್ಯರನ್ನು ಕುರಿತು ಬ್ರಹ್ಮಸೂತ್ರಗಳಿಗೆ ಶ್ರೀಬಾದರಾಯಣರಿಗೆ ಸಮ್ಮತವಾದ ಅರ್ಥ ತಿಳಿಸುವ ಭಾಷ್ಯವನ್ನು ರಚಿಸಲು ಪ್ರಾರ್ಥಿಸಿದನು.

ಅವರ ಅಪೇಕ್ಷೆಯನ್ನು ಈಡೇರಿಸುವುದಾಗಿ ಮಧ್ವಾಚಾರ್ಯರು ಆಶ್ವಾಸನೆ ನೀಡಿದರು.

ಉದಯಭಾಸ್ಕರನ ಕಿರಣಗಳಂತೆ ದಿನ ದಿನಕ್ಕೂ ದಿಕ್ಕು ದಿಕ್ಕುಗಳಿಗೂ ಪ್ರಸಾರಗೊಳ್ಳುತ್ತಿದ್ದ ಈ ನವತರುಣಯತಿಯ ಕೀರ್ತಿಯನ್ನು ಕೇಳಿ ಅನೇಕರಿಗೆ ಆನಂದ ಉಂಟಾಗಿತ್ತು. ಹಾಗೆಯೇ ಕೆಲವು ಅಸೂಯಾಪರ ಜನರಿಗೆ

---

ಇತ್ಯೇವ ಶ್ರುತಯೋಽಶೇಷಾಃ ಪಂಚರಾತ್ರಮಥಾಖಿಲಂ ।
ಮೂಲರಾಮಾಯಣಂ ಚೈವ ಭಾರತಂ ಸ್ಮೃತಯೋಽಖಿಲಾಃ ॥
ವೈಷ್ಣವಾನಿ ಪುರಾಣಾನಿ ಸಾಂಖ್ಯಯೋಗೌ ಪರಾವಪಿ ।
ಬ್ರಹ್ಮತರ್ಕಶ್ಚ ಮೀಮಾಂಸೇತ್ಯನಂತಃ ಶಬ್ದಸಾಗರಃ ॥
ಅನ್ಯಾವಕಾಶರಹಿತಂ ಪ್ರಕಾಶಯತಿ ಸಾದರಂ ।
ಏತದೇವ ಹಿ ಸಚ್ಛಾಸ್ತ್ರಂ ದುಃಶಾಸ್ತ್ರಂ ತು ತತಃ ಪರಮ್ ॥
ಸಚ್ಛಾಸ್ತ್ರಮಭ್ಯಸೇನ್ನಿತ್ಯಂ ದುಃಶಾಸ್ತ್ರಂ ತು ಪರಿತ್ಯಜೇತ್ ।

ವಿಷ್ಣು ಸರ್ವೋತ್ತಮತ್ವವನ್ನು ಬೋಧಿಸುವ ಪಂಚರಾತ್ರ, ಮೂಲರಾಮಾಯಣ, ಭಾರತ, ಬ್ರಹ್ಮತರ್ಕ, ವೈಷ್ಣವ ಪುರಾಣಗಳು ಇವು ಸಚ್ಛಾಸ್ತ್ರಗಳು. ಇವಕ್ಕೆ ವಿರೋಧವಾದುವೇ ದುಃಶಾಸ್ತ್ರಗಳು.

(ಅನುವ್ಯಾಖ್ಯಾನ—ಕುಂಭಕೋಣ ಮುದ್ರಣ—ಪುಟ206)

ಮಾತ್ಸರ್ಯದಿಂದ ಅಸೂಯೆಯೂ ಉಂಟಾಗಿತ್ತು.

ಅಂಥವರಲ್ಲಿ ಕೆಲವು ಧೂರ್ತರು ಸೇರಿಕೊಂಡು ಶ್ರೀಮಧ್ವಾಚಾರ್ಯರು ವಿಷ್ಣುಮಂಗಳ ಗ್ರಾಮದಲ್ಲಿ ಬೀಡುಬಿಟ್ಟಿದ್ದಾಗ ಒಂದು ಕುತಂತ್ರ ಮಾಡಿದರು.

ಶ್ರೀಮಧ್ವಾಚಾರ್ಯರದು ಸೊಂಪಾಗಿ ಬೆಳೆದ ಶರೀರ. 1 ಅವರದು ದಷ್ಟ ಪುಷ್ಟವಾದ ಆಕಾರ. ಮುಖದಲ್ಲಿ ಎದ್ದು ಕಾಣುವ ದಿವ್ಯ ತೇಜಸ್ಸು–ಅವರ ಬ್ರಹ್ಮ ಚರ್ಯೆ, ಅನುಷ್ಠಾನ, ತಪಸ್ಸು ಇವುಗಳ ದ್ಯೋತಕಗಳಾಗಿದ್ದವು.

ಅವರು, ತಮ್ಮ ಭಕ್ತರು ಪೂಜಾಸಮಯದಲ್ಲಿ ಭಕ್ತಿಯಿಂದ ದೇವರಿಗೆ ಸಮರ್ಪಿಸುತ್ತಿದ್ದ ಫಲಪುಷ್ಪಾದಿಗಳನ್ನು ಸಂತೋಷದಿಂದಲೇ ಸ್ವಾಮಿಗೆ ಅರ್ಪಿಸಿ ಆ ನೈವೇದ್ಯವನ್ನು ಸ್ವೀಕರಿಸುತ್ತಿದ್ದರು.

ಇದನ್ನು ನೋಡಿ ಆ ಧೂರ್ತರ ಪೈಕಿ ಒಬ್ಬನು, ಶ್ರೀಮಧ್ವಾ ಚಾರ್ಯರು ಊಟಮಾಡಿದ ಮೇಲೆ ಅವರ ಜೀರ್ಣಶಕ್ತಿಯನ್ನು ಪರೀಕ್ಷಿಸುವ ಸಲುವಾಗಿ ಆಚಾರ್ಯರ ಬಳಿಗೆ ಬಂದನು. "ಸ್ವಾಮಿ, ತಮ್ಮ ಫಲಾಹಾರಕ್ಕೆ ಪಕ್ವ ವಾದ ಬಾಳೆಹಣ್ಣುಗಳನ್ನು ತಂದಿದ್ದೇನೆ. ಇವು ನನ್ನ ತೋಟದಲ್ಲಿ ಬೆಳೆದ ನೇಂದ್ರ ಬಾಳೆ ಎಂಬ ಹೆಸರಿನ ರುಚಿಕರವಾದ ಹಣ್ಣು. ಇದನ್ನು ಸನ್ನಿಧಾನವು ಸ್ವೀಕರಿಸಿ ಶಿಷ್ಯನಾದ ನನ್ನನ್ನು ಉದ್ಧರಿಸಬೇಕು" — ಎಂದು ಅತಿ ವಿನಯವನ್ನು ನಟಿಸಿ ಪ್ರಾರ್ಥಿಸಿದನು. ಅತಿ ವಿನಯವೇ ಧೂರ್ತನ ಲಕ್ಷಣ.

ಅವನ ಮುಖವನ್ನು ನೋಡುತ್ತಲೇ ಅವನ ಮನಸ್ಸಿನಲ್ಲಿ ಇದ್ದ ಕಪಟತನ ವನ್ನೂ. ದುರುದ್ದೇಶವನ್ನೂ ಇಂಗಿತಜ್ಞರಾದ ಅಚಾರ್ಯರು ಅರಿತರು.

ಆ ಧೂರ್ತನು ವಾದದಲ್ಲಿ ತಮ್ಮಿಂದ ಸೋತು, ತಮ್ಮ ದಂಡವನ್ನು ಮುರಿಯು ವುದಾಗಿ ಶಪಥಮಾಡಿ, ಪಲಾಯನ ಮಾಡಿದ್ದ ಒಬ್ಬ ಅದ್ವೈತಮತದ ಸಂನ್ಯಾ ಸಿಯ ಶಿಷ್ಯ, ಈ ಮಹಾತ್ಮರನ್ನು ಪರೀಕ್ಷಿಸುವ ಈ ದುಷ್ಕಾರ್ಯಕ್ಕೆ ಪ್ರಯತ್ನ

---

1) ಸುಸ್ಮಿತೇಂದುಮುರವಿಂದಲೋಚನಂ ಸ್ವರ್ಣವರ್ಣಮತಿಭದ್ರಭಾಷಣಮ್ ।
ವೀತಭೂಷಮುಖಿ ವಿಶ್ವಭೂಷಣಂ ತಂ ದಿದೃಕ್ಷುರಲಮಾಪತಜ್ಜನಃ ॥
ಮ॥ ವಿ॥ ಸರ್ಗ 5—ಶ್ಲೋಕ 51

ಸಿದ್ದ. ದಿವ್ಯದೃಷ್ಟಿಯಿಂದ ಇದನ್ನು ಅರಿತು ಈ ನೀಚರಿಗೆ ಸರಿಯಾದ ಬುದ್ಧಿ ಕಲಿಸಬೇಕೆಂದು ಶ್ರೀಮಧ್ವಾಚಾರ್ಯರು ಮನಸ್ಸಿನಲ್ಲಿ ನಿಶ್ಚಯಿಸಿದರು.

"ಬಹಳ ಸಂತೋಷ, ಬಾಳೆಯ ಹಣ್ಣುಗಳನ್ನು ಸ್ವೀಕರಿಸುತ್ತೇವೆ. ಅವನ್ನು ತಂದೊಪ್ಪಿಸು" ಎಂದು ಶ್ರೀಮಧ್ವಾಚಾರ್ಯರು ನಿರ್ವಿಕಾರವಾಗಿ ಹೇಳಿದರು. ಅದರಂತೆ ಆ ಧೂರ್ತನು ಇನ್ನೂರು ದೊಡ್ಡ ಗಾತ್ರದ ನೇಂದ್ರಬಾಳೆ ಹಣ್ಣುಗಳನ್ನು ತಂದು ಶ್ರೀಮಧ್ವಾಚಾರ್ಯರ ಮುಂದೆ ಇಟ್ಟು ಅತಿ ವಿನಯವನ್ನು ನಟಿಸುತ್ತಾ ಸಾಷ್ಟಾಂಗ ಪ್ರಮಾಣ ಮಾಡಿ ಕೈಮುಗಿದು ನಿಂತನು.

ಶ್ರೀಮಧ್ವಾಚಾರ್ಯರು ಅವನ ಮುಖವನ್ನು ಕುತೂಹಲ ಮಿಶ್ರಿತ ವ್ಯಂಗ್ಯದೃಷ್ಟಿಯಿಂದ ನೋಡಿ, ಒಂದೊಂದೇ ಬಾಳೆಯ ಹಣ್ಣನ್ನು ಸುಲಿದು ತಿನ್ನ ತೊಡಗಿದರು.

ಹತ್ತಾಯಿತು ಇಪ್ಪತ್ತಾಯಿತು ಐವತ್ತಾಯಿತು. ಹೀಗೆ ಇನ್ನೂರು ಬಾಳೆಹಣ್ಣುಗಳೂ ಶ್ರೀಮಧ್ವಾಚಾರ್ಯರ ಹೊಟ್ಟೆಯನ್ನು ಸೇರಿ ಜಾಠರಾಗ್ನಿಯಲ್ಲಿ ಬೆಂದು ಜೀರ್ಣವಾದವು.

ಈ ಪವಾಡವನ್ನು ನೋಡಿ ಕಂಗೆಟ್ಟದ್ದ ಆ ಧೂರ್ತ ಶಿಷ್ಯನಮುಖವನ್ನು ನೋಡಿ ಮುಗುಳುನಗುತ್ತಾ ಶ್ರೀಆಚಾರ್ಯರು, ಅವನನ್ನು ಬಾಳೆಯುಹಣ್ಣು ಇನ್ನೂ ಇವೆಯೇ ಎಂದು ಕೇಳಿದರು.

"ಬಾಳೆಹಣ್ಣು ಇನ್ನೂ ಉಳಿದಿದ್ದರೆ ಕೊಡು, ಜಠರದಲ್ಲಿ ಯಜ್ಞದೀಕ್ಷಿತನಾಗಿ ಕುಳಿತಿರುವ ಈ ವೈಶ್ವಾನರನಿಗೆ ಬಹಳ ಹಸಿವಾಗಿದೆ. ನೀನು ಅರ್ಪಿಸಿದ ಈ ಇನ್ನೂರು ಬಾಳೆಯ ಹಣ್ಣಿನ ನೈವೇದ್ಯ ಏನೂ ಸಾಲದಾಗಿದೆ. ಆ ಸ್ವಾಮಿಯು ಇನ್ನೂ ಅಸಂತುಷ್ಟನಾಗಿಯೇ ಇದ್ದಾನೆ"—ಎಂದರು.[1]

---

1) ಭಿಕ್ಷಾಪ್ರದಾತ್ರಾತ್ರ ಪರೀಕ್ಷಿತುಂ ಮುಹು
ರ್ದತ್ತೇ ಪ್ರಭುಕ್ತೇ ಕದಲೀಫಲೋಚ್ಚಯೇ ।
ಅನೇನ ನಿರ್ಯಾತ್ಮಮಾರ್ಯ ವಿಸ್ಮಯ
ಸ್ತ ಮಾರ್ಯಮಾರ್ಯಂ ವಿಜನೇಽವದದ್ಗುರುಃ ॥
ಭಿಕ್ಷಾವಸಾನೇ ದ್ವಿಶತಾಧಿಕೈಃ ಫಲೈರ್ವರ್ಯೈಃ ಪ್ರಭುಕ್ತ್ಯೈಃ ಪರಿಪೂರಿತೇಽಪಿ ತೇ ।

ಮುಂದಿನ ಪುಟಕ್ಕೆ

ಆ ಧೂರ್ತ–ಶಿಷ್ಯನು ಈ ಮಾತು ಕೇಳಿ ಹೆದರಿ ತತ್ತರಿಸಿ, ಶ್ರೀಮಧ್ವಾಚಾರ್ಯರ ಕಾಲುಗಳ ಮೇಲೆ ಬಿದ್ದನು. ತನ್ನ ನೀಚಕೃತ್ಯಕ್ಕಾಗಿ ಅವರಲ್ಲಿ ಕ್ಷಮಾರ್ಪಣೆ ಯಾಚಿಸಿದನು. ಇದೆಲ್ಲ ತಮಗಾಗದ ಕುಹಕಿಗಳು ಮಾಡಿದ ಕುತಂತ್ರವೆಂದು ತಿಳಿದ ಶ್ರೀಮಧ್ವಾಚಾರ್ಯರು ಆ ಧೂರ್ತಶಿಷ್ಯನನ್ನು ಉದಾರವಾಗಿ ಕ್ಷಮಿಸಿ, ಅನುಗ್ರಹಿಸಿದರು.

ನಿಜಸ್ಥಿತಿಯನ್ನು ಅರಿತ ಆಚಾರ್ಯರ ಶಿಷ್ಯರು ಈ ಬಗ್ಗೆ ಪ್ರಶ್ನಿಸಲು ಆಚಾರ್ಯರು ಮುಗುಳುನಗುತ್ತಾ ಹೇಳಿದರು.

"ಪ್ರಿಯ ಶಿಷ್ಯರೇ, ನನ್ನ ಹೊಟ್ಟೆಯಲ್ಲಿ ನೆಲೆಸಿರುವ ಈ ಜಾಠರಾಗ್ನಿಯು ಅಂಗುಷ್ಠ ಪರಿಮಾಣದ್ದು, ಯಾವಾಗಲೂ ಉರಿಯುತ್ತಿರುವುದು, ಹಾಗಿದ್ದರೂ ಅದು ನನಗೆ ಮಾತ್ರ ಹಿತಕರವಾಗಿಯೇ ಇರುವುದು. ಶ್ರೀಹರಿಯ ಅನುಗ್ರಹದಿಂದ, ಪ್ರಳಯಕಾಲದಲ್ಲಿ ಪ್ರಪಂಚವನ್ನೇ ಸುಟ್ಟು ನಾಶಮಾಡುವ ಶಕ್ತಿಯುಳ್ಳ ಈ ಜಾಠರಾಗ್ನಿ ನನ್ನನ್ನೇನೂ ಮಾಡಲಾರದು."

ಈ ಮಾತು ಕೇಳಿ ಶಿಷ್ಯರು ಅತಿ ವಿಸ್ಮಯಗೊಂಡರು. ತಮ್ಮ ಗುರುಗಳು ಸಾಮಾನ್ಯ ಮಾನವರಲ್ಲವೆಂದೂ ಪವಾಡಪುರುಷರೆಂದೂ ತಿಳಿದರು.

ಶ್ರೀಮಧ್ವಾಚಾರ್ಯರ ಅತಿಮಾನುಷ ಮಹಿಮೆಗಳನ್ನು ಕೇಳಿ ನೋಡಿ, ಜನರಿಗೆ ಅವರ ವಿಷಯದಲ್ಲಿ ಆದರ ಗೌರವಗಳು ಇನ್ನೂ ಹೆಚ್ಚಾದವು.

## ಶ್ರೀಮಧ್ವಾಚಾರ್ಯರೇ ಸರ್ವಜ್ಞಾಚಾರ್ಯರು

ಶ್ರೀಮಧ್ವಾಚಾರ್ಯರು ವಿಷ್ಣುಮಂಗಳ ಗ್ರಾಮದಿಂದ ತಮ್ಮ ಪ್ರಯಾಣವನ್ನು ಮುಂದುವರೆಸಿ ತಿರುವನಂತಪುರಕ್ಕೆ ಬಂದರು. ಇಲ್ಲಿನ ಆರಾಧ್ಯಮೂರ್ತಿ ಶ್ರೀಅನಂತಪದ್ಮನಾಭಸ್ವಾಮಿಯು ಅತಿ ಸುಂದರ ವಿಗ್ರಹ ರೂಪದಿಂದಿದ್ದಾನೆ.[1]

---

1) ತನೂದರೇ ನಾಸ್ತಿ ಗರಿಷ್ಠತಾ ಕಥಂ ಸಂಚಿತ್ರಸತ್ಯಂ ವದತಾದ್ಬವಾನಿತಿ ॥
ಅಂಗುಷ್ಠಮಾತ್ರಂ ಜಠರೇ ಪ್ರತಿಷ್ಠಿತಂ ಜಾಜ್ವಲ್ಯಮಾನಂ ಮಮ ಜಾತವೇದಸಂ
ನಿತ್ಯಂ ಹಿತಂ ವಿಶ್ವದಹಂ ಚ ವಿತ್ತತಂ ವಿಶ್ವೇಶಚೇತಾ ಇತಿ ಸೋsಬ್ರವೀತ್ತದಾ
ಮ ॥ ವಿ ॥ ಸರ್ಗ—5 ಶ್ಲೋಕ 31-33

ತತಃ ಕ್ರಮೇಣ ಪ್ರಚಲನ್ನುಪೇಯಿವಾನಂದತೀಂದೀವರಸುಂದರಚ್ಛವಿಮ್ ।
ಅಂಭೋಜನಾಭಂ ಸಭುಜಂಗಶಾಯಿನಂ ಶ್ರೀವಲ್ಲಭಂ ಶ್ರೀಮದನಂತಸತ್ಪುರೇ॥
ಮ ॥ ವಿ ॥ ಸರ್ಗ–5 ಶ್ಲೋಕ 36

ಸಮಸ್ತವಿಶ್ವವನ್ನೇ ತನ್ನ ಉದರದಲ್ಲಿ ಇಟ್ಟುಕೊಂಡು ಯೋಗ ನಿದ್ರೆಯಲ್ಲಿರುವವನಂತೆ ನಟಿಸುತ್ತಾ, ಭೂದೇವಿ, ಶ್ರೀದೇವಿಯರಿಂದ ಸೇವಿತನಾಗಿ, ಆದಿಶೇಷನಾದ ಅನಂತಾಸನದಲ್ಲಿ ಮಲಗಿ, ಗರುಡ, ಸಪ್ತಋಷಿಗಳು. ಇಂದ್ರಾದಿ ಅಷ್ಟದಿಕ್ಪಾಲಕರಿಂದ ಪೂಜಿತನಾಗಿ ಅಲ್ಲಿ ನೆಲೆಸಿದ್ದಾನೆ.

ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನು ಅವನ ನಾಭಿಕಮಲದಲ್ಲಿ ಕುಳಿತು ಭಗವಂತನನ್ನು ಉಪಾಸನೆ ಮಾಡುತ್ತಿದ್ದಾನೆ.[1]

ತಿರುವನಂತಪುರದಲ್ಲಿ ಭಕ್ತವರದ ಶ್ರೀಅನಂತಪದ್ಮನಾಭಸ್ವಾಮಿಯು ದೀರ್ಘವಾದ ಯೋಗನಿದ್ರೆಯಲ್ಲಿ ಮಲಗಿರುವಂತೆ ಕಾಣಿಸುತ್ತಾನೆ. ಗರ್ಭಗೃಹದಲ್ಲಿ ಸ್ವಾಮಿಯ ಸಂದರ್ಶನಕ್ಕೆ ಮೂರು ಕವಾಟಗಳಿವೆ. ಒಂದು ಬಾಗಿಲಲ್ಲಿ ಸ್ವಾಮಿಯ ಮುಖ ಮಂಡಲವೂ, ಇನ್ನೊಂದರಲ್ಲಿ ನಾಭಿಕಮಲವೂ, ಮತ್ತೊಂದರಲ್ಲಿ ಪಾದಪದ್ಮಗಳೂ ಕಾಣುತ್ತವೆ. ಈ ಮೂರ್ತಿಯು ಕಡುಶರ್ಕರಪಾಕ ಶಿಲೆಯಿಂದ ನಿರ್ಮಿತವಾಗಿದೆ ಎಂದು ಹೇಳುತ್ತಾರೆ.

---

1) ಇಂದಿನ ವಿಜ್ಞಾನವೂ ಈ ಭಗವಂತನ ಲೀಲಾನಾಟಕದ ಕಥೆಯನ್ನು ಇನ್ನೊಂದು ರೀತಿಯಲ್ಲಿ ವರ್ಣಿಸುತ್ತಿದೆ. ಪರಮಾಣು ಸಿದ್ಧಾಂತವನ್ನು ಜಗತ್ತಿಗೆ ನೀಡಿದ ಡಾಲ್ಟನ್, ನೀಲ್‌ಬೊರ್, ರೂದರ್‌ಫೋರ್ಡ್, ಐನ್‌ಸ್ಟಿನ್ ಮುಂತಾದ ವಿಜ್ಞಾನಿಗಳು ಪರಮಾಣುವನ್ನು ಸ್ಫೋಟಿಸಿದಾಗ ಅಲ್ಲಿ ಒಂದು ಧನವಿದ್ಯುತ್ ಇನ್ನೊಂದು ಋಣವಿದ್ಯುತ್‌ಕಣಗಳು ಇದ್ದು ಮಧ್ಯಬಿಂದುವೊಂದನ್ನು ಸುತ್ತುತ್ತಿರುವ ಸಿದ್ಧಾಂತವನ್ನು ಪ್ರತಿಪಾದಿಸಿದರು. ಇವುಗಳನ್ನು ಇಲೆಕ್ಟ್ರಾನ್, ನ್ಯೂಟ್ರಾನ್ ಮತ್ತು ಪ್ರೋಟಾನ್ ಎಂದು ಹೆಸರಿಸಿದರು. ಧನವಿದ್ಯುತ್ಕಣವನ್ನು ಸೃಷ್ಟಿಕರ್ತನಾದ ಬ್ರಹ್ಮನೆಂದೂ, ಋಣವಿದ್ಯುತ್ಕಣವನ್ನು ಲಯಕರ್ತನಾದ ರುದ್ರನೆಂದೂ, ತಟಸ್ಥನಾಗಿದ್ದುಕೊಂಡು ಸೃಷ್ಟಿ ಹಾಗೂ ಲಯಗಳನ್ನು ತನ್ನ ಅಂಕೆಯಲ್ಲಿಟ್ಟುಕೊಂಡು ಜಗತ್ತಿನ ಸ್ಥಿತಿಗೆ ಕಾರಣವಾಗಿರುವ ನ್ಯೂಟ್ರಾನ್ ವಿದ್ಯುತ್‌ಕಣವನ್ನು ವಿಷ್ಣುವಿಗೆ ಹೋಲಿಸಬಹುದೆಂದೂ ತೋರಿಸಿದ್ದಾರೆ. ಹೀಗೆ ಸರ್ವವ್ಯಾಪಕನಾದ ವಿಷ್ಣುವು ಎಲ್ಲ ವಸ್ತುಗಳಿಗಿಂತಲೂ ಸರ್ವೋತ್ತಮನೆಂಬ ಶ್ರೀಮಧ್ವಾಚಾರ್ಯರ ದ್ವೈತಸಿದ್ಧಾಂತವನ್ನು ಆಧುನಿಕ ವಿಜ್ಞಾನಿಗಳು ಒಪ್ಪಿಕೊಂಡಿದ್ದಾರೆ.

ಇಂಥ ಅನಂತಪದ್ಮನಾಭಸ್ವಾಮಿಯನ್ನು ಭಕ್ತಿಯಿಂದ ಸೇವಿಸುತ್ತಾ ಅನಂತಪದ್ಮನಾಭಪುರದಲ್ಲಿ ಶ್ರೀಮಧ್ವಾಚಾರ್ಯರು ಕೆಲವು ದಿನಗಳು ತಂಗಿದರು.

ತಿರುವನಂತಪುರವು ನಾನಾ ಶಾಸ್ತ್ರ ಪಾರಂಗತರಾದ ವಿದ್ವಾಂಸರ ನೆಲೆವೀಡಾಗಿತ್ತು. ಇಲ್ಲಿನ ನಂಬೂದ್ರಿ ಬ್ರಾಹ್ಮಣರು ಪ್ರಕಾಂಡ ಪಂಡಿತರು. ಅವರು ವೇದಾಧ್ಯಯನ ಸಂಪನ್ನರೂ, ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರಗಳನ್ನು ಕೂಲಂಕಷವಾಗಿ ತಿಳಿದವರೂ, ಕಲಾಕೋವಿದರೂ ಪ್ರತಿವಾದಿಭಯಂಕರರೂ ಆಗಿದ್ದರು.

ಅವರೆಲ್ಲರೂ ಕಾಲಟಿಯಲ್ಲಿ ಜನಿಸಿದ ಶಂಕರಾಚಾರ್ಯರ ಶಿಷ್ಯರಾಗಿ ಅದ್ವೈತ ಮತವನ್ನು ಅವಲಂಬಿಸಿದ್ದರು. ಇವರಿಗೆ ಶ್ರೀಮಧ್ವಾಚಾರ್ಯರು ಪ್ರಚಾರ ಮಾಡುತ್ತಿದ್ದ ತತ್ತ್ವವಾದವು — ದ್ವೈತ ಸಿದ್ಧಾಂತವು — ನುಂಗಲಾರದ ತುತ್ತಾಗಿತ್ತು. ಅವರಲ್ಲಿ ಅನೇಕರು ಶ್ರೀಮಧ್ವಾಚಾರ್ಯರೊಡನೆ ಶಾಸ್ತ್ರಗಳಲ್ಲಿ ವಾದಕ್ಕೆ ನಿಂತು ತಮ್ಮ ಸಿದ್ಧಾಂತವನ್ನು ಮಂಡಿಸಲಾಗದೆ, ಪರಾಜಿತರಾಗಬೇಕಾಯಿತು.

ಶ್ರೀಮಧ್ವಾಚಾರ್ಯರು ಈ ವಿದ್ವಾಂಸರ ಗೋಷ್ಠಿಯಲ್ಲಿ ಬ್ರಹ್ಮಸೂತ್ರಗಳ, ಶ್ರೀವೇದವ್ಯಾಸರಿಗೆ ಸಮ್ಮತವಾದ ಅಭಿಪ್ರಾಯವನ್ನು ಕುರಿತು ಪ್ರವಚನ ಮಾಡಿದರು. ಬ್ರಹ್ಮಶಬ್ದವಾಚ್ಯನಾಗಿರುವ ವಿಷ್ಣು ಅನಂತಕಲ್ಯಾಣಗುಣಪರಿಪೂರ್ಣನಾಗಿರುವುದರಿಂದ, ಅಲ್ಪಗುಣಗಳಿಂದ ಕೂಡಿದ ಜೀವಿಗಳಿಗಿಂತಲೂ ಅತ್ಯಂತ ಭಿನ್ನನೆಂಬುದನ್ನು ತರ್ಕಬದ್ಧವಾದ ಚತುರೋಕ್ತಿಯಿಂದ ವಿವರಿಸಿದರು.

ಅವರ ವಾದವನ್ನು ನಿರಾಕರಿಸಿದ ಕೆಲವು ಮತಾಂಧರು ತಮ್ಮ ವಾದವನ್ನು ಸಮರ್ಥಿಸಲಾಗದೆ ಅವರ ದಂಡವನ್ನು ಮುರಿಯಲೆತ್ನಿಸಿ, ವಿಫಲರಾದರು.

ಅದ್ವೈತಿಗಳ ಈ ಪ್ರಯತ್ನವು ಗುಹೆಯಲ್ಲಿ ಮಲಗಿದ್ದ ಸಿಂಹವನ್ನು ಗ್ರಾಮಸಿಂಹಗಳು ಹೆದರಿಸಲು ಸಾಹಸಪಟ್ಟಂತೆ ಆಯಿತು.

ಶ್ರೀ ಮಧ್ವಾಚಾರ್ಯರು ಅನಂತರ ತಮ್ಮ ಪರಿವಾರದೊಂದಿಗೆ ರಾಮೇಶ್ವರಕ್ಕೆ ಹೋದರು. ಅಲ್ಲಿ ನಾಲ್ಕು ತಿಂಗಳು ಚಾತುರ್ಮಾಸ್ಯವನ್ನು ಕಳೆದು ಚೋಳಮಾತೆಯಾದ ಕಾವೇರಿ ತೀರದ ಶ್ರೀರಂಗ ಕ್ಷೇತ್ರಕ್ಕೆ ಆಗಮಿಸಿದರು.1

---

1) ಅಚಾಲ್ಯಮಾನಃ ಸ ಗುರುಃ ಸಚಾಪಲ್ಯೈ

ಮುಂದಿನ ಪುಟಕ್ಕೆ

ಕಾವೇರಿದೇವಿಯು ಶ್ರೀರಂಗನಾಥನನ್ನು ಪ್ರೇಮದಿಂದ ದೃಢವಾಗಿ ಆಲಿಂಗಿಸಿಕೊಂಡು ಸೇವಿಸುತ್ತಿರುವಳೊ ಎಂಬಂತೆ ಶ್ರೀರಂಗನಾಥನು ದ್ವೀಪವಾಸಿಯಾಗಿ ಮಲಗಿದ್ದಾನೆ. ಇದನ್ನು ಅಂತ್ಯರಂಗವೆಂದು ವೈಷ್ಣವರು ಭಕ್ತಿಯಿಂದ ಸೇವಿಸುತ್ತಾರೆ. ಶ್ರೀರಂಗಪಟ್ಟಣದ ಶ್ರೀರಂಗನಾಥನೂ, ಶಿವನಸಮುದ್ರದ ಶ್ರೀರಂಗಧಾಮನೂ ಆದಿರಂಗ ಮತ್ತು ಮಧ್ಯರಂಗರೆನಿಸಿ ಸದಾಶೋಭಿಸುತ್ತಿದ್ದಾರೆ.

ರಾಮಾನುಜಾಚಾರ್ಯರ ಆರಾಧ್ಯ ದೈವವಾಗಿದ್ದ ಈ ಸ್ವಾಮಿಯು ಅನೇಕ ಆಳ್ವಾರರಿಂದಲೂ, ವೈಷ್ಣವ ಸಂತರಿಂದಲೂ ಸೇವಿಸಲ್ಪಟ್ಟಿದ್ದಾನೆ.

ಶ್ರೀರಂಗನಾಥನನ್ನು ವಂದಿಸಿದ ಮೇಲೆ ಶ್ರೀಮಧ್ವಾಚಾರ್ಯರು ಅಲ್ಲಿಂದ ಉತ್ತರದಿಕ್ಕಿಗೆ ಪ್ರಯಾಣವನ್ನು ಮುಂದುವರಿಸಿ ಅನೇಕ ವೈಷ್ಣವ, ದುರ್ಗಾ, ಶೈವ, ಸ್ಕಾಂಧ ದೇವಾಲಯಗಳನ್ನು ಸಂದರ್ಶಿಸಿಕೊಂಡು ಪಯಸ್ವಿನಿ ನದಿಯ ದಂಡೆಯಲ್ಲಿದ್ದ ಒಂದು ದೇವಾಲಯದಲ್ಲಿ ಕೆಲವು ದಿನಗಳು ತಂಗಿದರು.

ಅಲ್ಲಿ ಸಮಾವೇಶಗೊಂಡ ಒಂದು ಪ್ರಕಾಂಡ ಪಂಡಿತ ಸಭೆಯಲ್ಲಿ ಶ್ರೀ ಆಚಾರ್ಯರು ಐತರೇಯ ಉಪನಿಷತ್ತಿಗೆ ವ್ಯಾಖ್ಯಾನಮಾಡಿ ಶ್ರೀಹರಿಯ ಸರ್ವೋತ್ತಮತ್ವವನ್ನು ಸಮರ್ಥಿಸಿದರು.

---

ಸಜ್ಜನಾನಾಮಬಲೀಯಸಾಮಿಹ ।
ಉವಾಸ ಮಾಸಾಂಶ್ಚತುರೋ ಮಹಾಮನಾಃ
ಸಿಂಹೋ ಗುಹಾಂತೋಪಗತಃ ಶುನಾಮಿವ ॥
ಶೃಂಗಾರಸಿಂಧುಂ ಸಭುಜಂಗಶಾಯಿನಂ
ಶ್ರೀರಂಗವಾಸಂ ಕೃತಮಂಗಳಂ ಸತಾಂ ।
ಅಮಂದಧೀರ್ದೇವಮವಂದತಾಗತಃ
ಕವೇರಕನ್ಯಾಹಿಮವಾಯುಸೇವಿತಂ ॥
ತತೋ ನಿವೃತ್ತಃ ಪರಮೇವ ಪೂರುಷಂ
ಪ್ರಣಮ್ಯ ನಾನಾಯತನೇಷು ಸಂಚರನ್ ।
ಪ್ರಕಾಶರ್ಯಸ್ವಾತಿಶಯಾನಮಾನುಷಾ
ನಾಶೀಮುದೀಚೀಂ ಪ್ರಯಯಾವಸೌ ಕ್ರಮಾತ್ ॥

ಮ ॥ ವಿ ॥ ಸರ್ಗ–5–ಶ್ಲೋಕ 46, 48

ಈ ಸಂದರ್ಭದಲ್ಲಿ ಶ್ರೀಮಧ್ವಾಚಾರ್ಯರು ವಿಷ್ಣುಸಹಸ್ರನಾಮವನ್ನು ವ್ಯಾಖ್ಯಾನಿಸುತ್ತಾ, ಒಂದೊಂದು ನಾಮಕ್ಕೂ ನೂರು ನಾಮ ಅರ್ಥಗಳು ಇವೆ ಎಂದು ಹೇಳಿದರು.

ಅಸೂಯಾಪರನಾದ ಒಬ್ಬ ಪಂಡಿತನು "ಹಾಗಿದ್ದರೆ ವಿಶ್ವವೆಂಬ ಶಬ್ದಕ್ಕೆ ನೂರು ಅರ್ಥಗಳನ್ನು ಹೇಳಿ ನೋಡೋಣ"—ಎಂದು ಸವಾಲು ಹಾಕಿದನು.

ಈ ಮಾತನ್ನು ಕೇಳಿ ಶ್ರೀಮಧ್ವಾಚಾರ್ಯರು ಆ ಪಂಡಿತನನ್ನು ತೀಕ್ಷ್ಣವಾಗಿ ನೋಡಿ, ಮುಗುಳುನಕ್ಕು ಅನಂತರ ಹೇಳಿದರು :

"ಪಂಡಿತ, ಶ್ರೇಷ್ಠರೇ ನಿಮಗೆ ತಿಳಿಯದಿದ್ದರೆ ಕೇಳಿ. ವೇದ ವಾಕ್ಯಗಳಿಗೆ ಮೂರು ಅರ್ಥಗಳಿರುವುವು. ಮಹಾಭಾರತ ಶ್ಲೋಕಗಳಿಗೆ ಹತ್ತು ಅರ್ಥಗಳಿರುವುವು. ವಿಷ್ಣುಸಹಸ್ರನಾಮದ ಪ್ರತಿಯೊಂದು ನಾಮಕ್ಕೂ ನೂರು ಅರ್ಥಗಳಿರುವುವು. ಆದರೆ ಒಂದು ಷರತ್ತು, ನಾವು ನೂರು ಅರ್ಥಗಳನ್ನು ಹೇಳಿದ ಬಳಿಕ ಅವುಗಳನ್ನು ನೀವು ಜ್ಞಾಪಕದಲ್ಲಿ ಇಟ್ಟುಕೊಂಡು ನಾವು ಪ್ರಶ್ನಿಸಿದಾಗ ಅವುಗಳನ್ನು ಸರಿಯಾಗಿ ನಮಗೆ ಒಪ್ಪಿಸಬೇಕು."

"ಆಗಬಹುದು"–ಎಂದು ಆ ಪಂಡಿತನು ದಿಟ್ಟತನದಿಂದ ಒಪ್ಪಿಕೊಂಡನು.

ಪೂರ್ಣಪ್ರಜ್ಞರಾದ ಶ್ರೀಮಧ್ವಾಚಾರ್ಯರು ವಿಷ್ಣುಸಹಸ್ರನಾಮದ ಮೊದಲನೆಯ ನಾಮವಾದ ವಿಶ್ವವೆಂಬ ಪದವನ್ನು ತೆಗೆದುಕೊಂಡು ಅದರಲ್ಲಿರುವ ವಿಶ್ ಎಂಬ ಪ್ರಕೃತಿಯನ್ನೂ, ತ್ವ ಎಂಬ ಪ್ರತ್ಯಯವನ್ನೂ ವ್ಯಾಕರಣ ಶಾಸ್ತ್ರದಲ್ಲಿ ನಿರ್ಣಯಿಸಿರುವಂತೆ ಬಿಡಿಸಿ ತೋರಿಸಿದರು. ಅನೇಕ ಉಪನಿಷತ್ತುಗಳಿಂದ ಪ್ರಮಾಣಗಳನ್ನು ಒದಗಿಸುತ್ತಾ ವಿಶ್ವಶಬ್ದದ ಅರ್ಥವನ್ನು ಪರಿಪರಿಯಾಗಿ ವಿವರಿಸುತ್ತಾ ಶತಶಃ ಹೊರಟರು. ಈ ಎಲ್ಲ ಅರ್ಥಗಳನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಲಾಗದೆ ಆ ಪ್ರತಿಪಕ್ಷ ಪಂಡಿತನು ಶ್ರೀಮಧ್ವಾಚಾರ್ಯರಿಗೆ ಸೋಲೊಪ್ಪಿ ಶರಣಾಗತನಾಗಿ ನಮಸ್ಕಾರ ಮಾಡಿ ತನ್ನನ್ನು ಕ್ಷಮಿಸಲು ಪ್ರಾರ್ಥಿಸಿದನು.

ವೇದ ವೇದಾಂತ ಶಾಸ್ತ್ರಗಳನ್ನೂ, ಇತಿಹಾಸ ಪುರಾಣಗಳನ್ನೂ ಸಾಂಗವಾಗಿ ಅಭ್ಯಾಸ ಮಾಡಿದ್ದ ಆ ಮಹಾಪಂಡಿತನಿಗಾದ ಮುಖಭಂಗವನ್ನು ನೋಡಿ ಉಳಿದಪಂಡಿತರು ಶ್ರೀಮಧ್ವಾಚಾರ್ಯರ ಮುಂದೆ ಬರಲೂ ಹೆದರಿ ದೂರ

ದಿಂದಲೇ ಪಲಾಯನ ಮಾಡಿದರು.

ಕೇವಲ ಭಾವಿಗಳ ಸಮೂಹವು ಪ್ರಳಯಕಾಲದ ನೀರನ್ನು ಅಡಗಿಸಿ ಕೊಳ್ಳಲು ಸಮರ್ಥವಾಗುವುವೆ ?

"ಶ್ರೀಮಧ್ವಾಚಾರ್ಯರೇ, ನೀವು ಸರ್ವಜ್ಞಾಚಾರ್ಯರು. ನಿಮಗಿರುವ ಪ್ರತಿಭೆಯು ದೇವತೆಗಳಿಗೂ ಇಲ್ಲ. ಇನ್ನು ಚಂಚಲಚಿತ್ತರಾದ ಮಾನವರೆಲ್ಲಿ? ಚಪಲತೆಯಿಂದ ಅಲ್ಪಜ್ಞಾನರಾದ ನಾವು ಮಾಡಿದ ಮಹಾಪರಾಧವನ್ನು ಉದಾರಬುದ್ಧಿಯಿಂದ ಕ್ಷಮಿಸಬೇಕು"-ಎಂದು ಅಲ್ಲಿ ಸೇರಿದ್ದ ಪಂಡಿತಸಮೂಹ ಪ್ರಾರ್ಥಿಸಿತು.

ಈ ಮಹಾಪಂಡಿತಗೋಷ್ಠಿಯಲ್ಲಿ ನಡೆದ ಚರ್ಚೆ ಇಷ್ಟಕ್ಕೇ ನಿಲ್ಲಲಿಲ್ಲ.

ಆ ಸಭೆಯಲ್ಲಿದ್ದ ಒಬ್ಬ ಕುಹಕಿಯು ಎದ್ದುನಿಂತು "ನ ವಾ ಉ ದೇವಾ ಇತ್ಯಾದಿ ಸೂಕ್ತದ ಅರ್ಥವೇನು ?" ಎಂದನು ।

ಇದರ ಅರ್ಥವನ್ನು ಆನಂದತೀರ್ಥರು ಹೀಗೆ ವಿವರಿಸಿದರು : ಪ್ರಸ್ತುತ ಸೂಕ್ತದ "ಪೃಣೀಯಾ ದಿನ್ನಾಧಮಾನಾಯ" ಎಂಬಲ್ಲಿ ಪೃಣೀಯಾಚ್ಛಬ್ದದ ಮೂಲಂ (ಧಾತು) "ಪೃಣು ದಾನೇ" ಎಂದು ವ್ಯಾಖ್ಯಾನಮಾಡಿ ಪೃಣು ನಾಮಕ ಧಾತುವನ್ನು ಪೃಣೀಯಾದೆಂದರು. ಪ್ರತಿವಾದಿಯಾದ ಬ್ರಾಹ್ಮಣನು ಪ್ರಣೀಯಾಚ್ಛಬ್ದ ಮೂಲವನ್ನೇ "ಪ್ರಿಂಜ್ ಪ್ರೀಣನೇ ಎಂದು ಧಾತುವನ್ನು ಹೇಳಿದನು. "ನ ವಾ ಉ ದೇವಾ" ಎಂಬ ಸೂಕ್ತಾರ್ಥಕಥನ ಸಂದ

---

1) ತಂ ಸ್ಫುಟಂ ಪ ಕಟಯನ್ ಸ ಪೃಣೀಯಾ-
ಚ್ಛಬ್ದಮೂಲಮವದತ್ಪೃಣಧಾತುಂ ।
ತಂ ಜೀಗಷುಮಥವಿಪ್ರಮದಃ
ಪ್ರೀಜಧಾತು ಮೇಷ ನಿಗದಂತಮುವಾಚ ॥

ಮ ॥ ವಿ ॥ ಸರ್ಗ 6-ಶ್ಲೋಕ-14

ಪ್ರಾದಿಭೇದಮವಿದನ್ ಗುಣಯುಕ್ತಂ
ಮೂಢ ಪಾಂಸುಷು ಲಿಖನ್ ಲಿಪಿ ಸಂಘಮ್ ।
ಭರ್ತ್ಸಯಸ್ಮಿತಿ ಜಹಾಸ ಸುಹಾಸೋ
ಮತ್ಸರಾಕುಲಧಿಯೋ ಜಡಯುನ್ನಃ ॥

ಮ ॥ ವಿ ॥ ಸರ್ಗ-6-ಶ್ಲೋಕ 51

ರ್ಥದಲ್ಲಿ ದಾನಾರ್ಥಕವಾದ "ಪೃಣ ದಾನೇ" ಎಂದು ಹೇಳಿದವನನ್ನು ಕುರಿತು ಮಧ್ವಾಚಾರ್ಯರು, ಮುಗುಳುನಗುತ್ತಾ "ಅಯ್ಯಾ ಪಂಡಿತ, ನಿನಗೆ ಪ್ರ, ಪೃ, ಪ್ಲ ಮೊದಲಾದ ಸ್ವರಗಳ ಭೇದವೇ ಗೊತ್ತಿಲ್ಲ. ನಿನ್ನಂತಹ ದಡ್ಡನ ಸಂಗಡ ವಾದಮಾಡಿ ಪ್ರಯೋಜನವಿಲ್ಲ. ನೀನು ವರ್ಣಮಾಲೆಯನ್ನು ಮೊದಲಿನಿಂದ ಆರಂಭಿಸಿ ಅಕ್ಷರಾಭ್ಯಾಸ ಮಾಡು"—ಎಂದ ಹಾಸ್ಯಮಾಡಿದರು.

ಅಲ್ಲಿದ್ದ ಇನ್ನೊಬ್ಬ ಕೇರಳದ ಪಂಡಿತನು ತನ್ನಿಂದಲೂ ಆಚಾರ್ಯರ ಪರೀಕ್ಷೆಯು ಆಗಲಿ ಎಂದು ಅಸಂಗತ ಸೂಕ್ತಿಯನ್ನು ಕುರಿತು ಶ್ರೀಮಧ್ವಾಚಾರ್ಯರನ್ನು ಪ್ರಶ್ನಿಸಿದನು.

"ಆಚಾರ್ಯರೇ, "ಅಪಾಲಾ" ಎಂಬ ಶಬ್ದಕ್ಕೆ ಅರ್ಥವೇನು ?" ।

ಅದನ್ನು ಕೇಳಿ ಶ್ರೀಮದಾಚಾರ್ಯರು ಮುಗುಳುನಗುತ್ತಾ "ಅತ್ಯಂತ ಸುಂದರಿಯಾದ ಯುವತಿಯನ್ನು "ಅಪಾಲಾ" ಎಂದು ಕರೆಯುತ್ತಾರೆ. —ಎಂದರು.

"ಆಚಾರ್ಯರೇ, ಇದು ಸರಿಯಾದ ಅರ್ಥವಲ್ಲ. "ಅಪಾಲಾ" ಎಂದರೆ "ಶ್ವೇತಕುಷ್ಠರೋಗವುಳ್ಳ ಸ್ತ್ರೀ" ಎಂದು ಅರ್ಥ. ನಿಮ್ಮ ವಿವರಣೆ ತಪ್ಪು!" ಎಂದು ಕೂಗಾಡಿದರು.

"ಹಾಗಿದ್ದರೆ ನೀನು ಇನ್ನು ಕೆಲವು ದಿನಗಳು ಇಲ್ಲೇ ಇರು.

---

1) ಶ್ರೀನ್ಯಕಾದ್ವೆಸುರೇಂದ್ರವಪುಃ
ಶ್ರೀದಾನೂಚಿ ವರಸೂಕ್ತಹೃದುಕ್ತ್ವಾ ।
ಕುತ್ರಚಿತ್ತ್ವಸಿ ತಾವದಪಾಲಾ
ಕೀರ್ತಿತಾತರುಣೀತ್ಯಯಮೂಚೇ ॥
ಶ್ವಿತ್ರಿಣೀವತಿ ತಪದವಾಚ್ಯೇ-
ತ್ಯಾಗ್ರಹೇಣ ವದತ್ಯೋವಿದುಷೋsತ್ರ ।
ಕಶ್ಚಿದೇತಿ ವಿಪಶ್ಚಿದಿಹೈನಂ
ಪೃಚ್ಛತ್ಯೇಯಮಗಚ್ಛದಥೋಕ್ತ್ವಾ ॥

ಮ ॥ ವಿ ॥—ಸರ್ಗ 6—ಶ್ಲೋಕ 17—18

ಇಲ್ಲಿಗೆ ಒಬ್ಬ ಈ ಲಕ್ಷಣಗಳುಳ್ಳ ಪಂಡಿತನು ಬರುತ್ತಾನೆ. ನೀನು ಅವನನ್ನು "ಅಪಾಲಾ" ಎಂಬ ಶಬ್ದಕ್ಕೆ ಅರ್ಥವೇನೆಂದು ಕೇಳು, ಅವನು ನಿನಗೆ ಉತ್ತರಿಸುತ್ತಾನೆ"— ಎಂದು ಹೇಳಿ ಅವನ ಸಂಗಡ ವಾದವನ್ನು ಅಷ್ಟಕ್ಕೇ ನಿಲ್ಲಿಸಿ ಮುಂದಕ್ಕೆ ಹೊರಟರು.

ಶ್ರೀಮಧ್ವಾಚಾರ್ಯರು ಆ ಊರಿನಿಂದ ಹೊರಟುಹೋದ ಸ್ವಲ್ಪ ಕಾಲದ ಮೇಲೆ ಅವರು ಹೇಳಿದ್ದ ಲಕ್ಷಣಗಳುಳ್ಳ ಒಬ್ಬ ಪಂಡಿತನು ಅಲ್ಲಿಗೆ ಆಗಮಿಸಿದನು.

ಅವನನ್ನು "ಅಪಾಲಾ" ಶಬ್ದವನ್ನು ಕುರಿತು ವಾದದಲ್ಲಿ ಸೋತಿದ್ದ, ಆ ಕೇರಳದ ಪಂಡಿತನು ಪ್ರಶ್ನಿಸಲು, ಅವನೂ ಸಹ ಶ್ರೀಮಧ್ವಾಚಾರ್ಯರು ಹೇಳಿದ್ದ ಅರ್ಥವನ್ನೇ ಹೇಳಿದನು.

ಇದನ್ನು ಕೇಳಿ ಸೋತಿದ್ದ ಆ ಕೇರಳದ ಪಂಡಿತನಿಗೆ ಆಶ್ಚರ್ಯವಾಗಿ ಶ್ರೀಮಧ್ವಾಚಾರ್ಯರು ಅಪರೋಕ್ಷಜ್ಞಾನಿಗಳೆಂದೂ, ಭೂತಭವಿಷ್ಯದ್ವರ್ತಮಾನಗಳನ್ನು ತಿಳಿದ ಸರ್ವಜ್ಞರೆಂದೂ ಅನುಭವವಾಯಿತು.

ಅವನು ಮನದಲ್ಲೇ ಶ್ರೀಮಧ್ವಾಚಾರ್ಯರಿಗೆ ವಂದಿಸಿದನು.

## ಬದರೀಕಾಶ್ರಮದಲ್ಲಿ ಶ್ರೀಮಧ್ವಾಚಾರ್ಯರು

ಬಹುಕಾಲದಿಂದಲೂ ಭಾರತೀಯರ ಮೇಲೆ ಹಿಮಾಲಯಪರ್ವತವು ಅಚ್ಚಳಿಯದ ಪ್ರಭಾವ ಮುದ್ರೆಯನ್ನು ಬೀರುತ್ತಾ ಬಂದಿದೆ.

ಭಾರತದ ಉತ್ತರ ದಿಕ್ಕಿನ ಮೇರೆಯಾಗಿ, ಪೂರ್ವ ಪಶ್ಚಿಮ ಗಡಿಯಾಗಿ ನಿಂತಿರುವ ಈ ಹಿಮವತ್ಪರ್ವತವನ್ನು ಪರ್ವತಗಳಿಗೆ ರಾಜನೆಂದು ಕಾಳಿದಾಸ ಮಹಾಕವಿಯು ಕುಮಾರಸಂಭವ ಮಹಾಕಾವ್ಯದಲ್ಲಿ ವರ್ಣಿಸಿದ್ದಾನೆ. ಅವನು ಪೂರ್ವ ಪಶ್ಚಿಮಗಳನ್ನು ತನ್ನ ಬಾಹುಗಳಿಂದ ಅಳೆಯಲು ಹೊರಟಿರುವನೋ ಎಂಬಂತೆ ಭಾಸವಾಗುತ್ತದೆ. ಪರ್ವತಗಳ ಎತ್ತರವನ್ನು ಅಳೆಯುವುದಕ್ಕೆ ಇದೇ ಮಾನದಂಡವಾಗಿದೆ.[1]

ಹಿಮಾಲಯ ಪರ್ವತದ, ಸದಾ ಹಿಮಾಚ್ಛಾದಿತ ಬೆಟ್ಟಗಳ ಕಣಿವೆಗಳಲ್ಲಿ ಅನೇಕ ಪುಣ್ಯ ನದಿಗಳು ಹುಟ್ಟಿ ಹರಿಯುತ್ತವೆ. ಜಗತ್ತಿನ ಅತ್ಯಂತ ಎತ್ತರದ

---

1) ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋನಾಮ ನಗಾಧಿರಾಜಃ।
ಕುಮಾರ ಸಂಭವ ಸರ್ಗ-1 ಶ್ಲೋಕ-1

ಶಿಖರವಾದ ಗೌರೀಶಂಕರ, ಧವಳಗಿರಿ, ಕಾಂಚನಗಂಗಾಗಳು ಹಿಮವಂತನ ಕೀರ್ತಿಯ ಕೋಟೆಗಳಂತೆ ನಿಂತಿವೆ. ಇವುಗಳಲ್ಲಿ ಗೌರೀಶಂಕರವು ಪರಶಿವನ ಆವಾಸಸ್ಥಾನವೆಂದು ನಂಬುವಷ್ಟು ಪವಿತ್ರತೆಯನ್ನೂ ಪ್ರಸಿದ್ಧಿಯನ್ನೂ ಪಡೆದಿದೆ.

ಇಲ್ಲಿನ ಮಾನಸಸರೋವರದಲ್ಲಿ ಹುಟ್ಟುವ ಗಂಗಾ, ಸಿಂಧು, ಬ್ರಹ್ಮಪುತ್ರಾ ಮತ್ತು ಯಮುನಾ ನದಿಗಳು ವರ್ಷದ ಎಲ್ಲ ಕಾಲದಲ್ಲೂ ತುಂಬುಹೊನಲಾಗಿ ಹರಿಯುವ ಜೀವನದಿಗಳಾಗಿವೆ. ಈ ನದಿಗಳು ಭಾರತದ ಸಾಂಸ್ಕೃತಿಕ, ಮತ್ತು ಧಾರ್ಮಿಕ ಜೀವನಕ್ಕೆ ಸ್ಫೂರ್ತಿಯ ಚಿಲುಮೆಗಳಾಗಿವೆ.

ಆದರಲ್ಲೂ ಗಂಗೆಯಂತಹ ಪವಿತ್ರನದಿಯು ಈ ಜಗತ್ತಿನಲ್ಲಿ ಬೇರೊಂದು ಇಲ್ಲ. ವೈಜ್ಞಾನಿಕವಾಗಿಯೂ ಈ ಗಂಗೆ ನೀರಿನಲ್ಲಿ ಅಂತಹ ಸತ್ವ ಇದೆ. ಆದರಲ್ಲಿ ರೋಗ ಜೀವಾಣುಗಳನ್ನು ನಾಶಪಡಿಸುವ (Bacteriophage) ಗುಣವಿದೆ, ಸದಾಲ ತನ್ನ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವ ಗುಣವಿದೆ. ಹೀಗಾಗಿ ಭಾರತದಲ್ಲಿ ಹುಟ್ಟಿದ ಪ್ರತಿಯೊಬ್ಬನೂ ಸಾಯುವ ಮುನ್ನ ಒಮ್ಮೆಯಾದರೂ ಗಂಗಾನದಿಯಲ್ಲಿ ಸ್ನಾನಮಾಡಿ ಪುಣ್ಯ ಸಂಪಾದಿಸಬೇಕೆಂದು ಹಂಬಲಿಸುತ್ತಾನೆ.

ಈ ಅಸಾಧಾರಣ ಗುಣ ಗಂಗೆಗೆ ಮಾತ್ರ ಹೇಗೆ ಪ್ರಾಪ್ತವಾಯಿತು ? ಬಹುಶಃ ಅವಳು ವಿಷ್ಣುಪಾದೋದ್ಭವೆ ಎಂಬ ಕಾರಣವಿರಬೇಕು; ಅಲ್ಲದೆ ಅವಳು ಪರಶಿವ ಸಾನ್ನಿಧ್ಯ ಪಡೆದವಳೆಂಬ ಕಾರಣದಿಂದಲೂ ಇರಬೇಕು. ಅಥವಾ ಭಗೀರಥ ಸಾಹಸಪುರುಷನ ಭಕ್ತಿ ಹಾಗೂ ತಪಶ್ಶಕ್ತಿಗಳಿಗೆ ಮೆಚ್ಚಿ, ಪಾತಾಳಲೋಕದಲ್ಲಿ ಕಪಿಲ ಮಹಾತ್ಮರ ಶಾಪದಿಂದ, ಬೂದಿಯಾಗಿದ್ದ ಸಗರ ಚಕ್ರವರ್ತಿಯ ಮಕ್ಕಳಾದ ಪಿತೃಗಳನ್ನು ಸ್ಪರ್ಶಿಸಿ, ಸದ್ಗತಿ ನೀಡಲು ಬಂದ ದೇವಗಂಗೆಗೆ ಮಹಿಮೆ ಸಹಜವಾಗಿಯೇ ಪ್ರಾಪ್ತವಾಗಿರಬೇಕು.

ಹಿಮಾಲಯಪರ್ವತದಲ್ಲಿ ಬೆಳೆದಿರುವ ಅನೇಕ ದಿವ್ಯ ಗಿಡಮೂಲಿಕೆಗಳ ವಕ್ಷಸ್ಥಳದಲ್ಲಿ, ರೋಗನಿರೋಧಕ ಅಪರೂಪದ ಖನಿಜ ಸಹವಾಸದಲ್ಲಿ, ಹರಿದು ಬಂದ ಈ ನದಿ ಬೇರಾವ ಜೀವನದಿಗೂ ಇಲ್ಲದ ಪಾವಿತ್ರ್ಯತೆ ಮತ್ತು ರೋಗ ರೋಧಕ ಶಕ್ತಿ ಬಂದಿರಬೇಕು. ಹೀಗಾಗಿ ಗಂಗೆಯ ನೀರನ್ನು ಪಾತ್ರೆಯಲ್ಲಿ ತುಂಬಿ ಅನೇಕ ವರ್ಷಗಳವರೆಗೆ ಇಟ್ಟರೂ ಅದು ಕೆಡುವುದೇ ಇಲ್ಲ. ಅದನ್ನು

ವಿಷ್ಣುಪಾದೋದಕ ತೀರ್ಥವೆಂದು ಅಂತ್ಯಕಾಲದಲ್ಲಿ ಸೇವಿಸಿದರೆ ಸದ್ಗತಿ ಆಗುವುದೆಂದು ಆಸ್ತಿಕರ ನಂಬಿಕೆ ಇಂದೂ ಸಹ ಇದೆ.

ಇಂಥ ಗಂಗಾನದಿಯ ಎರಡು ದಂಡೆಗಳಲ್ಲಿಯೂ ಅನೇಕ ಋಷ್ಯಾಶ್ರಮಗಳೂ, ದೇವಮಂದಿರಗಳೂ ಇವೆ.

ಇವುಗಳಲ್ಲಿ ಬದರಿಕಾಶ್ರಮವು ಅತ್ಯಂತ ಪವಿತ್ರವೂ ಶ್ರೇಷ್ಠವೂ ಆದುದು ಹಿಮಾಲಯ ಪರ್ವತದಲ್ಲಿ ತಪಸ್ಸು ಮಾಡಿದರೆ ಆ ತಪಸ್ಸು ಬೇಗ ಸಿದ್ಧಿಸುವುದೆಂದು ಅನುಭವವಿದೆ. ಅನೇಕ ದೇವದೇವತೆಗಳು ಅಲ್ಲಿ ನೆಲೆಸಿರುವರೆಂದೂ ಇಂದೂ ಪ್ರತೀತಿ ಇದೆ

ಅಲ್ಲಿನ ಗಂಗೋತ್ರಿ, ಯಮುನೋತ್ರಿ, ಅಮರನಾಥ, ಕೇದಾರನಾಥ, ಬದರೀನಾಥಕ್ಷೇತ್ರಗಳು ಭಾರತದ ಮೂಲೆಮೂಲೆಗಳಿಂದಲೂ ಭಕ್ತಕೋಟಿಯನ್ನು ಆಕರ್ಷಿಸುತ್ತಾ ಬಂದಿವೆ.

ಆದರಲ್ಲೂ ಬದರೀ ಕ್ಷೇತ್ರವು ನರನಾರಾಯಣರೂಪಿಯಾದ ಭಗವಂತನ ಲೀಲಾಭೂಮಿ ಎನಿಸಿದೆ. ಇಂದಿಗೂ ಅಲ್ಲಿ ಅವರಿಬ್ಬರೂ ಲೋಕಕ್ಷೇಮಕ್ಕಾಗಿ ತಮ್ಮ ಯೋಗದಸಾಧನೆಯಲ್ಲಿ ಮಗ್ನರಾಗಿದ್ದಾರೆಂದು ನಂಬಿಕೆ ಇದೆ. ಅಂತಲೇ ಶ್ರೀಮಹಾಭಾರತವನ್ನು ರಚಿಸಿದ ಭಗವಾನ್ ವೇದವ್ಯಾಸರು— ಬಾದರಾಯಣರು—ಬದರಿಕಾಶ್ರಮದಲ್ಲಿ ಇಂದೂ ತಪಸ್ಸು ಮಾಡುತ್ತಿದ್ದಾರೆಂಬ ನಂಬಿಕೆ ಆಸ್ತಿಕ ಜನರಿಗೆ ಇದೆ [1]

ಬದರೀ ಕ್ಷೇತ್ರವು ಎರಡು; ಒಂದು ಚಿಕ್ಕ ಬದರಿ, ಇನ್ನೊಂದು ವಿಶಾಲ ಬದರಿ. ಚಿಕ್ಕ ಬದರಿಯಲ್ಲಿ ಶ್ರೀಬದರಿನಾರಾಯಣಸ್ವಾಮಿಯ ಮಂದಿರವಿದೆ. ಇದರ ಸಮೀಪ ಕೇದಾರನಾಥದಲ್ಲಿ ಶಂಕರಾಚಾರ್ಯರು

---

1) ಅಥ ಹೈಮವತೇ ತಟಾಂತರೇ
ಬದರೀಷಂಡವಿಶೇಷಮಂಡಿತಮ್।
ಪರಮಾಶ್ರಮಮಾಶ್ರಯಂ ಶ್ರಿಯಃ
ಸಕಲಜ್ಞಃ ಸ ದರ್ಶ ವಿಶ್ರುತಮ್॥

ಮ ॥ ವಿ ॥ ಸರ್ಗ–7–ಶ್ಲೋಕ–1

ನಿರ್ಮಿಸಿದ ಅದ್ವೈತ ಮತದ ಒಂದು ಪೀಠವೂ ಇದೆ. ಬದರಿಯಲ್ಲಿನ ಬ್ರಹ್ಮ ಕಪಾಲದಲ್ಲಿ ಪಿತೃಶ್ರಾದ್ಧ ಮಾಡಿದರೆ ಪಿತೃಗಳಿಗೆ ಸದ್ಗತಿ ಸಿಕ್ಕುವುದೆಂದು ಹೇಳುತ್ತಾರೆ ಈ ನಂಬಿಕೆಯಿಂದ ವರ್ಷದಲ್ಲಿ ಸುಮಾರು ಆರು ತಿಂಗಳ ಕಾಲ— ಆ ಪ್ರದೇಶವನ್ನು ಹಿಮವು ಗಡ್ಡೆ ಕಟ್ಟದೆ ಪ್ರಯಾಣಕ್ಕೆ ಅನುಕೂಲವಿರುವವರೆಗೆ-ಯಾತ್ರಿಕರು ತಂಡತಂಡವಾಗಿ ಆಗಮಿಸುತ್ತಾರೆ. ಅಲ್ಲಿ ಹಿಮಗಾಲ ಆರಂಭವಾದೊಡನೆ ಬದರೀನಾರಾಯಣ ದೇವಾಲಯದ ಬಾಗಿಲನ್ನು ಮುಚ್ಚಿ ಅಲ್ಲಿನ ಅರ್ಚಕರು ಮುಂತಾದಜನರು ಹರಿದ್ವಾರಕ್ಕೋ, ಹೃಷೀಕೇಶಕ್ಕೋ, ಜೋಶಿ ಮಠಕ್ಕೋ ಬಂದು ಹಿಮ ಕರಗುವವರೆಗೂ ಇರುತ್ತಾರೆ.

ಹೀಗೆ ಹಿಮಗಾಲ ಹೊರತು ಬೇರೆ ಕಾಲದಲ್ಲಿ ಬದರೀಯಾತ್ರೆ ಮಾಡುವ ದೇಶವಿದೇಶಗಳ ಜನ ವಿಪುಲ ಸಂಖ್ಯೆಯಲ್ಲಿದ್ದಾರೆ.

ಶ್ರೀಮನ್ಮಧ್ವಾಚಾರ್ಯರು ತಾವು ಬದರಿಗೆ ಹೋಗಿ, ವಿಶಾಲಬದರಿಯಲ್ಲಿನ ತಮ್ಮ ಆಶ್ರಮದಲ್ಲಿ ತಪಸ್ಸುಮಾಡುತ್ತಿರುವ ಶ್ರೀಬಾದರಾಯಣ ದೇವರನ್ನು ಸಂದರ್ಶಿಸಿ ತಾವು ರಚಿಸಬೇಕೆಂದದ್ದ ಬ್ರಹ್ಮಸೂತ್ರಭಾಷ್ಯದ ವಿಷಯವನ್ನು [1] ಅವರಿಗೆ ತಿಳಿಸಿ, ಅವರ ಆಶೀರ್ವಾದ ಅನುಗ್ರಹಗಳನ್ನು ಪಡೆದು ದ್ವೈತ ಸಿದ್ಧಾಂತವನ್ನು ಎಡೆಲ್ಲೆಯಲ್ಲಿಯೂ ಪ್ರಚಾರ ಮಾಡಬೇಕೆಂದು ಸಂಕಲ್ಪಿಸಿದ್ದರು.

---

1) ಬ್ರಹ್ಮಸೂತ್ರಭಾಷ್ಯ—ಸೂತ್ರ ಪದದ ಅರ್ಥ

ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥
ಲಘೂನಿ ಸೂಚಿತಾರ್ಥಾನಿ ಸ್ವಲ್ಪಾಕ್ಷರಪದಾನಿ ಚ ।
ಸರ್ವತಃ ಸಾರಭೂತಾನಿ ಸೂತ್ರಾಣ್ಯಾಹುರ್ಮನೀಷಿಣಃ ॥

ಸೂತ್ರಗಳಲ್ಲಿ ವಿವಕ್ಷಿತಾರ್ಥಸಿದ್ಧಿಗಾಗಿ ಎಷ್ಟು ಅಕ್ಷರಗಳು ಅವಶ್ಯಕವೋ ಅಷ್ಟೇ ಅಕ್ಷರಗಳಿರಬೇಕು. ವ್ಯರ್ಥಾಕ್ಷರ ಮುಂತಾದುವು ಇರಬಾರದು.

ಬ್ರಹ್ಮಸೂತ್ರ ಪ್ರತಿಪಾದ್ಯ ವಿಷಯಗಳು—

ಸರ್ವದೋಷವಿಹೀನತ್ವಂ ಗೃಣ್ಯೈಃ ಸರ್ವೈರುದೀರ್ಣತಾ ।
ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಹಿ ॥

ಮುಂದಿನ ಪುಟಕ್ಕೆ

ಭಾರತದ ಧಾರ್ಮಿಕ ಸಾಹಿತ್ಯದಲ್ಲಿ ಬಾದರಾಯಣರ ಬ್ರಹ್ಮಸೂತ್ರ, ಉಪನಿಷತ್ತು ಮತ್ತು ಶ್ರೀಕೃಷ್ಣನು ಕುರುಕ್ಷೇತ್ರ ರಣರಂಗದಲ್ಲಿ ಅರ್ಜುನನಿಗೆ ಬೋಧಿಸಿದ ಭಗವದ್ಗೀತೆ— ಈ ಮೂರು ಗ್ರಂಥಗಳ ಗುಂಪಿಗೆ ಮಹತ್ವದ ಸ್ಥಾನ ಕೊಡಲಾಗಿದೆ. ಇವುಗಳನ್ನು ಪ್ರಸ್ಥಾನತ್ರಯಗಳೆಂದು ಕರೆಯುತ್ತಾರೆ ವೇದಸಮ್ಮತವಾದ. ವೇದಾಂತಕ್ಕೆ ಹೊಂದುವ ಷಡ್ದರ್ಶನಗಳಲ್ಲಿ ಉತ್ತರ ಮೀಮಾಂಸಾ ಅಥವಾ ವೇದಾಂತಶಾಸ್ತ್ರಕ್ಕೇ ಪ್ರಾಶಸ್ತ್ಯ ಇದೆ. ಇದನ್ನು ಅದ್ವೈತಸಿದ್ಧಾಂತ, ವಿಶಿಷ್ಟಾದ್ವೈತಸಿದ್ಧಾಂತ, ಮತ್ತು ದ್ವೈತ ಸಿದ್ಧಾಂತಗಳೆಂದು ಕರೆಯುತ್ತಾರೆ

ಈ ಅದ್ವೈತ ಹಾಗೂ ವಿಶಿಷ್ಟಾದ್ವೈತಸಿದ್ಧಾಂತಗಳನ್ನು ಪ್ರಚಾರಕ್ಕೆ ತಂದ ಶಂಕರಾಚಾರ್ಯರೂ, ರಾಮಾನುಜಾಚಾರ್ಯರೂ, ತಮ್ಮ ಸಿದ್ಧಾಂತಗಳ ಪ್ರತಿಪಾದನೆಗೆ ಈ ಮೂರು ಗುಂಪಿನ ಗ್ರಂಥಗಳಿಂದಲೂ ವೇದ ಪುರಾಣ ಶಾಸ್ತ್ರಗಳಿಂದಲೂ ವಿಪುಲವಾದ ಆಧಾರಗಳನ್ನು ಒದಗಿಸಿದ್ದರು. ಇದರಿಂದ ತಮ್ಮ

---

ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ ।
ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ ॥

ವಿಷ್ಣು ಸರ್ವದೋಷರಹಿತನಾಗಿದ್ದಾನೆ. ಸರ್ವಗುಣಗಳಿಂದ ಪೂರ್ಣನಾಗಿದ್ದಾನೆ. ಶ್ರೀವಿಷ್ಣುವಿನ ಮತ್ಸ್ಯಾದ್ಯವತಾರ ರೂಪಗಳಿಗೆ ಪರಸ್ಪರ ಭೇದವು ಇರುವುದಿಲ್ಲ. ಜೀವರಿಗೂ ಪರಮಾತ್ಮನಿಗೂ ಸದಾ ಭೇದವಿರುತ್ತದೆ

ನಾರಾಯಣನು ಸಕಲ ವೇದಗಳಿಂದಲೂ ಸ್ತೋತ್ರಾರ್ಹನಾಗಿರುತ್ತಾನೆ. ಅಂದರೆ ಸಕಲ ವೇದಗಳಿಗೂ ಮುಖ್ಯಾರ್ಥವು ಶ್ರೀವಿಷ್ಣುವೇ. ಮುಕ್ತರಲ್ಲಿಯೂ ತಾರತಮ್ಯವುಂಟು ಜೀವರಿಗೆ ಪರಮಾತ್ಮನ ಜ್ಞಾನದಿಂದ ಪ್ರಸಾದವುಂಟಾಗಿ ಅದರಿಂದ ಮುಕ್ತಿಯು ಲಭಿಸುತ್ತದೆ.

ಭಾಷ್ಯಪದದ ಅರ್ಥ—

ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಕಾರಿಭಿಃ ।
ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥

ಭಾಷ್ಯವ್ಯಾಖ್ಯಾನದಲ್ಲಿ ಸೂತ್ರಾನುಸಾರಿಗಳಾದ ಪದಗಳಿಂದ ಸೂತ್ರಾರ್ಥವು ವರ್ಣಿತವಾಗಿರಬೇಕು. ಸ್ವಪದಗಳೂ ವರ್ಣಿತವಾಗಿರಬೇಕು.

(ಕುಂಭಕೋಣ ಮುದ್ರಿತ ಶ್ರೀಮನ್ನ್ಯಾಯಸುಧಾ ಪುಟ 21–22)

ಸಿದ್ಧಾಂತಗಳಿಗೆ ವೇದ ಪ್ರಾಮಾಣ್ಯ ದೊರಕುವುದೆಂದು ತಿಳಿದಿದ್ದರು.

ಆದರೆ ಈ ಆಚಾರ್ಯದ್ವಯರು ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆಗಳಿಗೆ – ಭಾಷ್ಯಗಳನ್ನು ರಚಿಸಿ ವೇದ ಶಾಸ್ತ್ರ ಪುರಾಣಗಳಿಂದ ಆಧಾರ ವಾಕ್ಯಗಳನ್ನು ಉದ್ಧರಿಸಿದ್ದರೂ ಈ ಎರಡು ಸಿದ್ಧಾಂತಗಳಿಗೂ ಎರಡು ಧ್ರುವಗಳ ಅಂತರವಿದೆ.

ಅದ್ವೈತ ಮತಕ್ಕೆ ಆಧಾರ ಗ್ರಂಥ ಗೌಡಪಾದಕಾರಿಕಾ, ವಿಶಿಷ್ಟಾದ್ವೈತ ಮತಕ್ಕೆ – ಬೋಧಾಯನಸೂತ್ರವೃತ್ತಿ. ದ್ವೈತಮತಕ್ಕೆ ಬ್ರಹ್ಮತರ್ಕ. ಇವುಗಳಲ್ಲಿ ಬ್ರಹ್ಮತರ್ಕವೇ ಅತ್ಯಂತ ಪ್ರಾಚೀನವಾದುದು. ಶ್ರೀಮನ್ನಾರಾಯಣನಿಂದಲೇ ರಚಿತವಾದುದು. ಮಧ್ವಮತವೇ ಶ್ರೇಷ್ಠ.

ಈ ಎರಡು ಸಿದ್ಧಾಂತಗಳಲ್ಲೂ ಶ್ರೀಮನ್ಮಧ್ವಾಚಾರ್ಯರು ಪ್ರಬಲವಾದ ದೋಷಜಾಲಗಳನ್ನು ತೋರಿಸಿದ್ದರಿಂದ ಅವುಗಳು, ವೇದಗಳು, ಮತ್ತು ಬಾದರಾಯಣಮುನಿಗಳಿಗೆ ಸಮ್ಮತವಾದ ವ್ಯಾಖ್ಯಾನಗಳಾಗುವುದಿಲ್ಲವೆಂದೂ, ಜನಸಾಮಾನ್ಯರನ್ನು ತಪ್ಪುದಾರಿಗೆ ಎಳೆಯುವ ಹೇಯವಾದ ಸಿದ್ಧಾಂತಗಳೆಂದೂ ಮಧ್ವಾಚಾರ್ಯರ ಖಂಡಿತವಾದ ವಾದ. ಆದುದರಿಂದ ತಾವು ದ್ವೈತಪರವಾದ ವ್ಯಾಖ್ಯಾನಗಳನ್ನು ಈ ಗ್ರಂಥಗಳಿಗೆ ರಚಿಸಲು ನಿಶ್ಚಯಿಸಿದರು.

ಅವರ ಗುರುಗಳಾದ ಅಚ್ಯುತಪ್ರೇಕ್ಷರೂ, ವಾದ ಮಾಡಲು ಬಂದು ಪರಾಜಿತರಾದ ಪ್ರತಿವಾದಿ ಭಯಂಕರರೂ, ಅದ್ವೈತ ಹಾಗೂ ವಿಶಿಷ್ಟಾದ್ವೈತಮತಗಳ ಆಚಾರ್ಯಪೀಠಗಳ ಸ್ವಾಮಿಗಳೂ, ಸಂನ್ಯಾಸಿಗಳೂ, ಪಂಡಿತರೂ, ಶ್ರೀಮಧ್ವಾಚಾರ್ಯರನ್ನು ಪ್ರಸ್ಥಾನತ್ರಯಕ್ಕೆ ಸರಿಯಾದ ವ್ಯಾಖ್ಯಾನ ರಚಿಸಬೇಕೆಂದು ಒತ್ತಾಯ ಪಡಿಸುತ್ತಾ ಬಂದಿದ್ದರು.

ಈ ಒತ್ತಾಯಕ್ಕೆ ಮಣಿದು, ಲೋಕೋಪಕಾರ ದೃಷ್ಟಿಯಿಂದ ಶ್ರೀಮಧ್ವಾಚಾರ್ಯರು ಬಾದರಾಯಣರೆನಿಸಿದ ಶ್ರೀವೇದವ್ಯಾಸರಚಿತ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿ, ಅದನ್ನು ಶ್ರೀವೇದವ್ಯಾಸರಿಗೆ ತೋರಿಸಿ. ಅವರ ಒಪ್ಪಿಗೆ ಮತ್ತು ಅನುಗ್ರಹ ಪಡೆದು ಬರಬೇಕೆಂದು ಬದರಿಕಾಶ್ರಮಕ್ಕೆ ಹೋಗಲು ನಿಶ್ಚಯಿಸಿದರು.

ಶ್ರೀಮಧ್ವಾಚಾರ್ಯರು ತಿರುವನಂತಪುರ, ಕನ್ಯಾಕುಮಾರಿ, ರಾಮೇ

ಶ್ವರ ಕ್ಷೇತ್ರಗಳನ್ನು ನೋಡಿಕೊಂಡು, ಶ್ರೀರಂಗದಲ್ಲಿ ಶ್ರೀರಂಗನಾಥಸ್ವಾಮಿಯನ್ನು ಸೇವಿಸಿ, ಅವನ ಅನುಗ್ರಹ ಪಡೆದ ಮೇಲೆ ಅವರು ನೇರ ಬದರಿಕಾಶ್ರಮಕ್ಕೆ ಪ್ರಯಾಣಮಾಡಿದರು.

ಸತ್ಯತೀರ್ಥರು ತೋಂಟತಿಲ್ಲಾಯರ ಗುರುಕುಲದಲ್ಲಿ ವಾಸುದೇವನ ಜೊತೆಗೆ ಓದುತ್ತಿದ್ದ ಗುರುಪುತ್ರರಾಗಿದ್ದರು. ಅವರು ವಾಸುದೇವನ ಅಭಿಮಾನಕ್ಕೆ ಮುಖ್ಯ ಪಾತ್ರರಾಗಿದ್ದರು. ಆ ಗುರುಪುತ್ರರು ವಿರಕ್ತರಾಗಿ ಸಂನ್ಯಾಸಾಶ್ರಮ ಸ್ವೀಕರಿಸಲು ನಿಶ್ಚಯಿಸಿದರು. ಅವರು ಉಡುಪಿಗೆ ಬಂದು ಶ್ರೀಮಧ್ವಾಚಾರ್ಯರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಸತ್ಯತೀರ್ಥರೆನಿಸಿದರು. ಅವರು ಆಚಾರ್ಯರನ್ನು ನೆರಳಿನಂತೆ ಅನುಸರಿಸುತ್ತಾ ಜೊತೆಗೇ ಇರುತ್ತಿದ್ದರು.

ಪ್ರಾಯಶಃ ಸತ್ಯತೀರ್ಥರು ಶ್ರೀಮಧ್ವಾಚಾರ್ಯರ ಕಾರ್ಯಸಾಧನೆಯಲ್ಲಿ ಬಲಗೈಯಂತೆ ಇದ್ದರು.

ಆಚಾರ್ಯರು ಭಗವದ್ಗೀತೆಗೆ ವ್ಯಾಖ್ಯಾನವನ್ನು ಹೇಳುತ್ತಿದ್ದಂತೆ, ಭಾಷ್ಯವನ್ನು ಸತ್ಯತೀರ್ಥರು ಬರೆದುಕೊಳ್ಳುತ್ತಿದ್ದರು. ಸತ್ಯತೀರ್ಥರು ಉದ್ದಾಮ ಪಂಡಿತರಾಗಿದ್ದುದರಿಂದ ಶ್ರೀಮಧ್ವಾಚಾರ್ಯರು ಹೇಳಿದಂತೆಲ್ಲ ಅದನ್ನು ಬರೆದು ಕೊಳ್ಳುತ್ತಾ ಬರಲು ಶಕ್ತರಾಗಿದ್ದರು.

ಈಗ ಅವರು ರಚಿಸಿದ್ದ ಭಗವದ್ಗೀತೆಯ ಮೇಲಣ ಭಾಷ್ಯ (ಗೀತಾ-ಭಾಷ್ಯ) ಮುಗಿದಿತ್ತು. ಇದನ್ನು ಶ್ರೀನರನಾರಾಯಣ ದೇವರಿಗೆ ತೋರಿಸಿ ಅವರ ಅಂಗೀಕಾರವನ್ನು ಪಡೆದು ಬರುವ ಸಲುವಾಗಿ ಈ ಗುರು ಮತ್ತು ಶಿಷ್ಯರು ಬದರಿಗೆ ಬಂದಿದ್ದರು.

ಹಿಂದಿನಿಂದಲೂ ಬಲಿ, ವ್ಯಾಸರು, ಕೃಪರು, ಪರಶುರಾಮರು. ಆಂಜನೇಯ, ವಿಭೀಷಣ, ಅಶ್ವತ್ಥಾಮರಂತಹ ವ್ಯಕ್ತಿಗಳು ಚಿರಂಜೀವಿಗಳೆಂದು ಆಸ್ತಿಕ ಜನರ ನಂಬಿಕೆ.[1] ಅಂತೆಯೇ ಯೋಗಿಯಾದವನು ತನ್ನ ದೇಹವನ್ನು ವಜ್ರಸಮಗೊಳಿಸಿ, ತನಗೆ ಇಷ್ಟ ಬಂದಷ್ಟು ಕಾಲ ಜೀವಿಸಬಲ್ಲನೆಂದು ಪತಂಜಲಿಯೋಗಗ್ರಂಥದಿಂದ ತಿಳಿಯುು

1) ಅಶ್ವತ್ಥಾಮೋ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ।
ಕೃಪಶ್ಚ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥

ತ್ತದೆ. ಯೋಗಿಗೆ ವಯಸ್ಸಿನ ನಿಯಮವಿಲ್ಲ. ಆವನು ಇಚ್ಛಾಮರಣಿ. ಕ್ಷತ್ರಿಯ ಶ್ರೇಷ್ಠನಾದ ಭೀಷ್ಮನಂತಹವರು ಇಚ್ಛಾಮರಣಿಗಳಾಗಿದ್ದರೆಂದಮೇಲೆ, ಶ್ರೀ ವೇದವ್ಯಾಸರು ಬದರಿಕಾಶ್ರಮದಲ್ಲಿ, ಇನ್ನೂ ತಪಸ್ಸಿನಲ್ಲಿ ತೊಡಗಿದ್ದರೆ ಆಶ್ಚರ್ಯವೇನಿಲ್ಲ. ಅಪರೋಕ್ಷ ಜ್ಞಾನಿಗಳಾದ ಶ್ರೀಮಧ್ವಾಚಾರ್ಯರು ಅವರ ದರ್ಶನಕ್ಕೆ ಬಂದಿದ್ದರು.

ಚಿಕ್ಕ ಬದರಿಕ್ಷೇತ್ರದಲ್ಲಿ ಈ ಗುರುಶಿಷ್ಯರು ಶ್ರೀಬಾದರಾಯಣರನ್ನು ಶ್ರದ್ಧಾ ಭಕ್ತಿಗಳಿಂದ ಸೇವಿಸಿ ಸಂತೋಷಪಟ್ಟರು.

ಅಲ್ಲಿನ ನರನಾರಾಯಣ ಆಶ್ರಮದಲ್ಲಿದ್ದ ಶ್ರೀನಾರಾಯಣರು ಶ್ರೀಮಧ್ವಾಚಾರ್ಯರು ಶ್ರೀಮದ್ಭಗವದ್ಗೀತೆಗೆ ರಚಿಸಿದ್ದ ವ್ಯಾಖ್ಯಾನವನ್ನು ಓದಿಸಿ ಕೇಳಿ, ಅನುಮೋದಿಸಿ ಅತೀವ ಸಂತೋಷಪಟ್ಟರು.

ತಾವು ಮಾಡಿದ ಗೀತೋಪದೇಶದ ಸರಿಯಾದ ಅರ್ಥ ವಿವರಣೆಯನ್ನು ಶ್ರೀಮಧ್ವಾಚಾರ್ಯರು ಮಾಡಿದ್ದರೆಂದು ಅವರನ್ನು ಮುಕ್ತಕಂಠದಿಂದ ಹೊಗಳಿ ಆಶೀರ್ವಾದ ಮಾಡಿ ಅನುಗ್ರಹಿಸಿದರು.

ಶ್ರೀಮಧ್ವಾಚಾರ್ಯರು ರಚಿಸಿದ್ದ ಗೀತಾಭಾಷ್ಯದ ಮಂಗಳ ಶ್ಲೋಕದಲ್ಲಿ ಇದ್ದ 'ಶಕ್ತಿತಃ' ಎಂಬ ಪದವನ್ನು ಶ್ರೀಮನ್ನಾರಾಯಣರು 'ಲೇಶತಃ' ಎಂದು ತಿದ್ದಿ ಭಗವದ್ಗೀತೆಯ ಅರ್ಥವನ್ನು ತನ್ನ ಹೊರತು ಅನ್ಯರು ತಿಳಿಯಲು ಅಸಮರ್ಥರಾಗಿರುವುದರಿಂದ ಈ ಪದವಿರಲಿ ಎಂದು ತಿಳಿಸಿ ಅವರನ್ನು ಅನುಗ್ರಹಿಸಿ ಬೀಳ್ಕೊಟ್ಟರು.1

---

1) ಮಂಡಯನ್ ಭರತಖಂಡಮಖಂಡಂ
ನಾದಿರಾಯಣಪದೋತ್ರ ಪರೋ ಯಃ ।
ತಂ ನಮನ್ ಪ್ರಚುರಧೀರ್ಹರಿಗೀತಾ–
ಭಾಷ್ಯಮರ್ಪಯದುಪಾಯನಮಸ್ಮೈ ॥
ಪ್ರೀತಯೇsಸ್ಯ ಪುರತೋವ ರಭಾಷ್ಯಂ
ವಾಚಯನ್‌ಸ ಜನತಾಮುಪಸಾರ್ಯ ।

ಮುಂದಿನ ಪುಟಕ್ಕೆ

ಮಧ್ವಾಚಾರ್ಯರು ದೊಡ್ಡ ಬದರಿಯಲ್ಲಿ ತಪೋಮಗ್ನರಾಗಿದ್ದ ಶ್ರೀವೇದ ವ್ಯಾಸ ದೇವರನ್ನು ಅವರ ಆದೇಶದಂತೆ ಸಂದರ್ಶಿಸಲು ಅವರ ಅಪ್ಪಣೆ ಯನ್ನು ನಿರೀಕ್ಷಿಸುತ್ತಾ ಚಿಕ್ಕ ಬದರಿಯ ಅನಂತಮಠದಲ್ಲಿಯೇ ಧ್ಯಾನ ಮಗ್ನರಾಗಿಕುಳಿತರು.

ಅವರು ಬಹುಕಾಲ ಭಕ್ತಿಯಿಂದ ವೇದವ್ಯಾಸರನ್ನು ಪ್ರಾರ್ಥಿಸಿದ ಫಲವೆಂಬಂತೆ ತಮ್ಮ ಬಳಿಗೆ ಬರಲು ಶ್ರೀ ಬಾದರಾಯಣದೇವರು ಅನುಮತಿ ನೀಡಿದರು. ಈ ಸಂಗತಿಯನ್ನು ಜೊತೆಗೆ ಬಂದಿದ್ದ ಸತ್ಯತೀರ್ಥರಿಗೆ ತಿಳಿಸಿ "ಸತ್ಯತೀರ್ಥರೇ, ಶ್ರೀಗುರುದೇವರ ಆದೇಶದಂತೆ ನಾವು ದೊಡ್ಡ ಬದರಿಗೆ ಹೋಗುತ್ತಿದ್ದೇವೆ. ನೀವು ನಮ್ಮನ್ನು ಅನುಸರಿಸಿ ಬರಬಾರದೆಂದು ನಮ್ಮ ಅಪೇಕ್ಷೆ" —ಎಂದವರೇ ಪ್ರಯಾಣಕ್ಕೆ ಸನ್ನದ್ಧರಾಗಿ ಹೊರಟೇ ಬಿಟ್ಟರು. ಆದರೆ ಗುರುಗಳನ್ನು ಬಿಟ್ಟಿರಲಾರದೆ ಸತ್ಯತೀರ್ಥರು ಗುರುವಿನ ಆಜ್ಞೆಯ ವಿರುದ್ಧ ಅವರನ್ನು ಅನುಸರಿಸಿ ಸ್ವಲ್ಪ ದೂರ ಮಾತ್ರ ಹೋದರು.

ಆದರೆ ಶ್ರೀಮಧ್ವಾಚಾರ್ಯರು ತಾವು ವಾಯುಪುತ್ರರಾಗಿದ್ದ ಸಂಗತಿಯನ್ನು ನೆನಪಿಗೆ ತಂದು ಕೊಂಡವರಂತೆ ಪರ್ವತ ಶಿಖರ ಶಿಖರಗಳಿಗೆ ಅತಿ ಶೀಘ್ರವಾಗಿ ಹಾರುತ್ತಾ ಬಹುದೂರ ಹೋಗಿ ಕಣ್ಮರೆಯಾಗುವುದಕ್ಕೆ ಮೊದಲು ಹಿಂದೆ ಬಿದ್ದಿದ್ದ ಸತ್ಯತೀರ್ಥರಿಗೆ ನೀವು ಹಿಂದಕ್ಕೆ ಹೋಗಿ ಎಂದು ಕಾವಿಶಾಲಿಬೀಸಿ ಸೂಚಿಸಿದರು.

ಶ್ರೀಮಧ್ವಾಚಾರ್ಯರು ವಿಶಾಲಬದರಿಯಲ್ಲಿ ತಪೋಮಗ್ನರಾಗಿದ್ದ ಶ್ರೀ ವೇದವ್ಯಾಸದೇವರನ್ನು ಸಂದರ್ಶಿಸಿ ಅವರಿಂದ ಅನುಗೃಹೀತರಾಗಿ ಬರಲು ತಮ್ಮ ಪ್ರಿಯ ಶಿಷ್ಯರಾಗಿ, ನೆರಳಿನಂತೆ ಅನುಸರಿಸಿದ್ದ ಸತ್ಯತೀರ್ಥರನ್ನು ಬಿಟ್ಟು ಒಬ್ಬರೇ ಹೊರಟ್ಟಿದ್ದರು.

ಅವರಿಗೆ ಈಗ ಹನುಮಂತನ ಆವೇಶ ಮೈಯಲ್ಲಿ ತುಂಬಿತ್ತು.

ತ್ರೇತಾಯುಗದಲ್ಲಿ ಅಂಜನಾಸುತನಾದ ಹನುಮಂತನು ಶ್ರೀರಾಮನ

---

ವಚ್ಮಿ ಶಕ್ತಿತ ಉರುಕ್ರಮಗೀತಾಭಾಷ್ಯಮಿತ್ಯಕಥಯತ್ಪುರುಷಸಂಖ್ಯ ||
ಏತದರ್ಥಮತಿಸೂಕ್ಷ್ಮಮಪಿ ಸ್ವಂ ಶಕ್ತ ಏವ ವ ಯದಾತ್ಥ ಸಮಸ್ತಮ್ ।
ತೇನ ಲೇಶತ ಇತೀಹ ಪದಂ ಸ್ಯಾದಿತ್ಯಗದ್ಯತ ಜಗಜ್ಜನಕೇನ ॥
ಮ ॥ ವಿ ॥ ಸರ್ಗ 6–ಶ್ಲೋಕ 38–39–40

ಮುದ್ರಿಕೆಯ ಉಂಗುರವನ್ನು ಸೀತಾ ದೇವಿಗೆ ನೀಡಿ ಅವಳಿತ್ತ ಚೂಡಾಮಣಿ ಯನ್ನು ಕಿಷ್ಕಿಂಧೆಯಲ್ಲಿದ್ದ ಶ್ರೀರಾಮಚಂದ್ರನಿಗೆ ಕೊಡುವ ಸಲುವಾಗಿ ನೂರು ಯೋಜನ ವಿಸ್ತಾರವಾದ ಸಮುದ್ರವನ್ನು ಹೇಗೆ ಲಂಘಿಸಿದ್ದನೋ ಹಾಗೆಯೇ, ವೇದವ್ಯಾಸರ ಅನುಗ್ರಹವೆಂಬ ಚಿಂತಾಮಣಿರತ್ನವನ್ನು ಪಡೆಯ ಬರಲು ವಾಯು ಅವತಾರರಾದ ಶ್ರೀಮಧ್ವಾಚಾರ್ಯರು ವಾಯುವೇಗದಿಂದಲೇ ಹೊರ ಹೊರಟು ಶಿಖರಗಳನ್ನು ಲೀಲಾಜಾಲವಾಗಿ ಹಾರುತ್ತಿದ್ದರು.

ಭೀಮಸೇನನು ದ್ವಾಪರ ಯುಗದಲ್ಲಿ, ತನ್ನ ಪ್ರಿಯ ಪತ್ನಿಯಾದ ದ್ರೌಪದೀದೇವಿಯ ಇಷ್ಟಾರ್ಥ ಸಾಧನೆಗಾಗಿ ಹಿಮವತ್ಪರ್ವತದಲ್ಲಿ ಬೆಳೆಯು ತ್ತಿದ್ದ ಸೌಗಂಧಿಕಾ ಪುಷ್ಪವನ್ನು ತಂದು ಕೊಡುವ ಸಲುವಾಗಿ ಹಿಮಾಲಯ ಪ್ರದೇಶದ ಬೆಟ್ಟಗುಡ್ಡಗಳ ಶಿಖರವನ್ನು ತನ್ನ ಭೀಮ ಪಾದಗಳಿಂದ ಆಳೆಯುತ್ತಾ, ಹೋಗಿದ್ದನು. ಆ ತನ್ನ ಹಿಂದಿನ ಜನ್ಮದ ಭೀಮಸೇನನ ನೆನಪನ್ನು ಶ್ರೀ ಮಧ್ವಾಚಾರ್ಯರು ಈಗ ಜನರ ನೆನಪಿಗೆ ತರುತ್ತಿದ್ದರು.

ಅವರು ತಮ್ಮ ಗುರುಗಳೂ ಆರಾಧ್ಯ ದೇವತೆಗಳೂ ಆದ ಶ್ರೀವೇದ ವ್ಯಾಸದೇವರನ್ನು ಸಂದರ್ಶಿಸಿ ಬರಲು ಆತ್ಯಾತುರವಾಗಿ ಧಾವಿಸುತ್ತಿದ್ದರು.

ಶ್ರೀವೇದವ್ಯಾಸರು ಅಪಾರವಾಗಿದ್ದ ವೇದದ ರಾಶಿಯನ್ನು ವಿಭಾಗಿಸಿ, ಅವುಗಳನ್ನು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳಾಗಿ ನಾಲ್ಕು ಗುಂಪುಗಳಾಗಿ ವಿಂಗಡಿಸಿ ಜ್ಞಾನ ಪಿಪಾಸುಗಳಾದ ಸಜ್ಜನ ರಿಗೆ ಮಹೋಪಕಾರ ಮಾಡಿದ್ದರು. ಅಲ್ಲದೆ ಇಡೀ ವೇದಗಳಲ್ಲಿ ಪ್ರತಿ ಪಾದ್ಯವಾದ ಭಗವಂತನ ಸ್ವರೂಪವನ್ನು ತಿಳಿಯಲಾಶಿಸುವ ಜಿಜ್ಞಾಸುಗಳಿಗೆ ಬ್ರಹ್ಮತತ್ತ್ವವನ್ನು ಸೂಕ್ಷ್ಮವಾದ ಸೂತ್ರಗಳ ರೂಪದಲ್ಲಿ ರಚಿಸಿ ಉಪಕಾರ ಮಾಡಿದ್ದ ಮಹನೀಯರು ಅವರು.

ಈ ಬ್ರಹ್ಮಸೂತ್ರಗಳಲ್ಲಿ ನಾಲ್ಕು ಅಧ್ಯಾಯಗಳೂ, 16 ಪಾದಗಳೂ ತ್ರಿಮತಸ್ಥರಿಗೂ ಸಾಮಾನ್ಯ. ಅಧಿಕರಣ ಮತ್ತು ಸೂತ್ರಸಂಖ್ಯೆಯಲ್ಲಿ ವ್ಯತ್ಯಾಸವಿದೆ. ದ್ವೈತಸಿದ್ಧಾಂತದಲ್ಲಿ 564 ಸೂತ್ರಗಳು, 223 ಅಧಿಕರಣ ಗಳೂ ಇವೆ. ಅದ್ವೈತಸಿದ್ಧಾಂತದಲ್ಲಿ 555 ಸೂತ್ರಗಳೂ, 191 ಅಧಿ ಕರಣಗಳೂ ಇವೆ. ರಾಮಾನುಜ ಭಾಷ್ಯದಲ್ಲಿ 545 ಸೂತ್ರಗಳೂ, 156 ಅಧಿ ಕರಣಗಳೂ ಇವೆ. ಅಧಿಕರಣವೆಂದರೆ ಒಂದೇ ಅರ್ಥವನ್ನು ಪ್ರತಿಪಾದಿಸುವ ಸೂತ್ರ ಅಥವಾ ಸೂತ್ರಗಳ ಗುಂಪು. "ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ"

——ಎಂದು ಪ್ರಾರಂಭಿಸಿ "ಓಂ ಅನಾವೃತ್ತಿಃಶಬ್ದಾತ್ ಓಂ, ಅನಾವೃತ್ತಿಃ ಶಬ್ದಾತ್ ಓಂ" ಎಂದು ಪೂರ್ಣಗೊಳ್ಳುವ ಈ ಮೂಲಗ್ರಂಥವಾದ "ಬ್ರಹ್ಮ ಸೂತ್ರಗಳು" ಶ್ರೀಮದ್ಭಗವದ್ಗೀತೆಯಂತೆಯೇ, ಭಾರತೀಯ ತತ್ತ್ವಶಾಸ್ತ್ರದ ಸಾರಸಮುಚ್ಚಯವಾಗಿ, ವೇದಾಂತಜ್ಞಾನಕ್ಕೆ ದೀವಿಗೆಯಂತೆ ಇದೆ.

ಅದ್ವೈತ ಮತ್ತು ವಿಶಿಷ್ಟಾದ್ವೈತಮತಗಳಲ್ಲಿ ಜೀವಬ್ರಹ್ಮೈಕ್ಯ ಪ್ರತಿಪಾದನೆಯಿಂದ, ಜೀವನೇ ಬ್ರಹ್ಮನಾದುದರಿಂದಲೂ, ಶರೀರದಲ್ಲಿರುವವನು ಶಾರೀರಿಯೆಂಗಿರೋಣದರಿಂದಲೂ ಈರ್ವರು ಆಚಾರ್ಯರ ಭಾಷ್ಯಗಳಿಗೆ ಶಾರೀರಿಕಮೀಮಾಂಸೆ ಎಂದೂ, ದ್ವೈತಮತದಲ್ಲಿ ಬ್ರಹ್ಮನು ಜೀವನಿಂದ ಅತ್ಯಂತ ಬೇರೆ ಯಾದುದರಿಂದ ಬ್ರಹ್ಮಮೀಮಾಂಸಾ ಶಾಸ್ತ್ರವೆಂತಲೂ ರೂಢಿಯಲ್ಲಿದೆ.

ಇವಕ್ಕೆ ಅನೇಕ ಆಚಾರ್ಯರು ವ್ಯಾಖ್ಯಾನಗಳನ್ನು ರಚಿಸಿದ್ದರೂ ಅವುಗಳಲ್ಲಿ ಅದ್ವೈತಪರವಾದ ಶಾಂಕರಭಾಷ್ಯವೂ, ವಿಶಿಷ್ಟಾದ್ವೈತ ಪರವಾದ ರಾಮಾನುಜಭಾಷ್ಯವೂ ಸುಪ್ರಸಿದ್ಧವಾಗಿವೆ. ಶ್ರೀಮಧ್ವಾಚಾರ್ಯರು ಅವತರಿಸುವವರೆಗೆ ಈ ಬ್ರಹ್ಮಸೂತ್ರಗಳಿಗೆ ಬೇರೆ ಅರ್ಥ ಸಾಧ್ಯವೆಂದು ಅನಿಸಿರಲಿಲ್ಲ. ಬ್ರಹ್ಮ ಸತ್ಯ—ಜಗತ್ತು ಮಿಥ್ಯವೆಂದು ಸಾಧಿಸಲು ಹೊರಟ ಅದ್ವೈತ ವಾದಕ್ಕೆ ಈ ಸೂತ್ರಗಳು ಆಧಾರವಾಗಿರುವಂತೆಯೇ ಬ್ರಹ್ಮವೂ ಸತ್ಯ—ಜಗತ್ತೂ ಸತ್ಯವೆನ್ನುವ ದ್ವೈತಸಿದ್ಧಾಂತಕ್ಕೂ ಆಧಾರವಾಗಿವೆ. ಶ್ರೀಮಧ್ವಾಚಾರ್ಯರು ದ್ವೈತಮತ ಸ್ಥಾಪಿಸುವವರೆಗೆ ಬ್ರಹ್ಮಸೂತ್ರಗಳ ಮೇಲೆ ಹೊಸ ಬೆಳಕು ಬಿದ್ದಿರಲಿಲ್ಲ, ಮಾಧ್ವ ಭಾಷ್ಯವೇ ಕೊನೆಯ ಭಾಷ್ಯ.

ಈಗ ಐತರೇಯಉಪನಿಷತ್ತು ಮತ್ತು ಭಗವದ್ಗೀತೆಗಳಿಗೆ ದ್ವೈತ ಸಿದ್ಧಾಂತಪರ ವ್ಯಾಖ್ಯಾನಗಳನ್ನು ರಚಿಸಿದ್ದ ಶ್ರೀಮಧ್ವಾಚಾರ್ಯರು ಬ್ರಹ್ಮ ಸೂತ್ರಗಳಿಗೂ ವ್ಯಾಖ್ಯಾನ ರಚಿಸಲು ಸಂಕಲ್ಪಿಸಿದ್ದರು. ಈ ಕಾರ್ಯಕ್ಕೆ ಶ್ರೀವೇದವ್ಯಾಸದೇವರ ಆಶೀರ್ವಾದಪೂರ್ವಕ ಅನುಮೋದನೆಯನ್ನು ಪಡೆಯುವ ಸಲುವಾಗಿ ವಿಶಾಲ ಬದರಿಗೆ ಅವರು ಆಗಮಿಸಿದ್ದರು.

ಶ್ರೀವ್ಯಾಸರ ಜನ್ಮ ನದಿಯ ದ್ವೀಪದಲ್ಲಾಯಿತು. ಆದ್ದರಿಂದ ಇವರಿಗೆ ಕೃಷ್ಣ ಅಥವಾ ಕೃಷ್ಣದ್ವೈಪಾಯನರೆಂದು ಪ್ರಸಿದ್ಧಿ ಇದೆ. ವೇದಗಳನ್ನು

ಭಾಗಮಾಡಿದ್ದರಿಂದ ವೇದವ್ಯಾಸರೆಂದೂ ಕೀರ್ತಿ ಇದೆ. ಇವರು ಬ್ರಹ್ಮರ್ಷಿಗಳಾದ ಪರಾಶರರಿಂದ ಸತ್ಯವತೀದೇವಿಯಲ್ಲಿ ಹುಟ್ಟಿದವರು. ಹುಟ್ಟುತ್ತಲೇ ಅವರು 'ಬ್ರಹ್ಮಜ್ಞಾನಿಗಳಾದರು. ಇವರು ನಾರಾಯಣನ ಅವತಾರ.

ಅವರು ವೇದಗಳನ್ನು ಪುನರ್ವಿಂಗಡಣೆ ಮಾಡಿದಂತೆ ಬ್ರಹ್ಮಸೂತ್ರಗಳನ್ನೂ, ಮಹಾಭಾರತ ಭೀಷ್ಮಪರ್ವ ಅಂತರ್ಗತವಾದ ಶ್ರೀಕೃಷ್ಣಾರ್ಜುನರ ಸಂವಾದ ರೂಪವಾದ ಶ್ರೀಭಗವದ್ಗೀತೆಯನ್ನೂ ರಚಿಸಿ ಲೋಕೋಪಕಾರ ಮಾಡಿದ್ದಾರೆ. ಹದಿನೆಂಟು ಮಹಾಪುರಾಣಗಳನ್ನೂ, ಹದಿನೆಂಟು ಉಪಪುರಾಣಗಳನ್ನೂ ರಚಿಸಿ ಲೋಕದಲ್ಲಿ ಭಗವಂತನ ವಿಷಯಕವಾದ ಭಕ್ತಿ, ಜ್ಞಾನ, ವೈರಾಗ್ಯಗಳು ಹೆಚ್ಚುವಂತೆ ಮಾಡಿದ್ದಾರೆ. ಅಲ್ಲದೆ ಭಕ್ತಿರಸ ಕಾವ್ಯವೆನಿಸಿದ ಅಷ್ಟಾದಶಪುರಾಣಾಂತರ್ಗತವಾದ ಶ್ರೀಭಾಗವತ ಮಹಾಪುರಾಣವನ್ನೂ ರಚಿಸಿ ಲೋಕೋಪಕಾರ ಮಾಡಿದ್ದಾರೆ. ಬ್ರಹ್ಮಸೂತ್ರಗಳ ವ್ಯಾಖ್ಯಾನವೇ ಶ್ರೀಮದ್ಭಾಗವತ.

ಇಂಥ ಶ್ರೀವೇದವ್ಯಾಸರನ್ನೂ ಅವರ ಮಕ್ಕಳಾದ ಶುಕಾಚಾರ್ಯರನ್ನೂ ಸಂದರ್ಶಿಸಿ ಅವರ ದಿವ್ಯಾನುಗ್ರಹ ಪಡೆದುಬರಲು ಶ್ರೀಮಧ್ವಾಚಾರ್ಯರು ವಿಶಾಲ ಬದರಿಗೆ ಆಗಮಿಸಿದ್ದರು.

ಪವಿತ್ರವಾದ ಹಿಮವತ್ಪರ್ವತದ ಗಿರಿಗಹ್ವರಗಳಲ್ಲಿ ವಾಸಮಾಡುವ ಸಾಧುಸಂತರ, ಯೋಗಿ ತಪಸ್ವಿಗಳ ಆಯುಃಪ್ರಮಾಣದ ಬಗೆಗೆ ವೈಜ್ಞಾನಿಕ ದೃಷ್ಟಿಯಿಂದ ವಿಚಾರಮಾಡುವ ಹೇತುವಾದಿಗಳಿಗೆ ಇವೆಲ್ಲ ವಿಪರ್ಯಾಸವಾಗಿ ಉತ್ಪ್ರೇಕ್ಷೆಯಂತೆ ತೋರಬಹುದು.

ಕಳೆದ ಶತಮಾನದಲ್ಲಿ ದೆಹಲಿಯ ಸಮೀಪದಲ್ಲಿ ಹುಟ್ಟಿದ್ದ ತಪಸ್ವೀಜೀ ಮಹಾರಾಜರೆಂಬುವರು ನೂರಐವತ್ತೈದು ವರ್ಷಗಳಕಾಲ ಜೀವಿಸಿದ್ದರು.

ಅವರು ತಮ್ಮ ತೊಂಬತ್ತನೆಯ ವಯಸ್ಸಿನಲ್ಲೂ ನೂರಿಪ್ಪತ್ತೈದನೆಯ ವಯಸ್ಸಿನಲ್ಲೂ ಕಾಯಕಲ್ಪ ಮಾಡಿಸಿಕೊಂಡು ಮತ್ತೆ ಆಯುಃಪ್ರಮಾಣವನ್ನು ಹೆಚ್ಚಾಗಿ ಪಡೆದಿದ್ದರು.

ಅವರು ಹಿಮಾಲಯದ ತಪ್ಪಲಿನಲ್ಲಿ ಸಂಚರಿಸುತ್ತಿದ್ದಾಗ ತಮಗೆ ದರ್ಶನಕೊಟ್ಟ ಮಹಾಮಹಿಮರ ಬಗೆಗೆ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ.

ಅವರಿಗೆ ದರ್ಶನ ಕೊಟ್ಟ ಮಹಾಪುರುಷರಲ್ಲಿ ಪರಶುರಾಮರು, ದತ್ತಾತ್ರೇಯರು, ಶ್ರೀಕೃಷ್ಣರು ಮುಖ್ಯರು. ಅಲ್ಲಿ ಅವರು ವೇದಗಳ ಕಾಲದ ಋಷಿಮುನಿಗಳನ್ನೂ ಕಂಡಿದ್ದರಂತೆ.

ವೇದಗಳಲ್ಲಿ ವರ್ಣಿತವಾಗಿರುವ ಸೋಮವೆಂಬ ದಿವ್ಯಮೂಲಿಕೆಯ ರಸವನ್ನು ಯಜ್ಞಗಳಲ್ಲಿ ಸೇವಿಸುವುದರ ಮೂಲಕವಾಗಿ ಐದು ಸಾವಿರ ವರ್ಷಗಳಿಂದ ಜೀವಿಸಿರುವ ಚಿರಂಜೀವಿಗಳನ್ನೂ ಅವರು ಕಣ್ಣಾರ ಕಂಡು ಮಾತನಾಡಿಸಿ ಬಂದಿದ್ದರಂತೆ.

ಶ್ರೀಮಧ್ವಾಚಾರ್ಯರು ಬದರಿಕಾಶ್ರಮದಲ್ಲಿದ್ದ ಶ್ರೀವೇದವ್ಯಾಸರನ್ನು ನೋಡಿ ಬಂದರೆಂದರೆ ಇದು ಕಟ್ಟುಕಥೆ ಎಂದಾಗಲೀ, ಉತ್ಪ್ರೇಕ್ಷೆ ಎಂದಾಗಲೀ ತಿಳಿಯುವ ಅಗತ್ಯವಿಲ್ಲ ಅವರು ದೇವತಾ ಪುರುಷರು. ಇದು ಅವರಿಗೆ ಸುಲಭ ಸಾಧ್ಯ.

ವೇದವನ್ನು ಅಧ್ಯಯನ ಮಾಡಿದವರಿಗೆ ಫಲವಾವುದು ? ಮೋಕ್ಷರೂಪವಾದ ಮಹಾಫಲವನ್ನು ಅದು ನೀಡುತ್ತದೆ. ಅದು ವಿಷ್ಣುಭಕ್ತರಿಗೆ ಮಾತ್ರ ದೊರಕುವುದೆಂದು ಶ್ರೀಮಧ್ವಾಚಾರ್ಯರ ಮತ. ಈ ವೇದದ ವೃಕ್ಷದಲ್ಲಿ ಐತರೇಯ, ಕೌಷೀತಕಿ, ಬಾಷ್ಕಲವೆಂಬ ಶಾಖೆಗಳು ಇವೆ. ಈ ಶಾಖೆಗಳಲ್ಲಿ ಜರಾಮರಣಗಳನ್ನು ನೀಗುವ ಮಧುರ ಫಲಗಳು ಬಿಟ್ಟಿವೆ ಎಂದು ಅವರ ನಂಬಿಕೆ.

ವೇದವ್ಯಾಸದೇವರು ಬದರೀ ವೃಕ್ಷಗಳಿಂದ ಅಲಕೃಂತವಾಗಿದ್ದ ಆಶ್ರಮದಲ್ಲಿ ವಿಶಾಲವಾದ ವೇದಿಕೆಯ ಮೇಲೆ ಋಷಿಮುನಿಗಳಿಂದ ಸೇವಿಸಲ್ಪಡುತ್ತಾ ಆಸೀನರಾಗಿದ್ದರು.

ಶ್ರೀಮಧ್ವಾಚಾರ್ಯರು ಅಲ್ಲಿಗೆ ಹೋಗಿ ಶ್ರೀವೇದವ್ಯಾಸರ ಪಾದಕಮಲಗಳಿಗೆ ಭಕ್ತಿಪುರಸ್ಸರವಾಗಿ ನಮಸ್ಕಾರ ಮಾಡಿದರು ಆ ಪಾದಗಳು ಕೋಮಲವಾಗಿದ್ದವು. ಧ್ವಜ, ವಜ್ರಾಯುಧ, ಅಂಕುಶ, ತಾವರೆ ಹೂಗಳ ರೇಖೆಗಳಿಂದ ಅಲಂಕೃತವಾಗಿದ್ದವು. ಅವರ ಮುಖ ದಿವ್ಯಕಾಂತಿಯಿಂದ ಕೂಡಿತ್ತು. ಅವರನ್ನು ಲಕ್ಷ್ಮೀದೇವಿ, ಬ್ರಹ್ಮ, ಮುಖ್ಯಪ್ರಾಣ, ಗರುಡ, ಶೇಷರೇ ಮೊದಲಾದ ದೇವದೇವತೆಗಳು ಸೇವಿಸುತ್ತಿದ್ದರು.

ಅವರು ತೇಜೋಮಯವಾದ ಜಟಾಜೂಟಗಳಿಂದ ಶೋಭಿಸುತ್ತಿದ್ದರು.

ಸೊಂಟಕ್ಕೆ ಉತ್ತಮವಾದ ಕೃಷ್ಣಾಜಿನವನ್ನು ಸುತ್ತಿಕೊಂಡಿದ್ದರು.

ಅವರು ಪರಸ್ಪರ ಸಂಧಿಸಿದುದು ಕೃಷ್ಣವರ್ಣಳಾದ ಯಮುನಾ ನದಿಯು ಶುಭ್ರವರ್ಣಳಾದ ಗಂಗಾನದಿಯನ್ನು ಕೂಡಿಕೊಂಡಂತೆ ಭಾಸವಾಗುತ್ತಿತ್ತು. ಶ್ರೀವೇದವ್ಯಾಸರು ಕೃಷ್ಣವರ್ಣದವರು, ಶ್ರೀಮಧ್ವಾಚಾರ್ಯರು ಚಿನ್ನದ ಬಣ್ಣದಂತೆ ಮೈ ಬಣ್ಣವುಳ್ಳವರು.

ಇಬ್ಬರೂ ಶ್ರೇಷ್ಠವಂಶದಲ್ಲಿ ಅವತರಿಸಿದವರೇ. ಶ್ರೀವ್ಯಾಸರು ವಸಿಷ್ಠರ ವಂಶದಲ್ಲಿ ಅವತರಿಸಿದ್ದರೆ ಶ್ರೀಮಧ್ವಾಚಾರ್ಯರು ಮಧ್ಯಗೇಹಭಟ್ಟರ ವಂಶದಲ್ಲಿ ಅವತರಿಸಿದ್ದರು.

ಅವರು ಪರಸ್ಪರ ಆಲಂಗಿಸಿಕೊಂಡುದು ಶ್ರೀರಾಮನು ಶ್ರೀಹನುಮಂತನನ್ನು ಚೂಡಾಮಣಿ ಸ್ವೀಕರಿಸಿದ ಸಂದರ್ಭದಲ್ಲಿ ಆಲಂಗಿಸಿಕೊಂಡಂತೆ ಆಗಿತ್ತು. ಶ್ರೀಕೃಷ್ಣನು, ಜರಾಸಂಧನನ್ನು ಕೊಂದ ಭೀಮನನ್ನು ಆಲಂಗಿಸಿಕೊಂಡಂತೆ, ಶ್ರೀವೇದವ್ಯಾಸರು ಶ್ರೀಮಧ್ವಾಚಾರ್ಯರನ್ನು ಆಲಂಗಿಸಿಕೊಂಡಿದ್ದರು.

ಶ್ರೀವೇದವ್ಯಾಸರು ಶ್ರೀಮಧ್ವಾಚಾರ್ಯರನ್ನು ಯೋಗ್ಯ ರೀತಿಯಿಂದ ಸತ್ಕರಿಸಿ, ಆಸನವನ್ನು ನೀಡಿದರು. ಅನಂತರ ಕುಶಲಪ್ರಶ್ನೆ ಮಾಡಿ, ಅವರು ಬಂದ ಕಾರ್ಯವನ್ನು ಲೋಕಾರೂಢಿಯಾಗಿ ವಿಚಾರಿಸಿದರು.

ಶ್ರೀಮಧ್ವಾಚಾರ್ಯರು ತಾವು ವಿಶಾಲಬದರಿಗೆ ಬಂದ ಕಾರಣವನ್ನು ನಮ್ರತೆಯಿಂದ ವಿಜ್ಞಾಪಿಸಿಕೊಂಡರು. ಇದನ್ನು ಕೇಳಿ ವ್ಯಾಸರು ಪರಮ ಸುಪ್ರೀತರಾದರು.

"ನೀವು ಶ್ರೀವಾಯುದೇವರ ಅವತಾರಪುರುಷರು. ನಾವು ರಚಿಸಿರುವ ಬ್ರಹ್ಮಸೂತ್ರಗಳಿಗೆ ನೀವು ಸರಿಯಾದ ಭಾಷ್ಯವನ್ನು ರಚಿಸಬೇಕೆಂದು ನಮ್ಮ ಬಹುಕಾಲದ ಅಪೇಕ್ಷೆ. ಇದನ್ನು ನೀವು ಈಡೇರಿಸಿ, ವೈಷ್ಣವಧರ್ಮವನ್ನು ಉದ್ಧರಿಸಬೇಕು. ಈ ಕಾರ್ಯವು ನಿಮ್ಮಿಂದ ನಿರ್ವಿಘ್ನವಾಗಿ ನಡೆಯಲೆಂದು ನಾವು ಆಶೀರ್ವಾದ ಮಾಡುತ್ತೇವೆ. ಹೋಗಿಬನ್ನಿ" ಎಂದು ಹೇಳಿ

ಶ್ರೀಮಧ್ವಾಚಾರ್ಯರನ್ನು ಉಪಚರಿಸಿ, ಮತ್ತೆ ಸ್ವಸ್ಥಾನಕ್ಕೆ ಕಳುಹಿಸಿಕೊಟ್ಟರು.1

ವಿಷ್ಣು ಶಬ್ದದಲ್ಲಿ ವಕಾರ ಷಕಾರ,ಣಕಾರಗಳಿವೆ. ವರ್ಣಮಾಲೆಯಿಂದ ವಕಾರ ನಾಲ್ಕನೆಯದು. ಷಕಾರ ಆರನೆಯದು. ಣಕಾರ ಐದನೆಯದು. ಅಂದರೆ ವಿಷ್ಣು ಎಂಬುದು 465 ಎಂದಾಗುತ್ತದೆ. ವ್ಯಾಕರಣ ರೀತ್ಯಾ "ಅಂಕಾನಾಂ ವಾಮತೋ ಗತಿಃ" ಎಂಬೋಣಾದ್ದರಿಂದ ವಿಷ್ಣು ಶಬ್ದಕ್ಕೆ 564 ಎಂದು ಆಗುತ್ತದೆ. ಅಂದರೆ ದ್ವೈತ ಸಿದ್ಧಾಂತದ ರೀತ್ಯಾ ಬ್ರಹ್ಮಸೂತ್ರಗಳು 564 ಎಂದು ಸ್ಪಷ್ಟಪಡಿಸುತ್ತದೆ.

ಶ್ರೀಮಧ್ವಾಚಾರ್ಯರು ಬಿಡಲಾರದ ಮನಸ್ಸಿನಿಂದಲೇ ಶ್ರೀವೇದವ್ಯಾಸರನ್ನು ಬೀಳ್ಕೊಂಡು ಚಿಕ್ಕಬದರಿಗೆ ಹಿಂತಿರುಗಿದರು. ಸತ್ಯತೀರ್ಥರನ್ನು ಕೂಡಿ ಕೊಂಡರು.

## ಶೋಭನಭಟ್ಟರು ಆಚಾರ್ಯರ ಶಿಷ್ಯರಾದರು

ವೇದಗಳು, ಷಡ್ದರ್ಶನಗಳಲ್ಲಿ ಒಂದಾದ ಉತ್ತರ ಮೀಮಾಂಸೆ ಹೆಸರಿನಲ್ಲಿ ಆಚಾರ್ಯತ್ರಯರ ಸಿದ್ಧಾಂತಗಳಿಗೆ ಆಧಾರಭೂತವಾಗಿವೆ. ಈ ದೃಷ್ಟಿಯಿಂದ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತಸಿದ್ಧಾಂತಗಳು ವೇದಾಂತದರ್ಶನಗಳೆಂದು ಪ್ರಸಿದ್ಧವಾಗಿವೆ.

ಮತತ್ರಯದ ಆಚಾರ್ಯರೂ ಭಗವಂತನನ್ನು ಅರಿಯಲು ವೇದ ಪ್ರಾಮಾಣ್ಯವನ್ನು ಒಪ್ಪಿಕೊಳ್ಳುತ್ತಾ, ಅವನನ್ನು ವೇದಗಮ್ಯನೆಂದು ಹೇಳುತ್ತಾರೆ. ಆದರೆ ತಮ್ಮ ಸಿದ್ಧಾಂತದ ಪ್ರಮೇಯಗಳನ್ನು ಪ್ರತಿಪಾದಿಸುವುದರಲ್ಲಿ ಒಬ್ಬೊಬ್ಬರ ನಿಲುವು ಒಂದೊಂದು ಬಗೆಯದಾಗಿರುವುದರಿಂದಲೇ ಭಿನ್ನ

---

1) ಏಕವಿಂಶತಿ ಕುಭಾಷ್ಯದೂಷಕಂ ಬ್ರಹ್ಮಸೂತ್ರಗಣಭಾಷ್ಯಮದ್ಭುತಂ ।
ಅಷ್ಟದೂಷ್ಯಮತವೋದನಂತಧೀಭೂರ್ತಭಾವಿಭವದಾತ್ಮಭಿಃ ಕ್ವಚಿತ್ ॥
ಗಾಂಗಮಂಗಲತರಂಗಭಂಗದಪ್ರಾಂತಸುದಾ ಶ್ರೀಹರಿವೇಶ್ಮಕೃತ್ಸಮಃ ।
ಯದ್ಗತ್ಯೈಕತಮುವರ್ಣಲೇಖಕಃ ಸತ್ಯತೀರ್ಥ ಇಹ ಭಾಷ್ಯಮಾಲಿಖತ್ ॥
ಮ ॥ ವಿ ॥ ಸರ್ಗ-9-ಶ್ಲೋಕ-12-13

ಸಿದ್ಧಾಂತಗಳು ಪ್ರಚಾರಕ್ಕೆ ಬಂದವು.1

ಶ್ರೀಮಧ್ವಾಚಾರ್ಯರು ತಮ್ಮ ತತ್ತ್ವವಾದಕ್ಕೆ ವೇದ, ಉಪನಿಷತ್ತು, ಬಾದರಾಯಣರ ಬ್ರಹ್ಮಸೂತ್ರ, ಭಗವದ್ಗೀತೆಗಳಂತೆ ಇತರ ಶಾಸ್ತ್ರ, ಪುರಾಣ, ಇತಿಹಾಸಗಳಿಂದಲೂ ವಿಪುಲವಾದ ಪ್ರಮಾಣಗಳನ್ನೂ, ಮುಖ್ಯಾಧಾರವಾಗಿ–ಬ್ರಹ್ಮತರ್ಕವನ್ನೂ ಉದಹರಿಸಿದ್ದರು.

ಅವರು ಪ್ರತ್ಯಕ್ಷ, ಅನುಮಾನ ಮತ್ತು ವೇದ ಪ್ರಮಾಣಗಳಿಂದ

---

1) ದ್ವೈತಮತಕ್ಕೆ ಪ್ರಮಾಣಗ್ರಂಥ – ಬ್ರಹ್ಮತರ್ಕ.

ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ ।
ಉಕ್ತಂ ವಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್ ॥
ಪ್ರಮಾಣನ್ಯಾಯಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ ।
ಮಾನನ್ಯಾಯೈಶ್ಚ ತತ್ಸಿದ್ಧೈರ್ಮೀಮಾಂಸಾಮೇಯಶೋಧನಂ ॥
ಬ್ರಹ್ಮತರ್ಕಂ ಚ ಭಗವಾನ್ ಸ ಏವ ಕೃತವಾನ್ಪ್ರಭುಃ ।
ಪಂಚಾಶತ್ಕೋಟಿವಿಸ್ತಾರಾನ್ನಾರಾಯತನೌ ಕೃತಾತ್ ॥
ಉದ್ಧೃತ್ಯ ಪಂಚಸಾಹಸಂ ಕೃತವಾನ್ ಬಾದರಾಯಣಃ ॥

ಬ್ರಹ್ಮತರ್ಕವು ಶ್ರೀಮನ್ನಾರಾಯಣನಿಂದಲೇ ರಚಿತವಾಗಿರೋಣದರಿಂದ ಪ್ರಾಚೀನ ತಮವೂ ಪ್ರಮಾಣತಮವೂ ಆಗಿದೆ,

ಅದ್ವೈತಮತಕ್ಕೆ ಪ್ರಮಾಣಗ್ರಂಥ – ಗೌಡಪಾದಕಾರಿಕಾ. ಶಂಕರಾಚಾರ್ಯರ ಗುರಗಳು ಗೋವಿಂದಭಗವತ್ಪಾದರು. ಅವರ ಗುರುಗಳು ಗೌಡಪಾದರು. ಆದ್ದರಿಂದ ಗೌಡಪಾದಕಾರಿಕೆಗಳು ಬ್ರಹ್ಮತರ್ಕಕ್ಕಿಂತಲೂ ಅತ್ಯಂತ ಅರ್ವಾಚೀನವಾದುವು.

ವಿಶಿಷ್ಟಾದ್ವೈತಮತಕ್ಕೆ ಪ್ರಮಾಣಗ್ರಂಥ – ಬೋಧಾಯನ ಕೃತ ಸೂತ್ರವೃತ್ತಿ. ಧರ್ಮಸೂತ್ರಕಾರರಾದ ಬೋಧಾಯನರೇ ಬೇರೆ. ಈ ಸೂತ್ರವೃತ್ತಿಕಾರರಾದ ಬೋಧಾಯನರೇ ಬೇರೆ. ಇದೂ ಸಹ ಅರ್ವಾಚೀನ.

ಯಾಮುನಚಾರ್ಯರ ಗ್ರಂಥಗಳು ಮತ್ತು ಆಳ್ವಾರರ ದ್ರಾವಿಡಪ್ರಬಂಧಗಳು ಇವೆಲ್ಲವೂ ಸಹ ಅರ್ವಾಚೀನವಾದುವು.

(ಗ್ರಂಥಮಾಲಿಕಾ ಪ್ರಸರ : – ಪುಟ-133)

ದ್ವೈತಸಿದ್ಧಾಂತದ ಮುಖ್ಯ ಪ್ರಮೇಯಗಳನ್ನು ದೃಢಪಡಿಸಿ, ತಮ್ಮ ನಿಲುವನ್ನು ಯುಕ್ತಿಯುಕ್ತವಾಗಿಯೂ ತರ್ಕಬದ್ಧವಾಗಿಯೂ ಸಮರ್ಥಿಸಿಕೊಂಡಿದ್ದರು.

ಶ್ರೀಮಧ್ವಾಚಾರ್ಯರು ದ್ವೈತಸಿದ್ಧಾಂತದ ಪ್ರಮೇಯಗಳಾದ ಶ್ರೀಹರಿಯ ಸರ್ವೋತ್ತಮತ್ವ, ಜಗತ್ತುಸತ್ಯತ್ವ, ಬ್ರಹ್ಮಸತ್ಯತ್ವ, ಜೀವ ಪರಮಾತ್ಮರಲ್ಲಿ ಭೇದ, ಜೀವಿ ಜೀವಿಗಳಲ್ಲಿ ಭೇದ, ಸಕಲ ಚರಾಚರ ಸೃಷ್ಟಿಗೆ ಶ್ರೀಹರಿಯೇ ಒಡೆಯ, ಉಳಿದ ಎಲ್ಲ ದೇವತೆಗಳೂ ಅವನ ಆಜ್ಞಾಧಾರಕರು, ದೇವತೆಗಳಲ್ಲಿ ತಾರತಮ್ಯ, ಮುಕ್ತಿಯಲ್ಲೂ ಜೀವಬ್ರಹ್ಮರ ಸ್ವತಂತ್ರ ಅಸ್ತಿತ್ವ, ಭಗವಂತನ ಅನುಗ್ರಹವೇ ಮೋಕ್ಷಕ್ಕೆ ದಾರಿ — ಎಂದು ಹೇಳಿ ಸಚ್ಛಿದ್ಧಾಂತಕ್ಕೆ ವೇದಗಳನ್ನು ಪ್ರಮಾಣಗಳನ್ನಾಗಿ ಸ್ವೀಕರಿಸಿದ್ದರು.

ವೇದಗಳು ಅಪೌರುಷೇಯ, ಸ್ವತಃ ಪ್ರಾಮಾಣ್ಯವೆಂದೂ ಹಾಗೂ ಈ ಜ್ಞಾನರಾಶಿಯನ್ನು ಮಂತ್ರದ್ರಷ್ಟರಾದ ಋಷಿಗಳು ತಮ್ಮ ತಪಸ್ಸಿನಿಂದ ಸಾಕ್ಷಾತ್ಕರಿಸಿಕೊಂಡಿದ್ದರೆಂದೂ ಹಿಂದಿನಿಂದಲೂ ಬಂದಿರುವ ನಂಬಿಕೆ. ಇವು ಯಾವ ಒಬ್ಬ ವ್ಯಕ್ತಿಯಿಂದಲೂ ರಚಿತವಾದುವಲ್ಲ, ಇವು ಅಪೌರುಷೇಯ.

ಈ ವೇದಗಳು ಅಪೌರುಷೇಯುವಾದುದರಿಂದಲೇ ಭ್ರಮಾದಿ ದೋಷಗಳು ಹುಟ್ಟುವ ಕಾರಣವೇ ಇಲ್ಲ ; ಇವುಗಳು ಸತ್ಯವನ್ನಲ್ಲದೆ ದೋಷಗಳನ್ನು ಹುಟ್ಟಿಸುವ ಅಗತ್ಯವೇ ಇರುವುದಿಲ್ಲ. ಇವುಗಳು ಆಪ್ತ ವಾಕ್ಯಗಳಾಗಿರುವುದರಿಂದಲೂ ಪ್ರಮಾಣಗಳೆನಿಸುತ್ತವೆ.

ಇಂಥ ಸಾರ್ವಕಾಲಿಕ ಮೌಲ್ಯಗಳನ್ನು ಹೊಂದಿರುವ ವೇದಗಳನ್ನು ಒಪ್ಪದ ಜನರು ಹಿಂದಿನಿಂದಲೂ ಈ ದೇಶದಲ್ಲಿ ಇದ್ದರು — ಈಗಲೂ ಇದ್ದಾರೆ. ಮುಂದೆಯೂ ಇರುತ್ತಾರೆ. ಅವುಗಳ ಅಪೌರುಷೇಯತ್ವ, ಮತ್ತು ಆಪ್ತವಾಕ್ಯತ್ವಗಳನ್ನು ಪ್ರಮಾಣಗಳೆಂದು ಸ್ವೀಕರಿಸದ ನಾಸ್ತಿಕರನ್ನು ಚಾರ್ವಾಕರೆಂದೂ, ಲೋಕಾಯತರೆಂದು ಕರೆಯುತ್ತಾರೆ.

ಇವರು ಕಣ್ಣಿಗೆ ಕಾಣುವ ಜಗತ್ತನ್ನು ಮಾತ್ರ ಸತ್ಯವೆಂದು ತಿಳಿಯುತ್ತಾರೆ. ಅದರ ಅನುಭವಗಳನ್ನು ಕೊಡುವ ಪಂಚೇಂದ್ರಿಯಗಳನ್ನು ಮಾತ್ರವೇ ಪ್ರಮಾಣಗಳೆಂದು ಒಪ್ಪುತ್ತಾರೆ. ವಿಷಯ ಸುಖಗಳಿಂದ ಬರುವ ಆನಂದವೇ ಈ ಜೀವನದಲ್ಲಿ ಪಡೆಯಬೇಕಾಗಿರುವ ಅಂತಿಮ ಗುರಿ ಎಂದೂ ತಿಳಿಯುತ್ತಾರೆ. ಭಸ್ಮೀಭೂತವಾದ ದೇಹವು ಹಿಂದಕ್ಕೆ ಬರುವುದೇ ಇಲ್ಲ.

ಸಾಲ ಮಾಡಿ ತುಪ್ಪದ ಸೇವನೆಯಿಂದ ಸುಖಪಡು, ಪರಲೋಕವಿಲ್ಲವೇ ಇಲ್ಲ ಎಂಬ ನಿಲುವನ್ನು ಜೀವನದಲ್ಲಿ ತಳೆದಿದ್ದಾರೆ.

ಇಂಥ ಚಾರ್ವಾಕಮತವನ್ನು ಖಂಡಿಸಿ, ಷಡ್ದರ್ಶನಗಳು ಅಸ್ತಿತ್ವಕ್ಕೆ ಬಂದಿದ್ದವು.

ಇವೆಲ್ಲವೂ ಭಗವಂತನು ವೇದ ಪ್ರತಿಪಾದ್ಯನೆಂದು ಸಾರಲು ಹೊರಟವು. ಶ್ರೀಮಧ್ವಾಚಾರ್ಯರು ಮಾತ್ರ ವೇದಗಳಿಂದ ಮಾತ್ರವೇ ಭಗವಂತನನ್ನು ತಿಳಿಯಲು ಸಾಧ್ಯವೆಂದೂ. ಭಗವಂತನು ವೇದೈಕಗಮ್ಯನೆಂದೂ ಒತ್ತಿ ಹೇಳಿದರು. ಇವನನ್ನು "ಅಖಿಲಾಮ್ನಾಯೈಕವೇದ್ಯ" ನೆಂದೂ ಅವರು ತಿಳಿಸಿದರು.

ಇಂಥ ಭಗವಂತನ ಬಾಹ್ಯಸ್ವರೂಪವೆಂದು ತೋರುವ ಈ ವೇದ ಮಾತೆಯನ್ನು ತಪ್ಪಾಗಿ ತಿಳಿದು, ಅಶುದ್ಧ ಭಾಷ್ಯಗಳನ್ನು ರಚಿಸಿ, ಇತರ ಆಚಾರ್ಯರು ಜನಸಾಮಾನ್ಯರನ್ನು ತಪ್ಪುದಾರಿಗೆ ಎಳೆಯುತ್ತಿರುವರೆಂದೇ ಶ್ರೀಮಧ್ವಾಚಾರ್ಯರ ಭಾವನೆ.

ಹಿಂದೆ ಶ್ರೀವಾಯುದೇವರು ಭೀಮಾವತಾರವೆತ್ತಿದ್ದಾಗ, ಅವರ ಸಮ್ಮುಖದಲ್ಲಿಯೇ ದ್ರೌಪದಿದೇವಿಯ ಮಾನಭಂಗವನ್ನು ದುಶ್ಶಾಸನನೇ ಮೊದಲಾದ ದುಷ್ಟರು ಮಾಡಲೆಳಸಿದ್ದರು ; ಅಂಥವರು ಕಲಿಯುಗದಲ್ಲಿ ಅವತರಿಸಿ ವೇದಮಾತೆಯನ್ನು ಅಪಮಾನಗೊಳಿಸುತ್ತಿದ್ದರೆ ಆಶ್ಚರ್ಯವೇನು?

ಶ್ರೀಮಧ್ವಾಚಾರ್ಯರು ಈ ವೇದರಮಣಿ ಹಾಕಿಕೊಂಡಿರುವ ರತ್ನಹಾರ ರೂಪವಾದ ಬ್ರಹ್ಮಸೂತ್ರಗಳಿಗೆ ಯುಕ್ತವಾದ ಭಾಷ್ಯ ರಚಿಸಬೇಕೆಂದು ಸಂಕಲ್ಪಿಸಿದ್ದರು. ಇವರನ್ನು ಶ್ರೀವೇದವ್ಯಾಸ ದೇವರು ಆಶೀರ್ವದಿಸಿ, ಸಂತೋಷದಿಂದ ತಮ್ಮ ಅಂಗೀಕಾರವನ್ನೂ ನೀಡಿದ್ದರು.

ಹನುಮಂತನು ಸಮುದ್ರತೀರದಲ್ಲಿ ಅಂಗದಾದಿ ಕಪಿಗಳನ್ನು ಬಿಟ್ಟು, ಸೀತಾದೇವಿಯನ್ನು ಹುಡುಕುವ ಉದ್ದಿಶ್ಯದಿಂದ ಸಮುದ್ರವನ್ನು ಹಾರಿ ಬಂದು ತೀರಸ್ಥ ಕಪಿಗಳಿಗೆ ಆನಂದಉಂಟುಮಾಡಿದಂತೆಯೂ, ಶ್ರೀ ಕೃಷ್ಣನು ಯಾದವರನ್ನು ಜಾಂಬವಂತನ ಮಹಾದ್ವಾರದಲ್ಲಿಟ್ಟು, ಶ್ಯಮಂತಕ ಮಣಿಯ ಉದ್ದಿಶ್ಯವಾಗಿ ಗುಹೆಯಲ್ಲಿ ಪ್ರವೇಶಿಸಿ, ಜಾಂಬವಂತನನ್ನು ಯುದ್ಧದಲ್ಲಿ ಸೋಲಿಸಿ, ಅವನು ಅರ್ಪಿಸಿದ ಶ್ಯಮಂತಕಮಣಿಯನ್ನು ತಂದು ಗುಹಾದ್ವಾರದಲ್ಲಿ ಕಾದು, ಕೃಷ್ಣಮೃತನಾದನೆಂದು ಊರ್ಧ್ವಕ್ರಿಯಾದಿಗಳನ್ನು

ಮಾಡಿ ದ್ವಾರಕೆಗೆ ಹಿಂತಿರುಗಿದ್ದ ಯಾದವರಿಗೆ ಆನಂದಉಂಟುಮಾಡಿ ದಂತೆಯೂ, ಭೀಮಸೇನನು ಸೌಂಗಧಿಕಾಪುಷ್ಪವನ್ನು ತರುವ ಉದ್ದಿಶ್ಯದಿಂದ ಧರ್ಮರಾಜಾದಿಗಳನ್ನು ಬಿಟ್ಟುಹೋಗಿ ಸೌಗಂಧಿಕಾಪುಷ್ಪವನ್ನು ತೆಗೆದುಕೊಂಡು ಬಂದು ಧರ್ಮರಾಜಾದಿಗಳಿಗೆ ಆನಂದವನ್ನುಂಟುಮಾಡಿದಂತೆಯೂ, ಈ ಮಧ್ವಾ ಚಾರ್ಯರು ವಿಶಾಲಬದರಿಯ ನರನಾರಾಯಣಾಶ್ರಮದಿಂದ ಹಿಂತಿರುಗಿ ಬಂದು ಚಿಕ್ಕಬದರಿಕಾಶ್ರಮದಲ್ಲಿ ಅನಂತಮಠದಲ್ಲಿದ್ದ ಸತ್ಯತೀರ್ಥರು ಮತ್ತು ಇತರ ಶಿಷ್ಯಜನರಿಗೆ ದರ್ಶನವನ್ನು ಕೊಟ್ಟು ಸಂತೋಷಪಡಿಸಿದರು.

ಶ್ರೀಅನಂತಮಠದಲ್ಲಿ ಶ್ರೀಮಧ್ವಾಚಾರ್ಯರನ್ನು ಸ್ವಾಗತಿಸಿದ ಅಗ್ನಿಶರ್ಮ ಮುಂತಾದ ಬ್ರಾಹ್ಮಣರು ತಮ್ಮ ಮನೆಗಳಲ್ಲಿ ಮಾಡಿದ್ದ ಭಕ್ಷ ಭೋಜ್ಯಗಳನ್ನು ಇವರೆಲ್ಲರಿಗೂ ಇವರ ಪರಿವಾರಕ್ಕೂ ಆಗುವಷ್ಟು ತಂದು ಆಚಾರ್ಯರಿಗೆ ಅರ್ಪಿಸಿದರು.

ಅದೇನು ಆಶ್ಚರ್ಯ, ನೂರು ಜನರಿಗೆ ಆಗುವಷ್ಟು ಇದ್ದ ಆಹಾರವನ್ನು ಶ್ರೀಮಧ್ವಾಚಾರ್ಯರೊಬ್ಬರೇ ಭುಂಜಿಸಿ, ತಾವು ಹನುಮ ಭೀಮರ ಅವ ತಾರವೆಂದು ಮತ್ತೊಮ್ಮೆ ಮನವರಿಕೆ ಮಾಡಿಕೊಟ್ಟರು.

ಆಚಾರ್ಯರ ಜಾಠರಾಗ್ನಿಯು ಈ ಅತ್ಯಧಿಕ ಆಹಾರವನ್ನು ಒಂದು ನಿಮಿಷ ಕಾಲದಲ್ಲಿಯೇ ಪಚನಗೊಳಿಸಿತು.

ಈ ಅತ್ಯದ್ಭುತ ಕಾರ್ಯವನ್ನು ನೋಡಿ ಅನಂತ ಮಠದಲ್ಲಿದ್ದ ಸಜ್ಜನರು ನಿಬ್ಬೆರಗಾಗಿ, ಶ್ರೀಮಧ್ವಾಚಾರ್ಯರನ್ನು ಸಾಕ್ಷಾತ್ ಭೀಮಸೇನ ದೇವರ ಅವತಾರವೆಂದೇ ಕೊಂಡಾಡಿದರು.

ಅಲ್ಲಿದ್ದಾಗ ಶ್ರೀಬಾದರಾಯಣರ ಆದೇಶದಂತೆ ಶ್ರೀಮಧ್ವಾಚಾರ್ಯರು ಬ್ರಹ್ಮಸೂತ್ರಗಳಿಗೆ ದ್ವೈತಪರವಾದ ವ್ಯಾಖ್ಯಾನವನ್ನು ರಚಿಸತೊಡಗಿದರು, ಅದು ಕೃತಿರೂಪ ತಳೆಯುತ್ತಿದ್ದಂತೆ, ಭಗವದ್ಭಕ್ತರ ಉಪಯೋಗಕ್ಕಾಗಿ ಆಚಾ ರ್ಯರು ಪ್ರತಿದಿನ ಅದನ್ನು ಕುರಿತು ಪ್ರವಚನ ನಡೆಸುತ್ತಿದ್ದರು.

ಈ ಮೊದಲು ಬ್ರಹ್ಮಸೂತ್ರಗಳಿಗೆ ಅನೇಕ ಆಚಾರ್ಯರು, ಭಾಷ್ಯ ಗಳನ್ನು ರಚಿಸಿದ್ದರು. ಅವರಲ್ಲಿ ಭಾರತೀ ವಿಜಯ, ಸಚ್ಚಿದಾನಂದ, ಬ್ರಹ್ಮ ಘೋಷ, ಶತಾನಂದ, ಉದ್ವರ್ತ. ವಿಜಯ, ರುದ್ರಭಟ್ಟ, ವಾಮನ,

ಯಾದವಪ್ರಕಾಶ, ರಾಮಾನುಜ, ಭರ್ತೃಪ್ರಪಂಚ, ದ್ರವಿಡ, ಬ್ರಹ್ಮದತ್ತ, ಭಾಸ್ಕರ, ಪಿಶಾಚ, ವೃತ್ತಿಕಾರಕ, ವಿಜಯಭಟ್ಟ, ವಿಷ್ಣುಕ್ರಾಂತ, ವಾದೀಂದ್ರ, ಮಾಧವದಾಸ, ಶಂಕರಾಚಾರ್ಯರೇ ಮೊದಲಾದ ಇಪ್ಪತ್ತೊಂದು ಜನರು ರಚಿಸಿದ್ದ ಕುಭಾಷ್ಯಗಳು ಮುಖ್ಯವಾಗಿದ್ದವು.

ವೇದವ್ಯಾಸರಿಗೆ ಅತಿಪ್ರಿಯವಾದಂಥ, ದೋಷರಹಿತವಾದ ಜ್ಞಾನಾದಿ ಸದ್ಗುಣಗಳುಳ್ಳ, ಸಂಪೂರ್ಣವಾದ ದುಃಖಾದಿ ದೋಷಗಳಿಂದ ರಹಿತವಾದ ನಾರಾಯಣನನ್ನು ಪ್ರತಿಪಾದಿಸುವಂಥ, ವಿಷ್ಣುವಿನಲ್ಲಿ ಭಕ್ತಿಜ್ಞಾನಗಳನ್ನು ಕೊಡತಕ್ಕಂಥ ನಾಶರಹಿತವಾದ ಸುಖವನ್ನು ಕೊಡುವಂಥ, ತಮ್ಮಿಂದ ರಚಿತವಾದ ಉತ್ತಮವಾದ ಸೂತ್ರಾರ್ಥಗಳನ್ನು ಕುರಿತು ಪುನಃ ಅನುವಾದ ಮಾಡತಕ್ಕ ವಾಕ್ಯಾರ್ಥದ್ವಾದರೂ ಅರ್ಥವನ್ನು ಶ್ರುತಿಸ್ಮೃತಿವಚನಗಳಿಂದ ಚನ್ನಾಗಿ ಪ್ರಕಟಮಾಡುವಂಥ ಅತಿಸಂಪನ್ನವಾದ ಯುಕ್ತಿಗಳುಳ್ಳದೂ, ಮಂದಬುದ್ಧಿಗಳ ಸಮೂಹವನ್ನು ಚನ್ನಾಗಿ ಬೋಧಿಸುವಂಥ ವಿದ್ವಾಂಸರಿಂದಲೂ ಅರಿಯಲಶಕ್ಯವಾದ ವಚನಗಳುಳ್ಳ, ಗಂಭೀರವಾದ ಅಭಿಪ್ರಾಯಗಳುಳ್ಳ ಮೃದು ಶಬ್ದಗಳಿಂದ ಕೂಡಿದಂಥ, ಸಾಧುಜನರಿಗೆ ಸುಖಕರವೂ, ಅಯೋಗ್ಯರಿಗೆ ಭಯಂಕರವೂ ಆದ, ಅಪಶಬ್ದಗಳಿಂದ ನಿರಸ್ತವೂ, ಪ್ರಯೋಜಕವೂ ಆದ ವಚನಗಳುಳ್ಳ, ಸಂಪೂರ್ಣವಾದ ಭಾಷ್ಯಲಕ್ಷಣಗಳಿಂದ ಕೂಡಿದ, ದೇವತೆಗಳಿಂದಲೂ ಮಾನಿತವಾದ, ಇಪ್ಪತ್ತೊಂದು ಕುಭಾಷ್ಯಗಳನ್ನು ಖಂಡಿಸುವ, ಯಾರಿಂದಲೂ ದೂಷಿಸಲಶಕ್ಯವಾದ ಬ್ರಹ್ಮಸೂತ್ರ ವ್ಯಾಖ್ಯಾನವನ್ನು ಶ್ರೀಮಧ್ವಾಚಾರ್ಯರು ರಚಿಸಿದರು.

ಇಂಥ ಭಾಷ್ಯವನ್ನು ಶ್ರೀಮಧ್ವಾಚಾರ್ಯರು ತಮ್ಮ ಪ್ರಿಯ ಶಿಷ್ಯರಾದ ಸತ್ಯತೀರ್ಥರಿಂದಲೇ ಬರೆಸುತ್ತಿದ್ದರು.

ಹೀಗೆ ಶಾಸ್ತ್ರಾರ್ಥ ವಿಚಾರಮಾಡುತ್ತಾ, ಬ್ರಹ್ಮಸೂತ್ರಗಳ ವ್ಯಾಖ್ಯಾನವನ್ನು ಪ್ರವಚನ ಮಾಡುತ್ತಾ, ಬದರಿಯ ಅನಂತಮಠವನ್ನು ಬಿಟ್ಟು ಶ್ರೀಮಧ್ವಾಚಾರ್ಯರು ದಕ್ಷಿಣದೇಶಕ್ಕೆ ಪ್ರಯಾಣ ಮಾಡಿದರು.

ಅವರು ತಮ್ಮ ಶಿಷ್ಯಸಮೂಹದೊಡನೆ ಪ್ರಯಾಣ ಮಾಡಿ ಪವಿತ್ರವಾದ ಗೋದಾವರೀನದಿಯ ದಂಡೆಯಲ್ಲಿ ಇದ್ದ ರಾಜಮಹೇಂದ್ರ ಕ್ಷೇತ್ರಕ್ಕೆ

ಆಗಮಿಸಿದರು. ಅಲ್ಲಿನ ಒಂದು ದೇವಾಲಯದಲ್ಲಿ ಬೀಡು ಬಿಟ್ಟರು.[1]

ಆ ಊರಿನಲ್ಲಿದ್ದ ಪಂಡಿತರು ಕೀರ್ತಿ ಕಾಮರು. ಶ್ರೀಮಧ್ವಾಚಾರ್ಯರನ್ನು ವಾದದಲ್ಲಿ - ಸೋಲಿಸಿದರೆ, ಅವರಿಂದ ಸನ್ಮಾನಿತರಾಗಬಹುದೆಂದು ಯೋಚಿಸಿ, ಅವರು ಶ್ರೀಮದಾಚಾರ್ಯರೊಡನೆ ವಾದಕ್ಕೆ ಬಂದರು.

ಹದಿನೆಂಟು ಶಾಖೆಶ್ರುತಿಗಳನ್ನು ಕರತಲಾಮಲಕವಾಗಿ ಬಲ್ಲ ವಿದ್ವಾಂಸರು ವಾಕ್ಯಾರ್ಥದ ಸಮರ್ಥನೆಗಾಗಿ ಅನೇಕ ಶ್ರುತಿ ವಾಕ್ಯಗಳನ್ನು ಉದಾಹರಿಸಿದರು.

ಆಚಾರ್ಯರು ಅವುಗಳನ್ನೆಲ್ಲಾ ಕೇಳಿ ಭಾಟ್ಟ, ಪ್ರಭಾಕರ, ವೈಶೇಷಿಕ, ನೈಯ್ಯಾಯಿಕ, ಬೌದ್ಧ, ಚಾರ್ವಾಕ ಮುಂತಾದ ಆರು ಸಿದ್ಧಾಂತಗಳನ್ನು ಖಂಡಿಸಿ, ಅವರೆಲ್ಲರನ್ನು ಲೀಲಾಜಾಲವಾಗಿ ಪರಾಜಯಗೊಳಿಸಿದರು.

ಈ ಘನ ಪಂಡಿತ ಸಭೆಯಲ್ಲಿದ್ದ ಶೋಭನಭಟ್ಟರೆಂಬ ಒಬ್ಬ ಮಹಾವಿದ್ವಾಂಸರು ಈ ಎಲ್ಲ ವಾದ ವಿವಾದಗಳನ್ನು ಕೇಳುತ್ತಿದ್ದರು. ಅವರಿಗೆ ಶ್ರೀಮಧ್ವಾಚಾರ್ಯರ ವಾದ ಸರಣಿ ಬಹುವಾಗಿ ಹಿಡಿಸಿತು. ಅವರೂ ಸಹ ವಾದದಲ್ಲಿ ಪರಾಜಿತರಾದರು. ಅನಂತರ ಅವರು ಆಚಾರ್ಯರಿಗೆ ಶಿಷ್ಯರಾಗಲು ಬಯಸಿದರು.

ಶೋಭವಭಟ್ಟರು ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ. ಅವರು ಆ ರಾಜ್ಯಕ್ಕೆ ಪ್ರಧಾನ ಮಂತ್ರಿಯೂ ಆಗಿದ್ದರು. ನ್ಯಾಯಶಾಸ್ತ್ರದಲ್ಲಿ ಪ್ರಚಂಡ ಪಂಡಿತರಾಗಿದ್ದರು. ವೇದ, ಭಾರತ, ಪುರಾಣಗಳಲ್ಲಿ ಪ್ರತಿಪಾದಿಸಿರುವ ಆಚಾರ ನಿಯಮ

1) ತತ್ರ ದೇವಮಭಿವಂದ್ಯ ಯಾತವಾನ್
ಸ್ವಾಮಿನೋ ವಚನಗೌರವಾದ್ಧ್ರುತಂ ।
ಸಾನುಗೋ ವಿವಿಧಭೂರಿತೀರ್ಥಗೋ-
ದಾವರೀತಟಾಮಗಾದಲೇಶಧೀಃ ॥
ಪ್ರಾಜ್ಞವಿತ್ತಮಯಮಾಪ್ಯಮಾಗತ್ಯೈಃ
ಪಂಡಿತೈರ್ದ್ವಿನವಶಾಖಿಬಿಃ ಶ್ರುತೀಃ ।
ಪ್ರಸ್ತುತಾ ಅಭಿದಧೌ ಪರೀಕ್ಷಕೈಃ
ಷಟ್ ಚ ತತ್ರ ಸಮಯಾನಖಂಡಯತ್ ॥

ಮ ॥ ವಿ ॥ ಸರ್ಗ 9-ಶ್ಲೋಕ 14-15

ಗಳನ್ನು ಶ್ರದ್ಧೆಯಿಂದ ಆಚರಿಸುತ್ತಾ ಬಂದಿದ್ದರು. ಅವರು ಆಚಾರ್ಯರ ಬಾಯಿಂದ ಬ್ರಹ್ಮಸೂತ್ರಗಳ ವ್ಯಾಖ್ಯಾನ ಕೇಳಿದ ಮೇಲೆ, ಇಂಥ ನಿರ್ದುಷ್ಟ ಹಾಗೂ ಜ್ಞಾನಾನಂದದಾಯಕರ, ಅಮೃತಸದೃಶ, ಭಾಷ್ಯವನ್ನು ಕೇಳಿದ ಮೇಲೆ ಬೇರೆ ಯಾವ ಶಾಸ್ತ್ರವೂ ತಮಗೆ ರುಚಿಸುವುದಿಲ್ಲವೆಂದು ನಿಶ್ಚಯಿಸಿ ಆಚಾರ್ಯರಿಗೆ ಶರಣು ಬಂದು ನಮ್ರತೆಯಿಂದ ತಮ್ಮನ್ನು ಶಿಷ್ಯನನ್ನಾಗಿ ಪರಿಗ್ರಹಿಸಲು ಪ್ರಾರ್ಥಿಸಿಕೊಂಡರು.

ಈ ಘಟನೆಯನ್ನು ನೋಡಿ ಆ ಊರಿನ ಇತರ ಅದ್ವೈತ ಸಿದ್ಧಾಂತದ ವಿದ್ವಾಂಸರಿಗೆ ಸರ್ವೇದಾಶ್ಚರ್ಯವಾಯಿತು. ಜಿಗುಪ್ಸೆಯೂ ಆಯಿತು.

"ಶೋಭನಭಟ್ಟರೇ, ಇದೇನು ನೀವು ಮಾಡಿದ ನಿರ್ಧಾರ? ಎಲ್ಲಿ ಯಾದರೂ ಉಂಟೆ! ನೀವು ಇಷ್ಟು ಉದ್ದಾಮ ಪಂಡಿತರಾಗಿಯೂ, ಸಮಸ್ತ ಶಾಸ್ತ್ರಕೋವಿದರಾಗಿದ್ದುಕೊಂಡು, ಒಬ್ಬ ಆಗಂತುಕ ಸಂನ್ಯಾಸಿಗೆ, ಸಾಷ್ಟಾಂಗ ಎರಗಿ ಅವರ ಶಿಷ್ಯರಾಗುವುದೆಂದರೇನು ?"— ಎಂದು ಹಾಸ್ಯಮಾಡಿದರು.

" ವಿಪ್ರೋತ್ತಮರೇ, ನಾನು ಒಂದು ಕಥೆ ಹೇಳುತ್ತೇನೆ ಕೇಳಿ.

"ಒಂದು ಊರಿನಲ್ಲಿ ಒಬ್ಬ ಸುಣ್ಣದ ವ್ಯಾಪಾರಿ ಇದ್ದನು. ಅವನು ಸಮುದ್ರದ ಕಪ್ಪೆಚಿಪ್ಪುಗಳನ್ನು ಸಂಗ್ರಹಿಸಿ ಅವುಗಳನ್ನು ಸುಟ್ಟು ಸುಣ್ಣವನ್ನು ತಯಾರಿಸಿ ಮಾರುತ್ತಿದ್ದನು. ಹೀಗಿರುವಲ್ಲಿ ಒಂದು ದಿನ ಅವನಿಗೆ ಅಮೂಲ್ಯವಾದ ಒಂದು ಬಲಮುರಿ ಶಂಖವು ಕಪ್ಪೆಚಿಪ್ಪುಗಳ ಸಂಗಡ ಸಿಕ್ಕಿತು. ಆದರ ಮಹಿಮೆಯನ್ನು ತಿಳಿಯದೆ ಅವನು ಅದನ್ನು ಇತರ ಸಾಮಾನ್ಯ ಶಂಖಗಳನ್ನು ಸುಡುವಂತೆ ಸುಡಲು ಬೆಂಕಿಗೆ ಹಾಕಿದನು. ಉಳಿದ ಶಂಖಗಳು ಸುಟ್ಟು ಸುಣ್ಣವಾದರೂ ಈ ಬಲಮುರಿ ಶಂಖವು ಮಾತ್ರ ಹಾಗೆಯೇ ಇತ್ತು. ಬೆಂದು ಸುಣ್ಣವಾಗಲಿಲ್ಲ. ಅದನ್ನು ನೋಡಿ ಆ ಸುಣ್ಣ ಮಾರುವವನು, "ಛೆ! ಇದೆಂಥ ಕೆಟ್ಟ ಶಂಖ" ಎಂದು ಹೇಳಿ ಅದನ್ನು ಬೀದಿಯಲ್ಲಿ ಬಿಸಾಡಿದನು. ಇದರ ಯೋಗ್ಯತೆಯನ್ನು ತಿಳಿದಿದ್ದ ಒಬ್ಬ ದಾರಿಹೋಕನಾದ ಬ್ರಾಹ್ಮಣನು ಅದನ್ನು ತೆಗೆದುಕೊಂಡು ಆ ದೇಶದ ದೊರೆಗೆ ಯೋಗ್ಯ ಬೆಲೆಗೆ ಮಾರಿ ಶ್ರೀಮಂತನಾದನು. ನನ್ನ ವಿಷಯವೂ ಹೀಗೆಯೇ" ಎಂದರು.

"ನೀವು ಘನವಿದ್ವಾಂಸರು, ಈ ಹೋಲಿಕೆ ನಿಮಗೆ ಅನ್ವಯಿಸುವುದಿಲ್ಲ..."

"ಈ ಪ್ರಪಂಚದಲ್ಲಿ ಅಮೂಲ್ಯ ವಸ್ತುವನ್ನು ಪಡೆಯುವುದು ಯೋಗ್ಯತೆ

ಇಲ್ಲದವನಿಗೆ ಸಾಧ್ಯವೆ ಇಲ್ಲ. ಸಂಪತ್ತನ್ನು ಕೊಡುವ ಅದೃಷ್ಟವು ಮನುಷ್ಯನ ಯೋಗ್ಯತೆಯನ್ನು ಅನುಸರಿಸಿಯೇ ಸಂಪತ್ತನ್ನು ಕೊಡುತ್ತದೆ.

"ಆದರಂತೆ ಬಲಮುರಿಯ ಶಂಖವು ಸಣ್ಣದವನಿಗೆ ತುಚ್ಛ ವಸ್ತುವಾಯಿತು. ಆದರೆ ಆದರ ಯೋಗ್ಯತೆಯನ್ನು ತಿಳಿದಿದ್ದ ಬ್ರಾಹ್ಮಣನು ಅದನ್ನು ಅಪಾರ ಹಣಕ್ಕೆ ಮಾರಿ ಶ್ರೀಮಂತನಾದನು. ನಾವು ಭಕ್ತಿ ಜ್ಞಾನ ವೈರಾಗ್ಯಗಳಿಂದ ನಿಮ್ಮ ಕಣ್ಣಿನಲ್ಲಿ ಒಬ್ಬ ಶ್ರೇಷ್ಠ ಮನುಷ್ಯನಿರಬಹುದು. ಆದರೆ ಶ್ರೀಪೂರ್ಣಪ್ರಜ್ಞರ ತತ್ತ್ವವಾದವನ್ನು ಕೇಳಿದ ಮೇಲೆ ನನ್ನ ಪಾಂಡಿತ್ಯ ಪ್ರಯೋಜನವಿಲ್ಲವೆಂದು ದೃಢವಾಯಿತು. ಆದರೆ ನಾನು ಮೂರ್ಖನಂತೆ ಬಲ ಮುರಿ ಶಂಖ ದೊರೆತಾಗ ಆದನ್ನು ತುಚ್ಛವಾದ ವಸ್ತು ಎಂದು ಬೀದಿಗೆ ಎಸೆಯಲಿಲ್ಲ. ಅದರ ಲಾಭ ಪಡೆದೆನಲ್ಲಾ ಎಂಬ ಸಂತೋಷ ನನ್ನದಾಗಿದೆ"— ಎಂದು ಹೇಳಿ ಶ್ರೀಮಧ್ವಾಚಾರ್ಯರನ್ನು ತಮ್ಮ ಭಾಗ್ಯದದೇವತೆ ಎಂದು ಸಾಷ್ಟಾಂಗ ನಮಸ್ಕರಿಸಿ ವಿನಮ್ರವಾಗಿ ಸಂನ್ಯಾಸ ನೀಡಲು ಪ್ರಾರ್ಥಿಸಿದರು.,

ಶ್ರೀಮಧ್ವಾಚಾರ್ಯರು ಶೋಭನಭಟ್ಟರಿಗೆ ಅವರ ಪ್ರಾರ್ಥನೆಯಂತೆ ಸಂನ್ಯಾಸಾಶ್ರಮವನ್ನು ಅನುಗ್ರಹಿಸಿ ಅವರನ್ನು ಪದ್ಮನಾಭತೀರ್ಥರೆಂಬ[1] ಯತಿ ನಾಮದಿಂದ ಕರೆದರು.

ಶ್ರೀಪದ್ಮನಾಭತೀರ್ಥರು ವಿದ್ವಾಂಸರ ಸಮೂಹದಲ್ಲಿ ತಿಮಿಂಗಿಲದಂತೆ ಇದ್ದರು ವಾದಿಗಳಲ್ಲಿ ಸಿಂಹದಂತೆ ಇದ್ದರು. ಮುಂದೆ ಇವರು ಶ್ರೀಮಧ್ವಾ

---

1) ಸಾನುವೀತಿರಥನೀತಿಮಾನಯಂ
ಭಾಷ್ಯಸದ್ಗುಣಗಣಾನವರ್ಣಯತ್ ।
ಶೋಭನಾಯ ಗುರವೇ ಸ್ವಭಾವತಃ
ಕಾಲತಃ ಕುಮತಲೀನಬುದ್ಧಯೇ ॥
ಅನವಂದ ಸಹ ಮಧ್ವಶಾಸ್ತ್ರಮಾ-
ಕರ್ಣಯನ್ ಕುಸುಮಯಾಗ್ರಹೀ ಪುರಾ ।
ಮೋಹಪೀತಲವಣೋದಕೋ ಮುಹುಃ
ಪ್ರಾಕ್ಪಿಪಾಸುರಮೃತಂ ಪಿಬನ್ನಿವ ॥

ಮ ॥ ವಿ ॥ ಸರ್ಗ 9–ಶ್ಲೋಕ 36–37

ಚಾರ್ಯರು ರಚಿಸಿದ "ಅನುವ್ಯಾಖ್ಯಾನ" ಗ್ರಂಥಕ್ಕೆ "ಸಂನ್ಯಾಯ ರತ್ನಾವಲಿ" ಎಂಬ ಟೀಕೆಯನ್ನು ರಚಿಸಿದರು. ಬ್ರಹ್ಮಸೂತ್ರ ಭಾಷ್ಯಕ್ಕೆ "ಸತ್ತರ್ಕದೀಪಾವಲಿ" ಎಂಬ ಟೀಕೆಯನ್ನು ರಚಿಸಿದರು.

ಅವರು ಶ್ರೀಮಧ್ವಾಚಾರ್ಯರ ಆದೇಶದಂತೆ ವೇದಗಳ ಸಾರವನ್ನು ಜನತೆಗೆ ದ್ವೈತಪರವಾಗಿ ಬೋಧಿಸಿದರು; ತರ್ಕ, ವ್ಯಾಕರಣ ಮೀಮಾಂಸ ಮೊದಲಾದ ಶಾಸ್ತ್ರಗಳಲ್ಲಿ ಅತೀವ ಪರಿಣತರಾಗಿದ್ದು ಶ್ರೀಮಧ್ವಾಚಾರ್ಯ ಪ್ರತಿಷ್ಠಾಪಿತ ತತ್ತ್ವವಾದವನ್ನು ಎಲ್ಲೆಡೆ ಪ್ರಸಾರ ಮಾಡಿದರು. ಮುಂದೆ ಶ್ರೀಪದ್ಮನಾಭತೀರ್ಥರು ಆಚಾರ್ಯರ ದಶಪ್ರಕರಣಗಳಿಗೂ ಗೀತಾಭಾಷ್ಯ, ಮತ್ತು ಗೀತಾತಾತ್ಪರ್ಯ ಮೊದಲಾದ ಗ್ರಂಥಗಳಿಗೆ ಟೀಕೆಗಳನ್ನು ರಚಿಸಿ ಮುಂದಿನ ವ್ಯಾಖ್ಯಾನಕಾರರಿಗೆ ಮಾರ್ಗದರ್ಶಕರಾದರು. ಇವುಗಳಿಗೆ ಪ್ರಾಚೀನ ಟೀಕೆಗಳೆಂದು ಪ್ರತೀತಿ.

ಶ್ರೀಪದ್ಮನಾಭತೀರ್ಥರು (ಕ್ರಿ. ಶ. 1317–1324) ತಮ್ಮ ಗುರುಗಳಾದ ಶ್ರೀಮದಾಚಾರ್ಯರ ಸೇವೆಯನ್ನು ದೀರ್ಘಕಾಲ ಶ್ರದ್ಧಾ ಭಕ್ತಿಗಳಿಂದ ಮಾಡಿ ಕನ್ನಡನಾಡಿನ ಆನೇಗೊಂದಿ ಬಳಿಯಲ್ಲಿರುವ ನವವೃಂದಾವನದ ಪ್ರದೇಶದಲ್ಲಿ–ತುಂಗಾಭದ್ರಾ ನದಿಯ ನಡುಗಡ್ಡೆಯಲ್ಲಿ ವೃಂದಾವನಸ್ಥರಾದರು.

ಟೀಕಾಚಾರ್ಯರೆಂದು ಪ್ರಸಿದ್ಧರಾದ ಶ್ರೀಜಯತೀರ್ಥರು ಶ್ರೀಪದ್ಮನಾಭತೀರ್ಥರನ್ನು ಕುರಿತು ತಮ್ಮ ಗೀತಾತಾತ್ಪರ್ಯ ನಿರ್ಣಯ ಟೀಕಾ ನ್ಯಾಯದೀಪಿಕಾ ಗ್ರಂಥದಲ್ಲಿ ಹೀಗೆ ಸ್ತುತಿಸಿದ್ದಾರೆ.

"ಪದ್ಮನಾಭ ತೀರ್ಥರೆಂಬ ಸೂರ್ಯನಕಿರಣ ಸಮೂಹವು—ವಾಕ್ಯಗಳು-ನನಗೆ ಜ್ಞಾನ ದೃಷ್ಟಿಯನ್ನು ನೀಡಲಿ. ಅವರನ್ನು ಆಶ್ರಯಿಸದೆ ತತ್ತ್ವಾನ್ವೇಷಣೆಯ ಹಾದಿಯಲ್ಲಿ ಹೋಗುವುದು ಸಾಧ್ಯವೇ ಇಲ್ಲ."

ಪದ್ಮನಾಭತೀರ್ಥರು ಶ್ರೀಮಧ್ವಮತದ ಪ್ರಸಾರಕ್ಕಾಗಿ ಹುಟ್ಟಿಕೊಂಡಿರುವ ಸಮಸ್ತ ವೈಷ್ಣವ ಮಠಗಳಿಗೂ ಗುರುಗಳು. ಅವರ ವೃಂದಾವನವು ಸಮಸ್ತ ಮಾಧ್ವರಿಗೂ ಸೇರಿದ್ದು. ಅವರು ಮಾಡಿದ ಕಾರ್ಯವನ್ನು ಮಾಧ್ವ ಸಮಾಜವು ಇಂದಿಗೂ ಕೃತಜ್ಞತೆಯಿಂದ ಈ ರೀತಿ ಸ್ಮರಿಸುತ್ತಿದೆ.

ಪೂರ್ಣಪ್ರಜ್ಞಕೃತಂ ಭಾಷ್ಯಮಾದೌ ತದ್ಭಾವಪೂರ್ವಕಮ್ ।
ಯೋ ವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ॥

ಶ್ರೀಮಧ್ವಸಂಸೇವನಲಬ್ಧ ಶುದ್ಧ-
ವಿದ್ಯಾಸುದಾಂಭೋನಿಧಯೋsಮಲಾ ಯೇ ।
ಕೃಪಾಲವಃ ಪಂಕಜನಾಭತೀರ್ಥಾಃ
ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥

## ಅಚ್ಯುತಪ್ರೇಕ್ಷರ ದ್ವೈತದೀಕ್ಷೆ

ಶಂಕರಾಚಾರ್ಯರು ಬೋಧಿಸಿದ್ದ ಅದ್ವೈತ ಸಿದ್ಧಾಂತವು ಜೈನ, ಬೌದ್ಧ, ಚಾರ್ವಾಕ ಸಿದ್ಧಾಂತಗಳಿಗೆ ಕೊಡಲಿಪೆಟ್ಟು ಕೊಟ್ಟು ಜ್ಞಾನಪಿಪಾಸುಗಳಾದ ಸಜ್ಜನರ ಪಾಲಿಗೆ ಇದ್ದ ಕಂಟಕಮಯವಾದ ಕುಮಾರ್ಗವನ್ನು ನಾಶಪಡಿಸಿ, ಮೋಕ್ಷ ಮಾರ್ಗಕ್ಕೆ ಬೇಕಾದ ಭಕ್ತಿ, ಜ್ಞಾನ ವೈರಾಗ್ಯಗಳ ರಾಜಮಾರ್ಗವನ್ನು ನಿರ್ಮಿಸಿತು. ಆದರೆ ಅದ್ವೈತ ಸಿದ್ಧಾಂತದಲ್ಲಿ ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯವೆಂಬ ಅದ್ವೈತ ಭಾವವನ್ನು ಮುಖ್ಯವಾಗಿ ಒತ್ತಿಹೇಳಿದ್ದರಿಂದ ಇದನ್ನು ನಂಬಿದವರಿಗೆ ಸಂಪೂರ್ಣ ಜ್ಞಾನ ಹುಟ್ಟದೆ ಅದ್ವೈತಮತವನ್ನು ನಂಬಿದವರಿಗೆ, ಇಹ ಸಂಸಾರದಿಂದ ಮುಕ್ತರಾಗುವ ದಾರಿ ತಪ್ಪಿತ್ತು.

ಶಂಕರಾಚಾರ್ಯರು ಬೃಹದಾರಣ್ಯಕ, ಛಾಂದೋಗ್ಯ, ಮಾಂಡೂಕ್ಯ, ಉಪನಿಷತ್ತುಗಳ ವಾಕ್ಯಗಳ ಆಧಾರದಿಂದ "ನಾನು ಬ್ರಹ್ಮ. ನೀನೂ ಸಹ ಬ್ರಹ್ಮ. ಬ್ರಹ್ಮವಲ್ಲದ ವಸ್ತು ಈ ಜಗತ್ತಿನಲ್ಲಿಯೇ ಇಲ್ಲ. ಜಗತ್ತಿನಲ್ಲಿ ಕಾಣುವ ದ್ವೈತ ಭಾವವು ಕೇವಲ ಅಜ್ಞಾನಜನ್ಯವಾದ ಮಾಯೆಯಿಂದ ಹುಟ್ಟಿದ್ದು. ನಿಶ್ಚಿತ ತತ್ತ್ವದ ಜ್ಞಾನದಿಂದ ಈ ಮಾಯಾ ಜವನಿಕೆವನ್ನು ನಾಶಪಡಿಸಿದವನಿಗೆ ಸರ್ವವೂ ಬ್ರಹ್ಮಮಯವೆಂಬ ಭಾವವುಂಟಾಗುವುದು— ಇದೇ ಜೀವಿತದ ಗುರಿ" ಎಂದು ಮಾನವ ಜೀವಿಗೆ ಬ್ರಹ್ಮತತ್ತ್ವವನ್ನು ಬೋಧಿಸಿ ಸಂಸಾರದಿಂದ ಬಿಡುಗಡೆ ಹೊಂದುವ ಮಾರ್ಗವನ್ನು ಸೂಚಿಸಿದ್ದರು.

ಇದು ಅಜ್ಞಾನ ಕೂಪದಲ್ಲಿ ತೊಳಲಾಡುತ್ತಿದ್ದ ಜೀವಿಗೆ ತನ್ನನ್ನು ತಾನು ಮರೆಯಲು ಬೇಕಾದ ನಿಮಿತ್ತವನ್ನು ಮಾತ್ರ ಒದಗಿಸಿ, ಮನುಷ್ಯನನ್ನು ಜಗತ್ತಿನ ಪಾಲಿಗೆ ಜಡನನ್ನಾಗಿಯೂ, ನಿರಾಸಕ್ತನನ್ನಾಗಿಯೂ, ನಿರುತ್ಸಾಹಿಯನ್ನಾಗಿಯೂ ಮಾಡಿತ್ತು.

ಶಂಕರಾಚಾರ್ಯರು "ಅಹಂ ಬ್ರಹ್ಮಾಸ್ಮಿ, ಸರ್ವಂ ಖಲ್ವಿದಂ ಬ್ರಹ್ಮ" ಮುಂತಾದ ಉಪನಿಷದ್ವಾಕ್ಯಗಳಿಂದ ಯಾವ ಅತೀಂದ್ರಿಯ ಜ್ಞಾನವನ್ನು ಮನುಷ್ಯನಿಗೆ ಉಂಟುಮಾಡಿ ಜರಾಮರಣ ಮತ್ತು ದುಃಖಗಳಿಂದ ಅವನನ್ನು ಬಿಡುಗಡೆ ಮಾಡಲು ಬಯಸಿದ್ದರೋ ಅದೇ ವಾಕ್ಯಗಳು ಅವನನ್ನು ಲೋಕಜೀವನದಲ್ಲಿ ನಿರುಪಯುಕ್ತ ವಸ್ತುವನ್ನಾಗಿ ಮಾಡಿತ್ತು. ಜನತೆಯಲ್ಲಿ ತಲೆದೋರಿದ್ದ ಈ ಬಗೆಯ ನಿರುತ್ಸಾಹವನ್ನೂ ಜಡತೆಯನ್ನೂ ಹೋಗಲಾಡಿಸಿ, ಅವರಲ್ಲಿ ಚೈತನ್ಯವನ್ನೂ, ಆಸ್ಥೆಯನ್ನೂ ಜೀವನೋತ್ಸಾಹವನ್ನೂ ಉಂಟುಮಾಡಿದವರೇ ಶ್ರೀಮಧ್ವಾಚಾರ್ಯರು ಎಂಬುದು ಸರ್ವವೇದ್ಯ

ಆರಂಭದಲ್ಲಿ ಅವರ ಈ ಕಾರ್ಯ-ಮತಪ್ರಸಾರ-ವಿಪರೀತ ಕಠಿಣವೂ. ಕ್ಲೇಶಕರವೂ ಆಗಿತ್ತು.

ಉಳಿದವರ ಮಾತು ಹಾಗಿರಲಿ; ಶ್ರೀಮಧ್ವಾಚಾರ್ಯರಿಗೆ ಸಂನ್ಯಾಸ ದಿಕ್ಷೆಯನ್ನು ಕೊಟ್ಟಿದ್ದ ಅಚ್ಯುತಪ್ರೇಕ್ಷರಂತಹ ಮಹಾಮಹಿಮರಿಗೂ ದ್ವೈತಾದ್ವೈತ ಸಿದ್ಧಾಂತಗಳಲ್ಲಿ ಯಾವುದು ಶ್ರೇಷ್ಠವೆಂಬ ಖಚಿತ ತೀರ್ಮಾನಕ್ಕೆ ಬರಲಾಗದೆ ತೂಗುಯ್ಯಾಲೆಯಲ್ಲಿದ್ದರು. ಅವರು ತಮ್ಮ ಜೀವಿತದ ಕೊನೆಯವರೆಗೂ ಒಂದು ನಿರ್ಧಾರಕ್ಕೆ ಬರಲು ಸಾಧ್ಯವಾಗಿರಲಿಲ್ಲ. ಅಚ್ಯುತಪ್ರೇಕ್ಷರಿಗೆ ಪುರುಷೋತ್ತಮತೀರ್ಥರೆಂದೂ ನಾಮಾಂತರವಿತ್ತು.[1]

ಅವರಿಗೆ ಅವರ ಗುರುಗಳಾಗಿದ್ದ ಪ್ರಾಜ್ಞತೀರ್ಥರು ಶ್ರೀವಿಷ್ಣುಸರ್ವೋತ್ತಮತ್ವದ ಬಗೆಗೆ ತಮ್ಮ ಅವಸಾಥ ಕಾಲದಲ್ಲಿ ಸ್ಪಷ್ಟವಾಣಿಯಿಂದ ಹೇಳಿದ್ದರು, ಅಂಥ ದ್ವೈತಮತ ಪ್ರವರ್ತಕನಾದ ಶಿಷ್ಯನೊಬ್ಬನು ದೊರೆತು ಅವರ ಜೀವನಸಾರ್ಥಕಗೊಳಿಸುವನೆಂದೂ ತಿಳಿಸಿದ್ದರು.

ಅವರ ಭವಿಷ್ಯವಾಣಿಯಂತೆ ಶ್ರೀವಾಯುದೇವರ ಮೂರನೆ ಅವತಾರಿಗಳಾದ ಶ್ರೀಆನಂದತೀರ್ಥನು(ವಾಸುದೇವನು) ಅವರ ಪ್ರಿಯ ಶಿಷ್ಯನಾಗಿದ್ದನು.

---

1) ಇದನ್ನು ಮಧ್ವವಿಜಯದ ೯ನೆ ಸರ್ಗ 33 ನೇ ಶ್ಲೋಕದಲ್ಲಿ ತಿಳಿಸಿದ್ದಾರೆ.
"ಹೇತುವಾದಿನಿ ವಿಶಕಂಟಬುದ್ಧಾ
ತೀರ್ಥಮರ್ಥಯತಿ ಗಂತುಮನುಜ್ಞಾಂ ।
ತಾಂ ದಿದೇಶ ಪುರುಷೋತ್ತಮತೀರ್ಥಾ
ಶ್ಚಿಂತಯರ್ನ್ ಸ ಪುರುಷೋತ್ತಮರಕ್ಷಾಮ್" ॥

ಶ್ರೀಅನಂತಾಸನಸ್ವಾಮಿಯು ಆಗ ಒಬ್ಬ ಭಕ್ತನ ಮೇಲೆ ಆವೇಶ ಬಂದು, ತಾನು ನಿರ್ದೇಶಿಸಿದ್ದ ವಿಷ್ಣುಭಕ್ತ ಶಿರೋಮಣಿಯು ವಾಸುದೇವ ಎಂದೂ ಅವನಿಗೆ ಸಂನ್ಯಾಸ ದೀಕ್ಷೆ ನೀಡಬೇಕೆಂದೂ ಸೂಚಿಸಿದ್ದನು.

ಅದರಂತೆ ಅಚ್ಯುತಪ್ರೇಕ್ಷರು ವಾಸುದೇವನಿಗೆ ಸಂನ್ಯಾಸಾಶ್ರಮ ಇತ್ತು ಪೂರ್ಣಪ್ರಜ್ಞ, ಆನಂದತೀರ್ಥ, ಮಧ್ವಾಚಾರ್ಯ ಮುಂತಾದ ಹೆಸರು ಳಿಂದ ಅವರನ್ನು ದ್ವೈತಸಿದ್ಧಾಂತದ ಪ್ರಚಾರಕ್ಕೆ ನಿಯೋಜಿಸಿದ್ದರು.

ಶ್ರೀಅನಂತಾಸನಸ್ವಾಮಿಯು ಶ್ರೀಮಧ್ವಾಚಾರ್ಯರನ್ನು ಭಗವತ್ಕಾರ್ಯಕ್ಕೆ ಸಾಧಕನನ್ನಾಗಿ ಆರಿಸಿಕೊಂಡಿರುವುದನ್ನು ಒಬ್ಬ ಭಕ್ತನ ಮೇಲೆ ಆವೇಶ ಬಂದು ಹೀಗೆ ತಿಳಿಸಿದ್ದನು.

ಶ್ರೀಮಧ್ವಾಚಾರ್ಯರು ಗುರುಗಳ ಅನುಜ್ಞೆಯನ್ನು ಪಡೆದು ಅವರನ್ನು ಉಡುಪಿಯಲ್ಲಿಯೇ ಬಿಟ್ಟು, ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳಲ್ಲಿ ಇದ್ದ ಜೈನ ಬೌದ್ಧ, ವೈಶೇಷಿಕ, ಅದ್ವೈತ, ವಿಶಿಷ್ಟಾದ್ವೈತ ಮತಗಳ ವಿದ್ವಾಂಸರನ್ನು ಜಯಿಸಿ ದ್ವೈತಮತದ ಜಯ ದುಂದುಭಿಯನ್ನು ಎಲ್ಲೆಲ್ಲೂ ಮೊಳಗಿಸಿದರು.

ಅಷ್ಟೇ ಅಲ್ಲದೇ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿದ್ದ ಶ್ರೀನಾರಾಯಣ ದೇವರಿಗೆ ತಾವು ರಚಿಸಿದ್ದ ಗೀತಾಭಾಷ್ಯವನ್ನು ಸಮರ್ಪಿಸಿ ಬಂದರು. ವಿಶಾಲ ಬದರಿಯಲ್ಲಿದ್ದ ಶ್ರೀಬಾದರಾಣದೇವರಿಂದ, ಆಜ್ಞಪ್ತರಾಗಿ ಬ್ರಹ್ಮಸೂತ್ರಗಳಿಗೆ ಸರಿಯಾದ ಅರ್ಥವನ್ನು ಬೋಧಿಸಿ ಅದನ್ನು ತಮ್ಮ ಶಿಷ್ಯರಾದ ಸತ್ಯತೀರ್ಥರಿಂದ ಬರೆಸಿ, ಲೋಕೋಪಕಾರ ಮಾಡಿದ್ದರು,

ಅಲ್ಲದೆ ಶಾಸ್ತ್ರಾಗಮಗಳ ಮಹಾ ದಿಗ್ಗಜದಂತಿದ್ದ ಶೋಭನ ಭಟ್ಟರಂತಹ ಮೇಧಾವಿಗಳನ್ನು ವಾದದಲ್ಲಿ ಸೋಲಿಸಿ, ಅವರನ್ನು ಶಿಷ್ಯರನ್ನಾಗಿ ಸ್ವೀಕರಿಸಿ ಸಂನ್ಯಾಶಾಶ್ರಮವನ್ನೂ ಅನುಗ್ರಹಿಸಿದ್ದರು,

ಹೀಗೆ ಅವರು ದ್ವೈತಸಿದ್ಧಾಂತ ವೇದಾಂತ ಸಾಮ್ರಾಜ್ಯವನ್ನು ಸ್ಥಾಪಿಸಿದರು,

ಈ ವೇದಾಂತ ವಿದ್ಯಾನಿಜರಾಜ್ಯ ಸಿಂಹಾಸನದಲ್ಲಿ ತಮ್ಮ ಗುರುಗಳಾದ ಅಚ್ಯುತಪ್ರೇಕ್ಷರನ್ನು ಕೂಡಿಸಿ, ತಾವು ಮತ್ತೊಮ್ಮೆ ಭಾರತವನ್ನೆಲ್ಲ ಸಂಚರಿಸಿ, ದ್ವೈತತತ್ತ್ವವಾದದ ಕಹಳೆಧ್ವನಿಯಿಂದ ಭಾರತದ ಜನತೆಯನ್ನು ನಿದ್ರೆಯಿಂದ ಎಚ್ಚರಿಸಿ ದ್ವೈತಮತ ಪ್ರಸಾರವನ್ನು ಮಾಡಬೇಕೆಂದು ಯೋಚಿಸಿದ್ದರು.

ಅಚ್ಯುತಪ್ರೇಕ್ಷರಿಗೆ ದ್ವೈತ ಸಿದ್ಧಾಂತದಲ್ಲಿ ನಿಶ್ಚಯಜ್ಞಾನ ಉಂಟಾಗಿರಲೇ

ಇಲ್ಲ. ಅವರು ತಮ್ಮ ಬಾಳಿನ ಸಂಧ್ಯೆಯಲ್ಲಿದ್ದರೂ ಇನ್ನೂ ವಿಷ್ಣುವೋ ಈಶ್ವರನೋ, ದ್ವೈತವೋ ಅದ್ವೈತವೋ, ಜಗತ್ತು ಸತ್ಯವೋ ಮಿಥ್ಯವೋ, ಜೀವಬ್ರಹ್ಮರಲ್ಲಿ ಭೇದವಿದೆಯೋ ಇಲ್ಲವೋ ಎಂಬುದರ ಬಗ್ಗೆ ಅಂತಿಮ ತೀರ್ಮಾನಕ್ಕೆ ಬಂದಿರಲಿಲ್ಲ. ಅವರ ಮನಸ್ಸು ಈ ಬಗ್ಗೆ ನಿಶ್ಚಿತ ತೀರ್ಮಾನಕ್ಕೆ ಬರದೆ ಡೋಲಾಯಮಾನವಾಗಿತ್ತು.

ಇಂಗಿತಜ್ಞರಾದ ಶ್ರೀಮಧ್ವಾಚಾರ್ಯರು ತಮ್ಮ ಗುರುಗಳ ಮೇಲಿದ್ದ ವಿಶೇಷ ಭಕ್ತಿ ಮತ್ತು ಮಮತೆಯಿಂದ ಅವರನ್ನು ಮುಕ್ತರನ್ನಾಗಿ ಮಾಡುವ ಉದ್ದಿಶ್ಯದಿಂದ ಸಚ್ಛಾಸ್ತ್ರಸಮ್ಮತವಾದ ದ್ವೈತಸಿದ್ಧಾಂತವನ್ನು ಮಕ್ಕಳಿಗೆ ಬೋಧಿಸುವಂತೆ ಬೋಧಿಸಿದರು. ಅವರ ಎಲ್ಲ ಸಂದೇಹಗಳನ್ನೂ ನಿವಾರಿಸಿದರು ಈಗ ಅವರಿಗೆ ದ್ವೈತಸಿದ್ಧಾಂದಲ್ಲಿ ಸಂಪೂರ್ಣ ನಂಬಿಕೆ ಉಂಟಾಯಿತು.

ಗುರುಶಿಷ್ಯರಲ್ಲಿ "ತತ್ತ್ವಮಸಿ" ವಾಕ್ಯದ ಬಗೆಗೆ ಚರ್ಚೆ ನಡೆಯಿತು. ಅಚ್ಯುತಪ್ರೇಕ್ಷರು ಆಚಾರ್ಯರ ವಾದವನ್ನು ಒಪ್ಪಿದರು.

ಛಾಂದೋಗ್ಯ ಉಪನಿಷತ್ತಿನ ಆರನೇ ಅಧ್ಯಾಯದಲ್ಲಿ ಉದ್ದಾಲಕರೆಂಬ ಗುರುಗಳು ಶ್ವೇತಕೇತುವೆಂಬ ಶಿಷ್ಯನಿಗೆ ಬ್ರಹ್ಮಜ್ಞಾನದ ಬಗ್ಗೆ ಉಪದೇಶ ಮಾಡುವಾಗ ಹೇಳುವ ಒಂದು ಸಿದ್ಧಾಂತ ವಾಕ್ಯ "ತತ್ತ್ವಮಸಿ".

ಈ ವಾಕ್ಯದಲ್ಲಿ ತತ್, ತ್ವಂ, ಅಸಿ ಎಂಬ ಮೂರು ಪದಗಳು ಇವೆ. ತತ್ ಎಂದರೆ ಸರ್ವಕರ್ತಾ, ಸರ್ವಜ್ಞ, ಸರ್ವೇಶ್ವರ— ಅಂದರೆ ಇದು ಸರ್ವಗುಣಪರಿಪೂರ್ಣವಾದ ಪರಬ್ರಹ್ಮ ವಸ್ತುವನ್ನು ಬೋಧಿಸುವುದು.

ತ್ವಂ ಎಂದರೆ ಅಲ್ಪಕರ್ತಾ, ಅಲ್ಪಜ್ಞ, ಅಂದರೆ ಅಲ್ಪಗುಣನಾದ ಅಲ್ಪಶಕ್ತನಾದ ಜೀವಸಾಮಾನ್ಯನನ್ನು ಬೋಧಿಸುವುದು. ಅಸಿ ಎಂದರೆ ಇವರಿಬ್ಬರ ಅಭೇದವನ್ನು ಬೋಧಿಸುವುದು— ಎಂದರು ಶಂಕರರು.

ಇದನ್ನು ಒಪ್ಪದೆ ಅಸಿ ಎಂಬ ಕ್ರಿಯಾಪದಕ್ಕೆ ಸಾಕ್ಷಾತ್ ಭೇದಾರ್ಥ ಹೇಳದೆ ಸಾದೃಶ್ಯಾರ್ಥವನ್ನೇ ಹೇಳಬೇಕೆಂದೂ, ಅದೇ ಛಾಂದೋಗ್ಯ ಉಪನಿಷತ್ತಿನ ನಿಜವಾದ ಅರ್ಥವೆಂದೂ ಶ್ರೀಮಧ್ವಾಚಾರ್ಯರ ವಾದ. ಇದಕ್ಕೆ ಅವರು ನೀಡಿದ ಉದಾಹರಣೆ : ದೇವದತ್ತನು ಸಿಂಹನಾಗಿದ್ದಾನೆ. ಮಾಣವಕನು ಅಗ್ನಿಯಾಗಿದ್ದಾನೆ. ಈ ವಾಕ್ಯಗಳಲ್ಲಿ ಆಗಿದ್ದಾನೆ ಎಂಬ ಪದಕ್ಕೆ ಸದೃಶವೆಂಬ ಅರ್ಥವೇ ಹೊರತು ಯಥಾರ್ಥ ಸಿಂಹ ಅಥವಾ ಅಗ್ನಿ ಎಂಬ ಅರ್ಥವಲ್ಲ.

ಇದೇ ತತ್ತ್ವಮಸಿ ಎಂಬ ಶ್ರುತಿವಾಕ್ಯದ ವಿಚಾರ.

ಛಾಂದೋಗ್ಯಉಪನಿಷತ್ತಿನಲ್ಲಿ ಬರುವ ಒಂದು ಕಥೆಯ ತತ್ತ್ವಾರ್ಥದ ಕಡೆಗೆ ಶ್ರೀಮಧ್ವಾಚಾರ್ಯರು ಗುರುಗಳ ಗಮನ ಸೆಳೆದರು.

ಅಚ್ಯುತಪ್ರೇಕ್ಷರು ಅಜ್ಞರೇನೂ ಅಲ್ಲ, ಅವರು ಮಹಾ ವಿದ್ವಾಂಸರೂ, ತಪಸ್ವಿಗಳೂ, ಬ್ರಹ್ಮಜ್ಞಾನಿಗಳೂ ಆಗಿದ್ದ ಸಂನ್ಯಾಸಿಗಳು.

ಪರಂಪರೆಯಿಂದ ಬಂದ ಅವರ ಗುರುಗಳ ವರ್ಣನೆ ಹೀಗಿತ್ತು.

ಶ್ರೀಮನ್ಮಹಾವಿಷ್ಣುವಿನ ನಾಭಿಕಮಲದಲ್ಲಿ ಅಜನೆನಿಸಿದ ಬ್ರಹ್ಮನೂ, ಅವನ ಮಾನಸ ಪುತ್ರರಾಗಿ ಸನಕಾದಿಗಳೂ ಹುಟ್ಟಿದರು. ಅಚ್ಯುತಪ್ರೇಕ್ಷರು ಇಂಥ ಪರಂಪರೆಯಲ್ಲಿ ಬಂದಿದ್ದರೂ ನಿಶ್ಚಿತ ಜ್ಞಾನ ಉಂಟಾಗದೆ ಕೊನೆಯವರೆಗೂ ಅವರು ಸಂದೇಹವಾದಿಗಳಂತೆ ಇದ್ದುದು ಒಂದು ವಿಧಿ ವಿಡಂಬನೆಯೇ ಸರಿ !

ಅಚ್ಯುತಪ್ರೇಕ್ಷರನ್ನು ನೋಡಿ ಶ್ರೀಮಧ್ವಾಚಾರ್ಯರು ವೃದ್ಧಾಪ್ಯದಲ್ಲಿ ಕಾಲಿಟ್ಟಿದ್ದ ಅವರನ್ನು ಬಾಲಕರಂತೆ ತಿಳಿದು ತರಳರಿಗೆ ಬೋಧಿವಂತೆ ಉಪನಿಷತ್ತಿನ ರಹಸ್ಯವನ್ನು ಕಥಾರೂಪದಲ್ಲಿ ವಿವರಿಸಿದರು.

ಗುರುಗಳಾದ ಉದ್ದಾಲಕರು ಶ್ವೇತಕೇತುವೆಂಬ ಶಿಷ್ಯನನ್ನು ಕುರಿತು ಹೀಗೆ ಹೇಳಿದರು :

ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ
ಸತ್ಪ್ರತಿಷ್ಠಿತಾಃ ||

ಅಂದರೆ ಎಲೈ ಶ್ವೇತಕೇತುವೇ, ಈ ಸಕಲ ಜೀವರಿಗೂ ಸನ್ನಾಮನಾದ ಬ್ರಹ್ಮನೇ ಮೂಲ ಕಾರಣನು. (ಅವನಿಂದ ಸೃಷ್ಟರಾದ) ಇವರು ಸಚ್ಛಬ್ದ ವಾಚ್ಯನಾದ ಭಗವಂತನ ಆಶ್ರಯವುಳ್ಳವರು. ಸತ್ ಎಂಬ ಬ್ರಹ್ಮದಲ್ಲಿ ಮುಕ್ತರಾದಮೇಲೆ ಪ್ರತಿಷ್ಠೆಯುಳ್ಳವರು; ಎಂದರೆ ಮುಕ್ತರಾದ ಬ್ರಹ್ಮಾದಿ ಸರ್ವ ಜೀವರೂ ಪರಮಾತ್ಮನಲ್ಲಿ ಪ್ರವೇಶಿಸಿ ಅವನ ಅಧೀನದಲ್ಲಿರುವವರು. ಪರಬ್ರಹ್ಮನು ಮುಕ್ತರಿಗೂ ಪ್ರತಿಷ್ಠಾಪಕನು—ಹೀಗೆ ಹೇಳಿ ಅವರು ನ್ಯಗ್ರೋಧ (ಆಲದ) ವೃಕ್ಷದ ದೃಷ್ಟಾಂತದಿಂದ ಪರತತ್ತ್ವವನ್ನು ಬೋಧಿಸಿದರು.

"ಎಲೈ ಶ್ವೇತಕೇತುವೇ, ಆಲದ ಗಿಡದ ಬೀಜಗಳು ಹೇಗಿವೆ?"
—ಗುರುಗಳು ಪ್ರಶ್ನಿಸಿದರು.

"ಪೂಜ್ಯರೇ, ಅವು ಅಣುಗಳೂ, ಸೂಕ್ಷ್ಮಗಳೂ ಆಗಿವೆ."

"ಅವುಗಳಲ್ಲಿ ಒಂದನ್ನು ಭೇದಿಸಿ ನೋಡು."

"ಇಕೋ ಪೂಜ್ಯರೇ ಸೀಳಿದೆನು."

"ಅದರಲ್ಲಿ ಏನೇನು ಕಾಣಿಸುತ್ತಿವೆ ?"

"ಪೂಜ್ಯರೇ, ಏನೂ ಕಾಣಿಸುವುದಿಲ್ಲ."

"ಈ ಸೂಕ್ಷ್ಮವಾದ ಬೀಜದಲ್ಲಿ ಮಹಾವೃಕ್ಷಕ್ಕೆ ಕಾರಣವಾದ ಅತ್ಯಂತ ಸೂಕ್ಷ್ಮಗಳಾದ ಬೇರು, ಶಾಖೆ, ರೆಂಬೆ, ಎಲೆ, ಹಣ್ಣು ಮೊದಲಾದ ಸರ್ವಭಾಗಗಳೂ, ಅವುಗಳಿಗೆ ಕಾರಣನಾದ ಅಣುವಾದ ಜೀವನೂ, ಅವನಿಗೂ ಕಾರಣನಾದ ಅಣುತಮನಾದ ಬ್ರಹ್ಮನೂ, ಉತ್ಪತ್ತ್ಯಾದಿಗಳಿಗೆ ಕಾರಣರಾಗಿರುವರು, ಈ ಆಲದ ಬೀಜದಲ್ಲಿ ಜೀವನನ್ನಾಗಲೀ, ಅವನ ಅಂತರ್ಯಾಮಿಯಾದ ಬ್ರಹ್ಮನನ್ನಾಗಲೀ ನಿನಗೆ ನೋಡಲು ಕಾಣಿಸುವುದಿಲ್ಲ ಅಲ್ಲವೆ ?"

"ಹೌದು, ಗುರುದೇವ !"

"ಅಂತೆಯೇ ಜೀವ ಬ್ರಹ್ಮರ ವಿಚಾರ" ಎಂದು ಗುರುಗಳು ಹೇಳಿದರು.

ಇನ್ನೊಂದು ದೃಷ್ಟಾಂತವನ್ನು ಗುರುಗಳು ಉದಾಹರಿಸಿದರು.

ಗುರುಗಳು ಉಪ್ಪನ್ನು ಕೊಟ್ಟು, ಶಿಷ್ಯನನ್ನು ಕುರಿತು ಹೀಗೆ ಹೇಳಿದರು.

"ಈ ಉಪ್ಪನ್ನು ಆ ನೀರಿನ ಪಾತ್ರೆಯಲ್ಲಿ ಹಾಕಿ ನಾಳೆ ಪ್ರಾತಃಕಾಲದಲ್ಲಿ ನನ್ನ ಬಳಿಗೆ ತೆಗೆದುಕೊಂಡು ಬಾ" ಎಂದರು.

ಶ್ವೇತಕೇತು ಅದರಂತೆ ಮಾಡಿದನು.

"ನಿನ್ನೆ ರಾತ್ರಿ ಉಪ್ಪನ್ನು ಹಾಕಿದ್ದ ಉಪ್ಪು ನೀರಿನ ಸಹಿತವಾದ ನೀರಿನ ಪಾತ್ರೆಯನ್ನು ತಂದು ಉಪ್ಪನ್ನು ತೆಗಿ" ಎಂದರು.

"ಅದರಲ್ಲಿ ಉಪ್ಪು ಕರಗಿರುವುದು. ಬೇರೆ ತೆಗೆಯಲು ಆಗುವುದಿಲ್ಲ" ಎಂದು ಶಿಷ್ಯನು ಹೇಳಿದನು.

"ಅದನ್ನು ಈಗ ಕುಡಿದು ರುಚಿ ನೋಡಿ ಹೇಳು"

"ಉಪ್ಪಾಗಿದೆ !" ಗುರುದೇವ.

"ಮಧ್ಯದ ದ್ರಾವಣವನ್ನು ಕುಡಿದು ರುಚಿ ಹೇಗಿದೆ ಹೇಳು ?"

"ಅದೂ ಸಹ ಉಪ್ಪಾಗಿಯೇ ಇದೆ."

"ಆದರಂತೆಯೇ ಬ್ರಹ್ಮವಸ್ತುವಿನ ವಿಚಾರ, ಉಪ್ಪು ನೀರಿನಲ್ಲಿ ಕರಗಿ ತನ್ನ ಬೇರೆ ಅಸ್ತಿತ್ವವನ್ನು ಕಳೆದುಕೊಂಡು ಎಲ್ಲೆಡೆಯಲ್ಲೂ ವ್ಯಾಪಿಸಿದೆ. ಆದರೆ ಆದರ ಅಸ್ತಿತ್ವವನ್ನು ನೀನು ಕಾಣಲಾರೆ. ಅನುಭವ ಮಾತ್ರದಿಂದಲೇ ತಿಳಿಯುತ್ತಿದ್ದಿ. ಇದರಂತೆ ಭಗವಂತನು ತನ್ನ ಸಾಮರ್ಥ್ಯ ದಿಂದ ವ್ಯಾಪ್ತನಾಗಿ ಸರ್ವರ ಅಂತಃಕರಣದಲ್ಲಿ ನಿಯಾಮಕನಾಗಿ ಇದ್ದು ಕಾರ್ಯ ಮಾಡಿದರೂ, ಕಣ್ಣಿಗೆ ಕಾಣಿಸುವುದಿಲ್ಲ. ಕೇವಲ ಅನು ಭವಕ್ಕೆ ಮಾತ್ರ ಸಿಕ್ಕುತ್ತಾನೆ, ಉಪ್ಪು ನೀರಿನಲ್ಲಿ ಬೆರೆತಿದ್ದರೂ ಉದಕವೂ ಲವಣವೂ ಹೇಗೆ ಬೇರೆ ಬೇರೆಯಾಗಿವೆಯೋ ಆದರಂತೆ ಪರಬ್ರಹ್ಮನೂ ಜೀವನೂ ಬೇರೆ ಬೇರೆಯಾಗಿಯೇ ಇದ್ದಾರೆ. ಅವರಿಬ್ಬರೂ ಭಿನ್ನ ಭಿನ್ನ ಧರ್ಮದವರಾಗಿರುವುದರಿಂದ ಬೇರೆ ಬೇರೆಯಾಗಿಯೇ ಇದ್ದಾರೆ."

ಈ ದೃಷ್ಟಾಂತಗಳಲ್ಲಿ ಅದ್ವೈತವೆನಿಸುವ ಸಿದ್ಧಾಂತದಲ್ಲಿ ದ್ವೈತ ಭಾವವು ಹೇಗೆ ಅಡಗಿರುವುದೆಂಬುದನ್ನು ಅಚ್ಯುತಪ್ರೇಕ್ಷಕರಿಗೆ ಬೋಧಿಸಿದರು.

ಇಂಥ ಅನೇಕ ಚತುರೋಕ್ತಿಗಳಿಂದಲೂ, ಶಾಸ್ತ್ರಾಧಾರಗಳಿಂದಲೂ ಶ್ರೀಮಧ್ವಾಚಾರ್ಯರು ತಮ್ಮ ಗುರುಗಳಾದ ಅಚ್ಯುತಪ್ರೇಕ್ಷರಿಗೆ ಇದ್ದ ಸಂದೇಹಗಳನ್ನು ಸಂಪೂರ್ಣವಾಗಿ ನಿವಾರಿಸಿದರು.

"ತತ್ತ್ವಮಸಿ," "ಅಹಂ ಬ್ರಹ್ಮಾಸ್ಮಿ," "ದ್ವಾಸುಪರ್ಣಾ ಸಯುಜಾ," "ಪುರುಷ ಏ ವೇದಂ ಸರ್ವಂ," "ಏಕಮೇವಾದ್ವಿತೀಯಂ," "ಯೋಸೌ ಸೋ ಹಂ"—ಮುಂತಾದ ಉಪನಿಷತ್ತಿನ ಮಾತುಗಳಿಗೆ ಮೇಲುನೋಟಕ್ಕೆ ಅದ್ವೈತದ ಅರ್ಥವಿರುವಂತೆ ತೋರಿದರೂ ಅವು ತಿಳಿಸುವುದು ವಸ್ತುತಃ ದ್ವೈತ ಸಿದ್ಧಾಂತವನ್ನೇ, ತತ್ತ್ವವಾದವನ್ನೇ."

—ಎಂಬುದನ್ನು ಯುಕ್ತಿಯುಕ್ತವಾಗಿ ಬೋಧಿಸಿದರು. ಇದನ್ನೆಲ್ಲಾ ಕೇಳಿದ ಮೇಲೆ ಅಚ್ಯುತಪ್ರೇಕ್ಷರಿಗೆ ದ್ವೈತಾದ್ವೈತತತ್ವಗಳಲ್ಲಿ ಸಂದೇಹವುಳಿಯ ಲಿಲ್ಲ. ಅವರು ದ್ವೈತಮತವೇ ಶ್ರೇಷ್ಠವೆಂದು ಅದನ್ನೇ ಸ್ವೀಕರಿಸಿದರು.

## ಉಡುಪಿಯಲ್ಲಿ ಶ್ರೀಕೃಷ್ಣ

ಶ್ರೀಮಧ್ವಾಚಾರ್ಯರು ಮಾನವ ಕೋಟಿಗೆ ಮಾಡಿದ ಮಹ ದುಪಕಾರವೆಂದರೆ ಭಕ್ತಿಯ ಮೂಲಕ ಪರಮಾತ್ಮನ ಅನುಗ್ರಹವೇ ಮುಕ್ತಿಗೆ

ಕಾರಣವೆಂದು ತೋರಿಸಿಕೊಟ್ಟಿದ್ದು. ಭಕ್ತಿ ಎಂದರೆ ಭಗವಂತನಲ್ಲಿ ಮಾಡುವ ಅನನ್ಯಶರಣ್ಯಭಾವ; ಇದು ಕೇವಲ ಮೂಢ ಭಕ್ತಿಯಲ್ಲ. ಭಗವಂತನ ಮಹಿಮೆಯನ್ನೂ, ಸರ್ವೋತ್ತಮತ್ವವನ್ನೂ, ಸಕಲಕಲ್ಯಾಣಗುಣಪರಿಪೂರ್ಣತೆಯನ್ನೂ ಅರಿತು ಜ್ಞಾನಪೂರ್ವಕವಾಗಿ ಮಾಡುವ ದಾಸ್ಯಭಾವವೇ ಭಕ್ತಿ ಎನಿಸುತ್ತದೆ. ಜಗತ್ತಿನ ಕಾರಣಕರ್ತನೂ, ಸ್ಥಿತಿರೂಪನೂ, ಲಯಕಾರನೂ ಆಗಿರುವ ಭಗವಂತನನ್ನು ಈಶನೆಂದು ತಿಳಿದು ಭವಬಂಧನದಿಂದ, ಜರಾ ಮರಣಗಳಿಂದ ಪಾರುಮಾಡಲು ಮಾಡುವ ನವವಿಧ ಉಪಾಸನೆಯೇ ಭಕ್ತಿ ಎನಿಸುತ್ತದೆ.

ಹೀಗೇ "ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ। ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ," ಎಂಬ ಭಕ್ತಿ ಸೂತ್ರದಂತೆ ಮಾಡುವ ಹರಿಭಕ್ತನಿಗೆ ಭಗವಂತನು ಸುಲಭವಾಗಿ ಒಲಿದು ಅವನಿಗೆ ಮುಕ್ತಿಯನ್ನು ನೀಡುವನು.1

ನವವಿಧ ಭಕ್ತಿ ಎಂದರೆ ಒಂಬತ್ತು ಬಗೆಯ ಭಕ್ತಿ. ಅವನ್ನು ಭಾಗವತದಲ್ಲಿ ಪ್ರಹ್ಲಾದನು ಹೀಗೆ ಹೇಳಿದ್ದಾನೆ:

"ಶ್ರವಣಂ, ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥2

ಇಂಥ ಭಕ್ತನನ್ನು ಜಗದ್ರಕ್ಷಕನಾದ ಸ್ವಾಮಿಯು, ತನ್ನವನೆಂದೂ ಅವನ ಯೋಗ ಕ್ಷೇಮ, ತನಗೆ ಸೇರಿದ್ದೆಂದೂ ತಿಳಿಯುತ್ತಾನೆ.

ಏಕೆಂದರೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೀಗೆ ಹೇಳಿದ್ದಾನೆ

"ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ।
ಶಕ್ಯ ಏವಂ ವಿಧೋ ದ್ರಷ್ಟುಂ ಪ್ರವೇಷ್ಟುಂ ಚ ಪರಂತಪ" ॥

ಅಷ್ಟೇ ಅಲ್ಲ ಭಾಗವತದಲ್ಲಿ

ನಾಹಂ ವಾಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥

ಅಂದರೆ ತಾನು ವೈಕುಂಠದಲ್ಲೂ ಇರುವುದಿಲ್ಲ. ಯೋಗಿಯ ಹೃದಯದಲ್ಲೂ

---

1) ಮ. ಭಾ. ತಾ. ನಿ 1-85
2) ಭಾಗವತ 7–5–23

ಇರುವುದಿಲ್ಲ. ಭಕ್ತರು ತನ್ನನ್ನು ಎಲ್ಲಿ ಸ್ತುತಿಸುವರೋ ಅಲ್ಲಿ ಇರುತ್ತೇನೆ ಎಂದು ಭಗವಂತನು ಹೇಳಿದ್ದಾನೆ.

ಎಲ್ಲವನ್ನೂ ತನಗೇ ಅರ್ಪಿಸಿ, ನಿಷ್ಕಾಮನಾಗಿ ತನ್ನನ್ನು ಸೇವಿಸುವ ಭಕ್ತನೇ ತನಗೆ ಪ್ರಿಯನೆಂದು ಭಗವಂತನು ಘೋಷಿಸಿದ್ದಾನೆ.

'ಯೋ ಮದ್ಭಕ್ತಃ ಸ ಮೇ ಪ್ರಿಯಃ
ಭಕ್ತಿಮಾನ್ ಯಃ ಸ ಮೇ ಪ್ರಿಯಃ'

ಇಂಥ ಭಗವದ್ಭಕ್ತಿಯೊಂದೇ ಕಲಿಯುಗದಲ್ಲಿ ಭಗವಂತನನ್ನು ಒಲಿಸಿಕೊಳ್ಳಲು ಇರುವ ಸರಳವಾದ ರಾಜಮಾರ್ಗ.

ಇಂಥ ಭಕ್ತಿಯ ಕೇಂದ್ರ ಬಿಂದುವಾಗಿ ಶ್ರೀಕೃಷ್ಣನ ಒಂದು ರಮಣೀಯ ವಿಗ್ರಹವನ್ನು ಅನಂತಾಸನಕ್ಷೇತ್ರವೆನಿಸಿದ ಉಡುಪಿಯಲ್ಲಿ ಪ್ರತಿಷ್ಠಿಸಲು ಶ್ರೀ ಮಧ್ವಾಚಾರ್ಯರು ನಿಶ್ಚಯಿಸಿದರು.

ಶ್ರೀಮಧ್ವಾಚಾರ್ಯರು ಈ ಹಿಂದೆ ತಮ್ಮ ಪ್ರಥಮತೀರ್ಥಯಾತ್ರಾಕಾಲದಲ್ಲಿ ಗುರುವಾಯೂರು ಕ್ಷೇತ್ರದಲ್ಲಿ ಶ್ರೀಕೃಷ್ಣನನ್ನು ಸಂದರ್ಶಿಸಿ, ಭಕ್ತಿಯಿಂದ ಪುಲಕಿತರಾಗಿದ್ದರು. ಇಂಥ ಪರಮ ಮಂಗಳ ಮೂರ್ತಿಯನ್ನು ಬಾಲಭಾವದಲ್ಲಿ ಯಶೋದೆ ಅರ್ಚಿಸಿದ ದಿವ್ಯ ಸುಂದರ ಬಾಲಕೃಷ್ಣನ ಮೂರ್ತಿಯನ್ನು ತಾವು ಉಡುಪಿಯಲ್ಲಿ ಪ್ರತಿಷ್ಠಿಸಬೇಕೆಂಬ ಸಂಕಲ್ಪ ಅವರಿಗೆ ಉಂಟಾಗಿತ್ತು [1]

ಶ್ರೀಮದಾಚಾರ್ಯರು ಶ್ರೀಮುಷ್ಣಕ್ಷೇತ್ರಕ್ಕೆ ಬಂದಾಗ ಅಲ್ಲಿದ್ದ ಆದಿವರಾಹ ಸ್ವಾಮಿಯನ್ನು ಭಕ್ತಿಯಿಂದ ಸೇವಿಸಿ, ಅಲ್ಲಿಗೆ ತಾವು ಬಂದುಹೋದುದರ ಕುರುಹಾಗಿ ಗೋಪಾಲಕೃಷ್ಣನ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದರು.

---

1) ಕೃಷ್ಣ ಶಬ್ದದ ನಿರ್ವಚನ

ಕೃಷ್ಣ ಎಂಬ ಪದದಲ್ಲಿ ಕ ಕಾರ, ಋ ಕಾರ, ಷ ಕಾರ, ಣ ಕಾರ ಮತ್ತು ವಿಸರ್ಗಗಳಿವೆ.

ಕಕಾರಃ ಕಮಲಾಕಾಂತ ಋಕಾರೋ ರಾಮ ಇತ್ಯಪಿ ।
ಷಕಾರಃ ಷಡ್ಗುಣಪತಿಃ ಶ್ವೇತದೀಪನಿವಾಸಕೃತ್ ॥
ಣಕಾರೋ ನಾರಸಿಂಹೋಯಮಕಾರೋಹ್ಯಕ್ಷರೋಗ್ನಿಭುಕ್ ।
ವಿಸರ್ಗಶ್ಚ ತಥಾಹ್ಯೇತೌ ನರನಾರಾಯಣಾವೃಷೀ ॥

ಮುಂದಿನ ಪುಟಕ್ಕೆ

ಶ್ರೀಮಧ್ವಾಚಾರ್ಯರು ಈ ಕ್ಷೇತ್ರದಲ್ಲಿ ಕೆಲವು ಕಾಲ ವಾಸಿಸಿ ಅನೇಕ ವಿದ್ವಾಂಸರೊಡನೆ ವಾದಮಾಡಿ. ಅವರನ್ನು ಸೋಲಿಸಿ, ಅವರಿಗೆಲ್ಲಾ ವೈಷ್ಣವ ದೀಕ್ಷೆಯನ್ನು ಕೊಟ್ಟು ತಪ್ತಮುದ್ರಾಂಕಿತರನ್ನಾಗಿ ಮಾಡಿದರು.[1]

ಅಲ್ಲಿನ ವಿಶಾಲವಾದ ವರಾಹಸ್ವಾಮಿಪುಷ್ಕರಣಿಯ ದಂಡೆಯಲ್ಲಿರುವ ಒಂದು ಪುರಾತನವಾದ ಅಶ್ವತ್ಥವೃಕ್ಷವು ಇಂದಿಗೂ ಶ್ರೀಮಧ್ವಾಚಾರ್ಯರ ಸ್ಮಾರಕವಾಗಿ ನಿಂತಿದೆ. ಅದರ ಬುಡದಲ್ಲಿ ಶ್ರೀಮುಖ್ಯಪ್ರಾಣ ಹಾಗೂ ಮಧ್ವಾಚಾರ್ಯರ ಸುಂದರ ವಿಗ್ರಹಗಳನ್ನು ನೋಡಬಹುದು.

ಭಾರತದೇಶದ ವೈಷ್ಣವ ಕ್ಷೇತ್ರಗಳ ದಿವ್ಯ ಮಾಲೆಯಲ್ಲಿ ಉಡುಪಿಯನ್ನೂ ಸೇರಿಸಬೇಕೆಂದು ಶ್ರೀಮದಾಚಾರ್ಯರು ಸಂಕಲ್ಪಿಸಿದರು.

ಅವರ ಈ ಸಂಕಲ್ಪ ಪವಾಡಸದೃಶ ಘಟನೆಯಾಗಿ ಕಾರ್ಯರೂಪಕ್ಕೆ ಬಂದಿತು.

ಒಂದು ದಿನ ಮಕರ ಸಂಕ್ರಾಂತಿ ಹಬ್ಬವಿತ್ತು. ಉಡುಪಿಯ ಅನಂತಾಸನಸ್ವಾಮಿಯ ದೇವಾಲಯದಲ್ಲಿ ವಿಶೇಷ ಪೂಜೆ ನಡೆಯಲಿತ್ತು. ಸಂಕ್ರಾಂತಿಯ ಈ ಪುಣ್ಯ ದಿನ ಶ್ರೀಮಧ್ವಾಚಾರ್ಯರು ಸಮುದ್ರಸ್ನಾನ ಮಾಡಿ

---

ಸಂಪ್ರಲೀನಾಶ್ಚ ಷಟ್ಕಾರಪೂರ್ಣಾಯಸ್ಮಿಂಚ್ಛಿದ್ದೇ ಮಹಾತ್ಮನಿ ।
ಪರಿಪೂರ್ಣತಮೋ ಸಾಕ್ಷಾತ್ತೇನ ಕೃಷ್ಣಃ ಪ್ರಕೀರ್ತಿತಃ॥
ಮಹಾತ್ಮನ ।

ಗರ್ಗಸಂಹಿತಾ—ಗಿರಿರಾಜಖಂಡ–ಅಧ್ಯಾಯ— 5
ಶ್ಲೋಕ—10— 12.

1) ಆದ್ಯಂ ಸ್ವಯಂ ವ್ಯಕ್ತಮಿದಂ ವಿಮಾನಂ ರಂಗಸಂಜ್ಞಿತಂ ।
ಶ್ರೀಮುಷ್ಣಂ ವೇಂಕಟಾದ್ರಿಂ ಚ ಶಾಲಗ್ರಾಮಂ ಚ ನೈಮಿಷಂ ॥
ತೋತಾದ್ರಿಂ ಪುಷ್ಕರಂ ಚೈವ ನರನಾರಾಯಣಾಶ್ರಮಂ ।
ಅಷ್ಟೌ ಮೇ ಮೂರ್ತಯಃ ಸಂತು ಸ್ವಯಂವ್ಯಕ್ತಾ ಮಹೀತಲೇ ॥
ಅಯೋಧ್ಯಾ ಮಧುರಾ ಮಾಯಾ ಕಾಶೀ ಕಾಂಚೀ ಅವಂತಿಕಾ ।
ಪುರೀ ದ್ವಾರಾವತೀ ಚೈವ ಸಪ್ತೈತೇ ಮೋಕ್ಷದಾಯಕಾಃ ॥
ಶ್ರೀಮುಷ್ಣವು ಅಷ್ಟಸ್ವಯಂವ್ಯಕ್ತಕ್ಷೇತ್ರಗಳಲ್ಲಿ ಒಂದು.

ಆಹ್ನಿಕವನ್ನು ಮುಗಿಸಿಕೊಂಡು ಬರಲು ಯೋಚಿಸಿ ತಮ್ಮ ಆಪ್ತ ಶಿಷ್ಯರೊಡನೆ ಇಂದಿನ ಮಲ್ಪೆ ಸಮುದ್ರತೀರಕ್ಕೆ ಹೋದರು.

ಅವರು ಸಮುದ್ರ ಸ್ನಾನ—ಆಹ್ನಿಕಗಳನ್ನು ತೀರಿಸಿಕೊಂಡು ಪಶ್ಚಿಮ ಸಮುದ್ರ ಅಭಿಮುಖಿಯಾಗಿ ಕುಳಿತು ಭಗವಂತನ ಆಗಮವನ್ನು ನಿರೀಕ್ಷಿಸುತ್ತಿರುವಂತೆ ಮೈಮರೆತು ಧ್ಯಾನಮಗ್ನರಾದರು.

ಅಷ್ಟರಲ್ಲಿ ಪ್ರಚಂಡ ಬಿರುಗಾಳಿ ಎದ್ದು ಕಡಲನ್ನು ಅಲ್ಲೋಲ ಕಲ್ಲೋಲ ಮಾಡಿತು. ಆನೆ ಎತ್ತರ ಅಲೆಗಳು ಉಂಟಾದವು.

ನೋಡುತ್ತಿದ್ದಂತೆಯೇ ಶುಭ್ರವಾಗಿದ್ದ ಪಶ್ಚಿಮ ದಿಗಂತವು ಕಾರ್ಗಾಲದ ಮೋಡಗಳಿಂದ ತುಂಬಿತು. ಭಯಂಕರ ಚಂಡಮಾರುತ ಬಿರುಸಿನ ಮಳೆ ಬೀಳುವ ಸೂಚನೆಯನ್ನು ನೀಡಿತು.

ಆಚಾರ್ಯರು ಇನ್ನೂ ತಮ್ಮ ಧ್ಯಾನದಲ್ಲಿ ಮಗ್ನರಾಗಿ ಕುಳಿತೇ ಇದ್ದರು ಅವರನ್ನು ಬಹಿರ್ಮುಖಿಗೊಳಿಸುವ ಧೈರ್ಯ ಅವರ ಶಿಷ್ಯರಿಗಾಗಲಿಲ್ಲ.

ಅಷ್ಟರಲ್ಲಿ ಪಶ್ಚಿಮ ತೀರದಲ್ಲಿ ಬಿರುಗಾಳಿಗೆ ಸಿಕ್ಕಿ ತತ್ತರಿಸುತ್ತಾ, ತೀರದ ಕಡೆಗೆ ಬಂದು ಅಪ್ಪಳಿಸುವಂತಿದ್ದ ಒಂದು ಹಡಗನ್ನು ಶ್ರೀಮಧ್ವಾಚಾರ್ಯರು ದೂರದಿಂದಲೇ ನೋಡಿದರು.

ಆ ಹಡಗು ಪಶ್ಚಿಮತೀರದ ಒಬ್ಬ ವ್ಯಾಪಾರಿಗೆ ಸೇರಿತ್ತು. ಅವನು ದ್ವಾರಕೆಯ ನಿವಾಸಿಯಾಗಿದ್ದು ಪಶ್ಚಿಮ ದೇಶಗಳೊಂದಿಗೆ ವ್ಯಾಪಾರ ಮಾಡುತ್ತಿದ್ದನು.

ಹಿಂದಿನ ಕಾಲದಿಂದಲೂ ಭಾರತೀಯರು ಪಶ್ಚಿಮ ದೇಶಗಳಾದ ಗ್ರೀಕ್, ರೋಮ್, ಮೆಸಪಟೋಮಿಯ, ಬ್ಯಾಬಿಲೋನಿಯಾ. ದೇಶಗಳೊಂದಿಗೆ ವ್ಯಾಪಾರ ಸಂಬಂದವಿಟ್ಟುಕೊಂಡಿದ್ದರು.

ಭಾರತದಿಂದ ಮೆಣಸು, ಏಲಕ್ಕಿ ಮೊದಲಾದ ಸಾಂಬಾರ ಪದಾರ್ಥಗಳನ್ನೂ, ವಜ್ರ ಮತ್ತು ರತ್ನಗಳನ್ನೂ, ನವಿಲಿನಂತಹ ಅಪರೂಪದ ಪಕ್ಷಿಗಳನ್ನೂ ಬೆಲೆಬಾಳುವ ರೇಷ್ಮೆವಸ್ತ್ರಗಳನ್ನೂ, ಕಂಚು, ಹಿತ್ತಾಳೆ, ತಾಮ್ರದ ಪಾತ್ರೆಗಳನ್ನೂ ತೆಗೆದುಕೊಂಡು ಹೋಗಿ ಅಲ್ಲಿ ಮಾರಿ ಲಾಭಗಳಿಸಿ ಬರುತ್ತಿದ್ದರು.

ಒಂದು ಹಡಗಿನಲ್ಲಿ ಬೆಲೆ ಬಾಳುವ ವಸ್ತುಗಳನ್ನು ತುಂಬಿಕೊಂಡು ಪಶ್ಚಿಮ ದೇಶಗಳಿಗೆ ಹೊರಟಿದ್ದ ಆ ಹಡಗಿನ ವ್ಯಾಪಾರಿಯು ತನ್ನ ವ್ಯಾಪಾರ ಮುಗಿಸಿಕೊಂಡು ಪರದೇಶದ ವಸ್ತುಗಳೊಡನೆ ಭಾರತಕ್ಕೆ ಹಿಂದಿರುಗುತ್ತಿದ್ದನು. ಅವನ ಹಡಗು ಪ್ರಚಂಡ ಮಾರುತಕ್ಕೆ ಸಿಕ್ಕಿ ಮಲ್ಪೆ ತೀರಕ್ಕೆ ಬಂದಿದ್ದಿತು.

ಇನ್ನೇನು ತನ್ನ ಹಡಗು ಬೆಲೆಬಾಳುವ ಸರಕಿನೊಂದಿಗೆ ಮುಳುಗಿ ನೀರು ಪಾಲಾಗಬೇಕು ಎನ್ನುವ ಘಟ್ಟ ಮುಟ್ಟಿದಾಗ, ಆ ಹಡಗಿನಲ್ಲಿದ್ದ ಜನರೂ, ನಾವಿಕಮುಖಂಡನೂ, ದಡದಲ್ಲಿ ಧ್ಯಾನಮಗ್ನರಾಗಿದ್ದ ಈ ಸಂನ್ಯಾಸಿಗಳನ್ನು ಭಯ ಭಕ್ತಿಗಳಿಂದ ತಮ್ಮನ್ನು ಕಾಪಾಡಲು ಪ್ರಾರ್ಥಿಸಿದರು.

ಶ್ರೀಮಧ್ವಾಚಾರ್ಯರಿಗೆ ಅವರ ಪ್ರಾರ್ಥನೆ ಕೇಳಿಸಿತು. ಅವರು ತಾವು ಹೊದೆದಿದ್ದ ಕಾವಿಯ ವಸ್ತ್ರವನ್ನು ತೆಗೆದು ಅವರ ಕಡೆಗೆ ಬೀಸಿ, ಅಭಯಪ್ರಧಾನ ಮಾಡಿದರು.

ಅದೇನು ಆಶ್ಚರ್ಯ ! ಭಯಂಕರ ರಭಸದೊಡನೆ ಬೀಸುತ್ತಿದ್ದ ಬಿರುಗಾಳಿಯು ಹಠಾತ್ತನೆ ನಿಂತಿತು ಅಲ್ಲೋಲಕಲ್ಲೋಲವಾಗಿ ಏಳುತ್ತಿದ್ದ ಅಲೆಗಳಲ್ಲಿ ಸಿಕ್ಕಿ ಅತ್ತ ಇತ್ತ ಹೋಯ್ದಾಡುತ್ತಿದ್ದ ಹಡಗು ಒಮ್ಮೆಲೇ ನಿಶ್ಚಲವಾಗಿ ಶಾಂತ ಸ್ಥಿತಿಗೆ ಬಂದು ನಿಂತಿತು.

ಹಡಗಿನ ಜನರು ತಮ್ಮನ್ನು ಕಾಪಾಡಿದ ಆ ಅವತಾರ ಪುರುಷರಿಗೆ ನಮಸ್ಕರಿಸಿದರು. ತಮ್ಮ ಕೃತಜ್ಞತೆಯನ್ನೂ, ಭಕ್ತಿ ಗೌರವಗಳನ್ನೂ, ಅರ್ಪಿಸ ಹೋದರು. ನಾವೆಯ ಒಡೆಯನು ತನ್ನ ಮಿತ್ರರೊಡನೆ ಪುಟ್ಟ ದೋಣಿಯಲ್ಲಿ ಕುಳಿತು ದಡಕ್ಕೆ ಬಂದನು. ಆಚಾರ್ಯರಿಗೆ ದೀರ್ಘದಂಡ ನಮಸ್ಕಾರ ಮಾಡಿದನು.

"ಸ್ವಾಮೀ, ನಿಮ್ಮಿಂದ ನಾವು ಉಳಿದುಕೊಂಡೆವು. ನೀವು ಅನುಗ್ರಹಿಸದಿದ್ದರೆ ನಾವೆಲ್ಲ ನೀರುಪಾಲಾಗುತ್ತಿದ್ದೆವು. ದಯವಿಟ್ಟು ನಮ್ಮ ಕೃತಜ್ಞತೆಯನ್ನು ಸ್ವೀಕರಿಸಿ ನಮ್ಮನ್ನು ಆಶೀರ್ವದಿಸಬೇಕು" ಎಂದು ಅಂಜಲಿ ಬದ್ಧನಾಗಿ ಪ್ರಾರ್ಥಿಸಿದನು.

ಶ್ರೀಮಧ್ವಾಚಾರ್ಯರು ಮುಗುಳ್ನಗೆ ನಕ್ಕು ಅವನನ್ನು ಆಶೀರ್ವದಿಸಿದರು.

"ಗುರುದೇವ, ನಿಮ್ಮ ಕೃಪೆಯಿಂದ ನಾವು ಬದುಕಿ ಉಳಿದಿದ್ದೇವೆ.

ನಮ್ಮ ಸಮಸ್ತ ಸಂಪತ್ತೂ— ಈ ನಾವೆ, ಆದರಲ್ಲಿನ ಬೆಲೆಬಾಳುವ ವಸ್ತುಗಳು ನಿಮ್ಮದು. ನಿಮಗೆ ಆದರಲ್ಲಿ ಏನು ಬೇಕೊ ತಿಳಿಸಿ; ಅದನ್ನು ಸಂತೋಷ ದಿಂದ ಒಪ್ಪಿಸುತ್ತೇವೆ—ದಯವಿಟ್ಟು ಸ್ವೀಕರಿಸಿ"

"ನೀವು ವ್ಯಕ್ತಪಡಿಸಿರುವ ಭಕ್ತಿ ಗೌರವಗಳಿಗೆ ಭಗವಂತನು ಸುಪ್ರೀತನಾಗಿದ್ದಾನೆ. ನಿಮ್ಮ ಹಡಗಿನಲ್ಲಿರುವ ಯಾವ ಬೆಲೆ ಬಾಳುವ ವಸ್ತುವೂ ನಮಗೆ ಬೇಕಾಗಿಲ್ಲ. ನೀವು ಹಡಗನ್ನು ಸಮತೋಲನ ಸ್ಥಿತಿಯಲ್ಲಿ ಇಡಲು ಭಾರಕ್ಕಾಗಿ ಇರಿಸಿರುವ ಆ ಎರಡು ಗೋಪಿಚಂದನದ ದೊಡ್ಡ ಗಡ್ಡೆಗಳನ್ನು ನೀಡಿದರೆ ನಮಗೆ ಸಾಕು"—ಎಂದು ಶ್ರೀಮಧ್ವಾಚಾರ್ಯರು ಅವರಿಗೆ ತಿಳಿಸಿದರು.[1]

ಈ ಅಲ್ಪ ಕೋರಿಕೆಯನ್ನು ಕೇಳಿ ವಿಸ್ಮಯಪಟ್ಟ ಆ ಹಡಗಿನ ಒಡೆಯನು ಸಂತೋಷದಿಂದಲೇ ಹಡಗಿನಲ್ಲಿ ಇದ್ದ ಆ ಎರಡು ಗೋಪೀಚಂದನದ ಗಡ್ಡೆಗಳನ್ನು ಸೇವಕರಿಂದ ಹೊರೆಸಿಕೊಂಡು ದಡಕ್ಕೆ ತಂದು, ಶ್ರೀಮಧ್ವಾಚಾರ್ಯರಿಗೆ ಸಮರ್ಪಿಸಿದನು. ಅವರ ಅನುಜ್ಞೆ ಪಡೆದು, ಅವರನ್ನು ಬೀಳ್ಕೊಂಡು ಹೊರಟುಹೋದನು.

ಶ್ರೀಮಧ್ವಾಚಾರ್ಯರು ಈ ಎರಡು ಗೋಪಿಚಂದನದ ಗಡ್ಡೆಗಳನ್ನು ನೋಡಿ ಪರಮಾನಂದದಿಂದ ಮೈ ರೋಮಾಂಚನಗೊಂಡರು.

---

1) ಗೋಪಿಕಾಪ್ರಣಯಿನಃ ಶ್ರಿಯಃಪತೇ
ರಾಕೃತಿಂ ದಶಮತಿಃ ಶಿಲಾಮಯೀಮ್ ।
ಶಿಷ್ಯಕೈಸ್ತ್ರಿಚತುರೈರ್ಜಲಾಶಯೋ
ಶೋಧನಯನ್ನಿಹ ತತೋ ವ್ಯಗಾಹಯತ್ ॥
ಸ್ಪರ್ಶನಾದ್ಭಗವತೋತಿಪಾವನಾತ್ಸನ್ನಿಧಾನಪದತಾಂ ಹರೇಃ ।
ತ್ರಿಂಶದುದ್ಧೃತಸರ್ೖಃ ಸುದುರ್ಧರಾಂ
ಲೀಲಯಾ ನ ಯದಿ ಮಾಮಸೌ ಮಠಮ್ ॥
ಮಂದಹಾಸಮೃದುಸುಂದರಾನನಂ
ನಂದನಂದನಮತೀಂದ್ರಿಯಾಕೃತಿಮ್ ।
ಸುಂದರಂ ಸ ಇಹ ಸನ್ನಧಾಪಯು ದ್ವಂದ್ವಮಾಕ್ಷತಿಶುಚಿಪ್ರತಿಷ್ಠಯಾ ॥
ಮ ॥ ವಿ ॥ ಸರ್ಗ-9 ಶ್ಲೋಕ 41–43

ಅವುಗಳಲ್ಲಿ ಭಗವಂತನ ಸಾನ್ನಿಧ್ಯವಿರುವುದು ಅವರ ದಿವ್ಯ ದೃಷ್ಟಿಗೆ ಗೋಚರಿಸಿತ್ತು. ಎಷ್ಟೆಂದರೂ ಅವರು ಸರ್ವಜ್ಞಾಚಾರ್ಯರಲ್ಲವೇ?

ಶ್ರೀಮಧ್ವಾಚಾರ್ಯರು ತಮ್ಮ ಅಪರೋಕ್ಷ ಜ್ಞಾನದಿಂದ ದ್ವಾರಕಾವಾಸಿಯಾಗಿದ್ದ ಶ್ರೀಕೃಷ್ಣಸ್ವಾಮಿಯು ತಮಗೆ ಒಲಿದು ತನ್ನ ಅಗ್ರಜನೊಡನೆ ಇಲ್ಲಿಗೆ ಬಂದಿದ್ದಾನೆಂದು ಅರಿತರು. ವ್ಯೋ ಪುಳಕಗೊಂಡು, ಆ ಭಗವತ್ಸನ್ನಿಹಿತ ಮೃತ್ಪಿಂಡಗಳನ್ನು ಹತ್ತು ಜನರ ಕೈಯಿಂದ ಎತ್ತಲು ಸಾಧ್ಯವಾಗದಿದ್ದ ಆ ಗೋಪಿಚಂದನ ಗಡ್ಡೆಗಳನ್ನು ತಮ್ಮ ಎರಡು ಭುಜಗಳ ಮೇಲೆ ಇರಿಸಿಕೊಂಡು, ದ್ವಾದಶಸ್ತೋತ್ರವನ್ನು ಹೇಳಿಕೊಳ್ಳುತ್ತ ಉಡುಪಿಗೆ ಹೊರಟರು. ಈ ಸ್ತೋತ್ರದಲ್ಲಿ ಹನ್ನೆರಡು ಅಧ್ಯಾಯಗಳಿವೆ, ಉಡುಪಿಗೆ ಸೇರುವಾಗ ಮೊದಲು ಆರು ಅಧ್ಯಾಯಗಳು ಮುಗಿದವು. ಎರಡನೇ ಆರು ಅಧ್ಯಾಯಗಳಿಂದ ಶ್ರೀಕೃಷ್ಣನನ್ನು ಸ್ತುತಿಸಿ ಪ್ರತಿಷ್ಠಿಸಿದರು,

'ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಂ' ಎಂದು ಆರಂಭವಾಗುವ ಈ ಸ್ತೋತ್ರವು ಭಗವಂತನನ್ನು ಅಡಿಯಿಂದ ಮುಡಿಯವರೆಗೆ ಅತ್ಯದ್ಭುತವಾಗಿ ಸುಂದರವಾಗಿ ವರ್ಣಿಸುತ್ತದೆ.

ಇಂಥ ಮಂಗಳ ಗೀತೆಯನ್ನು ಉಚ್ಚರಿಸುತ್ತಾ, ಶ್ರೀಮಧ್ವಾಚಾರ್ಯರು ಶೀಘ್ರಗತಿಯಿಂದ ಹೊರಟರು. ಅವರಿಗೆ ಶ್ರೀಕೃಷ್ಣಸ್ವಾಮಿಯ ಸಾನಿಧ್ಯದಿಂದ ಹನುಮ ಭೀಮರ ಆವೇಶ ಬಂದಿತ್ತು.

ಅವರು ಇಂದಿನ ವಡಭಾಂಡೇಶ್ವರಕ್ಕೆ ಬಂದಾಗ, ಅವರ ಹೆಗಲಿನಿಂದ ಒಂದು ಗಡ್ಡೆ ಜಾರಿ ನೆಲಕ್ಕೆ ಬಿದ್ದಿತು. ಅಲ್ಲಿ ಒಡೆದ ಗಡ್ಡೆಯಿಂದ ಶ್ರೀ ಬಲರಾಮಸ್ವಾಮಿ ಪ್ರಕಟನಾದನು. ಅವನನ್ನು ಆ ಕ್ಷೇತ್ರದಲ್ಲೇ ಪ್ರತಿಷ್ಠಿಸಲು ಸಂಕಲ್ಪಿಸಿ, ವಿಗ್ರಹಕ್ಕೆ ಅಲ್ಲೇ ಜಲಾಧಿವಾಸಕ್ಕೆ ವ್ಯವಸ್ಥೆ ಮಾಡಿ ಪ್ರಯಾಣ ಮುಂದುವರಿಸಿದರು.

ಈ ಕ್ಷೇತ್ರದಲ್ಲಿ ವಿಭಾಂಡಕನೆಂಬ ಋಷಿಯು ತಪಸ್ಸು ಮಾಡುತ್ತಿದ್ದನೆಂದೂ ಅವನಿಂದಾಗಿ ಈ ಹೆಸರು ಆ ಕ್ಷೇತ್ರಕ್ಕೆ ಬಂದಿತೆಂದೂ ಹೇಳುತ್ತಾರೆ. ಗೋಪೀಚಂದನದ ಗಡ್ಡೆಯು ಇಲ್ಲಿ ಒಡೆದುದರಿಂದ ಒಡಪು ಅಂದರೆ ಒಡೆ ಎಂಬ ಧಾತುವಿನಿಂದ ಈ ಕ್ಷೇತ್ರಕ್ಕೆ ಉಡುಪಿ ಎಂದು ಹೆಸರು ಬಂದಿತೆಂದೂ ಕೆಲವರ ತರ್ಕ.

ಆ ಸ್ಥಳವು ಗೋಪೀಚಂದನ ಗಡ್ಡೆಯು ಒಡೆದು ಬಲರಾಮದೇವರ ವಿಗ್ರಹವು ಪ್ರತಿಷ್ಠಾಪನೆಗೊಂಡ ಮೇಲೆ ಒಡಭಾಂಡೇಶ್ವರ ಕ್ಷೇತ್ರವೆನಿಸಿತು.

ಈ ಸಮಯದಲ್ಲಿ ಅಲ್ಲಿನ ಕೃಷಿಕ ಬಂದು ತಮ್ಮ ಗದ್ದೆಗಳಲ್ಲಿ ನಳ್ಳಿಗಳಿಂದ ವಿಪರೀತ ತೊಂದರೆಯಾಗುತ್ತಿದೆ ಎಂದು ಶ್ರೀಮದಾಚಾರ್ಯರನ್ನು ಪ್ರಾರ್ಥಿಸಿದರಂತೆ. ಆದಕ್ಕೆ ಆಚಾರ್ಯರು ಗೋಪಿಚಂದನದ ಚೂರುಗಳನ್ನು ಪುಡಿಮಾಡಿ ಗದ್ದೆಗಳಲ್ಲಿ ಹರಡ ಹೇಳಿದರಂತೆ. ಆದರಿಂದ ನಳ್ಳಿಗಳ ಕಾಟ ಬಗೆಹರಿಯಿತಂತೆ.

ಮಲ್ಪೆ ಸಮುದ್ರತೀರದಿಂದ ಉಡುಪಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಶ್ರೀಮದಾಚಾರ್ಯರನ್ನು ಕೇಕುಣ್ಣಾಯನೆಂಬ ದ್ವಿಜನು ಸ್ವಲ್ಪ ಕಾಲ ವಿಶ್ರಮಿಸಿಕೊಳ್ಳಲು ಪ್ರಾರ್ಥಿಸಿದನಂತೆ. ಅವನ ಕೋರಿಕೆಯನ್ನು ಈಡೇರಿಸಲು ಅಲ್ಲಿ ಇನ್ನೊಂದು ಗೋಪೀಚಂದನದ ಗಡ್ಡೆಯನ್ನು ಸ್ವಲ್ಪ ಕಾಲ ಇಟ್ಟರು. ಅನಂತರ ಗೋಪೀಚಂದನದಗಡ್ಡೆಸಹಿತರಾಗಿ ಪ್ರಯಾಣವನ್ನು ಉಡುಪಿಗೆ ಮುಂದುವರೆಸಿದರು.

ಇಂದಿಗೂ ಶ್ರೀಮದಾಚಾರ್ಯರು ವಿಶ್ರಮಿಸಿದ್ದ ಈ ಸ್ಥಳದಲ್ಲಿ ಒಂದು ವೇಣುಗೋಪಾಲಸ್ವಾಮಿಯ ಪುಟ್ಟ ದೇವಾಲಯವಿದೆ. ಇದು ಆದಿ ಉಡುಪಿ ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ.

ಅನಂತರ ಶ್ರೀಮಧ್ವಾಚಾರ್ಯರು ಇಂದಿನ ಮಧ್ವಸರೋವರದ ಬಳಿಗೆ ಬಂದು ಆ ಗೋಪೀಚಂದನದ ಗಡ್ಡೆಯನ್ನು ಒಡೆದರು.

ಆದೇನು ಆಶ್ಚರ್ಯ !

ಆ ಗೋಪಿಚಂದನಗಡ್ಡೆಯಲ್ಲಿ ಭುವನಮೋಹನ ಮೂರ್ತಿಯಾದ ಕಡಗೋಲು ನೇಣು ಹಿಡಿದಿರುವ ಶಾಲಗ್ರಾಮ ಶಿಲೆಯಿಂದ ನಿರ್ಮಿತವಾದ ಬಾಲಕೃಷ್ಣನ ಸುಂದರ ವಿಗ್ರಹವು ಕಾಣಿಸಿತು.

ಅದನ್ನು ಶ್ರೀಮದಾಚಾರ್ಯರು ದ್ವಾದಶಸ್ತೋತ್ರ ಹೇಳಿಕೊಳ್ಳುತ್ತಾ, ಪುಟ್ಟ ಮಗುವನ್ನು ಎತ್ತಿಕೊಳ್ಳುವಂತೆ ಪ್ರೀತಿ ವಾತ್ಸಲ್ಯ ಹಾಗೂ ಭಯ ಭಕ್ತಿಗಳಿಂದ ಎರಡೂ ಕೈಗಳಿಂದ ಎತ್ತಿಕೊಂಡು ಕಣ್ಣಿಗೆ ಒತ್ತಿಕೊಂಡರು. ಇಂದಿನ ಮಧ್ವಸರೋವರದಲ್ಲಿ ಆದಕ್ಕೆ ಜಲಾಧಿವಾಸ ಮಾಡಿಸಿದರು.

ಈ ಸರೋವರವು ದ್ವಾಪರಯುಗದಲ್ಲೂ ಪ್ರಸಿದ್ಧಿ ಪಡೆದಿತ್ತು. ಆಗ

ಅನಂತಾಸನಸ್ವಾಮಿಯ ಸರೋವರವೆಂದು ಪ್ರಸಿದ್ಧವಾಗಿತ್ತು.

ಇಲ್ಲಿ ಜಲಾಧಿವಾಸ ಮುಂತಾದ ಶಾಸ್ತ್ರವಿಧಿಗಳು ನೆರವೇರಿದಮೇಲೆ ಶ್ರೀ ಮಧ್ವಾಚಾರ್ಯರು ತಮ್ಮ ಶಿಷ್ಯರಿಗೆ, ವಿಗ್ರಹಕ್ಕೆ ಅಭಿಷೇಕ ಮಾಡಿ ಕೊಳದಿಂದ ಮೇಲೆ ತರಲು ಆಜ್ಞಾಪಿಸಿದರು.

ಅದೇನು ಆಶ್ಚರ್ಯ! ಮೂವತ್ತು ಮಂದಿ ಬಲಶಾಲಿಗಳಾದ ಶಿಷ್ಯರು ಅದನ್ನು ಎತ್ತಲು ಎಷ್ಟು ಸಾಹಸ ಮಾಡಿದರೂ ಅವರಿಂದ ಸಾಧ್ಯವಾಗಲೇ ಇಲ್ಲ.

ಆಗ ಶ್ರೀಮದಾಚಾರ್ಯರು ಒಬ್ಬರೇ ಆ ಶ್ರೀಕೃಷ್ಣನ ವಿಗ್ರಹನ್ನು ಆ ಸರಸ್ಸಿನಿಂದ ಲೀಲಾಜಾಲವಾಗಿಯೇ ಎತ್ತಿ ಮೇಲಕ್ಕೆ ತಂದರು.

ಶಾಸ್ತ್ರೋಕ್ತವಾಗಿ ಪ್ರತಿಷ್ಠಾ ಹೋಮಾದಿಗಳನ್ನು ಮಾಡಿಸಿ, ತಂತ್ರಸಾರಾಗಮ ಪದ್ಧತಿಯಿಂದ ಅದನ್ನು ನಿಷ್ಪಂಚಕ ಲಗ್ನದಲ್ಲಿ ಶ್ರೀಅನಂತಾಸನಸ್ವಾಮಿಯ ದೇವಾಲಯದ ಎಡಗಡೆ, ಶ್ರೀಕೃಷ್ಣಸ್ವಾಮಿಗಾಗಿ ನಿಡಂಬೂರು ಬಲ್ಲಾಳರು ಕಟ್ಟಿಸಿಕೊಟ್ಟಿದ್ದ ಭವ್ಯ ದೇವಮಂದಿರದಲ್ಲಿ ತಂದಿರಿಸಿ ಪ್ರತಿಷ್ಠಿಸಿದರು.

ಶ್ರೀಕಷ್ಣಸ್ವಾಮಿಯು ತನ್ನ ಪೀಠದಲ್ಲಿ ಭಕ್ತವರದನಾಗಿ ನಿಂತ ಮೇಲೆ ದೇವತೆಗಳು ದೇವದುಂದುಭಿಗಳನ್ನು ಮೊಳಗಿಸಿ, ಪುಷ್ಪವೃಷ್ಟಿ ಸುರಿಸಿದರು. ಭಕ್ತಜನರು ಜೈಕಾರಗಳಿಂದ ಸ್ವಾಮಿಯನ್ನು ಸ್ತುತಿಸಿ, ಪಾಡಿ, ಪರಮಾನಂದ ದಿಂದ ಮೈ ಮರೆತು ಸೇವಿಸಿ ಕೃತಾರ್ಥರಾದರು.

ಈ ಶ್ರೀಕೃಷ್ಣನಮನಮೋಹಕ ವಿಗ್ರಹದ ಬಗೆಗೆ ಒಂದು ಕಥೆ ಪ್ರಚಲಿತವಾಗಿತ್ತು. ದ್ವಾಪರಯುಗದಲ್ಲಿ ಒಮ್ಮೆ ದೇವಕೀದೇವಿಯು ಶ್ರೀಕೃಷ್ಣಪರಮಾತ್ಮನಲ್ಲಿ ಹೀಗೆ ಮೊರೆ ಇಟ್ಟಳಂತೆ.

"ಸ್ವಾಮಿ,ನಿನ್ನ ಬಾಲ್ಯದ ರೂಪ, ಆಟಪಾಟಗಳನ್ನು ಋಷಿಗಳು ಮುನಿ ಗಳೂ, ಮುಮುಕ್ಷುಗಳೂ, ಯಶೋದಾತಾಯಿಯೂ ನೆನೆದು ಹಾಡಿ ಹೊಗಳಿ ದ್ದಾರೆ. ಅವನ್ನು ನೋಡುವ ಭಾಗ್ಯ ತಾಯಿಯಾದ ನನಗೆ, ಕಂಸನ ಭಯದಿಂದ ಇಲ್ಲವಾಯಿತು. ಅವನ್ನು ನೋಡುವ ಭಾಗ್ಯ ಈಗಲಾದರೂ ಕರುಣಿಸು. ನನ್ನನ್ನು ಕೃತಕೃತ್ಯಳನ್ನಾಗಿ ಮಾಡು"

ಈ ಬೇಡಿಕೆಯನ್ನು ಈಡೇರಿಸಲು ಶ್ರೀಕೃಷ್ಣಪರಮಾತ್ಮ ತನ್ನ ಬಾಲ್ಯ ರೂಪದಿಂದಲೇ ಬಂದು ತಾಯಿ ದೇವಕಿಗೆ ದಿವ್ಯ ದರ್ಶನ ಕೊಟ್ಟನಂತೆ.

ಅವಳು ಮೊಸರು ಕಡೆಯಲು ನಿರ್ಮಿಸಿಕೊಂಡಿದ್ದ ಕಡುಗೋಲು ನೇಣು ಗಳಿಂದ ಅವಳಿಲ್ಲದಾಗ ತಾನೂ ಮೊಸರು ಕಡೆದನಂತೆ. ತಾಯಿ ದೇವಕಿ ಬಂದಾಗ, ಶ್ರೀಕೃಷ್ಣನು ಅವಳು ಬೈಯ್ಯುವಳೆಂದು ಹೆದರಿ ಕಡಗೋಲು ನೇಣುಗಳನ್ನು ಹಿಡಿದು ಮೂಲೆಯಲ್ಲಿ ಅವಿತುಕೊಂಡನಂತೆ.

ಶ್ರೀಕೃಷ್ಣನ ಈ ಅಲೌಕಿಕ ಮಂಗಳಮೂರ್ತಿಯ ಅದ್ಭುತ ಭಾವಭಂಗಿ ಯನ್ನು ದೇವಕಿ ಹಾಗೂ ಶ್ರೀಕೃಷ್ಣನ ಮಹಿಷಿಯರೂ ನೋಡಿ ಆನಂದಸಾಗರ ದಲ್ಲಿ ಮುಳುಗಿದರಂತೆ.

ಅತ್ಯಂತ ರಮಣೀಯವಾದ ಈ ಮಂಗಳ ಮೂರ್ತಿಯನ್ನು ಸದಾಕಾಲ ಆರಾಧಿಸಲು ರುಕ್ಮಿಣೀದೇವಿಯು ಶ್ರೀಕೃಷ್ಣಸ್ವಾಮಿಯನ್ನು ಒಪ್ಪಿಸಿ, ಶಾಲ ಗ್ರಾಮ ಶಿಲೆಯಿಂದ ದೇವಶಿಲ್ಪಿ ವಿಶ್ವಕರ್ಮನಿಂದ ನಿರ್ಮಿಸಿ, ತನ್ನ ಅಂತಃ ಪುರದ ದೇವಮಂದಿರದಲ್ಲಿ ಇಟ್ಟು ಪೂಜಿಸುತ್ತಿದ್ದಳಂತೆ; ಅಂತೆಯೇ ಶ್ರೀಬಲ ರಾಮನ ವಿಗ್ರಹವನ್ನು ಅವನ ರಾಣಿಯಾದ ರೋಹಿಣೀದೇವಿಯು ಮಾಡಿಸಿ ಅವಳ ಅಂತಃಪುರದಲ್ಲಿ ಇಟ್ಟುಕೊಂಡು ಪೂಜಿಸುತ್ತಿದ್ದಳಂತೆ.

ವಿಪ್ರಶಾಪದಿಂದ ಮುಂದೆ ಯಾದವರಲ್ಲಿ ಅಂತಃಕಲಹವುಂಟಾಗಿ ಅವರ ಸರ್ವನಾಶವೊದಗಿತು. ಈದಿವ್ಯ ಸುಂದರವಿಗ್ರಹಗಳು ದ್ವಾರಕೆಯಲ್ಲಿದ್ದ ಗೋಪೀ ಸರೋವರದಲ್ಲಿ ಅಜ್ಞಾತವಾಗಿ ಬಹುಕಾಲ ಬಿದ್ದಿದ್ದವು.

ಈ ಗೋಪೀ ಸರೋವರವು ಬತ್ತಿ, ಅಲ್ಲಿನ ಮಣ್ಣನ್ನು ಗೋಪಿಚಂದನ ವಾಗಿ ಹೊರಗೆ ಸಾಗಿಸತೊಡಗಿದ ಮೇಲೆ ಆ ಹಡಗಿನ ಒಡೆಯನು ಈ ವಿಗ್ರಹ ಗಳನ್ನುಳ್ಳ ಗೋಪೀಚಂದನದ ಗಡ್ಡೆಗಳನ್ನು ತನ್ನ ಹಡಗಿಗೆ ಭಾರವಾಹಕವಾಗಿ ಇರಿಸಿ ಕೊಂಡಿದ್ದನು.

ಹೀಗೆ ದ್ವಾರಕೆಯಲ್ಲಿ ಇದ್ದ ಶ್ರೀಕೃಷ್ಣ ಬಲರಾಮರ ಸುಂದರ ವಿಗ್ರಹಗಳು ಉಡುಪಿಗೆ ಹಡಗಿನ ಮೂಲಕ ಬಂದಿದ್ದವು.

ಶ್ರೀಮಧ್ವಾಚಾರ್ಯರು ಈ ಕೃಷ್ಣನ ಮನಮೋಹಕವಿಗ್ರಹವನ್ನು ತಾವೇ ಕೈಯಾರ ಪ್ರತಿಷ್ಠಿಸಿ, ತಮ್ಮ ಮನಸ್ಸು ತೃಪ್ತಿಯಾಗುವವರೆಗೆ ಸ್ವಾಮಿಯನ್ನು ಅರ್ಚಿಸಿ ಅದರ ನಿತ್ಯ ಪೂಜೆಗೆ ಒಂದು ಶಾಶ್ವತ ವ್ಯವಸ್ಥೆಯನ್ನೂ ಮಾಡಿದರು.

ಅವರು ತಮ್ಮ ಬಳಿಗೆ ಬೇರೆ ಬೇರೆ ಊರುಗಳಿಂದ ಬಂದಿದ್ದ ಎಂಟು ಜನ ಶಿಷ್ಯರಿಗೆ ಯತಿದೀಕ್ಷೆಯಿತ್ತು ಶ್ರೀಕೃಷ್ಣನನ್ನು ಎರಡೆರಡು ತಿಂಗಳು ಪೂಜೆ

ಸುವ ವ್ಯವಸ್ಥೆ ಮಾಡಿದರು, ಈ ಪೂಜಾ ವ್ಯವಸ್ಥೆ ಮುಂದೆ ಪರ್ಯಾಯ ವೆಂದು ರೂಢಿಗೆ ಬಂದಿತು. (ಇದನ್ನು ಶ್ರೀವ್ಯಾಸರಾಜರ ಸಲಹೆ ಮೇರೆಗೆ ವಾದಿರಾಜಸ್ವಾಮಿಗಳು ಎರಡು ವರ್ಷಗಳಿಗೆ ಬದಲಾಯಿಸಿದರೆಂದು ಹೇಳು ತ್ತಾರೆ.)

ಆ ಎಂಟುಜನ ಸನ್ಯಾಸಿಗಳು ಯಾರೆಂದರೆ—ಪಲಿಮಾರಿನ ಹೃಷೀಕೇಶತೀರ್ಥರು, ಅದಮಾರಿನ ನೃಸಿಂಹತೀರ್ಥರು, ಕೃಷ್ಣಾಪುರದ ಜನಾರ್ಧನತೀರ್ಥರು, ಪುತ್ತಿಗೆಯ ಉಪೇಂದ್ರತೀರ್ಥರು, ಶೀರೂರಿನ ವಾಮನತೀರ್ಥರು, ಕಾಣಿಯೂರಿನ ರಾಮತೀರ್ಥರು, ಪೇಜಾವರದ ಅಧೋಕ್ಷಜತೀರ್ಥರು, ಕಡೆಯದಾಗಿ ಶ್ರೀಮದಾ ಚಾರ್ಯರ ಪೂರ್ವಾಶ್ರಮದ ಸೋದರರಾಗಿದ್ದು ಅನಂತರ ಆಚಾರ್ಯರಿಂದಲೇ ಯತಿದೀಕ್ಷೆ ಪಡೆದ (ಸೋದೆಯ) ವಿಷ್ಣುತೀರ್ಥರು—ಹೀಗೆ ಅಷ್ಟಮಠಗಳು ಆಯಾ ಯತಿಗಳ ಊರಿನ ಹೆಸರುಗಳಿಂದಲೇ ಪ್ರಸಿದ್ಧಿ ಪಡೆದವು.

ಒಮ್ಮೆ ಈ ಯತಿಗಳಲ್ಲಿಯೂ ಶ್ರೀಕೃಷ್ಣನನ್ನು ಯಾರು ಮೊದಲು ಪೂಜಿಸಬೇಕು ಎಂಬ ಬಗ್ಗೆ ವಾದವಿವಾದವುಂಟಾಯಿತಂತೆ. ಇಂದಿನ ಕಣ್ವತೀರ್ಥದ ಬಳಿ ಇರುವ ಅಶ್ವತ್ಥ ಕಟ್ಟೆಯ ಬಳಿ ಶ್ರೀಮಧ್ವಾಚಾರ್ಯರು ಅವರ ವಾದವಿವಾದಗಳನ್ನು ಕೇಳಿ ಮುಗುಳ್ನಕ್ಕು ಈಗಿನ ಪರ್ಯಾಯಕ್ರಮ ದ್ವಂದ್ವ ಪೀಠದ ವ್ಯವಸ್ಥೆ ಮಾಡಿದರೆಂದು ಹೇಳುತ್ತಾರೆ.

ಹೀಗೆ ಶ್ರೀಮದಾಚಾರ್ಯರು ದ್ವೈತಸಿದ್ಧಾಂತ ವಿಷ್ಣುಸರ್ವೋತ್ತಮತ್ವಕ್ಕೆ ಕೇಂದ್ರ ಬಿಂದುವಾಗಿ ಶ್ರೀಕೃಷ್ಣನ ವಿಗ್ರಹದನ್ನು ಉಡುಪಿ ಕ್ಷೇತ್ರದಲ್ಲಿಪ್ರತಿಷ್ಠಿಸಿ, ದ್ವೈತಮತದ ಪ್ರಚಾರಕ್ಕೆ ಆಗತ್ಯವಾದ ಪಾದಪೀಠವನ್ನು ಸಿದ್ಧಪಡಿಸಿದರು. ಪುರಾಣಪ್ರಸಿದ್ಧರಾದ ಪರಮ ಭಾಗವತರೆನಿಸಿದ ಪ್ರಹ್ಲಾದ, ನಾರದ, ಪರಾಶರ, ಅಂಬರೀಷ, ಶುಕ, ಶೌನಕ, ಭೀಷ್ಮರೇ ಮೊದಲಾದವರು ಪ್ರಚಾ ರಕ್ಕೆ ತಂದ ವೈಷ್ಣವ ಧರ್ಮದ ಭಕ್ತಿಮಾರ್ಗಕ್ಕೆ ಚಿರಂತನ ಸ್ಫೂರ್ತಿಯನ್ನು ಕೊಟ್ಟರು.

ಉಡುಪಿಯಲ್ಲಿ ಶ್ರೀಕೃಷ್ಣನ ವಿಗಹ್ರದ ಪ್ರತಿಷ್ಠೆಯ ಸಂದರ್ಭದಲ್ಲಿ ನಡೆದ ಒಂದು ಪ್ರಸಂಗವು ಶ್ರೀಮದಾಚಾರ್ಯರಿಗೆ ಬೇಸರ ತಂದಿತ್ತು.

ಅದು ತಂತ್ರಸಾರಾಗಮೋಕ್ತವಾಗಿ ನಡೆಯಬೇಕಾಗಿದ್ದ ವಿಗ್ರಹಪ್ರತಿಷ್ಠೆ ಹವನ ಹೋಮಗಳ ಪ್ರಸಂಗದಲ್ಲಿ ಉಂಟಾದ ವಿರಸ.

ಉಡುಪಿಯಲ್ಲಿ ಮರಡಿತ್ತಾಯನೆಂಬ ಒಬ್ಬ ಆಗಮೀಕ ಬ್ರಾಹ್ಮಣನಿದ್ದನು. ಅವನು ಜರಾಘಟಕ ಗೋತ್ರೋದ್ಭವ. ವೇದಾಧ್ಯಯನಸಂಪನ್ನನಾಗಿದ್ದರೂ, ಅತೀವ ದುರಹಂಕಾರಿಯಾಗಿದ್ದನು.

ತನ್ನಂತೆ ಆ ಶಾಸ್ತ್ರಗಳನ್ನು ತಿಳಿದ ಪಂಡಿತರು ಸುತ್ತಮುತ್ತಲು ಯಾರೂ ಇಲ್ಲವೆಂದು ಅವನು ಅಹಂಕಾರದಿಂದ ಬೀಗುತ್ತಿದ್ದನು.

ಅದ್ವೈತಿಯಾದ ಆವನಿಗೆ ಶ್ರೀಮಧ್ವಾಚಾರ್ಯರು ಕೈಗೊಂಡಿದ್ದ ಶ್ರೀಕೃಷ್ಣ ವಿಗ್ರಹದ ಪ್ರತಿಷ್ಠೆ ಕಾರ್ಯ ಇಷ್ಟವಿರಲಿಲ್ಲ. ಆದರ ನಿಮಿತ್ತವಾಗಿ ಮಾಡಲು ಸಂಕಲ್ಪಿಸಿದ್ದ ಹವನ ಹೋಮಗಳನ್ನು ತನ್ನನ್ನು ಬಿಟ್ಟರೆ ಅನ್ಯರಿಂದ ಮಾಡಿಸಲು ಸಾಧ್ಯವೇ ಇಲ್ಲವೆಂದು ಅವನು ತಿಳಿದಿದ್ದನು.

ಹೋಮದ ಯಾಜಮಾನ್ಯ ತನಗೇ ಕೊಡಲಾಗುವುದೆಂದು ತಿಳಿದಿದ್ದ. ಶ್ರೀಮದಾಚಾರ್ಯರು ಆದನ್ನು ತಮ್ಮ ಪೂರ್ವಾಶ್ರಮದ ಗುರುಗಳಾದ ತೋಂಟತಿಲ್ಲಾಯರ ಮಗ ವಾಸುದೇವನೆಂಬ ಶ್ರೋತ್ರಿಯನಿಗೆ ವಹಿಸಿ ಅವನ ಸಹಾಯದಿಂದ ಯಜ್ಞವನ್ನು ಪರಿಸಮಾಪ್ತಿಗೊಳಿಸಲು ವ್ಯವಸ್ಥೆ ಮಾಡಿದರು.

ಇದು ಮರಡಿತ್ತಾಯನಿಗೆ ಸಹಿಸದಾಯಿತು. ಅವನು ನೇರ ನಿಡಂಬೂರಿನ ಬಲ್ಲಾಳರಲ್ಲಿಗೆ ಹೋಗಿ ಶ್ರೀಮದಾಚಾರ್ಯರ ಮೇಲೆ ಸಲ್ಲದ ದೂರುಹೇಳಿದನು. ಬಲ್ಲಾಳರೇ ಈ ಯಜ್ಞನ ಖರ್ಚನ್ನು ವಹಿಸಿದ್ದರು.

"ಬಲ್ಲಾಳರೇ, ನಿಮ್ಮ ನೆರವಿನಿಂದಲೇ ಶ್ರೀಕೃಷ್ಣನ ಪ್ರತಿಷ್ಠೆ ನೆರವೇರಿತಷ್ಟೆ. ಅವರು ಯಜ್ಞಕಾರ್ಯಕ್ಕಾಗಿ ನಿಮ್ಮಿಂದ ಪಡೆದಿರುವ ಅಪಾರ ಹಣವನ್ನು ತಮ್ಮ ಪೂರ್ವಾಶ್ರಮದ ಗುರುಪುತ್ರನೂ ತಾವೂ ಹಂಚಿಕೊಳ್ಳಲು ಯೋಚಿಸಿದ್ದಾರೆ. ವಾಸುದೇವನಿಗೆ ಯಜ್ಞದಲ್ಲಿ ಯಜಮಾನನಾಗಲು, ಇಲ್ಲವೇ ಋತ್ವಿಜನಾಗಲು ಯಾವುದೇ ಅರ್ಹತೆ ಇರುವುದಿಲ್ಲ. ಅವರು ನಿಮ್ಮ ಒಳ್ಳೆಯತನವನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ನೀವು ಈ ಯಜ್ಞವನ್ನು ಹೇಗಾದರೂ ಮಾಡಿ ನಿಲ್ಲಿಸಬೇಕು"—ಎಂದು ಬೇಡಿಕೊಂಡನು.

ಬಲ್ಲಾಳರಿಗೆ ಈ ಆರೋಪ ಕೇಳಿ ಸಖೇದಾಶ್ಚರ್ಯವಾಯಿತು. ಶ್ರೀಮಧ್ವಾಚಾರ್ಯರು ಹೀಗೆ ಸ್ವಾರ್ಥಸಾಧನೆಗೆ ದುರುಪಯೋಗ ಪಡಿಸಿಕೊಂಡಿದ್ದಾರೆ ಎಂಬುದನ್ನು ನಂಬುವುದು ಸಾಧ್ಯವಾಗಲಿಲ್ಲ. ಸಂಶಯವಂತೂ ಉಂಟಾಗಿತ್ತು.

"ನಿಮ್ಮ ಈ ಅಭಿಪ್ರಾಯಕ್ಕೆ ಆಧಾರವೇನು"?

"ಪೂರ್ವಾಶ್ರಮದ ತಮ್ಮನನ್ನೇ ಮುಖ್ಯ ಋತ್ವಿಜನನ್ನಾಗಿ ನಿಯಮಿಸಿರುವುದೇ ಆಧಾರ; ಅವನಿಗೆ ಪೌರೋಹಿತದ ಗಂಧವೇ ಗೊತ್ತಿಲ್ಲ. ಇಂಥವನು ಮಾಡಿಸುವ ಯಜ್ಞದಿಂದ ನಿಮಗೆ ಅಮಂಗಳವುಂಟಾಗುತ್ತೆ. ನಾಳೆ ನಿಮಗೆ ಮಂತ್ರಲೋಪ, ತಂತ್ರಲೋಪ ಕ್ರಿಯಾಲೋಪಗಳಿಂದ ಏನಾದರು ಅಮಂಗಳ ಆದರೆ ನೀವು ನಮ್ಮನ್ನು ಆಕ್ಷೇಪಿಸಬಾರದು!"

"ಈಗ ನೀವು ಹೇಳುವುದಾದರೂ ಏನು? ನಿಮ್ಮ ಸಲಹೆ ಏನು ?" ಬಲ್ಲಾಳನು ಸಂಶಯದ ಸುಳಿಯಲ್ಲಿ ಸಿಕ್ಕಿ ಪ್ರಶ್ನಿಸಿದನು.

ತನ್ನ ಸ್ವಲ್ಪ ಬೇಳೆ ಬೆಂದುದನ್ನು ನೋಡಿ ಹರ್ಷಿಸಿದ ಮರಡಿತ್ತಾಯನು, "ನೀವು ಈ ಯಾಗಕ್ಕೆ ಬೇಕಾದ ಹಣವನ್ನೂ ವಸ್ತುಗಳನ್ನೂ ಒದಗಿಸಿದ್ದೀರಿ. ಹಾಗೆ ನೋಡಿದರೆ ನೀವೇ ಶ್ರೀಕೃಷ್ಣನ ಪ್ರತಿಷ್ಠಾಪನೆಗೆ ಮುಖ್ಯ ಕಾರಣರು. ನೀವು ಶ್ರೀಕೃಷ್ಣನಿಗೋಸ್ಕರ ಕಟ್ಟಿಸಿದ ಮಂದಿರ, ಯಜ್ಞ ಯಾಗಗಳ ಸಲುವಾಗಿ ಮಾಡುತ್ತಿರುವ ವೆಚ್ಚ, ಅನ್ನದಾನ ವಸ್ತ್ರದಾನಗಳು ನಿಮ್ಮ ಖಜಾನೆಯಿಂದ ವ್ಯಯ ಮಾಡುತ್ತಿರುವ ಹಣವೇ ಆಗಿದೆ. ಹೀಗಿರುವಲ್ಲಿ ನಿಮಗೆ ಯಾರಲ್ಲಿ ನಂಬಿಕೆಯುಂಟೋ ಅಂಥ ಯಜಮಾನನಿಂದ ನೀವು ಹೋಮಾದಿಗಳು ನಡೆಸಬೇಕೆಂದು ನಿಮಗೆ ನಾನು ಸಲಹೆ ಮಾಡುತ್ತೇನೆ".1

"ಇದನ್ನು ಇಷ್ಟು ಅತ್ಯಲ್ಪ ಕಾಲದಲ್ಲಿ ತಿಳಿಸಿದರೆ ನಿರ್ವಹಿಸಬಲ್ಲ ಸಮರ್ಥರು ಉಡುಪಿಯಲ್ಲಿ ಬೇರೆಯಾರಿದ್ದಾರೆ?"

---

1) ವಾಯುನಾ ತ್ರಿರಪಿ ಪೂರ್ವಪಾಯಿನಾ
ಸರ್ವದೈವತಜಿತಾ ತರಸ್ವಿನಾ।
ಯೋಽಪರೋಕ್ಷವಪುಷಾಪ್ಯಪೇಕ್ಷಿತಃ
ಕೋತ್ರ ವರ್ಣಯತಿ ತಂ ಮಹಾಕ್ರತುಂ॥
ಬ್ರಹ್ಮವೇದನನಿವಿಷ್ಟಚೇತಸಾಂ
ಕರ್ಮ ತತ್ರ ಕರಣಾಂತರಂ ಭವೇತ್।
ಜ್ಞಾಪಯನ್ನಿತಿ ಪರಮಾತ್ಮವೇದಕಃ
ಕರ್ಮ ಧರ್ಮಮಪಿ ಸಹ್ಯಚೀಕರತ್॥
ಮ॥ವಿ॥ ಸರ್ಗ9–ಶ್ಲೋಕ 50–51

"ಉಡುಪಿಯಲ್ಲಿ ಆಗಮಶಾಸ್ತ್ರವನ್ನು ಚೆನ್ನಾಗಿ ಬಲ್ಲ ವಿದ್ವಾಂಸರಿಗೆ ಬರಗಾಲವಿಲ್ಲ.

"ನೀವು ಈ ಯಜ್ಞದ ಸರ್ವಯಾಜಮಾನ್ಯವನ್ನು ನನಗೆ ವಹಿಸುವುದಾದರೆ, ಋತ್ವಿಜರನ್ನೂ ಹೋತೃ ಪ್ರಸ್ತೋತೃ ಉದ್ಗಾತೃಗಳನ್ನೂ ನಾನು ಹುಡುಕಿ ಅತ್ಯಲ್ಪ ಕಾಲದಲ್ಲಿಯೇ ತರುತ್ತೇನೆ."

"ವಿಚಾರ ಮಾಡಿ ಹೇಳುತ್ತೀನಿ"ಎಂದು ತಿಳಿಸಿ, ತನಗೆ ಉಂಟಾದ ಸಂಶಯುಯವನ್ನು ಶ್ರೀಮಧ್ವಾಚಾರ್ಯರಲ್ಲಿ ತೋಡಿಕೊಳ್ಳಲು ಅವರಿದ್ದಲ್ಲಿಗೆ ಹೋದನು.

ಶ್ರೀಮಧ್ವಾಚಾರ್ಯರು ಅಪರೂಪಕ್ಕೆ ಬಂದ ನಿಡಂಬೂರಿನ ಬಲ್ಲಾಳರನ್ನು ಆದರದಿಂದಲೇ ಸ್ವಾಗತಿಸಿ, ಕುಶಲ ಪ್ರಶ್ನೆ ಮಾಡಿ, ಅವರು ಬಂದ ಕಾರ್ಯವನ್ನು ವಿಚಾರಿಸಿದರು.

ಬಲ್ಲಾಳನು ನೇರ ವಿಷಯ ಪ್ರಸ್ತಾಪಕ್ಕೆ ಬಂದನು. "ಸ್ವಾಮೀ, ನೀವು ಮರಡಿತ್ತಾಯರಂಥ ವಿದ್ವಾಂಸರನ್ನು ಬಿಟ್ಟು ಚಿಕ್ಕ ವಯಸ್ಸಿನ ನಿಮ್ಮ ಪೂರ್ವಾಶ್ರಮ ಗುರುಬಂಧು ವಾಸುದೇವರೆಂಬುವರಿಗೆ ಯಾಜಮಾನ್ಯಪಟ್ಟ ಕಟ್ಟಿರುವುದಾಗಿ ತಿಳಿಯಿತು. ಇದನ್ನು ವಿಚಾರಿಸಿಕೊಂಡು ಹೋಗಲು ಬಂದೆ "

"ವಾಸುದೇವನು ಚಿಕ್ಕ ವಯಸ್ಸಿನವನಿರಬಹುದು ತೋಂಟತಿಲ್ಲಾಯರ ಮಗನೆಂಬುದನ್ನು ನೀವು ಮರೆಯಬಾರದು. ಸಿಂಹದ ಹೊಟ್ಟೆಯಲ್ಲಿ ಸಿಂಹ ಹುಟ್ಟುವುದೇ ಹೊರತು ನರಿ ಹುಟ್ಟುವುದಿಲ್ಲ___ಅವನಿಗೆ ಯಜ್ಞಾಧಿಕಾರವಿದೆ. ಆಗಮಶಾಸ್ತ್ರವನ್ನು ಚೆನ್ನಾಗಿ ತಿಳಿದಿದ್ದಾನೆ___ಅವನಿಂದ ನಡೆಸಲ್ಪಡುವ ಯಜ್ಞದಿಂದ ಸಮಸ್ತರಿಗೂ ಕಲ್ಯಾಣವಾಗುವುದರಲ್ಲಿ ಸಂಶಯವೇ ಇಲ್ಲ. ಮಂತ್ರ ತಂತ್ರಕ್ರಿಯಾ ಲೋಪಗಳಾಗುವುದಿಲ್ಲ."

"ನಿಮ್ಮ ಪೂರ್ವಾಶ್ರಮದ ಸೋದರನನ್ನು ಮುಖ್ಯ ಋತ್ವಿಜನನ್ನಾಗಿ ನಿಯಮಿಸಿರುವುದೂ ತಿಳಿಯಿತು".

"ಹೌದು, ಅವನು ಸರ್ವವೇದ ವೇದಾಂತಗಳಲ್ಲಿ ಪಾರಂಗತನಾಗಿದ್ದಾನೆ ಯಜ್ಞ ಪ್ರಯೋಗಕ್ರಮವನ್ನು ಚೆನ್ನಾಗಿ ತಿಳಿದಿದ್ದಾನೆ.ಅತ್ಯಂತ ಅರ್ಹನೂ ಆಗಿದ್ದಾನೆ."

"ಶ್ರೀಮದಾಚಾರ್ಯರು ತಪ್ಪು ತಿಳಿಯದಿದ್ದರೆ ನನ್ನದೊಂದು ಕೋರಿಕೆ. ಇಂಥ ಕಾರ್ಯಗಳಲ್ಲಿ ಮಂತ್ರತಂತ್ರ ಕ್ರಿಯಾಲೋಪಗಳಾದರೆ ಯಜ್ಞವನ್ನು ಮಾಡಿಸಿದವನಿಗೆ ಅವಶಾಂಗಳ ತಟ್ಟುವುದಂತೆ. ಆದುದರಿಂದ ನೀವು

ಮರಡಿತ್ತಾಯರಂಥ ಆಗಮಿಕರನ್ನು ಕೈಬಿಡುವುದು ಸರಿಯಲ್ಲ, ಅವರ ಮೇಲ್ವಿಚಾರಣೆಯಲ್ಲಿ ಈ ಯಜ್ಞ ನಡೆಯಲೆಂದು ನನ್ನ ಅಭಿಲಾಷೆ."

— ಈ ಮಾತು ಕೇಳಿ ಶ್ರೀಮಧ್ವಾಚಾರ್ಯರು ಅವಾಕ್ಕಾದರು. ಇದೆಲ್ಲವೂ ಆ ಮರಡಿತ್ತಾಯನ ಚಿತಾವಣಿ ಎಂದು ಅವರಿಗೆ ಆಕ್ಷಣದಲ್ಲಿಯೇ ಆ ತಿಳಿಯಿತು,

ಈ ಬಗ್ಗೆ ಆಗಲೇ ಒಂದು ತೀರ್ಮಾನಕ್ಕೆ ಬಂದುಬಿಟ್ಟಿದ್ದರು. ಯಾರೆಷ್ಟು ಹೇಳಿದರೂ ಮರಡಿತ್ತಾಯನಿಗೆ ಈ ಯಜ್ಞದಲ್ಲಿ ಯಾವ ಅಧಿಕಾರವನು ನೀಡಬಾರದೆಂದು ನಿಶ್ಚಯಿಸಿದರು.

ಅವರು ನಿಧಾನವಾಗಿ ಹೇಳಿದರು.

"ಬಲ್ಲಾಳರೇ, ನೀವು ಈ ಮಾತನ್ನು ಮೊದಲೇ ತಿಳಿಸಿದ್ದರೆ ಅನುಕೂಲ ವಾಗುತ್ತಿತ್ತು. ಈಗ ವಾಸುದೇವ ಯಜ್ಞದೀಕ್ಷಿತನೆಂದು ಸಂಕಲ್ಪ ಮಾಡಿದ್ದಾಗಿದೆ. ಈ ಹಂತದಲ್ಲಿ ಅವರನ್ನು ತೆಗೆಯಲು ನನಗೆ ಸರ್ವಥಾ ಇಷ್ಟ ವಿಲ್ಲ. ನಿಮಗೆ ಇದರಿಂದ ಏನೂ ಅಮಂಗಳವಾಗುವುದಿಲ್ಲ; ಅದರ ಬದಲು ಶ್ರೀ ಕೃಷ್ಣಸ್ವಾಮಿಯು ನಿಮ್ಮ ಕುಟುಂಬಕ್ಕೆ ಕಲ್ಯಾಣವನ್ನೇ ಉಂಟುಮಾಡುತ್ತಾನೆ. ನನ್ನ ಮಾತನ್ನು ನಂಬಿರಿ. ನೀವು ಈ ವಿಷಯದಲ್ಲಿ ವೃಥಾ ಚಿಂತಿಸಬಾರದು" ಎಂದು ಸಮಾಧಾನ ಹೇಳಿ ಅವರನ್ನು ಹಿಂದಕ್ಕೆ ಕಳುಹಿಸಿಕೊಟ್ಟರು

ಅನಂತರ ಆಚಾರ್ಯರು ಮರಡಿತ್ತಾಯರಿಗೆ ಹೇಳಿ ಕಳುಹಿಸಿದರು.

ಅವರು ಬಂದ ಮೇಲೆ "ಆಗಮಿಕರೇ, ಇವೆಲ್ಲಾ ಏನು? ಯಜ್ಞಕ್ಕೆ ಮಾಡಬೇಕಾಗಿರುವ ಸಿದ್ಧತೆಗಳೆಲ್ಲವೂ ಮುಗಿದಿರುವಾಗ ನೀವು ಏಕೆ ವೃಥಾ ಬಲ್ಲಾಳರ ತಲೆಯಲ್ಲಿ ಸಂಶಯದ ಬೀಜ ಬಿತ್ತಿದ್ದೀರಿ. ನಿಮಗೆ ದಕ್ಷಿಣೆ ತಾಂಬೂಲಗಳ ಮೇಲೆ ಆಸೆಯಿದ್ದರೆ ಹೇಳಿ. ಯಥೇಚ್ಛವಾಗಿ ಕೊಡಿಸುತ್ತೇವೆ. ನಮಗೆ ಬೇಕಾಗಿರುವುದು ಈ ಯಜ್ಞ ನಿರ್ವಿಘ್ನವಾಗಿ ನೇರವೇರುವುದು"— ಎಂದು ಸ್ಥಿರ ಪ್ರಜ್ಞರಂತೆ ಗಂಭೀರವಾಗಿ ಹೇಳಿದರು.

"ಪೂರ್ಣಪ್ರಜ್ಞರಿಗೆ ನಾವು ಏನೋಂದು ಅಪಚಾರ ಬಗೆದಿದ್ದರೂ, ಕ್ಷಮಿಸ ಬೇಕು. ನಾನು ಬಡ್ಡ ಕೃತಿ ಎಂಬ ಕಾರಣದಿಂದ ನೀವು ನನ್ನ ವಿದ್ಯೆ ಯನ್ನೂ ಪಾಂಡಿತ್ಯವನ್ನೂ ಕಡೆಗಣಿಸಿ ನನ್ನನ್ನು ಈ ಯಜ್ಞಕಾರ್ಯದಿಂದ ದೂರವಿಟ್ಟಿದ್ದೀರಿ; ಇದು ತಮ್ಮಂತಹ ಮಹಾತ್ಮರಿಗೆ ಸರಿಯಲ್ಲ. ಭೂಷಣ ವಲ್ಲ' ಎಂದು ಅವನು ಘೋಷಿಸಿದನು.

"ಯಾವುದು ಸರಿ ಯಾವುದು ತಪ್ಪು ಎಂಬುದು ನಮಗೆ ತಿಳಿದಿದೆ. ಹಿಂದೆ ದ್ವಾಪರಯುಗದಲ್ಲೂ ಪಾಂಡವರು ನಡೆಸಿದ ರಾಜಸೂಯ ಯಾಗದಲ್ಲಿ ಹೀಗೆಯೇ ಆಯಿತು. ಶಿಶುಪಾಲ ದಂತವಕ್ರರೆಂಬ ದೈತ್ಯರು ಧರ್ಮರಾಜನ ಯಜ್ಞಕ್ಕೆ ವಿಘ್ನ ತಂದರು. ಧರ್ಮನಂದನನು ಶ್ರೀಕೃಷ್ಣನಿಗೆ ಅಗ್ರ ತಾಂಬೂಲ ನೀಡಲು ಹೋದಾಗ ಶಿಶುಪಾಲನು ವಿರೋಧಿಸಿದನು. ಅವನಗತಿ ಏನಾಯಿತೆಂಬುದು ನಿಮಗೂ ತಿಳಿದಿದೆ. ಅಂತಹ ಸ್ಥಿತಿ ಪ್ರಾಪ್ತವಾಗುವ ಆಸೆ ಇದ್ದರೆ— ನೀವು ಯಜ್ಞಕ್ಕೆ ವಿಘ್ನ ತನ್ನಿ!"

ಎಂದು ಶ್ರೀಮಧ್ವಾಚಾರ್ಯರು ಗುಡುಗಿದರು. ಈ ಮಾತು ಕೇಳಿ ಮರಡಿತ್ತಾಯರು ಹೆದರಿ ಬಿಳಿಚಿಕೊಂಡರು.

ಶ್ರೀ ಆಚಾರ್ಯರ ಅತಿ ಮಾನುಷ ಶಕ್ತಿ ಎಂಥದೆಂದು ತಿಳಿದಿದ್ದ ಅವರಿಗೆ ಆಚಾರ್ಯರನ್ನು ಎದುರು ಹಾಕಿಕೊಳ್ಳುವುದು ಇಷ್ಟವಾಗಲಿಲ್ಲ. ಅಂತಲೇ ಅವರ ತಲೆ ತಗ್ಗಿಸಿ ಅವಮಾನಿತನಾಗಿ ಅಲ್ಲಿಂದ ಹೊರಟುಹೋದರು.

ಈ ಸಂಗತಿಯನ್ನು ಅವರಿವರಿಂದ ಕೇಳಿದ ಶ್ರೀಮಧ್ವಾಚಾರ್ಯರ ಪೂರ್ವಾಶ್ರಮದ ಸಹೋದರನು ಮನನೊಂದು, ಈ ಯಜ್ಞದ ಹೊಣೆಗಾರಿಕೆಯಿಂದ ತನ್ನನ್ನು ಮುಕ್ತಗೊಳಿಸಲು ಪ್ರಾರ್ಥಿಸಿದನು,

ಇದಕ್ಕೆ ಶ್ರೀಮಧ್ವಾಚಾರ್ಯರು ಸಮ್ಮತಿಸಲಿಲ್ಲ. ಅವನನ್ನು ಯೋಗ್ಯ ರೀತಿಯಲ್ಲಿ ಸಮಾಧಾನಪಡಿಸಿ ಕೈಗೊಂಡಿದ್ದ ಹೋಮಾದಿಗಳನ್ನು ಅವನಿಂದಲೇ ಶಾಸ್ತ್ರೋಕ್ತವಾಗಿ ಸಾಂಗವಾಗಿ ಪರಿಸಮಾಪ್ತಿಗೊಳಿಸಿದರು. ಶ್ರೀಕೃಷ್ಣನಿಗೆ ಪ್ರಿಯರಾದ ಮಧ್ವಾಚಾರ್ಯರು, ದ್ವಾಪರಾಂತದಲ್ಲಿ- ಭೀಮಸೇನ ರೂಪಿಯಾದ ಮಧ್ವಾಚಾರ್ಯರು -ಧರ್ಮರಾಜನ ಕೈಯಿಂದ ಯಜ್ಞವನ್ನು ಮಾಡಿಸಿದಂತೆ ಈ ಕಲಿಯುಗದಲ್ಲಿ ಮಧ್ವಾಚಾರ್ಯರು ವಾಸುದೇವನಿಂದ ಯಜ್ಞ ಮಾಡಿಸಿದರು,

ಈ ಸಂದರ್ಭದಲ್ಲಿ ಅವರು ಅಸಂಖ್ಯಾತ ಜನರಿಗೆ ಅನ್ನಸಂತರ್ಪಣೆ ನಡೆಸಿ ಅನೇಕ ಬಗೆಯ ದಾನಧರ್ಮಗಳನ್ನೂ ಕೊಡಿಸಿದರು.

ಅವರು ಮರಡಿತ್ತಾಯನ ವಿದ್ವತ್ತನ್ನು ಮರೆಯದೆ ಅವನಿಗೂ ಈ

---

1) ಯಾಜ್ಯಯಾ ಸಮುಚಿತಾನುವಾಕ್ಯಾ ಸ್ವಪ್ರವರ್ಗ್ಯವಿಭವೈರಭಿಷ್ಟುವೈಃ।
ವಿಶ್ವವೇತ್ತುರನುಜೋತ್ರಹೋತೃತಾಂಪ್ರಾಪ್ಯ ದೈವತತೀಸ್ತೋಪಯತ್॥

ಸಂದರ್ಭದಲ್ಲಿ ಯಥೋಚಿತ ರೀತಿಯಲ್ಲಿ ಮರ್ಯಾದೆ ಮಾಡಿದರು ; ಯೋಗ್ಯತಾನುಸಾರ ಬಹುಮಾನಿಸಿದರು.

ಆದರೆ ದುರಾಲೋಚನೆ ಮಾಡಿದ್ದ ಅವನು ತನಗೆ ಮಾಡಿದ ಸನ್ಮಾನ ಸತ್ಕಾರಗಳನ್ನು ತಿರಸ್ಕರಿಸಿ, ಶ್ರೀಮದಾಚಾರ್ಯರ ಆಗ್ರಹಕ್ಕೆ ಪಾತ್ರನಾದನು.

ಇದರ ಫಲವೋ ಎಂಬಂತೆ ಕಾಕತಾಳೀಯವಾಗಿ ಅವನಿಗೆ ಶೀಘ್ರದಲ್ಲಿಯೇ ಪುತ್ರವಿಯೋಗವೂ ಆಯಿತು.

ಇದರಿಂದ ಬುದ್ಧಿಭ್ರಮಣೆ ಹೊಂದಿ ಮರಡಿತ್ತಾಯನು ಶ್ರೀಮಧ್ವಾಚಾರ್ಯರೇ ತನ್ನ ಮಗನ ಸಾವಿಗೆ ಕಾರಣವಾದವರೆಂದು ಅವರನ್ನು ದೂಷಿಸುತ್ತಾ, ತನ್ನ ಉಳಿದ ಆಯುಷ್ಯವನ್ನು ವ್ಯರ್ಥವಾಗಿ ದುಃಖದಿಂದಲೇ ಕಳೆದನು.

ಇದನ್ನೆಲ್ಲಾ ನೋಡಿ ಉಡುಪಿಯ ಜನರು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಶ್ರೀಮದಾಚಾರ್ಯರನ್ನು ಆಕ್ಷೇಪಿಸಿದರು.

ಸರ್ವಜ್ಞರೂ, ಸ್ಥಿತಪ್ರಜ್ಞರೂ ಆದ ಶ್ರೀಮಧ್ವಾಚಾರ್ಯರಿಗೂ ಊರಿನ ಜನ ಆಡಿಕೊಳ್ಳುತ್ತಿದ್ದ ವೃಥಾ ನಿಂದೆಯನ್ನು ಕೇಳಿ ಬೇಸರವಾದಂತೆ ಆಯಿತು. ಇವರು ಸರ್ವಜ್ಞಾಚಾರ್ಯರು, ಇವರಿಗೆ ಬೇಸರವೇ ಇಲ್ಲ ; ಆದರೂ ಲೋಕ ರೀತಿಯಲ್ಲಿ ಹಾಗೆ ತೋರಿಸಿದರು.

ತಾವು ಕೆಲವುಕಾಲ ಉಡುಪಿಯಿಂದ ದೂರವಿದ್ದು ತೀರ್ಥಯಾತ್ರೆ ಮಾಡಬೇಕೆನಿಸಿತು. ಇದೇ ಸಮಯದಲ್ಲಿ ಅವರ ಗುರುಗಳಾದ ಅಚ್ಯುತಪ್ರೇಕ್ಷರೂ ನಿರ್ಯಾಣ ಹೊಂದಿದರು. ಅವರು ತಮ್ಮ ಕಡೆಗಾಲವಲ್ಲಿ ತಮ್ಮ ಶಿಷ್ಯರಾದ ಆನಂದತೀರ್ಥರಿಂದಲೇ ದ್ವೈತಸಿದ್ಧಾಂತದೀಕ್ಷೆ ಪಡೆದು ಮನಸ್ಸಿಗೆ ಸಮಾಧಾನ ಸಂತೃಪ್ತಿಗಳಿಂದ ಕೊನೆಯುಸಿರನ್ನೆಳೆದಿದ್ದರು. ಆದರೂ ಶ್ರೀಮದಾಚಾರ್ಯರ ಪಾಲಿಗೆ ಇದೊಂದು ತುಂಬಲಾರದ ನಷ್ಟವಾಗಿತ್ತು. ಈ ದುಃಖವನ್ನು ಮರೆಯಲು ತೀರ್ಥಯಾತ್ರೆ ಕೈಗೊಳ್ಳಬೇಕು, ಉತ್ತರಭಾರತದಲ್ಲಿನ ನಗರಗಳಲ್ಲಿ, ವಿದ್ಯಾಪೀಠಗಳಲ್ಲಿ, ಗುರುಕುಲಗಳಲ್ಲಿ ಇರುವ ಪುಸ್ತಕ ಭಂಡಾರಗಳನ್ನೂ, ವಿದ್ವಾಂಸರನ್ನೂ ಸಂದರ್ಶಿಸಿ ಬರಬೇಕೆಂಬ ಉತ್ಕಟ ಆಕಾಂಕ್ಷೆಯೂ ಉಂಟಾಗಿತ್ತು.

ಪ್ರಾಚೀನ ಭಾರತದಲ್ಲಿ ನಲಂದಾ, ತಕ್ಷಶಿಲಾ, ನವದ್ವೀಪ, ಪಾಟಲೀಪುತ್ರ ಮೊದಲಾದ ಮಹಾವಿಶ್ವವಿದ್ಯಾನಿಲಯಗಳು ಪ್ರಾಚ್ಯವಿದ್ಯಾಕೇಂದ್ರಗಳಾಗಿ ಪ್ರಸಿದ್ಧ

ಪಡೆದಿದ್ದುವು. ಅಲ್ಲಿನ ಗ್ರಂಥಭಂಡಾರಗಳಲ್ಲಿ ಅಪೂರ್ವವಾದ ಪ್ರಾಚೀನ ಕೃತಿಗಳು ಇದ್ದುವು. ಇವುಗಳನ್ನು ನೋಡಿಬರಬೇಕೆಂದೂ ಶ್ರೀಮದಾಚಾರ್ಯರ ಅಪೇಕ್ಷೆಯಾಗಿತ್ತು.

ಅವರು ಕೆಲವು ಸೂಕ್ತಗಳು ಮಹಾಭಾರತ, ದಶೋಪನಿಷತ್ತುಗಳು ಮತ್ತು ಋಗ್ವೇದದ ಇವುಗಳಿಗೆ ಭಾಷ್ಯಗಳನ್ನು ರಚಿಸಲು ನಿರ್ಧರಿಸಿದ್ದರು. ಈ ಕಾರ್ಯವನ್ನು ಕೈಗೊಳ್ಳುವ ಮೊದಲು ಬದರಿಯಲ್ಲಿದ್ದ ಶ್ರೀವೇದವ್ಯಾಸದೇವರ ಅನುಗ್ರಹ ಪಡೆದುಬರಬೇಕೆಂದೂ ತೋರಿತು.

ಈ ಭಾವನೆ ತೀವ್ರವಾಗುತ್ತಲೂ, ತಮ್ಮ ಅಪಾರ ಶಿಷ್ಯರ ವೃಂದದ ರಕ್ಷಣೆಗೆ ಯೋಗ್ಯ ವ್ಯವಸ್ಥೆ ಮಾಡಿ, ಮಿತಪರಿವಾರದೊಡನೆ ಶ್ರೀಮದಾಚಾರ್ಯರು ಉತ್ತರ ಭಾರತದ ಯಾತ್ರೆಯನ್ನು ಎರಡನೆಯ ಬಾರಿ ಕೈಗೊಂಡರು.

ಶ್ರೀಮಧ್ವಾಚಾರ್ಯರು ಎರಡನೆಯ ಸಲ ಬದರೀ ಕ್ಷೇತ್ರಕ್ಕೆ ಹೋಗಲು ನಿಶ್ಚಯಿಸಿದರು.

ಶ್ರೀಮಧ್ವಾಚಾರ್ಯರು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಘಟ್ಟವನ್ನು ಹತ್ತಿ ಪ್ರಯಾಣ ಮಾಡುತ್ತಾ ಕಳಸಕ್ಷೇತ್ರಕ್ಕೆ ಬಂದರು. ಅಲ್ಲಿನ ಸಮೀಪದ ಮಾವಿನಕೆರೆ ಎಂಬ ಗ್ರಾಮದ ಬಳಿಯಲ್ಲಿ ಸಾವಿರಾರು ಜನ ಕಾರ್ಮಿಕರು ಸೇರಿ ಅಂಬಾತೀರ್ಥದ ಸಮೀಪದಲ್ಲಿ ಭದ್ರಾನದಿಗೆ ಅಡ್ಡಲಾಗಿ ಒಂದು ಸೇತುವೆಯನ್ನು ನಿರ್ಮಿಸುವ ಸಾಹಸಕಾರ್ಯದಲ್ಲಿ ತೊಡಗಿದ್ದರು.

ಅವರು ನದಿಯಲ್ಲಿ ಕಲ್ಲುಗಳನ್ನು ಉರುಳಿಸಿ, ನದಿಯ ಪ್ರವಾಹಕ್ಕೆ ತಡೆಯನ್ನು ಉಂಟುಮಾಡಲು ಶಕ್ತಿಮೀರಿ ಪ್ರಯತ್ನಿಸಿದ್ದರೂ, ನದಿಯ ವೇಗವಾದ ಪ್ರವಾಹದಿಂದ ಅವುಗಳು ಕೊಚ್ಚಿಕೊಂಡು ಹೋಗುತ್ತಿದ್ದುವು. ಅವರು ನದಿಗೆ ಅಡ್ಡಲಾಗಿ ಹಾಕಿದ ಮರ ಮಣ್ಣುಗಳೂ ಸಹ ನೀರಿನ ಪಾಲಾಗುತ್ತಿದ್ದವು.

ಹೀಗೆ ಅನೇಕ ದಿನಗಳು ಪ್ರಯತ್ನಿಸಿದ್ದರೂ ಅವರ ಶ್ರಮ ವ್ಯರ್ಥವಾಗಿಯೇ ಇತ್ತು. ಅವರು ಕರ್ತವ್ಯ ಮೌಢರಾಗಿದ್ದರು.

ದೊಡ್ಡ ಬಂಡೆಕಲ್ಲುಗಳನ್ನು ನದಿಗೆ ಹಾಕಿದರೆ ಮಾತ್ರ ಅವು ಅಡ್ಡವಾಗಿ ನಿಲ್ಲುತ್ತಿದ್ದುವು. ಅಂತಹ ಬಂಡೆಕಲ್ಲುಗಳು ಅಲ್ಲೇ ಸಮೀಪ ಇದ್ದರೂ ಅವುಗಳನ್ನು ಎತ್ತುವ ಶಕ್ತಿ ಅವರಲ್ಲಿ ಯಾರೊಬ್ಬರಿಗಾಗಲೀ ಒಟ್ಟಿಗಾಗಲೀ ಇರಲಿಲ್ಲ.

ಇಂಥ ಇಕ್ಕಟ್ಟಿನಲ್ಲಿ ಶ್ರೀಮಧ್ವಾಚಾರ್ಯರು ಶಿಷ್ಯರೊಡನೆ ಆ

ಸ್ಥಳಕ್ಕೆ ಆಗಮಿಸಿದ್ದರು.

ಅವರನ್ನು ಈ ಶ್ರಮಜೀವಿಗಳು ದರ್ಶನಮಾಡಿ, ಅವರು ಮಹಾಮಹಿಮರೆಂದು ಅವರ ಮುಖ ಕಾಂತಿಯಿಂದಲೇ ಅರಿತು ತಮಗೆ ಸೇತುವೆ ನಿರ್ಮಿಸುವ ಕಾರ್ಯದಲ್ಲಿ ಸಹಾಯ ಮಾಡಲು ನಮ್ರತೆಯಿಂದಲೇ ಪ್ರಾರ್ಥಿಸಿದರು.

ಶ್ರೀಮದಾಚಾರ್ಯರು ಅವರಮೇಲಣ ಅನುಕಂಪದಿಂದ, ತಮ್ಮ ಎರಡು ತೋಳುಗಳಿಂದ ಅಲ್ಲಿದ್ದ, ಸಾವಿರ ಜನರಿಂದಲೂ ಎತ್ತಲು ಅಸಾಧ್ಯವಾದ ಒಂದು ದೊಡ್ಡ ಬಂಡೆಯನ್ನು ಎತ್ತಿ ನದಿಯ ಪ್ರವಾಹಕ್ಕೆ ಅಡ್ಡಲಾಗಿ ಇಟ್ಟರು. ಅವರಿಗೆ ಆಂಜನೇಯನ ಅವತಾರದಲ್ಲಿ ಮಾಡಿದ ಸಾಹಸ ನೆನಪಾಗಿರಬೇಕು. ಈ ದೊಡ್ಡ ಬಂಡೆಯು ಭದ್ರವಾಗಿ ನಿಂತು ಸೇತುವೆ ಆಯಿತು. ಇದನ್ನು ಈಗಲೂ ಅಲ್ಲಿ ನೋಡಬಹುದು, ವಸ್ತುತಃ ಇದು ಭದ್ರಾನದಿಗೆ ಅಡ್ಡವಾಗಿದೆ, ಭದ್ರಾನದಿಯನ್ನು ತುಂಗಾನದಿ ಎಂದು ಶ್ರೀಮಧ್ವವಿಜಯದಲ್ಲಿ ಹೇಳಿದ್ದಾರೆ.

ಇದರಿಂದ ಆ ಗ್ರಾಮಸ್ಥರಿಗೆ ಮಹದುಪಕಾರವಾಯಿತು. ಅವರು ಶ್ರೀಮದಾಚಾರ್ಯರು ಮಾಡಿದ ಸಹಾಯವನ್ನು ನೆನೆದು "ಶ್ರೀಮಧ್ವಾಚಾರ್ಯೈರೇಕಹಸ್ತೇನಾನೀಯ ಸ್ಥಾಪಿತಾ ಶಿಲಾ" ಎಂದು ಶಿಲಾಶಾಸನ ಬರೆಸಿದರು. ಆ ಭೀಮನ ಕಲ್ಲನ್ನು ಇಂದಿಗೂ ಕಳಸದ ಹತ್ತಿರ ನೋಡಬಹುದು. 1 ಮಾಧ್ವರಲ್ಲಿ ಹನುಮಂತನೇ ಭೀಮನೆಂದೂ, ಭೀಮನೇ ಮಧ್ವರೆಂದೂ ನಂಬಿಕೆ ಇದೆ. ಈ ದೊಡ್ಡ ಬಂಡೆಯ ಮೇಲೆ ಹತ್ತಿ ಹೋಗಿ ನೋಡಿದರೆ ಶ್ರೀಮದಾಚಾರ್ಯರ ಪ್ರತೀಕ, ಕಮಂಡಲು. ದಂಡಕೋಲು ಮತ್ತು ಅವರ ಸಾಹಸದ ಕೆತ್ತನೆ ಇವುಗಳು ಈಗಲೂ ಕಾಣುತ್ತಿವೆ.

---

ತೀರ್ಥಾರ್ಥಂ ಪೃಥುತರವಪ್ರಪಾತಿವಾರಾಂ
ಧಾರಾಣಾಂ ರಯಸಹನಕ್ಷಮಾಂ ಮಹೇಕ್ಷಃ ||
ಆನೀತಾಂ ದಶಶತಪುಂಭಿರತ್ಯಶಕ್ತ್ಯಾ
ಪ್ರೇಕ್ಷೋಚೇ ವಿಪುಲಶಿಲಾಂ ಕ್ವಚಿತ್ಸಮುಕ್ತಾನ್ ||
ಲೋಕಾನಾಮುಪಕೃತಯೇ ಕೃತಃ ಶಿಲೇಯಂ
ನಿನ್ಯೇ ನೊ ಇತಿ ಜನತಾ ಜಗಾದ ತತ್ರ |

ಮುಂದಿನ ಪುಟಕ್ಕೆ

ಶ್ರೀಮದಾಚಾರ್ಯರು ದೇವಗಿರಿ ರಾಜ್ಯವನ್ನು ಪ್ರವೇಶಿಸಿದ ಸಮಯದಲ್ಲಿ ಭಾರತದ ರಾಜಕೀಯ ದಿಗಂತದಲ್ಲಿ ಪ್ರಕ್ಷುಬ್ಧತೆಯ ಕಾರ್ಮೋಡಗಳು ಕಾಣಿಸಿಕೊಂಡಿದ್ದವು.

ಉತ್ತರಭಾರತದಲ್ಲಿ ದೆಹಲಿಯ ಸುಲ್ತಾನರಲ್ಲಿ ರಾಜ್ಯಕ್ಕಾಗಿ ಹೋರಾಟ ನಡೆದಿತ್ತು. ದಕ್ಷಿಣದಲ್ಲಿ ದೇವಗಿರಿ, ದ್ವಾರಸಮುದ್ರ, ಮಧುರೆಗಳಲ್ಲಿ ದುರ್ಬಲ ದೊರೆಗಳಿಂದಾಗಿ ಅರಾಜಕತೆ ಉಂಟಾಗಿತ್ತು.

ದೇವಗಿರಿ ಯಾದವರಲ್ಲೂ, ದ್ವಾರಸಮುದ್ರದ ಹೊಯ್ಸಳರಲ್ಲೂ, ಮಧುರೆಯ ಪಾಂಡ್ಯರಲ್ಲೂ ಸಿಂಹಾಸನಕ್ಕಾಗಿ ಸಹೋದರರಲ್ಲೇ, ಜ್ಞಾತಿಗಳಲ್ಲೇ ಕಾದಾಟ, ಕಚ್ಚಾಟಗಳು ನಡೆದಿದ್ದವು. ಇವು ಅರಸೊತ್ತಿಗೆಯನ್ನು ದುರ್ಬಲಗೊಳಿಸಿ, ರಾಜಶಾಸನವನ್ನು ಕ್ಷೀಣಿಸಿತ್ತು. ಜನತೆಗೆ ಅಧಿಕಾರಿಗಳ ಬಗ್ಗೆ ಭಯ ಭಕ್ತಿಗಳಾಗಲೀ, ಗೌರವವಾಗಲೀ ಇರಲಿಲ್ಲ. ಎಲ್ಲೆಲ್ಲೂ ಸ್ವೇಚ್ಛಾಚಾರ, ಶೋಷಣೆಗಳು ನಡೆದಿದ್ದವು. ದುರ್ಬಲರನ್ನು ಹಿಂಸಿಸಿ ಹಣ ದೋಚುವ ನಿರಂಕುಶ ಪ್ರಭುತ್ವ ಎದ್ದು ಕಾಣುತ್ತಿತ್ತು.

ಇಂಥ ಪರಿಸ್ಥಿತಿಯಲ್ಲಿ ಉತ್ತರಭಾರತದಲ್ಲಿ ಬೇರುಬಿಟ್ಟದ್ದ ಮುಸಲ್ಮಾನರು ದಕ್ಷಿಣ ದಿಕ್ಕಿಗೆ ಕಾಲುಚಾಚುವ ಪ್ರಯತ್ನದಲ್ಲಿದ್ದರು. ಅವರು ದಕ್ಷಿಣದ ರಾಜ್ಯಗಳಲ್ಲಿ ಒಂದೊಂದನ್ನೇ ದುರಾಕ್ರಮಿಸಿಕೊಂಡು ನೆಲೆಯೂರಲು ಬೇಕಾದ ರಾಜಕೀಯ ಪರಿಸ್ಥಿತಿ ಈಗ ಅವರಿಗೆ ದೊರೆತಿತ್ತು. ಈ ಪರಿಸ್ಥಿತಿಯ ಲಾಭ ಪಡೆಯಲು ಅವರು ಸರ್ವಪ್ರಯತ್ನವನ್ನೂ ಮಾಡುತ್ತಿದ್ದರು.

ಶ್ರೀಮಧ್ವಾಚಾರ್ಯರು ಯಾದವರಾಜ್ಯದ ಮೂಲಕ ಪ್ರಯಾಣ ಮಾಡುತ್ತಿದ್ದಾಗ ಒಂದು ವಿಚಿತ್ರ ಘಟನೆ ನಡೆಯಿತು.

---

ನೇತಾರೋ ಯತಿವರ ಮಾವವಾ ನ ಹೀಮಾಂ
ಭೀಮಶ್ಚೇದಿಹ ಯತತೇ ನಯೇನ್ನವೇತಿ॥
ವಿಸ್ಮೇ ತಾಂ ಗಿರಿಮಿವ ವಾನರೀಕೃತಾತ್ಮಾ
ಲೀಲಾವತ್ಕರಕಮಲೇನ ಸೋನಾಮಲೇನ।
ತತ್ರಾಪಿ ನೃಧಿತ ತಯಾಸ್ಯ ಸೂಚಿತ್ಯೇಲಂ
ತತ್ತುಂಗಾಂ ನನು ನಿಕಷಾಧುನಾಪಿ ಕರ್ಮ॥
ಮ॥ ವಿ॥ ಸ॥ ಶ್ಲೋಕ 7,8,9

ಈಶ್ವರದೇವನೆಂಬ ಬಿಚ್ಚ ದೊರೆಯು ಶ್ರೀಮದಾಚಾರ್ಯರನ್ನು ಸಾಮಾನ್ಯ ದಾರಿಹೋಕ ಸಂನ್ಯಾಸಿ ಎಂದು ತಿಳಿದು ಅವರನ್ನು ಅಪಮಾನಗೊಳಿಸಲು ಪ್ರಯತ್ನಿಸಿ, ಬುದ್ಧಿ ಭ್ರಮಣೆ ಹೊಂದಬೇಕಾದ ಪ್ರಸಂಗ ನಡೆಯಿತು.

ದೇವಗಿರಿ ಯಾದವರಿಗೆ ಸೇವ್ರಣರೆಂದು ಹೆಸರಿತ್ತು. ಇವರು ಕನ್ನಡಿಗರು. ಕೃಷ್ಣಾನದಿಯ ದಂಡೆಯಲ್ಲಿ, ಇವರ ರಾಜಧಾನಿ ದೇವಗಿರಿ ಇತ್ತು. ಭಿಲ್ಲಮನೆಂಬ ವೀರನು ಈ ವಂಶದ ಮೂಲಪುರುಷ; ಅವನು ತನ್ನ ಬಾಹುಬಲದಿಂದಲೇ ಕುಂತಳ ದೇಶವನ್ನು ಗೆದ್ದಿದ್ದನೆಂದು ಶಾಸನಗಳಲ್ಲಿ ಉಲ್ಲೇಖನವಿದೆ. ಅವನ ನಂತರಅವನ ಮಗ ಸಿಂಘಣನೂ (ಕ್ರಿ.ಶ.1210–1247) ಅನಂತರ ಅವನ ಮಗ ಕೃಷ್ಣಕಂಧಾರನೂ (ಕ್ರಿ.ಶ. 1247–1260) ದೇವಗಿರಿ ಸಿಂಹಾಸನವನ್ನಾಳಿದ್ದರು.

ಅವನ ತಮ್ಮ ಮಹಾದೇವನೆಂಬುವನು ಮಹಾತ್ವಾಕಾಂಕ್ಷೆಯುಳ್ಳ ತರುಣನಾಗಿದ್ದನು; ಅವನು ಯುವರಾಜನಾಗಿ ತನ್ನ ಸಹೋದರನಿಗೆ ಬೆಂಬಲನಾಗಿ ರಾಜ್ಯಾಡಳಿತದಲ್ಲಿ ನೆರವಾಗುತ್ತಿದ್ದನು.

ಅವನು ಯುದ್ಧದಲ್ಲಿ ಆಂಧ್ರರನ್ನೂ, ಗುರ್ಜರರನ್ನೂ, ಕರ್ಣಾಟ, ಲಾಟ ರಾಜರನ್ನೂ ಗೆದ್ದಿದ್ದನೆಂದು ಹೇಳುತ್ತಾರೆ. ಮುಂದೆ ಇವನಿಂದ ಕಾಕತೀಯರು ಪರಾಜಿತರಾಗಿದ್ದರು. ಇವನ ಆಸ್ಥಾನದಲ್ಲಿದ್ದ ಹೇಮಾದ್ರಿ ಭಟ್ಟ ಎಂಬ ಪಂಡಿತನು ಧರ್ಮಶಾಸ್ತ್ರಕ್ಕೆ ವ್ಯಾಖ್ಯಾನಮಾಡಿ ಪ್ರಸಿದ್ಧಿಪಡೆದಿದ್ದನು. ಹೇಮಾದ್ರಿ ಎಂಬ ನಾಮವುಳ್ಳ ಒಂದು ಧರ್ಮಶಾಸ್ತ್ರವೇ ಇದೆ.

ಮಹಾರಾಷ್ಟ್ರ ಕರ್ನಾಟಕಗಳಲ್ಲಿ ಮಹಾನುಭಾವಪಂಥ ಮತ್ತು ಪಾಂಡುರಂಗವಿಠಲಭಕ್ತಿಪಂಥಗಳು ಆರಂಭವಾದುದು ಇವನ ಕಾಲದಲ್ಲೇ ಎಂದು ಹೇಳುತ್ತಾರೆ.

ಇವನು ಕಾಕತೀಯ ವಂಶದ ಮಹಾ ಪ್ರತಾಪಶಾಲಿನಿ ರಾಣಿ ರುದ್ರಮ್ಮದೇವಿ (ಕ್ರಿ.ಶ. 1270–1295) ಮತ್ತು ಹೊಯ್ಸಳದೊರೆ ಮುಮ್ಮಡಿ ನರಸಿಂಹ (ಕ್ರಿ.ಶ. 1264–1292) ಇವರ ಸಮಕಾಲೀನನಾಗಿದ್ದನು.

ಇವನ ಅನಂತರ ಪಟ್ಟಕ್ಕೆ ಬಂದ ರಾಮದೇವರಾಯನ ಕಾಲದಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ನರ್ಮದಾನದಿಯನ್ನು ದಾಟಿ ದೇವಗಿರಿಯ ಮೇಲೆ ದಾಳಿ ಇಟ್ಟನು. ಅಲ್ಲಾವುದ್ದೀನನ ಆದೇಶದಂತೆ, ಮಲ್ಲಿಕಾಫೂರನೆಂಬ ಸಮರ್ಥ

ಸೇನಾನಿಯು ದಕ್ಷಿಣಾಪಥದ ಮೇಲೆ ದಂಡೆತ್ತಿ ಬಂದು ಅದನ್ನು ದುರಾಕ್ರಮಣ ಮಾಡಿ, ಹಿಂದೂ ಧರ್ಮ ಸಂಸ್ಕೃತಿಗಳಿಗೆ ಬಲವಾದ ಪೆಟ್ಟು ಕೊಟ್ಟು ಅದರ ಸ್ವಾತಂತ್ರ್ಯಹರಣವನ್ನೂ ಮಾಡಿದನು.

ಹೀಗೆ ಯಾದವರು ಯವನರಿಗೆ ಸೋತು ತಮ್ಮ ರಾಜ್ಯಕೋಶಗಳನ್ನು ಮಾತ್ರವಲ್ಲ, ಸರ್ವಸ್ವವನ್ನೂ ಕಳೆದುಕೊಳ್ಳುವರೆಂಬುದನ್ನು ಪೂರ್ವಭಾವಿಯಾಗಿ ಸೂಚಿಸಲೆಂಬಂತೆ ಈ ಒಂದು ದುರ್ಘಟನೆ ನಡೆದಿತ್ತು.

ಕೃಷ್ಣಾನದಿಯ ಅಣೆಕಟ್ಟಿನಿಂದ ಕಾಲುವೆಯೊಂದನ್ನು ತೋಡಿಸುತ್ತಿದ್ದ ಈಶ್ವರದೇವನಿಂದ ಸರ್ವಜ್ಞಾಚಾರ್ಯರಾದ ಶ್ರೀಮಧ್ವಾಚಾರ್ಯರಿಗೆ ಅಪಮಾನ ಅಗೌರವಗಳು ಉಂಟಾಗಿದ್ದವು.

ಅದರ ಫಲವನ್ನು ಈಶ್ವರದೇವನು ಮಾತ್ರವಲ್ಲ ಅವನ ವಂಶದ ಮುಂದಿನ ದೊರೆಗಳೂ ಜನರೂ ಅನುಭವಿಸಬೇಕಾಗಿ ಬಂದುದು ವಿಧಿಯ ಲೀಲೆಯೇ ಸರಿ !

ಕೃಷ್ಣಕಂಧಾರನು ಧರ್ಮಿಷ್ಠ ದೊರೆಯಾಗಿದ್ದನು. ಸಾಧು ಸಜ್ಜನರ ವಿಷಯದಲ್ಲಿ ಆದರ ಉಳ್ಳವನಾಗಿದ್ದನು. ಅವನು ತನ್ನ ರಾಜ್ಯದ ಮೂಲಕ ಶ್ರೀಮಧ್ವಾಚಾರ್ಯರು ಬದರಿಗೆ ಪ್ರಯಾಣ ಹೊರಟಿದ್ದಾರೆ ಎಂಬುದನ್ನು ಕೇಳಿ ಅವರನ್ನು ರಾಜಧಾನಿಗೆ ಬರಮಾಡಿಕೊಂಡು ಸತ್ಕರಿಸಿ ಕಳುಹಿಸಬೇಕೆಂದಿದ್ದನು.

ಆದರೆ ಜೀವನೊಂದು ಬಗೆದರೆ ದೈವವೊಂದು ಬಗೆದಿತ್ತು.

ಆ ದಿನ ಕೃಷ್ಣಕಂಧಾರಭೂಪಾಲನು ನಿದ್ರಿಸುತ್ತಿದ್ದಾಗ ಅವನಿಗೆ ಒಂದು ವಿಚಿತ್ರ ಕನಸಾಯಿತು.

ಕನಸಿನಲ್ಲಿ ದಕ್ಷಿಣ ದೇಶದಿಂದ ಒಬ್ಬ ಯತಿಗಳು ತನ್ನ ಅರಮನೆಗೆ ಬಂದಂತೆ ಕಂಡನು. ಅವನನ್ನು ತಾನು ಸ್ವಾಗತಿಸಿ, ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಬೇಕೆಂದಿರುವಾಗ ಅರಮನೆಗೆ ಬೆಂಕಿಬಿದ್ದು ಸುಟ್ಟುಹೋದಂತೆಯೂ, ಈ ಬೆಂಕಿಯಲ್ಲಿ ಆ ಯತಿಗಳು ನಡೆದುಕೊಂಡು ಉತ್ತರದಿಕ್ಕಿಗೆ ಹೊರಟುಹೋದಂತೆಯೂ ನೋಡಿದನು.

ಇದನ್ನು ರಾಜ ಪುರೋಹಿತನಿಗೆ ವಿಜ್ಞಾಪಿಸಿಕೊಳ್ಳಲು, ಅವನು ದೊರೆ ರಾಜ್ಯಕೋಶಗಳಿಗೆ ಯಾವುದೋ ಗಂಡಾಂತರ ಒದಗುವುದೆಂದೂ, ದೊರೆಯು ಈ ವಿಪತ್ತನ್ನು ತಪ್ಪಿಸಲು ಪ್ರಾಯಶ್ಚಿತ್ತ ರೂಪದಲ್ಲಿ ದೇವತಾಕಾರ್ಯ–ನವಗ್ರಹ ಪೂಜೆ, ಚಂಡೀಹೋಮಾದಿಗಳನ್ನು ಮಾಡಿಸಬೇಕೆಂದು ಸಲಹೆ ಮಾಡಿದನು.

ದೊರೆಯು ಶ್ರೀಮದಾಚಾರ್ಯರನ್ನು ಬರಮಾಡಿಕೊಂಡು ಅವರನ್ನು ಭಕ್ತಿಯಿಂದ ಸೇವಿಸಿ ಆ ಮೂಲಕ ತನ್ನ ರಾಜ್ಯಕ್ಕೆ ಮುಂದೆ ಒದಗಬಹುದಾದ ಗಂಡಾಂತರವನ್ನು ನಿವಾರಿಸಿಕೊಳ್ಳಬೇಕೆಂದು ಆಲೋಚಿಸಿ ಈ ಕಾರ್ಯಕ್ಕೆ ಸಮರ್ಥರಾದ ರಾಜಕಾರಣಿಗಳನ್ನು ನಿಯೋಜಿಸಿದ್ದನು.

ರಾಜಕಾರಣಿಗಳು ಬಂದು ಶ್ರೀಮದಾಚಾರ್ಯರನ್ನು ರಾಜಧಾನಿಗೆ ಕರೆದೊಯ್ಯುವ ಮುನ್ನವೇ ನಡೆಯಬಾರದ ಅಚಾತುರ್ಯವೊಂದು ನಡೆದೇಹೋಗಿತ್ತು.

ಈಶ್ವರದೇವನ ಇನ್ನೊಂದು ಹೆಸರು ಮಹಾದೇವ. ಅವನು ತನ್ನ ಸಹೋದರನ ಅಪೇಕ್ಷೆಯಂತೆ, ಪ್ರಜೆಗಳ ಬಹುದಿನದ ಕೋರಿಕೆಯಾಗಿದ್ದ ಕೃಷ್ಣಾ ನದಿಯ ಅಣೆಕಟ್ಟಿನಿಂದ ಕಾಲುವೆಯೊಂದನ್ನು ಈ ಸಮಯದಲ್ಲಿ ತೋಡಿಸುತ್ತಿದ್ದನು.

ಈ ಕಾಲುವೆಯ ಕೆಲಸ ಸತತವಾಗಿ ನಡೆದಿತ್ತು. ಇದನ್ನು ನಿರ್ವಹಿಸಲು ರಾಜನೇ ಆ ಸ್ಥಳದಲ್ಲಿ ಶಿಬಿರಹೂಡಿ ಕಾರ್ಯೋನ್ಮುಖನಾಗಿ ನಿಂತಿದ್ದನು.

ಆ ಕಾಲುವೆಯಿಂದ ಪ್ರಯೋಜನ ಪಡೆಯುವ ಎಲ್ಲ ಹಳ್ಳಿಯ ಜನರಿಂದ ಕಾಲುವೆ ಕೆಲಸ ಮಾಡಿಸುತ್ತಿದ್ದನು. ಅತ್ತ ಬಂದ ಭಿಕ್ಷುಕರು, ಸಾಧು ಸಂನ್ಯಾಸಿಗಳೆನ್ನದೆ ಎಲ್ಲರಿಂದಲೂ ಕೆಲವು ತಾಸುಗಳಾದರೂ ದುಡಿಸಿಕೊಳ್ಳುತ್ತಿದ್ದನು. ಈಶ್ವರದೇವನು ಆ ದಿನ ಕಾಲುವೆಯ ಕೆಲಸವನ್ನು ನೋಡಿಕೊಂಡು ತನ್ನ ಶಿಬಿರಕ್ಕೆ ಹಿಂತಿರುಗಿ ಎಲೆಯ ಮುಂದೆ ಊಟಕ್ಕೆ ಕುಳಿತಿದ್ದನು. ಸುಂದರಿಯರಾದ ಯುವತಿಯರು ಅವನಿಗೆ ಉಪಚರಿಸಲು ಅಡಿಗೆ ಬಡಿಸಲು ಸಿದ್ಧರಾಗಿ ಕೈಕಟ್ಟಿ ನಿಂತಿದ್ದರು.

ಇನ್ನೇನು ಅವನು ಊಟ ಮಾಡಬೇಕೆಂದಿರುವಾಗ, ಸೇವಕನೊಬ್ಬನು ಬಂದು ಒಂದು ವಾರ್ತೆಯನ್ನು ತಿಳಿಸಿದನು.

"ಪ್ರಭೋ, ತಮ್ಮನ್ನು ನೋಡಲು ಒಬ್ಬ ಸಂನ್ಯಾಸಿ ಮಹಾಪುರುಷರು ಕಾಲುವೆಯ ಬಳಿ ಬಂದಿದ್ದಾರೆ".

"ನಾವು ಊಟಕ್ಕೆ ಕುಳಿತಿದ್ದೇವೆ ಎಂದು ತಿಳಿಸು. ನಮ್ಮನ್ನು ಕಾಣಬೇಕಾದರೆ ಸಂಜೆಗೆ ಅವರನ್ನು ನೋಡುತ್ತೇವೆ ಎಂದೂ ಹೇಳು."

"ನಾವು ಆಗಲೇ ಈ ಮಾತನ್ನು ತಿಳಿಸಿದೆವು. ಆದರೂ ತಮ್ಮನ್ನು ಈಗಲೇ ನೋಡಬೇಕೆಂದು ಹಠ ಹಿಡಿದಿದ್ದಾರೆ."

"ಏಕೆ ಈ ಹಠ ?"

"ನಾವು ಇಲ್ಲಿಗೆ ಬರುವ ಭಿಕ್ಷುಕರನ್ನೂ, ಸಾಧುಸಂನ್ಯಾಸಿಗಳನ್ನೂ ಒತ್ತಾಯದಿಂದ ದುಡಿಸಿಕೊಂಡು ಕಿರುಕುಳ ಕೊಡುತ್ತಿದ್ದೇವೆಂದು ಅವರಿಗೆ ದೂರು ಬಂದಿದೆಯಂತೆ. ಇದರ ಬಗ್ಗೆ ತಮ್ಮೊಡನೆ ಮಾತನಾಡಬೇಕಂತೆ."

"ಈಗ ಅದಕ್ಕೆಲ್ಲ ಸಮಯವಿಲ್ಲ. ಹೋಗಿ ಅವರಿಗೆ ತಿಳಿಸಿರಿ; ಅವರು ನನ್ನನ್ನು ನಿಧಾನವಾಗಿ ಕಾಣಲಿ"— ಈಶ್ವರದೇವ ಆಜ್ಞೆ ಮಾಡಿದ.

ಅದರಂತೆ ಸೇವಕರು ಬಂದು ಶ್ರೀಮದಾಚಾರ್ಯರಿಗೆ ಈ ವಾರ್ತೆಯನ್ನು ನಮ್ರತೆಯಿಂದ ಅರುಹಿದರು.

ಶ್ರೀಮದಾಚಾರ್ಯರು ಸಾಧು ಸತ್ಪುರುಷರಿಗೆ ಕಿರುಕುಳ ಕೊಡುತ್ತಿದ್ದ ಈಶ್ವರದೇವನಿಗೆ ಸರಿಯಾದ ಬುದ್ಧಿ ಕಲಿಸಲೇಬೇಕೆಂದು ಯೋಚಿಸಿದ್ದರು.

ದೊರೆಯನ್ನು ಭೇಟಿಮಾಡದೆ ತಾವು ಸ್ನಾನಾಹ್ನಿಕಗಳಿಗೆ ಏಳುವುದಿಲ್ಲವೆಂದು ಅವರು ಪುನಃ ಹೇಳಿಕಳುಹಿಸಿದರು.

ಈ ಮಾತನ್ನು ಕೇಳಿ ಶ್ರೀಮದಾಚಾರ್ಯ ಕುಪಿತನಾದ ಈಶ್ವರದೇವನು ಊಟ ಮಾಡದೆ ಕೋಪದಿಂದಲೇ ಶ್ರೀಮದಾಚಾರ್ಯರ ಬಳಿಗೆ ಬಂದನು.
ಪ್ರಯಾಣದಿಂದ ಬಳಲಿದಂತಿದ್ದ ಆಚಾರ್ಯರನ್ನೂ, ಅವರ ಪರಿವಾರದವರನ್ನೂ ನೋಡಿ, ಅವರು ಸಾಮಾನ್ಯ ದಾರಿಹೋಕರೆಂದು ತಪ್ಪು ತಿಳಿದು ಅವರಿಗೆ ಯೋಗ್ಯಗೌರವವನ್ನು ತೋರಿಸದೆ, ಒರಟು ಧ್ವನಿಯಲ್ಲಿ ಗದರಿಸಿ ಹೇಳಿದನು.

"ಸ್ವಾಮಿ, ನೀವು ಯಾರೋ ತಲೆಹೋಕರಂತೆ ಕಾಣುತ್ತಿದ್ದೀರಿ. ನಿಮ್ಮನ್ನು ನೋಡಲು ಸಮಯವಿಲ್ಲವೆಂದು ಹೇಳಿಕಳುಹಿಸಿದರೂ, ನಮ್ಮನ್ನು ನೋಡಲು ಒತ್ತಾಯ ಮಾಡಿದಿರಿ. ಈಗ ನೀವು ಹೇಳುವುದಾದರೂ ಏನು. ಬೇಗ ಹೇಳಿ ಮುಗಿಸಿ. ನನ್ನ ಭೋಜನಕ್ಕೆ ತಡವಾಗುತ್ತಿದೆ".

"ಅಯ್ಯಾ ರಾಜ, ನಿನಗೆ ನಮ್ಮ ಯೋಗಕ್ಷೇಮ ವಿಚಾರಿಸುವಷ್ಟು ವ್ಯವಧಾನವಿಲ್ಲ, ಇನ್ನು ನಿನ್ನಿಂದ ಅತಿಥಿ ಸತ್ಕಾರವನ್ನಾಗಲೀ, ಒಳ್ಳೆಯ ಮಾತ

ನ್ನಾಗಲೀ ನಿರೀಕ್ಷಿಸುವುದು ತಪ್ಪಾದೀತು. ಇರಲಿ, ಈಗ ನಾವು ಹೇಳಬೇಕೆಂದಿರುವ ವಿಷಯ ನಿನ್ನ ವಿಪರೀತ ವರ್ತನೆ ಕುರಿತು. ನೀನು ಈ ಕಡೆ ಬಂದುಹೋಗುವ ಎಲ್ಲ ಸಾಧು ಸಂನ್ಯಾಸಿಗಳನ್ನು ಒತ್ತಾಯದಿಂದ ಕರೆತಂದು ಕಾಲುವೆ ತೋಡುವ ಕೆಲಸಕ್ಕೆ ಹಚ್ಚುತ್ತಿರುವುದಾಗಿ ತಿಳಿಯಿತು. ಇದರಿಂದ ಅವರಿಗೆ ತೊಂದರೆ ಕಿರುಕುಳಗಳಾಗುತ್ತಿರುವುದಾಗಿಯೂ ಕೇಳಿದ್ದೇವೆ. ನೀನು ಹೀಗೆ ಮಾಡುವುದು ಸರಿಯಲ್ಲ. ಇದನ್ನು ನಿನಗೆ ತಿಳಿಸಿಹೋಗಲು ಈಗಲೇ ಕರೆಸಬೇಕಾಯಿತು. ನಮ್ಮಿಂದ ತೊಂದರೆಯಾಗಿದ್ದರೆ ಕ್ಷಮೆ ಇರಲಿ."—ಎಂದು ಆಚಾರ್ಯರು ಶಾಂತರಾಗಿಯೇ ಹೇಳಿದರು

ಈ ಮಾತು ಕೇಳಿ ಮೊದಲೆ ಹಸಿವಿನಿಂದ ಕೆರಳಿದ್ದ ಈಶ್ವರದೇವನು ಸ್ಮರಣೆಗೆಟ್ಟು ಮತ್ತಷ್ಟು ಕೆರಳಿದನು.

ಅವನಿಗೆ ಎಂದೂ, ಯಾರೂ ಇದುವರಿಗೆ ಈ ರೀತಿಯಲ್ಲಿ ಏಕವಚನದಲ್ಲಿ ಸೇವಕ ಪರಿವಾರದ ಎದುರಿನಲ್ಲಿ ಬುದ್ಧಿವಾದ ಹೇಳಲು ಧೈರ್ಯಮಾಡಿರಲಿಲ್ಲ!

ಇದರಿಂದ ಮುಂದಾಗುವ ಪರಿಣಾಮವನ್ನೂ ಊಹಿಸದೆ ಈಶ್ವರದೇವನು ಕೋಪದಿಂದಲೇ ದುರ್ವಿನೀತನಾಗಿ ಘರ್ಜಿಸಿದನು!

" ಸ್ವಾಮಿ, ನೀವು ಯಾರೇ ಆಗಿರಿ. ನಿಮ್ಮಂತಹ ಸಂನ್ಯಾಸಿಗಳನ್ನು ನಾನು ಅನೇಕರನ್ನು ನೋಡಿದ್ದೇನೆ. ನೀವು ಈಗ ನನ್ನನ್ನು ಕೆರಳಿಸಿದ್ದೀರಿ. ದಯ ಮಾಡಿ ನನ್ನ ಮುಂದೆ ನಿಲ್ಲದೇ ಹೊರಟುಹೋಗಿರಿ. ಇಲ್ಲದಿದ್ದರೆ....ಇದರ ಪರಿಣಾಮವನ್ನು ನೀವೂ ಸಹ ಭೋಗಿಸಬೇಕಾಗುತ್ತದೆ."

"ಇದರ ಪರಿಣಾಮ ಏನು ? ನಾವು ಸಂತೋಷದಿಂದಲೇ ಅನುಭವಿಸುತ್ತೇವೆ" ಶ್ರೀಮದಾಚಾರ್ಯರು ಶಾಂತವಾಗಿ ಕೇಳಿದರು.

"ನೀವು ನನ್ನನ್ನು ಕೆರಳಿಸಿ ಅಹಿತ ನಿರ್ಣಯ ಕೈಗೊಳ್ಳುವಂತೆ ಮಾಡುತ್ತಿದ್ದೀರಿ. ನನ್ನನ್ನು ಇನ್ನೂ ಕೋಪಗೊಳ್ಳುವಂತೆ ಮಾಡಬೇಡಿ—ದಯವಿಟ್ಟು ಹೊರಟುಹೋಗಿ ಇಲ್ಲಿಂದ."

---

1) ಕ್ವಚಿದೀಶ್ವರದೇವಮೇಷ ಭೂಪಂ
ಖನನಂ ಪಾಂಥಜನಂ ವಿಧಾಪಯಂತಂ॥
ಸ್ವಮಪಿ ಪ್ರತಿಚೋದಯಂತಮೂಚೇ
ಕ್ರಿಯಯಾ ನೋಃ ಕುಶಲಾನ್ ಪ್ರಬೋಧಯೇತಿ॥

 ಮ॥ ವಿ॥ಸ॥ 10–ಶ್ಲೋಕ–4

"ನಮ್ಮ ಕೋರಿಕೆ ಈಡೇರದೇ ನಾವು ಇಲ್ಲಿಂದ ಒಂದು ಹೆಜ್ಜೆಯನ್ನೂ ಮುಂದೆ ಇಡುವುದಿಲ್ಲ."

"ಹಾಗಿದ್ದರೆ ನಿಮಗೂ ಕಾಲುವೆ ತೋಡುವ ಶಿಕ್ಷೆಯನ್ನು ನಾನು ವಿಧಿಸಲೇ ಬೇಕಾಗುತ್ತದೆ!"

"ಸಂತೋಷದಿಂದಲೇ ಮಾಡುತ್ತೇವೆ. ಆದರೆ ನಾವು ಸಂನ್ಯಾಸಿಗಳು, ನೆಲವನ್ನು ಅಗೆದು ಅಭ್ಯಾಸವಿಲ್ಲ. ದಯವಿಟ್ಟು ನೀನು ಹೇಗೆ ಅಗೆಯಬೇಕೆಂದು ತೋರಿಸಿ ಕೊಟ್ಟರೆ ಆದರಂತೆ ಅಗೆಯುತ್ತೇವೆ."

—ಎಂದು ಶಾಂತರಾಗಿ ಶ್ರೀಮಧ್ವಾಚಾರ್ಯರು ಹೇಳಿದರು.

ಮಧ್ಯಾಹ್ನ, ಭೋಜನದ ವೇಳೆಯಲ್ಲಿ ಈ ದಷ್ಟಪುಷ್ಟದಿವ್ಯ ಯತಿಯಿಂದ ತನಗೆ ಅಪಮಾನವಾಗುತ್ತಿದೆ—ಎಂದು ತಿಳಿದ ಈಶ್ವರದೇವನು ಕುಪಿತನಾದನು.

"ಯಾರಲ್ಲಿ ಒಂದು ಗುದ್ದಲಿಯನ್ನು ತನ್ನಿ"

—ಎಂದು ಆಜ್ಞೆ ಮಾಡಿದನು.

ಆದನ್ನು ಸೇವಕರು ತಂದು ಶ್ರೀಮದಾಚಾರ್ಯರಿಗೆ ಕೊಟ್ಟರು. ಅವರು ಗುದ್ದಲಿಯನ್ನು ಈಶ್ವರದೇವನ ಕೈಗೆ ಕೊಡುತ್ತಾ "ನೀನು ಹೇಗೆ ಅಗೆಯಬೇಕೆಂದು ಅಗೆದು ತೋರಿಸು, ನಾವೂ ಹಾಗೆಯೇ ಅಗೆಯುತ್ತೇವೆ"—ಎಂದರು.

ಅವನು ಶ್ರೀಮದಾಚಾರ್ಯರನ್ನು ದಹಿಸುವಷ್ಟು ಕೋಪದಿಂದ ಕೆಂಡಕಾರುತ್ತಾ ಕೈಗೆ ಗುದ್ದಲಿಯನ್ನು ತೆಗೆದುಕೊಂಡು ಅಗೆಯಲಾರಂಭಿಸಿದನು.1

ಆದೇನು ಆಶ್ಚರ್ಯ! ·

ಈಶ್ವರದೇವನು ಅಗೆಯಲಾರಂಭಿಸಿದವನು ತಲೆ ಎತ್ತಲೇ ಇಲ್ಲ, ಅಗೆಯುವುದನ್ನು ನಿಲ್ಲಿಸಲೇ ಇಲ್ಲ. ಅವನು ಅಗೆಯುತ್ತಲೇ ಇದ್ದನು.

ಒಂದು ತಾಸಾಯಿತು ಎರಡು ತಾಸಾಯಿತು.

---

1) ಪ್ರಕಾರಂ ಪ್ರಕಟೀಕರ್ತುಮಾರಭ್ಯ ವಿರರಾಮ ನೋ ।
ಮಹೀಯೋ ಮತಿಮಾಹಾತ್ಮ್ಯಾ ದ್ವ್ಯವಶ್ಯೇನ ಖನನ್ ಖಲು ॥
ನಾವೇನಾನೇವೇನಾನೇನೋ ನೂವೇನ ನನುನುನ್ನಾಃ।
ನಾನಾನಾ ವೋ ನೂನಂ ನಾನೇನಾ ನೂವನಾನುನ್ನಃ
ಮ॥ ವಿ॥ ಸ॥ 10-ಶ್ಲೋಕ5-6

ಸೇವಕರು ದೊರೆಯ ಕೈಯಿಂದ ಗುದ್ದಲಿಯನ್ನು ಕಿತ್ತುಕೊಳ್ಳಬೇಕೆಂದು ಪ್ರಯತ್ನಿಸಿದರೂ ಸಾಧ್ಯವಾಗದೇ, ಯಾವುದೋ ಭೂತ ಹೊಕ್ಕವನಂತೆ ಭ್ರಮಿಷ್ಟನಾದವನಂತೆ, ಈಶ್ವರದೇವನು ಆಯಾಸವನ್ನೂ ಲೆಕ್ಕಿಸದೇ ಭೂಮಿಯನ್ನು ಅಗೆಯುತ್ತಲೇ ಇದ್ದನು.

ಶ್ರೀಮದಾಚಾರ್ಯರು ಅವನನ್ನು ನೋಡಿ ಮುಗುಳ್ನಗೆ ನಗುತ್ತಾ, ತಮ್ಮನ್ನು ತಡೆಯಲು ಬಂದವರನ್ನು ದೂರಸರಿಸಿ, ಕೃಷ್ಣಾನದಿಯಲ್ಲಿ ಸ್ನಾನಾಹ್ನಿಕ, ದೇವರ ಪೂಜೆಗಳನ್ನೂ ಭೋಜನವನ್ನೂ ತೀರಿಸಿಕೊಂಡು ಅಲ್ಲಿಂದ ಉತ್ತರ ದಿಕ್ಕಿಗೆ ಪ್ರಯಾಣ ಮುಂದುವರೆಸಿದರು.

ಅವರು ಆ ಸ್ಥಳದಿಂದ ಹೊರಟುಹೋದ ಮೇಲೆ ಈಶ್ವರದೇವನಿಗೆ ಪ್ರಜ್ಞೆ ಮರಳಿತು. ಅವನು ತನ್ನನ್ನು ಈ ಕಾರ್ಯಕ್ಕೆ ಹಚ್ಚಿ ಹೊರಟು ಹೋದ ಶ್ರೀಮದಾದಾರ್ಯರ ಮಹಿಮೆಗೆ ಆಚ್ಚರಿಪಟ್ಟನು.

ಅವನು ತನ್ನ ಅಕೃತ್ಯಕ್ಕಾಗಿ ಪಶ್ಚಾತ್ತಾಪಪಟ್ಟು ಅವರಲ್ಲಿ ಕ್ಷಮೆ ಯಾಚಿಸಲು ನೋಡಿದನು. ಅವರನ್ನು ಕರೆತರಲು ಸೇವಕನಿಗೆ ಆಜ್ಞೆ ಮಾಡಿ ತನ್ನ ಶಿಬಿರಕ್ಕೆ ಹಿಂತಿರುಗಿದನು.

ಆದರೆ ಅಲ್ಲಿಂದ ಕಣ್ಮರೆಯಾಗಿದ್ದ ಶ್ರೀಮದಾಚಾರ್ಯರು ಮತ್ತೆ ಈಶ್ವರದೇವನ ಕಣ್ಣಿಗೆ ಬೀಳಲೇ ಇಲ್ಲ.

ಈ ಘಟನೆ ನಡೆದ ಅತ್ಯಲ್ಪ ಕಾಲದಲ್ಲಿ ದೊರೆ ಕೃಷ್ಣಕಂಧಾರನು ಮಡಿದು, ಈಶ್ವರದೇವನು ಮಹಾದೇವನೆಂಬ ಹೆಸರಿನಿಂದ ದೊರೆಯಾದನು.

ಅವನು ಅಕಾಲಮರಣ ಹೊಂದಲು ಅವನ ನಂತರ ಅವನ ಮಗ ರಾಮದೇವರಾಯನು ದೇವಗಿರಿ ಸಿಂಹಾಸನವನ್ನೇರಿದನು.

ಇವನ ಕಾಲದಲ್ಲಿ ಮಲ್ಲಿಕಾಫುರನು ದಂಡೆತ್ತಿ ಬಂದು ದೇವಗಿರಿ ರಾಜ್ಯವನ್ನು ನಾಶಪಡಿಸಿ, ಯಾದವರ ಆಳ್ವಿಕೆಗೆ ಇತಿಶ್ರೀ ಹಾಡಿದನೆಂದು ಇತಿಹಾಸ ತಿಳಿಸುತ್ತದೆ.

## ದಿಲ್ಲಿ ಸುಲ್ತಾನನಿಂದ ರಾಜಮನ್ನಣೆ

ಭರತಖಂಡದ ಇತಿಹಾಸದಲ್ಲಿ ಹನ್ನೊಂದನೆಯ ಶತಮಾನವು ರಕ್ತರಂಜಿತ ಅಧ್ಯಾಯವಾಗಿದೆ. ಈ ಶತಮಾನವು ಭಾರತಕ್ಕೆ ಯವನರಾದ

ಮುಸಲ್ಮಾನರು ದಾಳಿಯಿಟ್ಟು ಹಿಂದಿನ ಘಜ್ನಿ ಮಹಮದನಂತೆ ಇಲ್ಲಿನ ಸೂರೆ ಯಿಂದ ತೃಪ್ತರಾಗಿ ಹಿಂತಿರುಗದೆ ಇಲ್ಲೇ ರಾಜ್ಯವಾಳಲು ನಿಂತ ದುರಂತ ಕಥೆ ಯನ್ನು ಹೇಳುತ್ತದೆ.

ಮಹಮದ್ ಘೋರಿಯು ಹಸ್ತಿನಾಪುರದಲ್ಲಿ (ದಿಲ್ಲಿ) ಆಳುತ್ತಿದ್ದ ಜಯಚಂದ್ರ, ಪೃಥ್ವೀರಾಜರ ನಡುವೆ ಉಂಟಾಗಿದ್ದ ವೈಯುಕ್ತಿಕ ದ್ವೇಷಾ ಸೂಯೆಗಳ ಲಾಭ ಪಡೆದು, ಜಯಚಂದ್ರನಿಗೆ ನೆರವೀಯಲು ಸೈನ್ಯಸಹಿತನಾಗಿ ಭಾರತಕ್ಕೆ ಬಂದನು. ಮೊದಲೆರಡು ಯುದ್ಧಗಳಲ್ಲಿ ಪೃಥ್ವೀರಾಜನಿಗೆ ಸೋತರೂ ಕಡೆಗೆ ಪೃಥ್ವೀರಾಜನನ್ನು ಮೋಸದಿಂದ ಗೆದ್ದು, ಕ್ರೂರ ರೀತಿಯಲ್ಲಿ ಅವನನ್ನು ಕೊಂದು, ದಿಲ್ಲಿ ಸಿಂಹಾಸನವನ್ನೇರಿ ಮುಸಲ್ಮಾನರ ಪ್ರಭುತ್ವಕ್ಕೆ ಬುನಾದಿ ಹಾಕಿದನು.

ಅವನನ್ನು ಭಾರತಕ್ಕೆ ಆಹ್ವಾನಿಸಿ, ದೇಶದ್ರೋಹ ಬಗೆದ ಜಯ ಚಂದ್ರನೂ ತನ್ನ ದ್ರೋಹದ ಫಲವನ್ನು ಅನುಭವಿಸದೆ ಹೋಗಲಿಲ್ಲ. ಆ ದ್ರೋಹಿಯೂ ತನ್ನ ಕೊನೆಗಾಲವನ್ನು ದುರಂತದಲ್ಲಿಯೇ ಕಳೆದನು.

ಆದರೇನು! ಆಗಬಾರದ ಅನಾಹುತ ಆಗಿಯೇಹೋಗಿತ್ತು. ಮುಸಲ್ಮಾನರು ದೆಹಲಿಯಲ್ಲಿ ನೆಲೆಯೂರಿ ನಿಂತರು. ಮುಂದೆ ಅನೇಕ ಸುಲ್ತಾನರು ರಾಜ್ಯವಾಳಿ ಮುಸಲ್ಮಾನರ ರಾಜ್ಯಕ್ಕೆ ಬಲವಾದ ಅಡಿಪಾಯ ಹಾಕಿದರು.

ಶ್ರೀಮಧ್ವಾಚಾರ್ಯರು ಅವತರಿಸುವ ವೇಳೆಗೆ ದೆಹಲಿ ಸಿಂಹಾಸನದ ಮೇಲೆ ಗಿಯಾಸುದ್ದೀನಬಲ್ಬನ್ (ಕಿ.ಶ. 1266–1286) ಎಂಬ ತುರುಷ್ಕ ಚಕ್ರವರ್ತಿಯು ಆಳುತ್ತಿದ್ದನು.

ಅವನು ದುರ್ಬಲನಾದ ದೊರೆಯಾಗಿದ್ದು ಅವನ ಆಳ್ವಿಕೆಯಲ್ಲಿ ದೇಶದ ಹಲವು ಕಡೆ ದಂಗೆ ದಾಳಿಗಳು ನಡೆಯುತ್ತಿದ್ದವು. ಅವನ ಅಧೀನದಲ್ಲಿದ್ದ ಬಂಗಾಳದ ಲಕ್ಷ್ಮಣಾವತಿಯ (ಲಕ್ನೋತಿ) ಮುಸಲ್ಮಾನ ದೊರೆಯು ದಂಗೆ ಎದ್ದು ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದ್ದನು.

ಅಲ್ಲಿನ ಮಾಂಡಲಿಕ ಮಲ್ಲಿಕ್ ಇಜ್ಜುದೀನ್ ತುಘ್ರಿಲ್–ಇ–ತುಘಾನ ಖಾನನು ತಾನೇ ಸುಲ್ತಾನನೆಂದು ಘೋಷಿಸಿಕೊಂಡಿದ್ದನು.

ಇದರಿಂದ ಕುಪಿತನಾದ ಬಲ್ಬನನು ಅವನ ಮೇಲೆ ಯುದ್ಧವನ್ನು

ಘೋಷಿಸಿ ತನ್ನ ಸೈನ್ಯವನ್ನು ನಡೆಸಿಕೊಂಡು ಗಂಗಾನದಿಯ ಉತ್ತರದ ದಂಡೆಯಲ್ಲಿ ಬೀಡುಬಿಟ್ಟಿದ್ದನು.

ನದಿಯ ಮೂಲಕ ಶತ್ರುಗಳು ಬಾರದಂತೆ ಅಲ್ಲಿದ್ದ ಪ್ರಯಾಣಿಕರ ದೋಣಿಗಳನ್ನೆಲ್ಲ ಕೈವಶ ಮಾಡಿಕೊಂಡಿದ್ದನು. ದಕ್ಷಿಣದ ದಂಡೆಯಲ್ಲಿಯೂ ಪಹರೆ ಇಟ್ಟಿದ್ದನು. ರಾತ್ರಿಯ ವೇಳೆ ಶತ್ರುಗಳು ಶಿಬಿರದ ಮೇಲೆ ದಂಡೆತ್ತಿ ಬಾರದಂತೆ, ಎರಡು ಕಡೆಯ ತೀರದುದ್ದಕ್ಕೂ ಸೈನಿಕ ತುಕ್ಕಡಿಗಳನ್ನು ಅಲ್ಲಲ್ಲಿ ನಿಲ್ಲಿಸಿದ್ದನು. ಅವನು ಸದಾ ಜಾಗ್ರತನಾಗಿ ಶತ್ರುಪಕ್ಷದವರು ಬಾರದಂತೆ ನೋಡಿಕೊಳ್ಳುತ್ತಿದ್ದನು ಹೀಗೆ ಶತ್ರುಪಕ್ಷದ ಗೂಢಚಾರರು ನದಿಯನ್ನು ಹಾದು ಬರದಂತೆ ಎಚ್ಚರಿಕೆ ವಹಿಸಿದ್ದನು.

ಇಂತಹ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಶ್ರೀಮಧ್ವಾಚಾರ್ಯರು ತಮ್ಮ ಶಿಷ್ಯರೊಡನೆ ಹೊರಟು ಹಸ್ತಿನಾಪುರದ ಮಾರ್ಗವಾಗಿ ಗಂಗೆಯನ್ನು ದಾಟಲು ತುರುಷ್ಕ ಸೈನ್ಯಕಾವಲಿದ್ದ ಸ್ಥಳಕ್ಕೆ ಬಂದರು.

ಅವರು ಅಲ್ಲಿಗೆ ಬರುತ್ತಲೇ ನದಿಯ ದಂಡೆಯಲ್ಲಿ ಬೀಡು ಬಿಟ್ಟಿದ್ದ ಕಾವಲು ಸೈನ್ಯದ ಮುಖಂಡ ಸೈಯದ್ ಮುಸ್ತಫಾಖಾನನು ಶ್ರೀಮಧ್ವಾಚಾರ್ಯರ ಭವ್ಯವಾದ ನಿಲುವನ್ನೂ, ಅವರ ಮುಖದಲ್ಲಿದ್ದ ದಿವ್ಯತೇಜಸ್ಸನ್ನೂ ನೋಡಿ ಅವರು ಯಾರೋ ಶತ್ರುಪಕ್ಷದ ಗೂಢಚಾರರಿರಬೇಕೆಂದು ಶಂಕಿಸಿದನು. ಅವನು ಕೂಡಲೇ ಶ್ರೀಮದಾಚಾರ್ಯರಿಗೆ ತನ್ನನ್ನು ಬಂದು ನೋಡಲು ಆಜ್ಞೆ ಮಾಡಿ ಸೈನಿಕರನ್ನು ಕಳುಹಿಸಿದನು.

ದೂತರು ಬಂದು ಆಚಾರ್ಯರಿಗೆ ನಮಸ್ಕರಿಸಿ ತಮ್ಮ ಒಡೆಯನ ಆಜ್ಞೆಯನ್ನು ವಿನಯಪೂರ್ವಕವಾಗಿ ತಿಳಿಸಿದರು.

ಈ ಮಾತನ್ನು ಕೇಳಿ ಮುಗುಳ್ನಕ್ಕ ಆಚಾರ್ಯರು "ಯಾರು ನಿಮ್ಮ ಒಡೆಯರು ?" ಎಂದು ಪ್ರಶ್ನಿಸಿದರು.

"ದೆಹಲಿಯ ಬಾದಷಹರಾದ ಷಹನ್‌ಷಹ ಗಿಯಾಸುದ್ದೀನ ಬಲ್ಬನ್ ಆಲಂಗೀರರ ಪಾದಪದ್ಮಾರಾಧಕರಾದ ಸೈಯದ್ ಮುಸ್ತಫಾಖಾನ್ ಬಹಾದ್ದೂರರು !"

"ನಮಗೆ ಇರುವವನು ಒಬ್ಬನೇ ಒಡೆಯನು. ಅವನು ಜಗದ್ರಕ್ಷಕನೂ ಸೃಷ್ಟಿಸ್ಥಿತಿಲಯಕಾರಣನೂ ಆದ ಆ ಶ್ರೀಮನ್ನಾರಾಯಣನು. ಅವನ ಆಜ್ಞೆ

ಯೊಂದನ್ನು ಮಾತ್ರ ನಾವು ಪಾಲಿಸುತ್ತೇವೆಯೇ ಹೊರತು ಈ ಲೋಕದ ದೊರೆಗಳನ್ನು ನಾವು ಒಡೆಯರೆಂದು ಒಪ್ಪುವುದಿಲ್ಲ ; ಅವರ ಆಜ್ಞೆಯನ್ನು ಪಾಲಿಸುವುದೂ ಇಲ್ಲ. ಹೋಗಿ ಈ ಮಾತನ್ನು ನಿಮ್ಮ ಮುಖಂಡರಿಗೆ ತಿಳಿಸಿ"—ಎಂದು ಆಚಾರ್ಯರು ಹೇಳಿದರು. ನರಿಗಳ ಹಿಂಡನ್ನು ಲೆಕ್ಕಿಸದೇ, ಶತ್ರುಗಳ ಮೇಲೆ ಬೀಳುವ ವನರಾಜನಾದ ಸಿಂಹದಂತೆ, ಶತ್ರು ಪಡೆಯನ್ನು ತುಚ್ಛವಾಗಿ ನೋಡಿ ನದಿಯನ್ನು ದಾಟಲು ನೀರಿಗೆ ಇಳಿದರು.

"ಹೃಷೀಕೇಶ ತೀರ್ಥರೇ, ನಮ್ಮ ಪರಿವಾರದ ಎಲ್ಲ ಶಿಷ್ಯರಿಗೆ ತಿಳಿಸಿ, ನಾವು ನದಿಯನ್ನು ದಾಟಲು ನೀರಿಗೆ ಇಳಿಯುತ್ತೇವೆ. ನೀವು ನಮ್ಮ ಕೈಯನ್ನು ಹಿಡಿದುಕೊಂಡು ನಮ್ಮನ್ನು ಅನುಸರಿಸಿ ಬನ್ನಿರಿ. ನಿಮ್ಮ ಕೈಯನ್ನು ಇನ್ನೊಬ್ಬನು ಹಿಡಿದುಕೊಳ್ಳಲಿ, ಹೀಗೆ ಎಲ್ಲರೂ ಒಬ್ಬರ ಕೈಯನ್ನು ಮತ್ತೊಬ್ಬರು ಹಿಡಿದುಕೊಂಡು ನದಿಯನ್ನು ಸುರಕ್ಷಿತವಾಗಿ ದಾಟಿ ಇನ್ನೊಂದು ದಡ ಸೇರೋಣ, ಯಾರೂ ಯಾವುದೇ ಸಂಗತಿಗೆ ಅಂಜುವ ಕಾರಣವಿಲ್ಲ"—ಎಂದು ಹೇಳಿ ಶಿಷ್ಯ ಹೃಷಿಕೇಶತೀರ್ಥರನ್ನು ಕೈಹಿಡಿದುಕೊಂಡು ನಡೆದರು. ಅವರ ಕೈಯನ್ನು ಸತ್ಯತೀರ್ಥರೂ ಅವರ ಕೈಯನ್ನು ಉಳಿದ ಶಿಷ್ಯವರ್ಗದವರೂ ಒಬ್ಬರ ಕೈಯನ್ನು ಇನ್ನೊಬ್ಬರು ಹಿಡಿದುಕೊಂಡು ಗಂಗಾನದಿಯನ್ನು ಯಾವುದೇ ತೊಂದರೆ ಇಲ್ಲದೆ ದಾಟಿ ಇನ್ನೊಂದು ದಂಡೆಯನ್ನು ಸೇರಿದರು.

ಅಷ್ಟರಲ್ಲಿ ಶ್ರೀಮಧ್ವಾಚಾರ್ಯರು ತಮ್ಮ ಪ್ರತಿಭಟನೆಯನ್ನೂ, ಬೆದರಿಕೆಯನ್ನೂ ಲಕ್ಷಿಸದೆ, ದೋಣಿಯ ಸಹಾಯವಿಲ್ಲದೆ ನದಿಯನ್ನು ಹಾದುಬರುತ್ತಿರುವರೆಂಬ ವಾರ್ತೆಯನ್ನು ಬಲ್ಲನ ಚಕ್ರವರ್ತಿಯು ಕೇಳಿ ಅಚ್ಚರಿಗೊಂಡನು. ಅವನು ಇನ್ನೊಂದು ದಡದಲ್ಲಿ ಬೀಡುಬಿಟ್ಟಿದ್ದನು.[1]

---

1) ಅಪ್ಲವದೇವನದೀತರಣಂ ತೇ ಹಂತ
ಕಥಂ ಚ ಚಿಕೀರ್ಷಸಿ ಕಿಂ ತ್ವಮ್ ।
ನಿಗದಂತಮಿತಿ ಪ್ರಭೃತೀಹ ಸ್ಮಾಹ
ಮಹಾಪುರುಷೋತ್ತಮದಾಸಃ ॥
ಯೋsಸೌ ದೇವೋ ವಿಶ್ವದೀಪಃ ಪ್ರದೀಪ್ತಃ
ಕುರ್ಮಃ ಸರ್ವಂ ತತ್ಪರಾನುಗ್ರಹೇಣ ।
ಯಾಮಸ್ಮಾವತ್ತೂರ್ಣಮಾಶಾಮುದೀಚೀಮಿತ್ಯಾದ್ಯಂ
ತದ್ಭಾಷಯಾ ಚಿತ್ರವಾಕ್ಯಮ್ ॥
ಮ॥ ವಿ॥ ಸ॥ 10 ಶ್ಲೋಕ 16–17

ಇವರು ಸಾಮಾನ್ಯ ಸಂನ್ಯಾಸಿಗಳಲ್ಲ, ಅಣಿಮಾದಿ ಅಷ್ಟಸಿದ್ಧಿಯುಳ್ಳವರೇ ಸರಿ, ಇಲ್ಲದಿದ್ದರೆ ಇವರು ನದಿಯನ್ನು ದೋಣಿಗಳ ಸಹಾಯವಿಲ್ಲದೆ ದಾಟುವು ದೆಂದರೇನು ?

ಅದರಲ್ಲೂ ಆಳವಾದ ಪೂರ್ಣ ಪ್ರವಾಹದಲ್ಲಿ ಹರಿಯುತ್ತಿದ್ದ ಅನೇಕ ಸುಳಿಗಳುಳ್ಳ ಗಂಗಾ ನದಿಯನ್ನು ನಡೆದುಕೊಂಡು ದಾಟುವುದೆಂದರೆ ಯಾರು ನಂಬುವ ಮಾತು !

ಸುಲ್ತಾನನು ತನ್ನಲ್ಲೇ ಉದ್ಗಾರ ತೆಗೆದನು.

ಶ್ರೀಮದಾಚಾರ್ಯರನ್ನು ತಾನೇ ಹೋಗಿ ನೋಡಬೇಕೆಂದು ನಿರ್ಧರಿಸಿದನು. ಆಗಂತುಕರು ಶತ್ರುಪಕ್ಷದ ಗೂಢಚಾರರಲ್ಲದಿದ್ದರೂ ಈ ಸಂನ್ಯಾಸಿಗಳ ದರ್ಶನದಿಂದ ತನಗೆ ಲಾಭವಿದೆ ಎಂದು ಭಾವಿಸಿ ತಾನೇ ಹೋಗಿ ಅವರನ್ನೂ ಅವರ ಶಿಷ್ಯರನ್ನೂ ಆದರ ಭಯ ಭಕ್ತಿಗಳಿಂದ ಬರಮಾಡಿಕೊಂಡು ತನ್ನ ಶಿಬಿರಕ್ಕೆ ಕರೆದೊಯ್ದನು.

" ಮಹಾರಾಜ್, ತಮ್ಮನ್ನು ನೋಡಿದರೆ ಈ ದೇಶದವರಂತೆ ಕಾಣುವು ದಿಲ್ಲ. ತಾವು ಯಾರು ? ತಮ್ಮ ನಾಮಧೇಯವೇನು ? ತಾವು ಇಲ್ಲಿಗೇಕೆ ಬಂದಿದ್ದೀರಿ ? ದಯಮಾಡಿ ತಿಳಿಸುವ ಕೃಪೆಮಾಡಬೇಕು" ... ಎಂದು ನಮ್ರನಾಗಿ ಪ್ರಾರ್ಥಿಸಿದನು.

" ನಮ್ಮನ್ನು ಪೂರ್ಣಪ್ರಜ್ಞರೆಂದು ಕರೆಯುತ್ತಾರೆ. ನಾವು ದಕ್ಷಿಣ ಭಾರತದ ಕರೆನಾಡಿನಲ್ಲಿರುವ ರೌಪ್ಯಪೀಠಪುರದವರು. ಉತ್ತರ ಭಾರತದ ತೀರ್ಥಕ್ಷೇತ್ರದರ್ಶನಕ್ಕಾಗಿ ಬಂದ ಯತಿಗಳು ನಾವು. ಸದ್ಯಕ್ಕೆ ಬದರೀ ಕ್ಷೇತ್ರಕ್ಕೆ ಹೋಗುವ ಮಾರ್ಗದಲ್ಲಿ ಕುರುಕ್ಷೇತ್ರವನ್ನು ಸಂದರ್ಶಿಸಿ ಹೋಗಲು ಇಲ್ಲಿಗೆ ಬಂದಿದ್ದೇವೆ."

—ಎಂದು ಸುಲ್ತಾನನ ಸ್ಪಷ್ಟ ತುರುಷ್ಕ ಭಾಷೆಯಲ್ಲಿಯೇ ಹೇಳಿದರು.

ಈ ಭಾಷೆಯನ್ನು ಸಂನ್ಯಾಸಿಗಳಾದ ಶ್ರೀಮದಾಚಾರ್ಯರ ಬಾಯಲ್ಲಿ ಬಂದುದನ್ನು ಕೇಳಿ ಎಲ್ಲರಿಗೂ ಆತ್ಯಾಶ್ಚರ್ಯವಾಯಿತು.

ಅದರಲ್ಲೂ ಬಲ್ಬನ್ ಚಕ್ರವರ್ತಿಗೆ ದಕ್ಷಿಣಾಪಥದ ಒಂದು ಮೂಲೆಯಿಂದ ಬಂದಿರುವ ಈ ವಿಚಿತ್ರ ವೇಷದ ಸಂನ್ಯಾಸಿ, ದೆಹಲಿಯ ಸುಲ್ತಾನರು ಆಡುವ

ಅಚ್ಚ ಮುಸಲ್ಮಾನಿ ಭಾಷೆಯನ್ನು— ತುರುಷ್ಕ ಭಾಷೆಯನ್ನು — ಸುಲಲಿತವಾಗಿ ಆಡುತ್ತಿದ್ದಾರೆ ! ಇವರಿಗೆ ಈ ಭಾಷೆ ಮಾತನಾಡಲು ಹೇಗೆ ಸಾಧ್ಯವಾಯಿತು ಎಂದು ಅಚ್ಚರಿಪಟ್ಟನು.

ಸುಲ್ತಾನನು ಈ ಬಗ್ಗೆ ಆಚಾರ್ಯರನ್ನು ಪ್ರಶ್ನಿಸಿದ.

"ನಿಮಗೆ ಇದೆಲ್ಲವೂ ಅಚ್ಚರಿಯಾಗಿ ಕಂಡರೂ ನಮಗೆ ಇದರಲ್ಲಿ ಯಾವುದೇ ಆಶ್ಚರ್ಯವಿಲ್ಲ, ನಮಗೆ ಜಗತ್ತಿನ ಎಲ್ಲ ಭಾಷೆಗಳೂ ಬರುತ್ತವೆ" ಎಂದು ಮುಗುಳ್ನಕ್ಕರು,

ಎಷ್ಟೆಂದರೂ ಶ್ರೀಮಂದಾಚಾರ್ಯರು ಪೂರ್ಣಪ್ರಜ್ಞರಲ್ಲವೇ ? ಅವರು ಸರ್ವಜ್ಞಾಚಾರ್ಯರಲ್ಲವೇ ?

ವಾಯ್ವಂಶಸಂಭೂತರಾದ ಅವರಿಗೆ ಅನ್ಯಭಾಷೆಯನ್ನು ಮಾತನಾಡುವುದು ಮತ್ತು ತಿಳಿಯುವುದು ಒಂದು ಕಷ್ಟವೇ? ಪ್ರಿಯ ಶಿಷ್ಯರಾದ ಹೃಷಿಕೇಶತೀರ್ಥರು ತಮ್ಮಲ್ಲೇ ಸಮಾಧಾನ ಹೇಳಿಕೊಂಡನು.

ಮೊದಲು ಶ್ರೀಮದಾಚಾರ್ಯರ ಮಹಿಮೆಯನ್ನು ತಿಳಿಯದೆ ಇದ್ದ ಬಲ್ಲನನಿಗೆ ಆಚಾರ್ಯರು ಶತ್ರು ಪಕ್ಷದ ಗೂಢಚಾರರಾಗಿರಬಾರದೇಕೆ ಎಂದು ಸಂಶಯಕ್ಕೆ ಕಾರಣವಾಗಿತ್ತು.

ಈಗ ಆಚಾರ್ಯರ ಬಾಯಲ್ಲಿ ಅಚ್ಚತುರುಷ್ಕ ಭಾಷೆಯು ಬಂದುದನ್ನು ನೋಡಿ ಅವನಿಗಿದ್ದ ಸಂದೇಹವು ದೃಢವಾಯಿತು. ಶತ್ರು ಪಕ್ಷದ ಯಾವನೋ ಮುಸಲ್ಮಾನ ಗೂಢಚಾರನು ಈ ರೀತಿಯಲ್ಲಿ ಹಿಂದೂ ಸಂನ್ಯಾಸಿಯಂತೆ ಸೋಗು ಹಾಕಿ ತನ್ನ ಸೈನ್ಯದ ಬಲಾಬಲಗಳನ್ನು ತಿಳಿಯಲು ಬಂದಿದ್ದಾನೆ—ಎಂದೂ ಚಕ್ರವರ್ತಿಯ ಮನಸ್ಸಿಗೆ ಅನಿಸಿತು.

ಇನ್ನೊಂದು ಮನಸ್ಸು ಶ್ರೀಮದಾಚಾರ್ಯರ ಮಹಿಮೆಯನ್ನು ನೋಡಿ ಮಾರುಹೋಗಿತ್ತು. ಅವರು ಪಂಚಭೂತಗಳ ಮೇಲೆ ಹತೋಟಿ ಹೊಂದಿದ ಮಹಾನುಭಾವರು. ಅದಕ್ಕೆ ನದಿಯಲ್ಲಿ ನಡೆದು ಬಂದುದೇ ಸಾಕ್ಷಿ. ಅಚ್ಚಮುಸಲ್ಮಾನ ಭಾಷೆಯಲ್ಲಿ ಅವರು ನಿರರ್ಗಳವಾಗಿ ಮಾತನಾಡುತ್ತಿರುವುದೇ ಸಾಕ್ಷಿ. ಅವರು ಸಾಮಾನ್ಯ ಸಂನ್ಯಾಸಿಗಳಲ್ಲ, ದುಡುಕಿ ಇಂಥವರ ಕೋಪಕ್ಕೆ ಪಾತ್ರನಾಗುವುದು ಬೇಡ—ಎಂದು ಅದು ಎಚ್ಚರಿಸುತ್ತಿತ್ತು.

ಹೇಗಾದರೂ ಆಗಲೀ ಇವರನ್ನು ಪರೀಕ್ಷಿಸಿಯೇ ತೀರಬೇಕು—ಎಂದು ನಿಶ್ಚಯಿಸಿ ಬಲ್ಬನ ಚಕ್ರವರ್ತಿಯು—

"ಮಹಾರಾಜ್. ತಾವು ದೂರದಿಂದ ಬಂದಿದ್ದೀರಿ, ಪ್ರಯಾಣದಿಂದ ದಣಿದಿದ್ದೀರಿ. ತಾವು ಈ ದಿನ ಗಂಗಾತೀರದಲ್ಲಿಯೇ ಬೀಡುಬಿಡಬೇಕೆಂದು ನಮ್ಮ ಪ್ರಾರ್ಥನೆ"

—ಎಂದು ಒತ್ತಾಯ ಮಾಡಿ ಶ್ರೀಮಧ್ವಾಚಾರ್ಯರನ್ನೂ, ಅವರ ಶಿಷ್ಯರನ್ನೂ ನದೀತೀರದಲ್ಲಿಯೇ ಬೀಡುಬಿಡಿಸಿದ. ಅವರ ಎಲ್ಲ ವ್ಯವಸ್ಥೆಗೂ ಜನರನ್ನು ನೇಮಿಸಿದನು.

ಆದರೆ ಅವರ ಚಲನವಲನಗಳ ಮೇಲೆ ದೂರದಿಂದಲೇ ಒಂದು ಕಣ್ಣಿಡಲು ತನ್ನ ಮುಸಲ್ಮಾನ ಸೈನಿಕರಿಗೂ, ಗೂಢಚಾರರಿಗೂ ಅಂತರಂಗದಲ್ಲಿ ಆಜ್ಞೆ ಮಾಡದೆ ಇರಲಿಲ್ಲ.

ಶ್ರೀಮಧ್ವಾಚಾರ್ಯರು ಗಂಗಾತೀರದಲ್ಲಿ ಪ್ರಶಸ್ತವಾದ ಸ್ಥಳದಲ್ಲಿ ತಮ್ಮ ಸ್ನಾನಾಹ್ನಿಕ, ಪೂಜೆಗಳನ್ನು ನೆರವೇರಿಸಿದರು. ಭೋಜನವನ್ನು ಸ್ವೀಕರಿಸಿ ವಿಶ್ರಮಿಸಿಕೊಂಡರು.

ಅನಂತರ ಸಂಜೆ ಆಚಾರ್ಯರನ್ನು ಕಾಣಲು ಬಲ್ಬನ ಚಕ್ರವರ್ತಿಯೇ ಬಂದನು. ಅವನು ಅವರಿಗೆ ಖುರ್ನೀಸು ಮಾಡಿ ಅವರು ನೀಡಿದ ಆಸನದಲ್ಲಿ ನಮ್ರನಾಗಿ ಕುಳಿತುಕೊಂಡನು.

"ಮಹಾರಾಜ್, ನಿಮಗೆ ಇಲ್ಲಿನ ಏರ್ಪಾಡುಗಳೆಲ್ಲ ಸರಿಯಷ್ಟೇ; ಏನಾದರೂ ಅನಾನುಕೂಲ ಇದ್ದರೆ ದಯವಿಟ್ಟು ತಿಳಿಸಬೇಕು"

ಎಂದು ವಿನಯದಿಂದಲೇ ಪ್ರಾರ್ಥಿಸಿದನು.

"ನಿಮ್ಮ ಆದರಕ್ಕೆ ನಾವು ಋಣಿಯಾಗಿದ್ದೇವೆ ಸುಲ್ತಾನರೇ. ಭಗವಂತನಾದ ಶ್ರೀಹರಿಯು ನಮ್ಮ ರಕ್ಷಣೆಗೆ ನಿಂತಿರುವಾಗ ನಮಗೆ ಯಾವ ಭಯವೂ ಇಲ್ಲ"—ಎಂದು ಹೇಳಿದರು.

"ನೀವು ಹೇಳುವ ಆ ಶ್ರೀಹರಿ ಯಾರು ? ನಿಮ್ಮಲ್ಲಿ ಅನೇಕ ದೇವರುಗಳಿರುವರೆಂದು ಕೇಳಿದ್ದೇನೆ. ನೀವು ಕಲ್ಲನ್ನೂ ಸಹ ಪೂಜಿಸುತ್ತೀರೆಂದೂ ಕೇಳಿದ್ದೇನೆ. ಈ ಶಾಲಗ್ರಾಮ ಶಿಲೆಯ ನಿಮಗೆ ಹೇಗೆ ದೇವರಾಗುತ್ತಾನೆ ?"—ಕುತೂಹಲದಿಂದಕೂಡಿ ದಾರ್ಶನಿಕನಂತೆ ಬಲ್ಬನ್ ಚಕ್ರವರ್ತಿಯು ಪ್ರಶ್ನಿಸಿದ.

"ಅನಂತಕಲ್ಯಾಣಗುಣ ಪರಿಪೂರ್ಣನಾದ ದೇವರನ್ನು ನಾವು ವಿಷ್ಣುವೆಂದು ಕರೆಯುತ್ತೇವೆ. ನೀವು ಆ ದೇವರನ್ನು ನಿರ್ಗುಣನೆಂದೂ, ಅದ್ವಿತೀಯನೆಂದೂ, ರೂಪರಹಿತನೆಂದೂ, ವಿಶ್ವವ್ಯಾಪಿ ಎಂದೂ ವರ್ಣಿಸುತ್ತೀರಿ. ಆ ಚೈತನ್ಯವನ್ನು 'ಅಲ್ಲಾ' ಎಂದೂ 'ಖುದಾ' ಎಂದೂ ಪೂಜಿಸುತ್ತೀರಿ. ಆ ಸ್ವಾಮಿಯು ನಿರಾಕಾರವಾಗಿ ಈ ನಮ್ಮ ಶಾಲಗ್ರಾಮ ಶಿಲೆಯಲ್ಲಿ ನೆಲೆಸಿದ್ದಾನೆ. ನಾವು ಅದನ್ನು ಭಕ್ತಿಯಿಂದ ಪೂಜಿಸಿ, ಅಭಿಷೇಕ ಮಾಡಿ ಆ ನೀರನ್ನು ತೀರ್ಥವೆಂದು ಸ್ವೀಕರಿಸುತ್ತೇವೆ. ಇದರಂತೆಯೇ ನೀವು ನಿಮ್ಮ ಮಕ್ಕಾ ಕ್ಷೇತ್ರದಲ್ಲಿ ಕಾಬಾಶಿಲೆಯನ್ನು ಪೂಜಿಸುವುದಿಲ್ಲವೆ?"—ಎಂದು ಶ್ರೀಮದಾಚಾರ್ಯರು ಉತ್ತರಿಸಿದರು.

"ಬಹುತ್ ಅಚ್ಛಾ ! ಮಹಾರಾಜ್ ! ತಾವು ಸರ್ವಜ್ಞರು, ತಮಗೆ ತಿಳಿಯದ ಸಂಗತಿ ಯಾವುದೂ ಇಲ್ಲ. ನನಗೆ ತಾವು ಆಶೀರ್ವಾದ ಮಾಡಬೇಕು. ನಾನು ಈಗ ಶತ್ರುಗಳ ಮೇಲೆ ದಂಡೆತ್ತಿ ಹೊರಟಿದ್ದೇನೆ. ನನಗೆ ಈ ಯುದ್ಧದಲ್ಲಿ ಜಯವಾಗುವಂತೆ ಆಶೀರ್ವಾದ ಮಾಡಬೇಕು"—ಎಂದು ಸುಲ್ತಾನನು ವಿನಯ ಪೂರ್ವಕವಾಗಿ ಭಕ್ತಿಯಿಂದ ಪ್ರಾರ್ಥಿಸಿದನು.

"ನೀವು ವಿಧರ್ಮಿಯರಾದರೂ ಭಗವದ್ಭಕ್ತರೂ, ವಿವೇಕಿಗಳೂ ಆಗಿದ್ದೀರಿ. ಆದುದರಿಂದ ಶ್ರೀಕೃಷ್ಣನ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದೀರಿ. ನಿಮಗೆ ಈ ಯುದ್ಧದಲ್ಲಿ ಖಂಡಿತ ಜಯವಾಗುತ್ತದೆ"—ಎಂದು ಆಚಾರ್ಯರು ಅಭಿಮಾನ ಪೂರ್ವಕವಾಗಿ ಆಶೀರ್ವದಿಸಿದರು.

"ಮಹಾರಾಜ್, ತಮ್ಮನ್ನು ನೋಡುತ್ತಿದ್ದರೆ, ತಮ್ಮ ಅಮೃತಸದೃಶ ವಾಣಿಯನ್ನು ಕೇಳುತ್ತಿದ್ದರೆ ತಾವು ಅನ್ಯರು ಎಂದು ಅನಿಸುವುದೇ ಇಲ್ಲ. ತಾವು ಇಲ್ಲಿಯೇ ನನಗೆ ಗುರುಗಳಾಗಿ ನಿಂತರೆ ನಾನು ಎಷ್ಟು ಭಾಗ್ಯಶಾಲಿ ಎನಿಸುತ್ತಿದೆ."

"ನಿಮ್ಮ ಸದ್ಭಾವನೆಗೆ ನಾವು ಕೃತಜ್ಞರು. ನಾವು ತೀರ್ಥಯಾತ್ರೆಗಾಗಿ ಬಂದ ಯತಿಗಳು. ಒಂದು ಊರಿನಲ್ಲಿ ಒಂದು ರಾತ್ರಿಯ ಮೇಲೆ ನಿಲ್ಲತಕ್ಕವರಲ್ಲ. ನಮಗೆ ಪ್ರಯಾಣವನ್ನು ಮುಂದುವರೆಸಲು ದಯವಿಟ್ಟು ಅಪ್ಪಣೆ ಕೊಡಿ" —ಶ್ರೀಮದಾಚಾರ್ಯರು ಅಭಿಮಾನದಿಂದಲೇ ನುಡಿದರು.

"ತಮ್ಮನ್ನು ನಾನು ಒತ್ತಾಯಪಡಿಸಲು ಶಕ್ತನಲ್ಲ. ಆದರೆ ತಾವು ಇಲ್ಲಿ ನನ್ನ ಗುರುಗಳಾಗಿ ನಿಲ್ಲುವುದಾದರೆ ತಮಗೆ ಅರ್ಧ ರಾಜ್ಯವನ್ನು ಬೇಕಾದರೂ

ಕೊಟ್ಟೇನು" ಎಂದನು ಉತ್ಸಾಹದಲ್ಲಿ ಸುಲ್ತಾನನು.

"ನಿಮ್ಮ ರಾಜ್ಯಕೋಶಗಳನ್ನು ಕಟ್ಟಿಕೊಂಡು ನಾವು ಏನು ಮಾಡಬೇಕು? ನಾವು ಒಬ್ಬ ಸಂನ್ಯಾಸಿ. ಸಂಸಾರವನ್ನು ತೊರೆದವರಿಗೆ ಮತ್ತೆ ಸಂಸಾರದ ಬಂಧನವೇ ? ಅಲ್ಲದೆ ನಮ್ಮ ಶ್ರೀಹರಿಯಿಂದ ನಮಗೆ ಬೇಕಾದುದೆಲ್ಲವೂ ದೊರೆತಿದೆ. ಅವನ ಕೃಪೆಯಿಂದ ನಾವು ನೆಮ್ಮದಿಯಿಂದಲೇ ಇದ್ದೇವೆ. ದಯವಿಟ್ಟು ನಮಗೆ ಇಲ್ಲಿಂದ ಮುಂದಕ್ಕೆ ತೆರಳಲು ಅನುಜ್ಞೆ ಕೊಡಿ"— ಎಂದರು.

ದಿಲ್ಲಿ ಚಕ್ರವರ್ತಿ ಬಲ್ಬನ್ನನು ಶ್ರೀಮದಾಚಾರ್ಯರ ಭವ್ಯ ವ್ಯಕ್ತಿತ್ವದಿಂದ ಅತ್ಯಂತ ಪ್ರಭಾವಿತನಾಗಿದ್ದನು. ಅವನು ಆಚಾರ್ಯರ ಗಾಂಭೀರ್ಯ, ಧೈರ್ಯ, ವಿಫಲ ಸಾಮರ್ಥ್ಯ, ಪಾಂಡಿತ್ಯ, ಉತ್ತಮ ದಿವ್ಯವಾಣಿ, ದೇಹಕಾಂತಿ, ದೇಶಕಾಲಗಳಿಗೆ ಉಚಿತವಾದ ವಾಕ್ಸರಣಿ ಇವುಗಳಿಂದ ಮಾರುಹೋಗಿದ್ದನು. ಅವರನ್ನು ಬಿಡಲಾರದ ಮನಸ್ಸಿನಿಂದ ಕಳುಹಿಸಿಕೊಟ್ಟನು.

ಅಲ್ಲಿಂದ ತೆರಳುವಾಗ ಚಕ್ರವರ್ತಿಯು ಶ್ರೀಮದಾಚಾರ್ಯರಿಗೂ ಅವರ ಪರಿವಾರದವರಿಗೂ ರಾಜಮನ್ನಣೆ ನೀಡಿ ಗೌರವ ಆದರಗಳಿಂದ ಬೀಳ್ಕೊಟ್ಟನು.

ದೇಶದಲ್ಲಿ ಸುಭಿಕ್ಷವಿರಬೇಕಾದರೆ ಸುಭದ್ರತೆ ಇರಲೇಬೇಕು. ಅಂದರೆ ರಾಜಶಾಸನವು ಆಡಳಿತದಲ್ಲಿ ಬಿಗಿಯಾಗಿಯೂ, ನ್ಯಾಯ ಪರಿಪಾಲನೆಯಲ್ಲಿ ನಿಷ್ಠುರವಾಗಿಯೂ, ದುಷ್ಟ ಶಿಕ್ಷಣ ಶಿಷ್ಟ ರಕ್ಷಣ ಕಾರ್ಯದಲ್ಲಿ ತನ್ನವರು ಪರರೆಂಬ ಭೇದವನ್ನು ಮಾಡದೆ ಸತ್ಯ. ಧರ್ಮ, ಶಾಂತಿ, ಪ್ರೇಮಗಳನ್ನು ಅನುಷ್ಠಾನದಲ್ಲಿ ತರುವ ರಾಜ್ಯದಲ್ಲಿ ಧರ್ಮ ದೇವತೆಯು ನಲಿದಾಡುತ್ತಾಳೆ, ಅಲ್ಲಿ ಮಳೆ ಬೆಳೆಗಳು ಸಕಾಲದಲ್ಲಿ ಆಗಿ ದೇಶವು ಸುಭಿಕ್ಷವಾಗಿರುತ್ತದೆ. ಇಂಥ ನಾಡನ್ನು ಆಳುವ ದೊರೆಯು ಧರ್ಮಾತ್ಮನೆನಿಸುತ್ತಾನೆ. ಅಂಥ ಸದ್ಗುಣಶಾಲಿಯಾದ ಅರಸನನ್ನು ಕುರಿತು ನಮ್ಮ ಶಾಸ್ತ್ರಗಳು "ನಾವಿಷ್ಣೋಃ ಪೃಥಿವೀಪತಿಃ" ಎಂದು ಹೇಳಿವೆ.

ದೊರೆಯು ನೀಚನೂ ಸ್ವಾರ್ಥಿಯೂ ಆಗಿ ತನ್ನ ಅಧಿಕಾರವನ್ನೂ, ಅರಸೊತ್ತಿಗೆಯನ್ನೂ ನೀಚಕಾರ್ಯಗಳಲ್ಲಿ ವಿನಿಯೋಗಿಸಿ, ವಿಷಯಲಂಪಟನೂ, ದುರ್ವ್ಯಸನಿಯೂ, ದುರಾಚಾರಿಯೂ ಆದರೆ, "ಯಥಾ ರಾಜಾ ತಥಾ ಪ್ರಜಾಃ" ಎಂಬ ನಾಣ್ಣುಡಿಯಂತೆ ಜನರು ಸ್ವಾರ್ಥಿಗಳೂ, ವಿರ್ವೀಯರೂ, ವಿಷಯಪ್ರಮತ್ತರೂ ಆಗಿರುತ್ತಾರೆ.

ಇಂಥ ನಾಡಿನಲ್ಲಿ ಸುಳ್ಳು, ಮೋಸಗಳೂ, ದುರ್ಭಿಕ್ಷ, ಮಾರಣ, ಭಯ ಇರುತ್ತವೆ, ಕಳ್ಳತನಗಳು ಮುಂತಾದುವು ಮನೆ ಮಾಡಿಕೊಂಡಿರುತ್ತವೆ.

ದೆಹಲಿ ಸುಲ್ತಾನರ ರಾಜ್ಯದಲ್ಲಿ ಇಂಥ ವಿಷಮಪರಿಸ್ಥಿತಿ ಇದ್ದಾಗ ಶ್ರೀಮಧ್ವಾಚಾರ್ಯರು ಉತ್ತರದೇಶದ ಕ್ಷೇತ್ರಯಾತ್ರೆ ಕೈಗೊಂಡಿದ್ದರು.

ತನ್ನಂತಿರುವ ಪ್ರಾಣಿಯ ಸತ್ವ ಹೀರಿ ಬದುಕುವ ದುಷ್ಟಜಂತುಗಳಿಗೆ ತನ್ನ ಕಾಡು, ಪರರ ಕಾಡೆಂಬ ತಾರತಮ್ಯವಿರುವುದಿಲ್ಲ. ಅವುಗಳಿಗೆ ನ್ಯಾಯಾಲಯದಲ್ಲಿ ನಂಬಿಕೆಯಾಗಲೀ, ವಿಮರ್ಶೆ ಮಾಡಿ ನಿರ್ಣಯಿಸುವ ವಿಚಾರ ಶಕ್ತಿಯಾಗಲೀ ಇರುವುದಿಲ್ಲ. ಅಂಥದುಷ್ಟರು ಲೋಕಕ್ಕೆ ಕಂಟಕರಾಗುತ್ತಾರೆ. ಅವರಿಂದ ಸಮಾಜದ ಶಾಂತಿ ಭಂಗವಾಗಿ, ಅದರ ಸುಖಕ್ಕೂ ಮುಳಿವಾಗುತ್ತಾರೆ.

ಇಂಥ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಕಾಪಾಡಲೆಂದೇ ಶ್ರೀಮಧ್ವಾಚಾರ್ಯರ ಅವತಾರವಾಗಿತ್ತು.

ಅವರು ಬದರಿಯಲ್ಲಿ ಶ್ರೀವೇದವ್ಯಾಸದೇವರನ್ನು ಸಂದರ್ಶಿಸಲು ಹರಿದ್ವಾರ-ಹೃಷೀಕೇಶದ ಮಾರ್ಗವಾಗಿ ಶಿಷ್ಯರೊಡನೆ ಹೊರಟಿದ್ದರು.

ಶಿಷ್ಯವೃಂದದಲ್ಲಿ ಪ್ರಿಯಶಿಷ್ಯರಾದ ಸತ್ಯತೀರ್ಥರೂ, ಅಭಿಮಾನದ ಶಿಷ್ಯರಾದ ಹೃಷಿಕೇಶತೀರ್ಥರೂ, ಉಪೇಂದ್ರತೀರ್ಥರೂ ಇದ್ದರು. ಅವರು ಶ್ರೀಮದಾಚಾರ್ಯರ ಅರ್ಚಾಮೂರ್ತಿಗಳ ಸಂಪುಷ್ಟಗಳನ್ನೂ, ಪೂಜಾ ವಸ್ತುಗಳನ್ನೂ, ಸ್ವಾಮಿಯ ನೈವೇದ್ಯಕ್ಕೆ ಬೇಕಾಗುವಷ್ಟು ಪದಾರ್ಥಗಳನ್ನೂ ಗಂಟುಗಳಾಗಿ ಕಟ್ಟಿಕೊಂಡು ತಲೆಯ ಮೇಲೆ ಹೊತ್ತುಕೊಂಡು ಪಾದಯಾತ್ರೆ ಮಾಡುತ್ತಿದ್ದರು.

ಅವರನ್ನು ನೋಡಿದರೆ ಯಾತ್ರಿಕರೆನ್ನುವುದಕ್ಕಿಂತ ವ್ಯಾಪಾರಕ್ಕೆ ಹೊರಟವರಂತೆ ಕಾಣಿಸುತ್ತಿದ್ದರು.

ಈ ಗಂಟುಗಳಲ್ಲಿ ಹಣವಿದ್ದರೆ ಎಷ್ಟು ಎಚ್ಚರದಿಂದ ನೋಡಿಕೊಳ್ಳುತ್ತಿದ್ದರೋ ಅದಕ್ಕಿಂತಲೂ ಹೆಚ್ಚು ಎಚ್ಚರಿಕೆಯಿಂದ ಈ ಗಂಟು ಮೂಟೆಗಳನ್ನು ನೋಡಿಕೊಳ್ಳುತ್ತಾ ಪ್ರಯಾಣ ಮಾಡುತ್ತಿದ್ದರು.

ಇದನ್ನು ನೋಡಿದ, ಒಂದು ಕಳ್ಳರ ಗುಂಪು ಶ್ರೀಮದಾಚಾರ್ಯರ ಬಳಿ ಬಹಳ ಧನವಿರಬೇಕೆಂದೂ, ಅವರು ಛದ್ಮವೇಷದಲ್ಲಿರುವ ವ್ಯಾಪಾರಿಗಳೆಂದೂ

ಅವರನ್ನು ಸುಲಿದರೆ ಅಪಾರವಾದ ಸಂಪತ್ತು ದೊರಕುವುದೆಂದೂ ಆಲೋಚಿಸಿ, ಅವರ ಮೇಲೆ ಬಿದ್ದು ಕಾರ್ಯ ಸಾಧಿಸಬೇಕೆಂದು ನಿರ್ಧರಿಸಿ, ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದರು.

ಶ್ರೀಮದಾಚಾರ್ಯರ ಪರಿವಾರವು ಒಂದು ಕಾಡಿನ ದಾರಿ ಮೂಲಕ ನಿರ್ಜನ ಪ್ರದೇಶದಲ್ಲಿ ಸಾಗಿತ್ತು.

ಈ ಸಮಯವನ್ನು ಸಾಧಿಸಿ, ಕಳ್ಳರ ಗುಂಪು ಅವರ ಪರಿವಾರದ ಮೇಲೆ ಹಠಾತ್ತನೆ ದಾಳಿಯಿಟ್ಟಿತು.

ಅವರು ಕೈಯಲ್ಲಿ ಕತ್ತಿ, ಕುಡುಗೋಲು, ಹಾರೆ, ಭರ್ಜಿಗಳನ್ನು ಹಿಡಿದುಕೊಂಡು ಶ್ರೀಮದಾಚಾರ್ಯರ ಶಿಷ್ಯರನ್ನು ದಾರಿಯಲ್ಲಿ ಅಡ್ಡ ಕಟ್ಟಿದರು.

ಶಿಷ್ಯರು ಈ ಹಠಾತ್ತನೆ ನಡೆದ ಆಕ್ರಮಣದಿಂದ ಹೆದರಿ ಚೀರಿದರು.

ಶ್ರೀಮದಾಚಾರ್ಯರು ಅವರಿಗೆ ಸಮಾಧಾನ ಹೇಳುತ್ತಾ ವಿಪತ್ತನ್ನು ಎದುರಿಸಲು ಧೈರ್ಯದಿಂದ ಮುಂದಾದರು.

ಅನಂತರ ಆ ಚೋರ ಮುಖಂಡನನ್ನು ಕುರಿತು ಆಚಾರ್ಯರು,

"ಅಯ್ಯಾ, ನೀನು ಯಾರು ? ನಿನಗೆ ನಮ್ಮಿಂದ ಏನಾಗಬೇಕು?" ಯಾಕೆ ದಾರಿ ಅಡ್ಡ ಕಟ್ಟಿದ್ದೀರಿ" ಎಂದು ಕೇಳಿದರು. ಸಾಮಾನ್ಯ ಮನುಷ್ಯರಂತೆ.

"ನಾವು ಯಾರೆಂದು ನಿಮಗೆ ಇನ್ನೂ ತಿಳಿಯಲಿಲ್ಲವೆ ? ನಾವು ಕಳ್ಳರು ! ನಮ್ಮ ಕೈಗೆ ಸಿಕ್ಕಿದ ಶ್ರೀಮಂತರನ್ನು ಸುಲಿಯುವುದೇ ನಮ್ಮ ಉದ್ಯೋಗ. ಒಳ್ಳೆಯ ಮಾತಿನಲ್ಲಿ ನಿಮ್ಮ ಗಂಟುಗಳಲ್ಲಿ ಇರುವುದವನ್ನು ನಮಗೆ ಒಪ್ಪಿಸಿ. ಇಲ್ಲದಿದ್ದರೆ ನಿಮ್ಮಲ್ಲಿ ಒಬ್ಬನೂ ಜೀವಂತ ಉಳಿಯು ವುದಿಲ್ಲ" ಎಂದ ಕಳ್ಳರ ಮುಖಂಡ.

"ಅಯ್ಯಾ, ನಾವು ಶ್ರೀಮಂತರಲ್ಲ—ಬಡಸಂನ್ಯಾಸಿಗಳು"—ಎಂದು ಸತ್ಯ ತೀರ್ಥರು ಹೇಳಿದರು.

"ಹಾಗಾದರೆ ನಿಮ್ಮ ದೊಡ್ಡ ಗಂಟುಗಳಲ್ಲಿ ಇರುವುದು ಏನು ?"

" ಪೂಜಾ ವಿಗ್ರಹಗಳು ಇರುವ ಕೃಷ್ಣಾಜಿನದ ಪೆಟ್ಟಿಗೆಗಳು ಮತ್ತು ಇನ್ನಿತರ ಪೂಜಾ ಸಾಮಗ್ರಿಗಳು"—ಎಂದರು ಹೃಷೀಕೇಶತೀರ್ಥರು.

"ಸುಳ್ಳು ! ನಮ್ಮನ್ನು ವಂಚಿಸಲು ಈ ನಾಟಕ ಹೂಡುತ್ತಿದ್ದೀರಿ"–

ಕಳ್ಳರ ಮುಖಂಡ ಗದರಿಸಿದ.

"ಇಲ್ಲ, ಬೇಕಿದ್ದರೆ ನೀನೇ ಶೋಧಿಸಿ, ತೃಪ್ತಿ ಪಡು"—ಉಪೇಂದ್ರ ತೀರ್ಥರು ಹೇಳಿದರು.

"ಹಾಗಾದರೆ ನಿಮ್ಮ ಗಂಟುಗಳನ್ನು ಕೆಳಗಿಡಿ"—ಕಳ್ಳರ ಮುಖಂಡನು ಆಜ್ಞೆ ಮಾಡಿದ.

ಶ್ರೀಮದಾಚಾರ್ಯರ ಶಿಷ್ಯರಿಗೆ ಏನು ಮಾಡಬೇಕೆಂದು ತಿಳಿಯದೆ ಶ್ರೀಮದಾಚಾರ್ಯರ ಮುಖವನ್ನು ಎಲ್ಲರೂ ನೋಡಿದರು.

ಇದುವರೆಗೆ ಮೌನವಾಗಿದ್ದ ಶ್ರೀಮಧ್ವಾಚಾರ್ಯರು ಕಳ್ಳರ ಮುಖಂಡನನ್ನು ಉದ್ದೇಶಿಸಿ ಹೀಗೆಂದರು :

"ಅಯ್ಯಾ, ಚೋರಾಗ್ರೇಸರ ಚಕ್ರವರ್ತಿ, ನಿನಗೆ ಬೇಕಾಗಿರುವುದು ದೇವರ ಪೆಟ್ಟಿಗೆಗಳೋ, ಹಣವೋ !"

"ಹಣ !"

"ಹಾಗಿದ್ದರೆ ಈ ಹಣದ ಗಂಟನ್ನು ತೆಗೆದುಕೊಂಡು ನಮ್ಮ ತಂಟೆಗೆ ಬರದೆ ಹೊರಟುಹೋಗು"—ಎಂದು ಹೇಳಿ ತಮ್ಮ ಬಳಿ ಇದ್ದ ವಸ್ತ್ರಗಳ ಗಂಟನ್ನು ತೆಗೆದುಕೊಂಡು ಕಳ್ಳರ ಮುಖಂಡನ ಕೈಗೆ ಕೊಟ್ಟರು. ಅವನು ಅದನ್ನು ತೆಗೆದುಕೊಂಡು ಅಲ್ಲಾಡಿಸಲು ಹಣದ ಗಂಟೆಂಬಂತೆ ಝಣ ಝಣ ತ್ಕಾರಮಾಡಿತು.

ಇದನ್ನು ನೋಡಿ ಇನ್ನೊಬ್ಬ ಕಳ್ಳನಿಗೆ ಅದನ್ನು ಪಡೆಯುವ ಆಸೆಯಾಯಿತು. ಅವನು ಮೇಲೆ ಬಿದ್ದು ತಮ್ಮ ಮುಖಂಡನಿಂದ ಆ ಗಂಟನ್ನು ಕಿತ್ತುಕೊಂಡು ಓಡಿದನು. ಅವನನ್ನು ಬೆನ್ನಟ್ಟಿ ಇನ್ನೊಬ್ಬ ಕಳ್ಳನು ಅವನಿಂದ ಆ ಗಂಟನ್ನು ಕಿತ್ತುಕೊಂಡನು. ಹೀಗೆ ಪ್ರತಿಯೊಬ್ಬನೂ ಹಣದ ಗಂಟನ್ನು ತನ್ನದು ಮಾಡಿಕೊಳ್ಳಲು ಸಾಹಸ ಮಾಡುತ್ತಾ, ಭ್ರಮಿಷ್ಟರಂತೆ ಕಾಡಿನೊಳಕ್ಕೆ ಓಡಿಹೋದರು.

ಶ್ರೀಮದಾಚಾರ್ಯರು ಅವರ ಮೂರ್ಖತನವನ್ನು ನೋಡಿ ಮುಗುಳು ನಗುತ್ತಾ, ತಮ್ಮ ಶಿಷ್ಯರೊಡಗೂಡಿ ಅಲ್ಲಿಂದ ಮುಂದಕ್ಕೆ ಪ್ರಯಾಣ ಬೆಳೆಸಿದರು.

ಆಚಾರ್ಯರು ಅಲ್ಲಿಂದ ಹೊರಟುಹೋದಮೇಲೆ ಎಷ್ಟೋ ಹೊತ್ತಿನ ವರೆಗೂ ಕಳ್ಳರು ಹಣದ ಗಂಟಿಗಾಗಿ ತಮ್ಮ ತಮ್ಮಲ್ಲೇ ಬಡಿದಾಡುತ್ತಿದ್ದರು. ಹಿಂದೆ ಮಹಾಭಾರತ ಯುದ್ಧದಲ್ಲಿ ಅರ್ಜುನನು ಸಂಸಪ್ತಕರಿಗೆ ಸಮ್ಮೋಹನಾಸ್ತ್ರ ಬೀರಿ ಹೇಗೆ ಭ್ರಮೆಗೊಳಿಸಿದನೆಂದು ಈ ಪ್ರಸಂಗದಿಂದ ನೆನಪಾಗುತ್ತಿತ್ತು.[1]

ಶ್ರೀಮದಾಚಾರ್ಯರ ಮಹಿಮೆಯು ಅಂಥದು. ಅವರು ತಮ್ಮ ಅಚಿಂತ್ಯಾದ್ಭುತ ಶಕ್ತಿಯಿಂದ ಕಳ್ಳರಿಂದ ಉಂಟಾಗಿದ್ದ ವಿಪತ್ತಿನಿಂದ ಪಾರಾಗಿ ಅವರನ್ನು ವಿಚಿತ್ರ ರೀತಿಯಲ್ಲಿ ಶಿಕ್ಷಿಸಿದ್ದರು.

ಕಳ್ಳರ ಕೈಯಿಂದ ಪಾರಾದುದಕ್ಕೆ ಶಿಷ್ಯರು ಆಚಾರ್ಯರ ಧೈರ್ಯಾದಿ ಗುಣಗಾನ ಮಾಡುತ್ತಾ ಮಾರ್ಗ ಪ್ರಯಾಣ ಮುಂದುವರೆಸಿದರು.

ಹೀಗೆ ಅವರು ಹರಿದ್ವಾರವನ್ನು ಕುರಿತು ದಟ್ಟವಾದ ಕಾಡಿನಲ್ಲಿ ಹೋಗುತ್ತಿದ್ದಾಗ ಮತ್ತೊಮ್ಮೆ ಕಳ್ಳರಿಂದ ತೊಂದರೆಗೆ ಒಳಗಾಗ ಬೇಕಾಯಿತು.

ಈ ಬಾರಿ ಒಂದು ನೂರು ಮಂದಿ ಇದ್ದ ಕಳ್ಳರ ಗುಂಪು ಅವರನ್ನು ಛದ್ಮವೇಷದ ಶ್ರೀಮಂತರೆಂದು ಭ್ರಮಿಸಿ ದುರಾಕ್ರಮಣ ಮಾಡಿತು.

ಅವರಲ್ಲಿ ಒಬ್ಬ ಕಳ್ಳನು ಕೈಯಲ್ಲಿ ಒಂದು ಕೊಡಲಿ ತೆಗೆದುಕೊಂಡು ಶ್ರೀಮದಾಚಾರ್ಯರನ್ನು ಕೊಲ್ಲಲು ಬಂದನು.

ಉಪೇಂದ್ರತೀರ್ಥರು ಇದನ್ನು ನೋಡಿ ಚೀರಿ ದೈತ್ಯಾವೇಶದಿಂದ ಆ ಕಳ್ಳರ ಮುಖಂಡನ ಮೇಲೆ ಬಿದ್ದರು. ಅವನನ್ನು ನೆಲಕ್ಕೆ ಬೀಳಿಸಿ, ಕೈಲಿದ್ದ ಕೊಡಲಿಯನ್ನು ಕಿತ್ತುಕೊಂಡು ಆ ಕಳ್ಳರ ಮುಖಂಡನ ಕಡೆಗೆ ಗುರಿ ಇಟ್ಟು ಎಸೆದರು.

---

1) ಕದಾಚಿಚ್ಚೋರಾಣಾಂ ನಿಕರಮವಲೋಕ್ಯಾಭಿಪತತಾ—
ಮವಸ್ಥಾಪ್ಯ ಸ್ವೀಯಾನ್ ಕರಗಪಟಪಿಂಡಾರ್ಥಮತಿಕೃತ್ ।
ಚರನ್ನೇತೇಷ್ವೇತಾನಥ ಮಿಥ ಇಹಾಘಾತಯದಹೋ ವಿಭುಃ
ಸಂಮೋಹ್ಯ ಪ್ರಾಗ್ವಿಜಯ ಇವ ಸಂಸಪ್ತಕಗಣಾನ್ ॥
ಮ ॥ ವಿ ॥ ಸರ್ಗ 10–ಶ್ಲೋಕ 20.

ಆವರಿಟ್ಟ ಗುರಿ ವ್ಯರ್ಥವಾಗಲಿಲ್ಲ. ಇತರರಿಗೂ ಭಯ ಹುಟ್ಟಿ, ಆವರು ಪ್ರಾಣಗಳ ಮೇಲಿನ ಆಸೆಯಿಂದ ಅಲ್ಲಿಂದ ಓಡಿಹೋದರು.

ಈ ಕಳ್ಳರ ಕಾಟವನ್ನು ಪರಿಹರಿಸಿಕೊಂಡು ಆಚಾರ್ಯರು ಮತ್ತೆ ಕೆಲವು ಹರಿದಾರಿ ಪ್ರಯಾಣವನ್ನು ಮುಂದುವರೆಸಿದರು.

ಓಡಿಹೋದ ಕಳ್ಳರ ಗುಂಪು ಮತ್ತೆ ಧೈರ್ಯ ತಂದುಕೊಂಡು ಆಚಾರ್ಯರ ಶಿಷ್ಯರ ಮೇಲೆ ಪುನಃ ಆಕ್ರಮಣ ಮಾಡಿತು.1

ಈ ಬಾರಿ ಆಚಾರ್ಯರು ಒಂದು ಅಸಾಧಾರಣ ಮಹಿಮೆಯನ್ನು ಪ್ರದರ್ಶಿಸಿ ಆವರನ್ನು ನಿಗ್ರಹಿಸಿದರು.

ಕಳ್ಳರ ಮುಖಂಡನು ಆಚಾರ್ಯರನ್ನು ಬಂದು ಮುಟ್ಟಿದಾಗ ಆವರು ಮನುಷ್ಯಾಕೃತಿಯನ್ನು ಮರೆಮಾಡಿ, ಕಲ್ಲಿನ ಕಂಬವಾಗಿ ನಿಂತರು. ಆವನು ಬೇರೊಬ್ಬರನ್ನು ಹಿಡಿಯಲು ಹೋಗಲು ಮತ್ತೆ ಆವರು ಮನುಷ್ಯರಾದರು. ಬೇರೆಯವರನ್ನು ಕಳ್ಳರು ಮುಟ್ಟಿದಾಗಲೂ ಅವರೂ ಮಾನವಾಕೃತಿ ಕಳೆದು ಕೊಂಡು ಶಿಲಾ ವಿಗ್ರಹಗಳಾಗಿ ತೋರಿದರು. ಕಳ್ಳರು ದೂರ ಹೋಗುತ್ತಲೇ ಮತ್ತೆ ಆವರು ಮೊದಲಿನಂತೆ ಮನುಷ್ಯರಾಗುತ್ತಿದ್ದರು.2

ಹೀಗೆ ಆಚಾರ್ಯರು ದಿನವೆಲ್ಲಾ ಕಳ್ಳರನ್ನು ಕಾಡಿಸಿ ಆಯಾಸ ಪಡಿಸಿದರು. ಆನಂತರ ಆಚಾರ್ಯರ ಪ್ರೇರಣೆಯಿಂದ ಅವರವರಲ್ಲೇ ಜಗಳ ಹುಟ್ಟಿ ಪರಸ್ಪರ ಹೊಡೆದಾಡುತ್ತ ಓಡಿಹೋದರು. ಕೆಲವರು ಆಚಾರ್ಯರಿಗೆ ಶರಣು ಬಂದು ನಮಸ್ಕರಿಸಿ ಕ್ಷಮೆಯಾಚಿಸಿ ಹೊದರು.

ಶಿಷ್ಯವೃಂದದ ತೊಂದರೆಗಳು ಇಷ್ಟಕ್ಕೇ ಕೊನೆಗೊಳ್ಳಲಿಲ್ಲ. ಆವರು

---

1) ಅನ್ಯತ್ರ ಚ ಚೋರಾನ್ ಧನ್ಯಪ್ರವರೋಽಸೌ
ಶೂರಾನ್ ಶತಸಂಖ್ಯಾನ್ ಪ್ರಾಪ್ತಾನ್ ಸ್ವಜಿಘಾಂಸೂನ್ ।
ಏಕೇನ ತು ಶಿಷ್ಯೇಣಾಕೃಷ್ಟಕುಠಾರಾನ್ನಿಸ್ತಾಡಿತಯೂಥ್ಯಾನದ್ರಾವಯತದ್ರಾಕ್ ॥

2) ಕ್ವಚಿಚ್ಛಿಲಾಚ್ಛದಾಭ್ರಮಾದಮುಂ ಸಸಂಘಮಾತ್ಮಜನ್ ।
ಅವೇಕ್ಷ್ಯ ದಸ್ಯವಃ ಪುನಃ ಕುತೂಹಲಾತ್ತಮಾನಮನ್ ॥

ಮ ॥ ವಿ ॥ ಸರ್ಗ 10–ಶ್ಲೋಕ 21–22

ಬದರಿಯನ್ನು ಸೇರುವವರೆಗೆ ಒಂದಲ್ಲ ಒಂದು ವಿಧವಾದ ವಿಪತ್ತು ಎದುರಾಗುತ್ತಲೇ ಬಂದಿತ್ತು.

ಆದರೆ ಈ ಬಾರಿಯ ವಿಪತ್ತು ಅತಿ ಭಯಂಕರವಾಗಿತ್ತು.

ಶ್ರೀಮದಾಚಾರ್ಯರು ಮಧ್ಯಾಹ್ನ ಸಮಯವಾದುದರಿಂದ ಕಾಡಿನ ಒಂದು ಪ್ರಶಸ್ತ ಪ್ರದೇಶದಲ್ಲಿ ಬೀಡುಬಿಟ್ಟು, ಸಮೀಪದಲ್ಲಿಯೇ ಹರಿಯುತ್ತಿದ್ದ ಗಂಗಾ ನದಿಯಲ್ಲಿ ಸ್ನಾನಮಾಡಿ, ದೇವತಾರ್ಚನೆಯನ್ನು ಮುಗಿಸಿ ನೈವೇದ್ಯವನ್ನು ಭಿಕ್ಷವಾಗಿ ಸ್ವೀಕರಿಸಿ ಸ್ವಲ್ಪ ಕಾಲ ವಿಶ್ರಮಿಸಿಕೊಳ್ಳಲು ಒಂದು ದೊಡ್ಡಮರದ ನೆರಳಿನಲ್ಲಿ ಕೂತರು.

ಉಳಿದ ಶಿಷ್ಯರೂ ಹಾಗೆಯೇ ಸಮೀಪದಲ್ಲಿದ್ದ ಇತರ ಮರಗಳ ನೆರಳುಗಳನ್ನು ಆಶ್ರಯಿಸಿ ಕೂತರು. ಅವರಲ್ಲಿ ಸತ್ಯತೀರ್ಥರು ಶ್ರೀಮದಾಚಾರ್ಯರು ಬರೆಸುತ್ತಿದ್ದ ಗ್ರಂಥವೊಂದನ್ನು ಪರಿಶೀಲಿಸುತ್ತಾ ಕುಳಿತಿದ್ದರು.

ಅಷ್ಟರಲ್ಲಿ ಆವರ ಬೆನ್ನಿನಕಡೆಯಿಂದ ಒಂದು ಹೆಬ್ಬುಲಿಯು ಸದ್ದಿಲ್ಲದೆ ಬಂದು ಅವರ ಮೇಲೆ ಆಕ್ರಮಣ ಮಾಡಿತು.

ಈ ಆಕ್ರಮಣ ಗದ್ದಲವು ಶ್ರೀಮದಾಚಾರ್ಯರಿಗೆ ಕೇಳಿಸಿತು.

ಅವರು ತಿರುಗಿ ನೋಡುತ್ತಾರೆ !

ಹೆಬ್ಬುಲಿಯೊಂದು ಸತ್ಯತೀರ್ಥರನ್ನು ಎತ್ತಿಕೊಂಡು ಓಡುತ್ತಿದೆ. ಅವರು ಓದುತ್ತಿದ್ದ ತಾಡವಾಲೆ ಗ್ರಂಥವು ಚಲ್ಲಾಪಿಲ್ಲಿಯಾಗಿ ನೆಲದ ಮೇಲೆ ಬಿದ್ದಿದೆ !

ಶ್ರೀಮದಾಚಾರ್ಯರು ತಟಕ್ಕನೆ ಎದ್ದು ನಿಂತರು. ಅವರು ಅಲ್ಲಿದ್ದ ಒಂದು ಹೆಬ್ಬಂಡೆಯನ್ನು ಕಿತ್ತು ಹುಲಿಗೆ ಗುರಿಯಿಟ್ಟು ಎಸೆದರು. 1

ಅದೇನು ಆಶ್ಚರ್ಯ ! ಬಂಡೆಕಲ್ಲು ಹುಲಿಯ ತಲೆಯನ್ನು ಅಪ್ಪಳಿಸಿ ನೆಲಕ್ಕೆ ಉರುಳಿತು. ಇವರು ಭೀಮಸೇನನ ಅವತಾರಿಗಳು. ಮಹಾ ಬಲಿಷ್ಠರು.

ನೋಡುತ್ತಿದ್ದಂತೆ ಅದು ರಕ್ತಕಾರಿ ನೆಲಕ್ಕೆ ಬಿದ್ದು ಹೊರಳಾಡಿ ಪ್ರಾಣ ಬಿಟ್ಟಿತು.

---

1) ಸತ್ಯೋಚ್ಛೇದೇ ಸೇಚ್ಛಾಯಾತಂ ವ್ಯಾಘ್ರಾಕಾರಂ ದೈತ್ಯವಾಪ್ಯಂ ।
ಪ್ರಾಲೇಯಾದ್ರೇಃ ಪ್ರಾಂತೇ ಪ್ರಾಜ್ಞಃ
ಪಾಣೇರ್ಲೀಲಾಲೇಶೇನಾಸ್ಯತ್ ॥
ಮ ॥ ವಿ ॥ ಸರ್ಗ 10–ಶ್ಲೋಕ–23

ಸತ್ಯತೀರ್ಥರಿಗೆ ಪ್ರಾಣಾಪಾಯವಾಗಿರಲಿಲ್ಲ; ಮೂರ್ಛೆ ಹೋಗಿದ್ದರು.

ಸತ್ಯತೀರ್ಥರು ಸ್ವಲ್ಪ ಕಾಲಾನಂತರ ಮೂರ್ಛೆಯಿಂದ ಎಚ್ಚೆತ್ತರು. ಅವರಿಗೆ ಹೋಗಿದ್ದ ಜೀವ ಮರಳಿಬಂದಂತೆ ಆಯಿತು. ಈ ವಿಚಿತ್ರದೃಶ್ಯವನ್ನು ನೋಡಿಎಲ್ಲರೂ ಸಂತೋಷಿಸಿ ಗುರುಗಳ ಅತಿಮಾನುಷ ಮಹಿಮೆಯನ್ನು ಕೊಂಡಾಡಿದರು.

## ಶ್ರೀಮದಾಚಾರ್ಯರ ಸಂವಾದಗಳು

ಶ್ರೀಮಧ್ವಾಚಾರ್ಯರು ದ್ವಿತೀಯ ಬಾರಿ ಶ್ರೀಬಾದರಾಯಣ ದೇವರು ನೆಲೆಸಿದ್ದ ವಿಶಾಲ ಬದರಿಗೆ ಬಂದುದರ ಉದ್ದಿಶ್ಯ ನೆರವೇರಿತ್ತು. ಶ್ರೀಮದಾಚಾರ್ಯರು ವೇದವ್ಯಾಸರ ಆದೇಶದಂತೆ ರಚಿಸಿದ್ದ ಬ್ರಹ್ಮಸೂತ್ರ ಭಾಷ್ಯವನ್ನು ಪರಿಶೀಲಿಸಿ ಸಂತೋಷಪಟ್ಟರು.

ಮೊದಲಿನಿಂದಲೂ ಶ್ರೀಮದಾಚಾರ್ಯರಿಗೆ ಮಹಾಭಾರತವು ಒಂದು ಸವಾಲಿನಂತೆ ತೋರುತ್ತಿತ್ತು. ಇದು ಇತಿಹಾಸವೂ ಹೌದು: ಪುರಾಣವೂ ಹೌದು: ಜಗತ್ತಿನ ಅತಿ ದೊಡ್ಡ ಮಹಾ ಕಾವ್ಯವೂ ಹೌದು ; ಅಲ್ಲದೆ ಅದು ಅತ್ಯಂತ ಚಿಂತನಶೀಲವೂ ಬೋಧಯುಕ್ತವೂ ಆದ ಆಧ್ಯಾತ್ಮ ತತ್ತ್ವಗಳನ್ನು ಒಳಗೊಂಡ ಮಹಾಗ್ರಂಥವೂ ಹೌದು. ಮಹಾಭಾರತವನ್ನು ಮೊದಲು ಜಯ ಶಾಸ್ತ್ರವೆಂದು ವ್ಯಾಸರು ಕರೆದರು. ಆನಂತರ ಅದು ಮಹಾಭಾರತವಾಯಿತೆಂದು ಹೇಳುತ್ತಾರೆ.

ಭಗವದ್ಗೀತೆಯು ಈ ಮಹಾಭಾರತದ ಸಾರಸರ್ವಸ್ವ. ಇದುಜಗತ್ತಿನ ಅತಿಶ್ರೇಷ್ಠ ಧಾರ್ಮಿಕ ಕಾವ್ಯವೆಂದೆನಿಸಿದೆ.

ಒಂದು ಲಕ್ಷ ಶ್ಲೋಕಗಳನ್ನು ಒಳಗೊಂಡ ಈ ಪುರಾಣದಲ್ಲಿ ಅನೇಕ ಜಟಿಲ ಸಮಸ್ಯೆಗಳು ಕಗ್ಗಂಟುಗಳಾಗಿ ಉಳಿದುಕೊಂಡು ಬಂದಿವೆ. ಅವುಗಳು ಹೊರ ನೋಟಕ್ಕೆ ಪರಸ್ಪರ ವಿರುದ್ಧವಾಗಿ, ಕೆಲವು ಬಾರಿ ದ್ವಂದ್ವ ಅರ್ಥ ಪಡೆದಿರುವಂತೆ ತೋರುತ್ತವೆ. ಅವುಗಳ ಅಂತರಂಗಾರ್ಥವನ್ನು ತಿಳಿದಾಗಲೇ ಮಹಾಭಾರತದ ಘಟನೆಗಳಿಗೆ ಯಥಾರ್ಥವೂ ಸಮಂಜಸವೂ ಆದ ತಾತ್ಪರ್ಯ ನಿರೂಪಣೆಯಾಗುವುದು.

ಶ್ರೀಮನ್ಮಹಾಭಾರತದಲ್ಲಿ ಒಟ್ಟು ನೂರು ಪರ್ವಗಳೂ, ಐದು ಲಕ್ಷ ಶ್ಲೋಕಗಳೂ ಇವೆ. ಈಗ ನಮಗೆ ದೊರಕಿರುವುದು ಆದಿಪರ್ವದಿಂದ ಸ್ವರ್ಗಾರೋಹಣ ಪರ್ವದವರೆಗೆ 18 ಪರ್ವಗಳು ಮತ್ತು ಒಂದು ಲಕ್ಷ ಶ್ಲೋಕಗಳು ಮಾತ್ರ. ಹರಿವಂಶವೇ ಕೊನೆಯ ಭಾಗ. ಇದರಲ್ಲಿ ಮೂರು ಪರ್ವಗಳೂ ಹದಿಮೂರು ಸಾವಿರ ಶ್ಲೋಕಗಳೂ ಇವೆ, ಹರಿವಂಶದ ಮೂರು ಪರ್ವಗಳೇ 98–96 ಮತ್ತು 100ನೇ ಪರ್ವಗಳು. ಉಳಿದ79 ಪರ್ವಗಳೂ 3 ಲಕ್ಷದ ಎಂಭತ್ತುಏಳು ಸಾವಿರ ಶ್ಲೋಕಗಳೂ ದೇವಲೋಕದಲ್ಲಿವೆಯೆಂದು ಪ್ರತೀತಿ ಇದೆ.

ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ 32 ಅಧ್ಯಾಯಗಳೂ, 5400 ಶ್ಲೋಕಗಳೂ ಇವೆ. ಮೊದಲ ಮೂರು ಅಧ್ಯಾಯಗಳಲ್ಲಿ ಸಮಸ್ತ ಶಾಸ್ತ್ರಸಾರವೂ, ಮುಂದಿನ ಆರು ಅಧ್ಯಾಯಗಳಲ್ಲಿ ಮೂಲರಾಮಾಯಣವೂ, 10ನೆ ಅಧ್ಯಾಯದಲ್ಲಿ ವೇದವ್ಯಾಸರ ಅವತಾರವೂ, ಮುಂದಿನ 22 ಅಧ್ಯಾಯಗಳಲ್ಲಿ ಭಾರತದ ಕಥೆಯೂ ಹೇಳಲ್ಪಟ್ಟಿವೆ.

ಶ್ರೀಮದಾಚಾರ್ಯರು ಹಲವು ಜಟಿಲ ಸಂದರ್ಭಗಳನ್ನು ರಾಮಾಯಣ ಮತ್ತು ಮಹಾಭಾರತಗಳಿಂದ ಆರಿಸಿಕೊಂಡು ಅವುಗಳ ತಾತ್ಪರ್ಯಗಳನ್ನು ನಿರ್ಣಯ ರೂಪದಲ್ಲಿ ಸಂಗ್ರಹಿಸಿ ಕಾವ್ಯರೂಪದಿಂದ ಜಿಜ್ಞಾಸುಗಳಿಗೆ ಸಹಾಯ ಮಾಡಲು ನಿಶ್ಚಯಿಸಿದರು.

ಮಹಾಭಾರತದ ಜಟಿಲವಾದ ಸಮಸ್ಯೆಗಳಲ್ಲಿ ದ್ರೌಪದೀದೇವಿಯ ಪಂಚಪತಿತ್ವವೂ ಒಂದು. ಈ ಪ್ರಸಂಗದಲ್ಲಿನ ಔಚಿತ್ಯವನ್ನೂ, ಧರ್ಮಸೂಕ್ಷ್ಮವನ್ನೂ ಶ್ರೀಮದಾಚಾರ್ಯರು ಕೂಲಂಕಷವಾಗಿ ವಿಚಾರಮಾಡಿ ಲೋಕಸಮಂಜಸವಾದ ಉತ್ತರವನ್ನು ನೀಡಿದ್ದಾರೆ.

ಪ್ರಾತಃಸ್ಮರಣೀಯರಾದ ಪಂಚಕನ್ಯೆಯರಲ್ಲಿ[1] ದ್ರೌಪದಿಯು ಎರಡನೆ

---

1) ಅಹಲ್ಯಾ ದ್ರೌಪದೀ ತಾರಾ ತಾರಾ ಮಂಡೋದರೀ ತಥಾ ।
ಪಂಚಕನ್ಯಾಃ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ॥

ಮಹಾಭಾರತ—

ಯವಳಾಗಿ ಉಲ್ಲೇಖಿಸಲ್ಪಟ್ಟಿದ್ದಾಳೆ. ಇವಳು ಪಂಚವಲ್ಲಭೆ,. ಪಾಂಡವರು ಐವರಿಗೂ ಪತ್ನಿಯಾಗಿದ್ದುಕೊಂಡು ಮಹಾ ಪತಿವ್ರತೆಯರಲ್ಲಿ ಒಬ್ಬಳೆಂಬ ಗೌರವಕ್ಕೆ ಪಾತ್ರಳಾಗಿರುವಳು. ಇದರ ರಹಸ್ಯವೇನು ?

ಜನ ಸಾಮಾನ್ಯರಿಗೆ ಸಂಶಯವನ್ನು ಉಂಟುಮಾಡುವ ಈ ಪ್ರಸಂಗ ವನ್ನು ವಿಮರ್ಶಿಸಿ ಶ್ರೀಮದಾಚಾರ್ಯರು ತರ್ಕಬದ್ಧವೂ, ಲೋಕಸಮಂಜ ಸವೂ ಆದ ವಿವರಣೆಯನ್ನು ನೀಡಿದ್ದಾರೆ.

ಸಾಮಾನ್ಯರು ತಿಳಿದಿರುವಂತೆ ದ್ರೌಪದಿಯು ತನ್ನ ಹಿಂದಿನ ಜನ್ಮ ದಲ್ಲಿ "ಪತಿಂ ದೇಹಿ" ಎಂದು ಐದು ಸಲ ಬ್ರಹ್ಮನನ್ನು ಪ್ರಾರ್ಥಿಸಿ ವರ ವನ್ನು ಪಡೆದಳೆಂದೂ, ಈ ಜನ್ಮದಲ್ಲಿ ಅವಳು ಪಂಚ ಪಾಂಡವರನ್ನು ವರಿಸಿದಳೆಂದೂ ಒಂದು ಕಥೆ ಇದೆ.

ಆದರೆ ಶ್ರೀಮದಾಚಾರ್ಯರು ತಿಳಿಸುವ ವಿವರಣೆಯೇ ಬೇರೆ,

ದ್ರೌಪದಿಯು ಇಂದ್ರಪತ್ನಿಯಾದ ಶಚೀದೇವಿ, ಯಮನ ಪತ್ನಿ ಯಾದ ಶ್ಯಾಮಲಾದೇವಿ, ಅಶ್ವಿನೀ ದೇವತೆಗಳ ಪತ್ನಿಯಾದ ಉಷಾದೇವಿ ಇವರ ಅಂಶದಿಂದ ಕೂಡಿರುವಳು. ಇವರ ಜೊತೆಯಲ್ಲಿ ವಾಯುದೇವರ ಪತ್ನಿಯಾದ ಭಾರತಿದೇವಿಯ ಮತ್ತು ರುದ್ರನ ಪತ್ನಿಯಾದ ಪಾರ್ವತೀ ದೇವಿಯ ಅಂಶವೂ ಅವಳಲ್ಲಿ ಸನ್ನಿಹಿತವಾಗಿತ್ತು.

ಒಂದು ದಿನ ಬ್ರಹ್ಮಸಭೆಯಲ್ಲಿ ಪಾರ್ವತಿ, ಶಚಿ, ಶ್ಯಾಮಲಾ ದೇವಿಯರು ತಮ್ಮ ಪತಿಗಳೊಡನೆ ಕೂತುಕೊಂಡು, ಬ್ರಹ್ಮನಿಗೆ ಅಗೌರವ ಸೂಚಿಸಲು, ಬ್ರಹ್ಮದೇವನು ಅವರನ್ನು ಮನುಷ್ಯಯೋನಿಯಲ್ಲಿ ಹುಟ್ಟಲು ಶಪಿಸಿದನು. ಅವರು ತಮ್ಮ ಶಾಪಪರಿಹಾರಕ್ಕಾಗಿ ಭಾರತೀದೇವಿ ಯನ್ನು ಆಶ್ರಯಿಸಿದರು.

ಇವರೆಲ್ಲರೂ ಕೂಡಿಕೊಂಡು ದ್ರೌಪದಿಯ ದೇಹದಲ್ಲಿ ಅಂಶತಃ ಇದ್ದುಕೊಂಡು ತಮ್ಮ ಪತಿಗಳ ಅಂದರೆ ಯಮ, ಇಂದ್ರ, ವಾಯು ಮತ್ತು ಅಶ್ವಿನೀ ದೇವತೆಗಳೊಡನೆ ಸಮಾಗಮ ಹೊಂದುವರು. ಪಾರ್ವತಿಯು ಮಾತ್ರ ಅವಿಯೋಗಿನಿಯಾಗಿರುವುದರಿಂದ ನಿಸ್ಸಂಗಳಾಗಿ ಉಳಿಯುವಳು. ಈ ಸಂದರ್ಭದಲ್ಲಿ ಶ್ರೀಮದಾಚಾರ್ಯರು ನಳನಂದಿನಿ, ಇಂದ್ರಸೇನೆ,

ಮುದ್ಗಲಋಷಿ ಮುಂತಾದವರ ಹಿಂದಣ ವೃತ್ತಾಂತಗಳನ್ನು ತಿಳಿಸಿ, ದ್ರೌಪದೀ ದೇವಿಯ ಕಥೆಯನ್ನು ಸುಂದರವಾಗಿ ನಿರೂಪಿಸಿರುವರು.

ಇಂಥ ಹಲವಾರು ಸಮಸ್ಯೆಗಳಿಗೆ ಅನನ್ಯಸಾಧಾರಣ ಪ್ರತಿಭೆ ಹಾಗೂ ವಿವೇಚನಾ ಶಕ್ತಿಗಳಿಂದ ಸೂಚಿಸಲ್ಪಟ್ಟಿರುವ ಉತ್ತರಗಳು ಎಂಥ ನಾಸ್ತಿಕರನ್ನೂ ತಲೆದೂಗಿಸುತ್ತವೆ.

ಶ್ರೀಮಧ್ವಾಚಾರ್ಯರು ಸದಾಕಾಲವೂ ಭಗವಚ್ಚಿಂತನದಲ್ಲಿಯೇ ಮನಸ್ಸನ್ನು ನೆಟ್ಟು ಪೂರ್ಣಪ್ರಜ್ಞರಾಗಿದ್ದರು. ತಮ್ಮ ಅಲೌಕಿಕ ಮಹಿಮೆಗಳಿಂದ ತಾವುಅವತಾರ ಪುರುಷರೆಂಬುದನ್ನು ಹೆಜ್ಜೆ ಹೆಜ್ಜೆಗೂ ತೋರಿಸುತ್ತಿದ್ದರೂ, ಈ ಮಹಿಮೆಗಳನ್ನು ಮರೆಸುವಷ್ಟು ಮಾನವೀಯತೆಯೂ ಅವರಲ್ಲಿತ್ತು.

ಅವರು ಸಾತ್ವಿಕರಾಗಿದ್ದಂತೆ, ಸರಳರೂ, ನಿಷ್ಕಲ್ಮಷಹೃದಯವುಳ್ಳವರೂ ಆಗಿದ್ದರು. ಎಷ್ಟೋ ಬಾರಿ ಮುಗ್ಧ ಮಗುವಿನಂತೆ ಆಪ್ತಶಿಷ್ಯರೊಡನೆ ವರ್ತಿಸುತ್ತಿದ್ದರು.

ಅವರು ಕುರುಕ್ಷೇತ್ರಕ್ಕೆ ಶಿಷ್ಯರೊಡನೆ ಬಂದಿದ್ದಾಗ "ಗುರುದೇವ, ತಮ್ಮಲ್ಲಿ ನಮ್ಮದೊಂದು ಪ್ರಶ್ನೆ. ಅನುಮತಿ ಕೊಟ್ಟರೆ ಕೇಳುತ್ತೇವೆ"—ಎಂದರು ಸತ್ಯತೀರ್ಥರು ಮೊದಲಾದವರು.

"ಎಂಥ ಪ್ರಶ್ನೆ ಬೇಕಾದರೂ ಇರಲಿ, ಸಂಕೋಚವಿಲ್ಲದೆ ಕೇಳಿ" ಆಚಾರ್ಯರು ಉತ್ಸಾಹದಿಂದಿದ್ದ ಶಿಷ್ಯರಿಗೆ ಪ್ರೋತ್ಸಾಹ ನೀಡಿದರು.

"ತಾವು ಭೀಮಸೇನಾವತಾರದಲ್ಲಿ ಇಲ್ಲಿ ಅನೇಕ ಅದ್ಭುತ ಕಾರ್ಯಗಳನ್ನು ನೆರವೇರಿಸಿದ್ದೀರಿ; ಆಗ ತಾವು ಉಪಯೋಗಿಸಿದ ಮಹಾಕೋಟೆ ಎಂಬ ಗದೆಯನ್ನು ನೋಡುವ ಆಸೆಯಾಗಿದೆ, ದಯಮಾಡಿ ಅನುಗ್ರಹಿಸಬೇಕು" ಎಂದರು ಶಿಷ್ಯರು.

ಆಚಾರ್ಯರು ಈ ಮಾತು ಕೇಳಿ ಮುಗುಳ್ನಕ್ಕರು. ಶಿಷ್ಯರನ್ನು ಅಲ್ಲಿದ್ದ ಒಂದು ಸರೋವರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ನೀರಿನಲ್ಲಿ ಹುಡುಕಲು ಹೇಳಿದರು. ಅಲ್ಲಿ ಭೀಮಸೇನರಾಗಿದ್ದಾಗ ಅವರು ಉಪಯೋಗಿಸಿದ್ದ ಗದೆ ಅಡಗಿತ್ತು. ಅದನ್ನು ನೀರಿನಿಂದ ಮೇಲಕ್ಕೆ ಎತ್ತಲು ಎಲ್ಲ ಶಿಷ್ಯರೂ ಸಾಹಸಪಟ್ಟರೂ ಸಾಧ್ಯವಾಗಲಿಲ್ಲ.

ಶ್ರೀಮದಾಚಾರ್ಯರು ತಮ್ಮ ಒಂದು ಕಿರುಬೆರಳಿನ ಕೊನೆಯಿಂದ ಅದನ್ನು ನೀರಿನಿಂದ ಮೇಲೆತ್ತಿ, ಶಿಷ್ಯರಿಗೆಲ್ಲ ತೋರಿಸಿ ಅವರನ್ನು ಸಂತೋಷಪಡಿಸಿ ಮತ್ತೆ ಅದನ್ನು ಸ್ವಸ್ಥಾನ ಸೇರಿಸಿದರು.

ಮತ್ತೊಂದು ಪ್ರಸಂಗ ಭಾಗೀರಥೀನದಿಯ ತೀರದಲ್ಲಿ ನಡೆಯಿತು. ಇದು ಶ್ರೀಮದಾಚಾರ್ಯರು ಮುಖ್ಯಪ್ರಾಣನ ಅಂಶದವರೆಂಬುದನ್ನು ಸ್ಪಷ್ಟಪಡಿಸಿತು.

"ಗುರುದೇವರು ವಾಯುದೇವರ ಅಂಶದವರೆಂದು ನಾವು ಕೇಳಿದ್ದೇವೆ. ವಿಶಾಲ ಬದರಿಗೆ ಹೋಗುವಾಗ ಅವರು ಪರ್ವತ ಶಿಖರಗಳಿಂದ ಶಿಖರಗಳಿಗೆ ಹಾರಿಕೊಂಡು ಹೋದುದನ್ನು ನೋಡಿರುವುದಾಗಿ ಹೇಳಿದ್ದೀರಿ. ಇದರಲ್ಲಿ ಉತ್ಪ್ರೇಕ್ಷೆ ಇಲ್ಲ ತಾನೇ"—ಎಂದು ಸತ್ಯತೀರ್ಥರನ್ನು ಇತರ ಶಿಷ್ಯರು ವಿನಯದಿಂದ ಕೇಳಿದರು.

ಅದಕ್ಕೆ ಸತ್ಯತೀರ್ಥರು ಕೊಟ್ಟ ಉತ್ತರದಿಂದ ಶಿಷ್ಯರು ತೃಪ್ತನಾಗಿರಲಿಲ್ಲ.

ಈ ಸಂಗತಿ ಶ್ರೀಮದಾಚಾರ್ಯರ ಕಿವಿಗೆ ಬೀಳದೆ ಹೋಗಲಿಲ್ಲ. ಎಷ್ಟೆಂದರೂ ಅವರು ಸರ್ವಜ್ಞಾಚಾರ್ಯರಲ್ಲವೆ ?

ಆಚಾರ್ಯರು ಮಾರನೆಯ ದಿನ ಆ ಶಿಷ್ಯನನ್ನು ಜೊತೆಗೆ ಕರೆದುಕೊಂಡು ಗಂಗಾನದಿಯ ದಂಡೆಗೆ ಬಂದರು.

ಅವರನ್ನು ಕುರಿತು ಹೀಗೆ ಹೇಳಿದರು :

"ಉಟ್ಟಿರುವ ಬಟ್ಟೆಯನ್ನು ತೋಯಿಸಿಕೊಳ್ಳದೆ ಈ ನದಿಯನ್ನು ನೀವು ದಾಟಬಲ್ಲಿರಾ ?"[1]

---

1) ಪದಂ ಪಶೋರ್ವಾ ವಿನತಾನೂಜಸ್ಯೇತ್ಯರ್ಥ ನದೀಂ ತಾವದದೀನಸತ್ವಃ
ಅನಾರ್ದ್ರವಾಸಾಃ ಸಕುತೂಹಲಾದ್ಯೈರ್ವೃದೇವಭೂದೇವಮುಖ್ಯೈರ್ವ
ವಂದೇ ॥

ಭೀತ್ಯೈರರಾತ್ಯೈರತಿಮಾತಮತ್ರ ನ ತಾರಕೈರಪ್ಯಥ ತಾರಕೈಃ ಸಃ ।
ಸ್ವತೇಜಸಾ ವಿಷ್ಟತಭೂಮನುಷ್ಯಃ ಪ್ರವೇನಶಿಷ್ಯಾನ್ವಿರತಾದಯುತ್ತಾಂ ॥
ಮ॥ವಿ॥ ಸರ್ಗಂ 10 ಶ್ಲೋಕ 30-31

"ದೋಣಿಯಲ್ಲಿ ಹೋದರೆ ಮಾತ್ರ ಹಾಗೆ ಸಾಧ್ಯ"—ಎಂದರು ಆ ಶಿಷ್ಯರು

"ಹಾಗಾದರೆ ನಾನು ದೋಣಿಯ ಸಹಾಯವಿಲ್ಲದೆ ನದಿಯನ್ನು ದಾಟುತ್ತೇನೆ. ನೋಡಿ"—ಎಂದವರೇ ಆಚಾರ್ಯರು ನದಿಯ ನೀರಿನ ಮೇಲೆ ನೆಲದ ಮೇಲೆ ನಡೆದಂತೆ ನಡೆದುಕೊಂಡು ಆಚೆದಡ ಸೇರಿದರು.[1]

ಈ ಜಲಸ್ತಂಭನ ವಿದ್ಯೆಯನ್ನು ನೋಡಿ ಶಿಷ್ಯರಿಗೆಲ್ಲಾ ಆಶ್ಚರ್ಯವಾಯಿತು. ಅವರಿಗೆ ಅಣಿಮಾದಿ ಅಷ್ಟಾದಶಸಿದ್ಧಿಗಳು ಕರಗತವಾಗಿವೆ ಎಂದು ಕೆಲವರು ಉದ್ಗಾರ ತೆಗೆದರು. ಮತ್ತೆ ಕೆಲವರು ಶ್ರೀಮದಾಚಾರ್ಯರು ವಾಯುದೇವರ ಅಂಶ. ಮಾರುತಿಯಾಗಿದ್ದಾಗ ಸೀತಾದೇವಿಯನ್ನು ಹುಡುಕುವುದಕ್ಕಾಗಿ ನೂರುಯೋಜನ ವಿಸ್ತಾರವಾದ ದಕ್ಷಿಣ ಸಮುದ್ರವನ್ನು ಲಂಘಿಸಿದವರಿಗೆ ಈ ಗಂಗೆಯು ಒಂದು ಕಿರುಗಾಲುವೆಯೇ ಸರಿ !

ಶ್ರೀಮದಾಚಾರ್ಯರು ಇಷ್ಟೆಲ್ಲ ಶಕ್ತಿಸಂಪನ್ನರಾಗಿದ್ದರೂ ಭಕ್ತರ ಪಾಲಿಗೇ ಶಿಷ್ಯರ ಪಾಲಿಗೆ ಮಗುವಿನಂತೆ ವರ್ತಿಸುತ್ತಿದ್ದರು.

ಇನ್ನೊಮ್ಮೆ ಶ್ರೀಮದಾಚಾರ್ಯರು ತಮ್ಮ ಶಿಷ್ಯಸಮೂಹದೊಡನೆ ಭಾಗೀರಥಿನದಿಯ ತೀರದಲ್ಲಿ ಬೀಡು ಬಿಟ್ಟಿದ್ದರು.

ಶ್ರೀಮದಾಚಾರ್ಯರಿಗೆ ಹತ್ತುಶತ ಆನೆಗಳ ಬಲವುಂಟೆಂದು ಅವರ ಒಬ್ಬ ಶಿಷ್ಯನು ಅವರಮಹಿಮೆಯನ್ನು ವರ್ಣಿಸುತ್ತಿದ್ದನು.

ಅಲ್ಲಿಗೆ ಸ್ನಾನಕ್ಕೆಂದು ಬಂದ ಮತ್ತೆ ಕೆಲವು ಶಿಷ್ಯರು

"ಇದು ಅಸಾಧ್ಯ. ಇಂಥ ವರ್ಣನೆ ಕೇವಲ ಭಕ್ತ್ಯುತ್ಪ್ರೇಕ್ಷೆ" ಎಂದು ತಮ್ಮ ತಮ್ಮಲ್ಲೇ ಮಾತನಾಡಿಕೊಂಡರು.

ಸರ್ವಜ್ಞಾಚಾರ್ಯರಿಗೆ ಇದೆಲ್ಲ ತಿಳಿಯಿತು. ಅಂದು ಅವರು ಶಿಷ್ಯರೊಡನೆ ಸಲಿಗೆಯಿಂದ ಮಾತನಾಡುತ್ತಾ ತಮ್ಮ ಎಡಗೈಕಿರುಬೆರಳನ್ನು ನೀಡಿ,

"ಇದನ್ನು ಮಡಿಸಿದವರಿಗೆ ಬಹುಮಾನ ನೀಡುತ್ತೇವೆ" ಎಂದರು. ಶಿಷ್ಯರು ಮಡಿಸಲು ಅಂಜಿದರೂ, ಗುರುಗಳು ಪ್ರೋತ್ಸಾಹಿಸಿದುದರಿಂದ ಎಲ್ಲರೂ ಪ್ರಯತ್ನಿಸಿ ಸಂಪೂರ್ಣ ವಿಫಲರಾದರು.

"ಹೋಗಲಿ, ನೀವು ಇಪ್ಪತ್ತು ಜನರೂ ಒಟ್ಟಾಗಿ ಸೇರಿ ನನ್ನನ್ನು ನೆಲಕ್ಕೆ ಕೆಡವಿ, ನೋಡೋಣ. ನಿಮ್ಮ ಶಕ್ತಿ ಎಷ್ಟೆಂಬುದು ತಿಳಿಯುತ್ತದೆ" —ಎಂದರು.

ಅದರಂತೆ ಶಿಷ್ಯರೆಲ್ಲರೂ ಒಟ್ಟಾಗಿ ಬಂದು ಆಚಾರ್ಯರ ಮೇಲೆ ಬಿದ್ದರೂ ಅವರನ್ನು ಅಲ್ಲಾಡಿಸಲಾಸಲಾಗಲಿಲ್ಲ.1

ಕಡೆಗೆ ಆಚಾರ್ಯರ ಶಕ್ತಿ ಸಾಮರ್ಥ್ಯಗಳ ಬಗೆಗೆ ಸಂದೇಹಿಸುತ್ತಿದ್ದ ಶಿಷ್ಯನನ್ನು ಕರೆದು ಅವನನ್ನು ನೆಲದ ಮೇಲೆ ಮಲಗಿಸಿ ತಮ್ಮ ಕಿರುಬೆರಳಿನಿಂದ ಒತ್ತಿದರು. ಅವನಿಗೆ ಬೆಟ್ಟವು ಎದೆಯಮೇಲೆ ಬಿದ್ದಂತಾಗಿ ಚೀರಿದ. ಶಿಷ್ಯ ವತ್ಸಲರಾದ ಶ್ರೀಮದಾಚಾರ್ಯರು ಅವನಿಂದ ತಮ್ಮ ಕಿರುಬೆರಳನ್ನು ತೆಗೆದು, ಭಾರವನ್ನು ಬಿಡಿಸಿ ಮುಗುಳ್ನಕ್ಕರು.

ಆ ಶಿಷ್ಯನು ತನ್ನ ಅಪರಾಧಕ್ಕಾಗಿ ಆಚಾರ್ಯರಲ್ಲಿ ಕ್ಷಮೆ ಬೇಡಿದನು.

ಇಂಥ ಮಹಿಮೆಗಳನ್ನು ಆಚಾರ್ಯರು ತಮ್ಮ ಪ್ರವಾಸ ಕಾಲದಲ್ಲಿ ಅನೇಕ ಬಗೆಯಾಗಿ ಶಿಷ್ಯರಿಗೆ ಪ್ರದರ್ಶಿಸುತ್ತಿದ್ದರು.

ಇಷ್ಟಾದರೂ ಅವರು "ಪ್ರಾಪ್ತೇ ನರೇಷು ಜನನೇ ನರವತ್ಪ್ರವೃತ್ತಿಃ" ಎಂಬ ಪುರಾಣವಾಕ್ಯದಂತೆ ಸಾಧಾರಣ ಮಾನವರಂತೆಯೇ ನಡೆದುಕೊಳ್ಳುತ್ತಿದ್ದರು,

ಆದರೆ ಅವರನ್ನು ಮನುಷ್ಯಮಾತ್ರದವರೆಂದು ತಿಳಿದು ಪರೀಕ್ಷಿಸಲು ಬಂದವರಿಗೆ ತಕ್ಕ ಪ್ರಾಯಶ್ಚಿತ್ತವಾಗದೇ ಇರುತ್ತಿರಲಿಲ್ಲ.

ಒಮ್ಮೆ ಅವರು ಇಕ್ಷುಪಾತವೆಂಬ ಊರಿಗೆ ಬಂದಿದ್ದರು.

---

1) ತೇನೋಪಯಾತೇನ ಕದಾಚನಾಥ ವಾರಾಣಶೀಂ ಪಾಪನಿವಾರಣೇನ ।
ಅಪಾದಿ ಪಾಣೇ ಬಲಿನಃ ಸ್ವಶಿಷ್ಯಾನ್ ವಿಲೋಕ್ಯ ಲೀಲಾವಸರೇವಲಿಪ್ತಾನ್
ವಿಯುದ್ಧಸಿದ್ಧ್ಯೈ ಯುಗಪದ್ವಿಧೀರಂಮನಾ ಭವಂತೋಭಿ ಪತಂತು ಮಾ ದ್ರಾಕ್ ॥
ಸಮಸ್ತಶಕ್ತ್ಯಂ ನ ಯುನಕ್ತಿ ಯಃ ಸ್ವಮತಾಸ್ತದಾಚಾಲ್ಲಿಂ ಸ ನಿರಾಕರೋತಿ ।
ಇತೀರಿಯವ್ ಪಂಚದಶೈಕ್ಷ್ಯ ಯೂನಃ ಪ್ರಾಪ್ತಾನ್ ಪ್ರಯುಂದ್ಧಾನ್ಸ್ಯಗಪನ್ನಿಪಾತ್ಯ ॥
ಉತ್ಥೀಯತಾಂ ಯಸ್ಯ ಸಮರ್ಥತಾ ಸ್ಯಾದಿತಿ ಬ್ರುವಾಣೋ ಶನಕೈರ್ಜಹಾಸ ॥
ಮ॥ವಿ॥ಸರ್ಗ 10 ಶ್ಲೋಕ 37–39

ಶ್ರೀಮದಾಚಾರ್ಯರ ಮಹಿಮೆಯನ್ನು ಕೇಳಿ ಅಲ್ಲಿನ ದೊರೆಯು ಆಚಾರ್ಯರನ್ನು ಅರಮನೆಗೆ ಕರೆಸಿಕೊಂಡು ಸತ್ಕರಿಸಿದರು.

ಅಂದಿನ ವಿಲ್ಲರ ಊಟ ಮುಗಿದ ಮೇಲೆ ಅವನು ವಿನೋದಕ್ಕೆಂದು ಆಚಾರ್ಯರ ಮುಂದೆ ಒಂದು ಸಾವಿರ ದೊಡ್ಡ ಗಾತ್ರದ ಬಾಳೆಹಣ್ಣುಗಳನ್ನು ಇಟ್ಟು, ಸ್ವೀಕರಿಸಬೇಕೆಂದು ಕುಹಕ ಬುದ್ಧಿಯಿಂದ ಪ್ರಾರ್ಥಿಸಿದನು.

ಶ್ರೀಮದಾಚಾರ್ಯರು ಮುಗುಳ್ನಕ್ಕರು. ಅನಂತರ ಒಂದೊಂದಾಗಿ ಶಿಷ್ಯರು ಸುಲಿದು ಕೊಟ್ಟಂತೆ ಆಚಾರ್ಯರು ಆ ಹಣ್ಣನ್ನೆಲ್ಲಾ ತಿಂದು ಮುಗಿಸಿ ದೊರೆಯ ಮುಖ ನೋಡಿದರು. ದೊರೆಯ ಮುಖ ಇಂಗುತಿಂದ ಮಂಗನ ಮುಖದಂತೆ ಆಗಿತ್ತು.

ಅವನು ತನ್ನ ಅಪರಾಧವನ್ನು ಮನ್ನಿಸಲು ಆಚಾರ್ಯರಲ್ಲಿ ಕ್ಷಮೆ ಯಾಚಿಸಿದನು.

## ಮಂತ್ರಶಕ್ತಿಗೆ ಮಣಿದ ಹೆಸರುಕಾಳು ಪೈರು

ಇಂದಿನ ವಿಜ್ಞಾನಕ್ಕೆ ಭಾರತೀಯರು ನಂಬಿರುವ ಮಂತ್ರಶಾಸ್ತ್ರವು ಒಂದು ಸವಾಲಾಗಿ ನಿಂತಿದೆ. ಅದು ವಿಜ್ಞಾನದ ಪಾಲಿಗೆ ಒಂದು ಬಿಡಿಸಲಾಗದ ಒಗಟಾಗಿದೆ. ಆಧುನಿಕ ವಿಜ್ಞಾನವು ಪ್ರತ್ಯಕ್ಷವಾಗಿ ಕಾಣುವ ಪ್ರಯೋಗಶಾಲೆಯಲ್ಲಿ ಸಿದ್ಧಪಡಿಸಿ ತೋರಿಸಲು ಸಾಧ್ಯವಾಗುವ ಭೌತ ತತ್ತ್ವಗಳನ್ನು ಮಾತ್ರವೇ ಒಪ್ಪಿಕೊಂಡಿದೆ. ಉಳಿದ ಸಂಗತಿಯನ್ನು, ಅಲೌಕಿಕ ವ್ಯಾಪಾರಗಳನ್ನು ತಾನು ಕಣ್ಣಾರ ಕಂಡರೂ, ಅವುಗಳ ಜಗತ್ತನ್ನು ನಿರ್ವಹಿಸುವ ತತ್ತ್ವಗಳನ್ನು ಒಪ್ಪಲು ಇಂದಿನ ವಿಜ್ಞಾನಿಯು ಸಿದ್ಧನಿಲ್ಲ. ಅದು ಆವನ ಅನುಭವಕ್ಕೆ ಬಂದಿಲ್ಲವೆಂಬ ಕಾರಣದಿಂದಲೋ, ಅದನ್ನು ತಿಳಿಯಲು ಅವನಿಂದ ಸಾಧ್ಯವಾಗಿಲ್ಲ ಎಂಬ ಕಾರಣದಿಂದಲೋ ಅಥವಾ ಅವನ ಅಜ್ಞಾನದಿಂದಲೋ ಇಂತಹ ಒಂದು ಆಧ್ಯಾತ್ಮ ಜಗತ್ತು—ಅತೀಂದ್ರಿಯ ಜಗತ್ತು—ಇದೆ ಎಂಬುದರ ಬಗ್ಗೆ ನಿಶ್ಚಿತ ತೀರ್ಮಾನಕ್ಕೆ ಬರಲಾರದೆ ಅವನು ತೊಳಲಾಡುತ್ತಿದ್ದಾನೆ.

ನಮ್ಮ ಕಣ್ಣಿಗೆ ಕಾಣುವ ಭೌತಿಕಜಗತ್ತು ಇರುವಂತೆಯೇ ಬೇರೊಂದು ಸೂಕ್ಷ್ಮವಾದ-ಆಧ್ಯಾತ್ಮ ಜಗತ್ತೂ ಇದೆ ಎಂದು ಬಲ್ಲವರು ಹೇಳುತ್ತಾರೆ. ಆದರೆ ಅದು ಅನುಭವ ವೇದ್ಯವಾಗಿದೆ. ಬಾಹ್ಯ ಇಂದ್ರಿಯಗಳಿಂದ ಕಾಣಲು ಅಸಾಧ್ಯವಾಗುವುದರಿಂದ ಅದನ್ನು ಒಪ್ಪಿಕೊಳ್ಳಲು ಇಂದಿನ ವಿಜ್ಞಾನಿ ಹಿಂಜರಿಯುತ್ತಿದ್ದಾನೆ.

ವಾಸ್ತವವಾಗಿ ನೋಡಿದರೆ ಈ ಕಣ್ಣಿಗೆ ಕಾಣುವ ಹೊರ ಜಗತ್ತನ್ನು—ವಿಶ್ವವನ್ನು—ಅರಿಯಲು ಹೊರಟಿರುವ ವಿಜ್ಞಾನಿಯು ಅದರ ಕೆಲವು ರಹಸ್ಯಗಳನ್ನು ಭೇದಿಸುವುದರಲ್ಲಿ ಮಾತ್ರ ಯಶಸ್ವಿಯಾಗಿದ್ದಾನೆ. ಆದರೂ ಅವನ ಏಕೆ, ಹೇಗೆ ಎಂಬ ಪ್ರಶ್ನೆಗಳಿಗೆ ಉತ್ತರ ಸಿಗದ ವಿಷಯಗಳು ಇನ್ನೂ ಈ ಲೋಕದಲ್ಲಿ ಅಪಾರವಾಗಿವೆ. ಉದಾಹರಣೆಗೆ ಮನುಷ್ಯಶರೀರದ ಬಗೆಗೆ ವಿಜ್ಞಾನಿಗೆ ಇನ್ನೂ ಅನೇಕ ವಿಚಾರಗಳು ತಿಳಿಯಬೇಕಾಗಿವೆ ಎಂದು ನೋಬೆಲ್ ಪಾರಿತೋಷಕ ಪಡೆದ ಸುಪ್ರಸಿದ್ಧ ವಿಜ್ಞಾನಿ ಅಲೆಕ್ಸಿಸ್ ಕೆರಲ್ ಹೇಳಿದ್ದಾನೆ.

ಅಲ್ಲದೆ ವಿಜ್ಞಾನಿಗೆ ಮನುಷ್ಯನು ಇನ್ನೂ ಅರ್ಥವಾಗದ ವಸ್ತುವಾಗಿಯೇ ಉಳಿದಿದ್ದಾನೆ. ಏಕೆಂದರೆ ಮನುಷ್ಯನು ಇತರ ವಸ್ತುಗಳಂತಲ್ಲ. ಅವನಲ್ಲಿ ಪಂಚಭೂತಗಳ ಸಂಯೋಗದಿಂದ ಆದ ಸ್ಥೂಲವಾದ ದೇಹವಿದೆ, ಆ ದೇಹದಲ್ಲಿ ಮನಸ್ಸಿದೆ. ಅದನ್ನು ನಿಯಂತ್ರಿಸುವ, ಪ್ರಚೋದಿಸುವ ಬುದ್ಧಿ ಇದೆ ಅದನ್ನು ಪ್ರೇರೇಪಿಸುವ ಜೀವಾತ್ಮನಿದ್ದಾನೆ. ಅವನಿಗೆ ಚೈತನ್ಯ ನೀಡುವ ಪರಮಾತ್ಮನಿದ್ದಾನೆ. ಹೀಗೆ ಮನುಷ್ಯನು ತನಗೇ ಅರ್ಥವಾಗದ ನಿಗೂಢ ಸಮಸ್ಯೆಯಾಗಿದ್ದಾನೆ.

ಇಷ್ಟು ಮಾತ್ರವಲ್ಲ, ಮನುಷ್ಯನು ತನ್ನದೇ ಆದ ಜಗತ್ತುಗಳಲ್ಲಿ ಜೀವಿಸುತ್ತಾನೆ, ಅಂದರೆ ಭೌತಜಗತ್ತು, ಮನೋಜನಗತ್ತು, ಭಾವನಾ ಜಗತ್ತು ಮತ್ತು ಆಧ್ಯಾತ್ಮ ಜಗತ್ತು—ಹೀಗೆ ನಾಲ್ಕು ಜಗತ್ತುಗಳಲ್ಲಿ ಅವನು ವಾಸಿಸುತ್ತಾನೆ. ಅವನು ಇಂದ್ರಿಯಗಳಿಂದ ಸುಖ ದುಃಖಗಳನ್ನು ಅನುಭವಿಸಿದರೂ ಅತೀಂದ್ರಿಯನಾಗಿಯೂ ಇರಬಲ್ಲ.

ಯೋಗದಿಂದ ಕುಂಡಲಿಯನ್ನು ಜಾಗ್ರತಗೊಳಿಸಿ, ಷಟ್ಚಕ್ರಗಳ ಮೂಲಕ ಊರ್ಧ್ವರೇತಸ್ಕನಾದ ಯೋಗಿಶ್ರೇಷ್ಠನಿಗೆ ಅಣಿಮಾದಿ ಅಷ್ಟಾದಶ ಸಿದ್ಧಿಗಳು ತಾವಾಗಿಯೇ ಬಂದು ಸೇವಿಸುವುವೆಂದೂ, ಅವನು ಸರ್ವಜ್ಞನಾಗಿ ತ್ರಿಲೋಕಗಳನ್ನೂ ಆಳಬಲ್ಲನೆಂದೂ ಶ್ರುತಿಸ್ಮೃತಿವಾಕ್ಯಗಳಿವೆ. ತಮ್ಮ ಜೀವಿತದಲ್ಲಿ ಅತ್ಯಲ್ಪ ಕಾಲ ತಪಸ್ಸು ಮಾಡಿ ಇಂಥ ಸಿದ್ಧಿ ಪಡೆದು ಲೋಕ ಕಲ್ಯಾಣಕ್ಕೆ ಅದನ್ನು ಬಳಸಿದ ಸಾಧು ಸಂತರು ಅನೇಕರು ಆಗಿ ಹೋಗಿದ್ದಾರೆ. ಆದರೆ ಅವರು ಮಾತ್ರ ಅವಧೂತರಂತೆಯೂ—ಜಡಭರತ ರಂತೆಯೂ—ನಡೆದುಕೊಳ್ಳುತ್ತಾ ಬಂದಿದ್ದಾರೆ. ಆದರೆ ಅವರು ಮಹಾತ್ಮರೂ ಪವಾಡಪುರುಷರೂ ಆಗಿದ್ದಾರೆ. ಅವರು ಮನಸ್ಸು ಮಾಡಿದರೆ ಅನೇಕ ಅದ್ಭುತ ಕಾರ್ಯಗಳನ್ನು ಮಾಡಬಲ್ಲರು. ಅನೇಕ ಅಲೌಕಿಕ ಶಕ್ತಿ ವಿಶೇಷ ಗಳನ್ನೂ ಪ್ರದರ್ಶಿಸಬಲ್ಲರು.

ಶ್ರೀಮಧ್ವಾಚಾರ್ಯರು ಅವತಾರಪುರುಷರಾಗಿ ಹುಟ್ಟಿದ್ದುದರಿಂದ ಅವರು ಇಂಥ ಅಸಾಧಾರಣ ಶಕ್ತಿ ವಿಶೇಷವನ್ನು ಪಡೆದಿದ್ದರು. ಅವು ಗಳನ್ನು ಒಮ್ಮೊಮ್ಮೆ ಪ್ರಕಾಶಿಸುತ್ತಲೂ ಇದ್ದರು.

ಅವರು ತಮ್ಮ ತೀರ್ಥಕ್ಷೇತ್ರಯಾತ್ರೆಯಲ್ಲಿ ಪ್ರಾಚೀನ ದೇವಾಲಯ ಗಳನ್ನು ನೋಡಲು ಗೋವಾ ಪಟ್ಟಣಕ್ಕೂ ಬಂದಿದ್ದರು.

ಅಲ್ಲಿಗೆ ಬಂದಾಗ ಶಂಕರನೆಂಬ ಒಬ್ಬ ಬ್ರಾಹ್ಮಣನು ಶ್ರೀಮದಾ ಚಾರ್ಯರಿಗೆ ನಾಲ್ಕು ಸಾವಿರ ದೊಡ್ಡಗಾತ್ರದ ಬಾಳೆಹಣ್ಣುಗಳನ್ನು ತಿನ್ನಲು ಕೊಟ್ಟನು; ಅವನ್ನೆಲ್ಲಾ ತಿಂದು ಅವನಿತ್ತ ಮೂವತ್ತು ಕೊಡ ಹಾಲನ್ನೂ ಕುಡಿದು ತಮ್ಮ ಅಲೌಕಿಕ ಮಹಿಮೆಯನ್ನು ಆಚಾರ್ಯರು ತೋರಿಸಿದರು.[1]

---

1) ಸ ಶಂಕರಪದೋ ದ್ವಿಜೋಪಹೃತಮಾಪ್ಯ ಗೋವಾಖ್ಯಗಾಂ
ಗರಿಷ್ಠಕದಲೀಲಸದ್ದಶಶತೀಚತುಷ್ಕಂ ಚರನ್ ।
ಪಯಃ ಕಲಶಪಂಚಕತ್ರಿಕಯುಗಾಭಿಪೂರ್ಣಂ
ಪಪಾವದೃಷ್ಟಗತಿರಪ್ಯಭೂನ್ನೃಮಂಡಲ್ಯೈರುದ್ಯತ್ಕೈಃ ॥

ಮ ॥ ವಿ ॥ ಸರ್ಗ–10 ಶ್ಲೋಕ 52

ಗೋವೆಯ ದೊರೆ ಗೋಪಕರಾಜನು ಶ್ರೀಮದಾಚಾರ್ಯರ ವ್ಯಕ್ತಿತ್ವ ದಿಂದ ಬಹು ಬೇಗನೆ ಅತ್ಯಂತ ಪ್ರಭಾವಿತನಾದನು.

ಗೋಪಕರಾಜನಿಗೆ ಬ್ರಾಹ್ಮಣರನ್ನು ಕಂಡರೆ ಪ್ರೀತಿ ಗೌರವಗಳಿರಲಿಲ್ಲ. ಅವನು ಬ್ರಾಹ್ಮಣೇತರನಾಗಿದ್ದರೂ ವಿಚಾರಪರನಾಗಿದ್ದನು. ಅವನಿಗೆ ವೇದಗಳಲ್ಲಿ ನಂಬಿಕೆ ಇರಲಿಲ್ಲ. ಅವನ ವೈಜ್ಞಾನಿಕ ದೃಷ್ಟಿಗೆ ವೇದ ಮಂತ್ರಗಳಿಗೆ ಅರ್ಥ ವಿರುವಂತೆ ಅನಿಸುತ್ತಿರಲಿಲ್ಲ.

ಅವನಿಗೆ ಈ ವಿಷಯದಲ್ಲಿ ಎಷ್ಟು ಕುತೂಹಲ ಆಸಕ್ತಿಗಳಿದ್ದವೆಂದರೆ, ವೇದಮಂತ್ರಗಳಿಗೆ ಸೂಚಿಸಲ್ಪಟ್ಟ ಅಲೌಕಿಕ ಶಕ್ತಿಯನ್ನು ಯಾರಾದರೂ ತೋರಿಸಿದರೆ ತಾನು ಅವರ ದಾಸಾನುದಾಸನಾಗಲು ಸಿದ್ಧನಿದ್ದ. ಅಂತಹ ಮಂತ್ರಸಿದ್ಧರಾದ ಮಹಾತ್ಮರು ಅವನ ಕಣ್ಣಿಗೆ ಇದುವರೆಗೆ ಯಾರೂ ಬಿದ್ದಿರಲಿಲ್ಲ.

ಹೀಗಾಗಿ ಸಾಧು ಸಂತರೆಂದು ಹೇಳಿಕೊಳ್ಳುವವರನ್ನು ಗೋಪಕ ದೊರೆಯು ತಿರಸ್ಕಾರದಿಂದಲೂ ಅಗೌರವದಿಂದಲೂ ನೋಡುತ್ತಿದ್ದ.

ಇಂಥವನು ಶ್ರೀಮದಾಚಾರ್ಯರನ್ನು ನೋಡಿದೊಡನೆ ಅವರು ಸಾಮಾನ್ಯ ಸಂನ್ಯಾಸಿ ಎಂದುಕೊಂಡು ಅವರನ್ನು ಪರೀಕ್ಷಿಸಲು ಅರಮನೆಗೆ ಕರೆಸಿಕೊಂಡು ಅವರ ಮುಂದೆ ತನ್ನ ಸಮಸ್ಯೆಯನ್ನು ಇಟ್ಟನು.

"ಸ್ವಾಮಿ, ವೇದಗಳಲ್ಲಿ ಹೇಳಿರುವ ಮಂತ್ರಗಳಿಗೆ ಅರ್ಥಕ್ರಿಯಾ ಕಾರಿತ್ವ ಶಕ್ತಿ ಇದೆಯೆ ?" ಎಂದು ಕೇಳಿದನು.

"ಇದೆ" ಆಚಾರ್ಯರು ನಿರ್ವಿಕಾರರಾಗಿ ಹೇಳಿದರು.

"ಅವುಗಳಿಗೆ ಅಲೌಕಿಕ ಶಕ್ತಿ ಇದೆಯೆ ?"

"ಇದೆ".

"ಅದನ್ನು ಪ್ರತ್ಯಕ್ಷವಾಗಿ ತೋರಿಸುತ್ತೀರಾ ?"

"ತೋರಿಸಬಲ್ಲೆ !"

"ಹಾಗಿದ್ದರೆ ವೇದಗಳಲ್ಲಿ ಯಾವುದೋ ಒಂದು ಧಾನ್ಯ ಬೀಜವನ್ನು ಕೈಲಿ ಹಿಡಿದುಕೊಂಡು "ಯಾ ಓಷಧೀ : ಪೂರ್ವಜಾತಾ ದೇವೇಭ್ಯಃ" ಇತ್ಯಾದಿ ಮಂತ್ರಗಳನ್ನು—ಜಪಿಸಿದರೆ ಮೊಳಕೆಯಾಗಿ ಹೂ ಮೊದಲಾದವು ಬಿಡುವುವೆಂದು ಹೇಳಿದೆ. ಆದರೆ ನಾವು ಅನೇಕ ಜನ ವೇದವಿದ್ವಾಂಸರನ್ನು

ಪರೀಕ್ಷಿಸಿದ್ದೇನೆ. ಅವರು ಯಾರಿಂದಲೂ ಈ ಪ್ರಯೋಗ ಮಾಡಿ ತೋರಿ ಸಲು ಸಾಧ್ಯವಾಗಿಲ್ಲ. ಆದುದರಿಂದ ವೇದದಲ್ಲಿ ಹೇಳಿರುವುದು ಸುಳ್ಳು— ಈ ಮಂತ್ರಗಳಿಗೆ ಅರ್ಥಕ್ರಿಯಾಕಾರಿತ್ವ ಶಕ್ತಿ ಇಲ್ಲವೆಂದು ತೀರ್ಮಾನಕ್ಕೆ ಬಂದಿದ್ದೇನೆ." ಎಂದನು.

ಆಚಾರ್ಯರು ಮುಗುಳ್ನಕ್ಕು "ವೇದ ಮಂತ್ರಗಳಿಂದ ಸಾಧ್ಯ" ಎಂದರು.

"ಹಾಗಾದರೆ ನೀವು ಮಾಡಿತೋರಿಸುತ್ತೀರಾ ?"

"ಮಾಡಿ ತೋರಿಸುವುದು ಕಠಿಣವಲ್ಲ. ಆದರೆ ಇದಕ್ಕೆ ಪಾತ್ರಾ ಪಾತ್ರತೆಯುಂಟು. ವೇದ ಮಂತ್ರಗಳಲ್ಲಿ ಹೇಳಿದ ಫಲ ದೊರಕಬೇಕಾದರೆ ಅದನ್ನು ಹೊಂದುವವರಲ್ಲಿ ಅಧಿಕಾರವಿರಬೇಕು. ಹಾಗೆ ಯೋಗ್ಯತೆಯಿರುವ ಅಧಿಕಾರಿಯು ಅಪೇಕ್ಷಿಸಿದರೆ ವೇದಮಂತ್ರಗಳಿಂದ ಅಪೇಕ್ಷಿತ ಫಲ ದೊರಕುತ್ತದೆ."

"ನಿಮ್ಮ ಹೇಳಿಕೆಯಂತೆ ನಾನು ವೇದಾಧಿಕಾರಿಯಲ್ಲವೆ ?"

"ಅಲ್ಲ."

"ನೀವು ವ್ಯರ್ಥಾಲಾಪ ಮಾಡುತ್ತಿದ್ದೀರಿ. ನೀವು ಸುಳ್ಳು ಹೇಳಿ ನನ್ನನ್ನು ವಂಚಿಸುತ್ತಿದ್ದೀರಿ. ನಿಮಗೆ ವೇದಮಂತ್ರ ಹೇಳಿ ಬೀಜವನ್ನು ಚಿಗುರಿಸುವ ಶಕ್ತಿಯಿಲ್ಲ, ಅಥವಾ ನಿಮ್ಮ ವೇದ ಮಂತ್ರಗಳಿಗೆ ಆ ಶಕ್ತಿ ಇಲ್ಲ, ಇದ್ದರೆ ತೋರಿಸಿ. ನಿಮ್ಮ ದಾಸಾನುದಾಸನಾಗುತ್ತೇನೆ"

ಆಚಾರ್ಯರು ಈ ಸವಾಲನ್ನು ಒಪ್ಪಿಕೊಂಡರು.

ಅವರು ಕ್ಷಣಕಾಲ ಮೌನವಾಗಿ ಕುಳಿತರು. ಇಷ್ಟು ಮಾತ್ರದಿಂದಲೇ ಗೋಪಕ ರಾಜನು ಆಚಾರ್ಯರು ಸೋತರೆಂದು ಗಹಗಹಿಸಿ ನಕ್ಕನು.

"ಯಾ ಔಷಧೀ ಇತ್ಯಾದಿ ವೇದವಾಕ್ಯಂ ನ ಪ್ರಮಾಣಂ. ವ್ಯಭಿ ಚಾರಿತ್ವಾತ್ ಉನ್ಮತ್ತವಾಕ್ಯವತ್; ಅನಂತರಂ ವಿಪ್ರತಿಪನ್ನಂ ಸರ್ವಂ ವೇದವಾಕ್ಯಂ ಅಪ್ರಮಾಣಂ. ಅಪ್ರಮಾಣಂ ವೇದತ್ವಾತ್ ಯಾ ಓಷಧೀ ಇತ್ಯಾದಿ ವೇದವಾಕ್ಯವತ್"—ಎಂದು ತನಗೆ ತಿಳಿದ ಅರ್ಧಂಬರ್ಧ ಸಂಸ್ಕೃತ ವಾಕ್ಯಗಳಿಂದಲೇ ಉದ್ಗಾರ ತೆಗೆದನು.

ಇದು ಶ್ರೀಮದಾಚಾರ್ಯರಿಗೆ ವಿನೋದವಾಗಿ ತೋರಿತು.

"ಆಗಲಿ ರಾಜನೇ, ನೀನು ಇಷ್ಟಪಟ್ಟಂತೆಯೇ ಆಗಲಿ. ಎಲ್ಲಿ, ನೀನು ಹೆಸರುಕಾಳನ್ನು ಒಂದು ಬೊಗಸೆ ತಂದುಕೊಡು, ನಿನಗೆ ವೇದಮಂತ್ರಗಳ ಶಕ್ತಿಯನ್ನು ತೋರಿಸುತ್ತೇವೆ"—ಎಂದರು.

ಅದರಂತೆ ಗೋಪಕರಾಜನು ಒಂದು ಬೊಗಸೆ ಹೆಸರುಕಾಳನ್ನು ತಂದು ಶ್ರೀಮದಾಚಾರ್ಯರ ಕೈಗೆ ಸುರಿದನು.[1]

ಆಚಾರ್ಯರು ಅಶ್ವಿನೀ ದೇವತೆಗಳನ್ನು ಧ್ಯಾನಿಸಿ "ಯಾ ಓಷಧೀ" ಎಂದು ಆರಂಭವಾಗುವ ಸೂಕ್ತವನ್ನು ಪಠಿಸಿದರು. ಅದೇನು ಆಶ್ಚರ್ಯ! ಆಚಾರ್ಯರ ಬೊಗಸೆಯಲ್ಲಿದ್ದ ಹೆಸರುಕಾಳು ಮೊಳೆತು, ಚಿಗುರಿ, ಹೂ ಬಿಟ್ಟು, ಕಾಯಿಯೂ ಒಡೆಯಿತು.

ಇದನ್ನು ನೋಡಿದ ಗೋಪಕರಾಜನು ಶ್ರೀಮದಾಚಾರ್ಯರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅವರಿಗೆ ಶರಣು ಬಂದನು. ಅಂದಿನಿಂದ ಅವನು ಆಚಾರ್ಯರ ಪ್ರಿಯ ಶಿಷ್ಯನೂ ಆದನು.

ಆಚಾರ್ಯರ ತಪಶ್ಶಕ್ತಿ, ತೇಜಸ್ಸು, ಅವರ ವಾಕ್ಪಟುತ್ವ, ಶಿಷ್ಯವಾತ್ಸಲ್ಯ, ಭಗವದ್ಭಕ್ತಿ—ಜ್ಞಾನ ಭಕ್ತಿ ವೈರಾಗ್ಯಗಳನ್ನು ನೋಡಿ ಮನ್ಮೂಕನಾದನು.

ಅವನು ಆಚಾರ್ಯರನ್ನೂ ಅವರ ಶಿಷ್ಯರನ್ನೂ ತನ್ನ ಅರಮನೆಯಲ್ಲಿ ಇರಿಸಿಕೊಂಡು ಸತ್ಕರಿಸಿದನು.

ಅವನು ಪ್ರತಿದಿನ ಆಚಾರ್ಯರಿಂದ ಸಚ್ಛಾಸ್ತ್ರಪಾರಾಯಣವನ್ನು ಮಾಡಿಸಿ ಶ್ರವಣ ಮಾಡಿ ವೈಷ್ಣವ ದೀಕ್ಷೆಯನ್ನು ಸ್ವೀಕರಿಸಿದನು. ಒಂದುದಿನ ಶ್ರೀಮದಾಚಾರ್ಯರ ಮುಂದೆ ಈ ಬಗ್ಗೆ ಮಾತು ತೆಗೆದನು.

---

1) ಅಯಮೇವ ಗೋವಿಷಯತೋಽಪಿ ಕುತ್ರಚಿತ್ಸದಸಿ
ಜನಾರ್ಥಿತೋ ಜವಾತ್ ।
ಪುಷ್ಪಮುತ ಫಲಮಹೋ ವಿದಧೇ
ಜನಸುಪ್ತದಾನುಪಮಗಾನಸಂಪದಾ ॥
ಮ ॥ ವಿ ॥ ಸರ್ಗ 10–ಶ್ಲೋಕ 53

"ಭಗವಾನ್. ತಾವು ಈ ಪಾದಸೇವಕನ ಒಂದು ಬಿನ್ನಹವನ್ನು ನಡೆಸಿ ಕೊಡಬೇಕಾಗಿ ಪ್ರಾರ್ಥನೆ."

"ಏನು, ಸಂಕೋಚವಿಲ್ಲದೆ ಹೇಳಿ, ಗೋಪಕರಾಜರೇ"

"ತಾವು ಮಹಾನುಭಾವರು. ತಮ್ಮ ಪಾದದೂಳಿ ಬಿದ್ದರೆ ದೇಶದಲ್ಲಿ ಮಳೆ ಬೆಳೆಗಳಾಗಿ ಸುಭಿಕ್ಷ ಉಂಟಾಗುತ್ತದೆ. ತಮ್ಮಂತಹ ಮಹಾ ತಪಸ್ವಿಗಳು ನಮಗೆ ತ್ರಿಕಾಲದಲ್ಲೂ ಆಶೀರ್ವಾದ ಮಾಡುತ್ತಾ ನಮ್ಮ ಬಳಿಯೇ ಇದ್ದು ಬಿಡಬೇಕೆಂದು ನನ್ನ ಪ್ರಾರ್ಥನೆ."

ಈ ಕೋರಿಕೆಯನ್ನು ಕೇಳಿ ಶ್ರೀಮದಾಚಾರ್ಯರು ಮುಗುಳ್ನಗೆ ನಕ್ಕರು, ಅಷ್ಟೆ.

"ಏಕೆ ಗುರುದೇವ, ನನ್ನ ಕೋರಿಕೆಯು ಅಪರಿಗ್ರಾಹ್ಯವೆ ?"

"ಅಯ್ಯಾ, ನೀನು ಕೋರಿದ್ದುದರಲ್ಲಿ ಅಸಮಂಜಸವೇನೂ ಇಲ್ಲ, ಸಮುದ್ರಾಭಿಮುಖವಾದ ಮಹಾನದಿಯ ನೀರನ್ನು ಒಂದೆಡೆ ಕಟ್ಟಿ ಕಟ್ಟಿ ನಿಲ್ಲಿಸಲು ಬರುತ್ತದೆಯೋ ? ಹರಿಯುವುದು ಅದರ ಸ್ವಭಾವ, ಅಂತೆಯೇ ಲೋಕಕ್ಕೆ ಬಿಸಿಲನ್ನು ನೀಡುವ ಸೂರ್ಯನನ್ನು ಮೋಡಗಳಿಂದ ಮರೆಮಾಡಲು ಸಾಧ್ಯವೆ ? ಹಾಗೆಯೇ ಸಕಲ ಚರಾಚರ ವಸ್ತುಗಳಿಗೆ ಚೈತನ್ಯವನ್ನು ನೀಡುವ ಮುಖ್ಯ ಪ್ರಾಣನನ್ನು ಒಂದೆಡೆ ಹಿಡಿದು ಕಟ್ಟಲು ಸಾಧ್ಯವೇ ?— ನಿನ್ನ ಆಸೆ ಹಾಗೆ ಇದೆ. ನಾವು ಸಂನ್ಯಾಸಿಗಳು. ಎಲ್ಲ ಬಗೆಯ ಮೋಹ ಮಮತೆಗಳನ್ನು ಬಿಟ್ಟವರು. ನಮ್ಮನ್ನು ಇಲ್ಲಿ ಉಳಿಸಿಕೊಳ್ಳುವ ವಿಚಾರ ಬಿಡು, ನಾವು ಎಲ್ಲೂ ಒಂದು ದಿನಕ್ಕಿಂತ ಹೆಚ್ಚು ನಿಂತವರಲ್ಲ. ಹೀಗಿದ್ದೂ ನಿನ್ನ ವಿಶ್ವಾಸಕ್ಕೆ ಕಟ್ಟುಬಿದ್ದು ದೀರ್ಘಕಾಲ ನಿಂತಿದ್ದೇವೆ. ನಮಗೆ ಇನ್ನು ಇಲ್ಲಿಂದ ಹೊರ ಡಲು ಅವಕಾಶ ಕೊಡು"—ಎಂದು ಹೇಳಿ ದೊರೆಯ ಕೋರಿಕೆಯನ್ನು ನಿರಾ ಕರಿಸಿದರು.

ಆದರೂ ಆಚಾರ್ಯರ ಮೇಲಣ ಭಕ್ತಿಯಿಂದ ದೊರೆಯು ಒಂದು ಅವಿವೇಕದ ಕಾರ್ಯ ಮಾಡಿದನು. ಅವನು ಹೇಗಾದರೂ ಮಾಡಿ ಅವರನ್ನು ತನ್ನ ರಾಜಧಾನಿಯಲ್ಲೇ ಉಳಿಸಿಕೊಳ್ಳಲು ಸಂಕಲ್ಪಿಸಿ, ಶ್ರೀಮದಾಚಾರ್ಯರು ಶಿಷ್ಯರೊಡನೆ ಬೀಡುಬಿಟ್ಟಿದ್ದ ಬಿಡಾರದ ಸುತ್ತಲೂ ಬಲವಾದ ಕಾವಲು ಹಾಕಿ

ದನು. ತನ್ನ ಅಪ್ಪಣೆಯಿಲ್ಲದೆ ಯಾರನ್ನೂ ಅಲ್ಲಿಂದ ಹೊರಗೆ ಹೋಗಲು ಬಿಡಬಾರದೆಂದು ಆಜ್ಞೆ ಮಾಡಿದನು.

ಈ ಸುದ್ದಿಯನ್ನು ಶಿಷ್ಯರು ಕೇಳಿ ಶ್ರೀಮದಾಚಾರ್ಯರಲ್ಲಿ ನಿವೇದಿಸಿದರು, ಆಚಾರ್ಯರು ಕೇವಲ ನಕ್ಕುಬಿಟ್ಟರು.

ಮಾರನೆಯ ದಿನ ಆಚಾರ್ಯರು ಶಿಷ್ಯರಿಗೆ ಗೋವೆಯಿಂದ ಪ್ರಯಾಣ ಹೊರಡಲು ಸಿದ್ಧರಾದಲು ತಿಳಿಸಿದರು. ಅವರನ್ನು ಸೈನಿಕರಾರೂ ತಡೆಯಲಿಲ್ಲ. ಆಚಾರ್ಯರ ದರ್ಶನ ಮಾಡುತ್ತಲೇ ಅವರು ಮಂತ್ರ ಮುಗ್ಧರಾಗದವರಂತೆ ಕಂಬದಂತೆ ನಿಂತುಬಿಟ್ಟರು. ಶಿಷ್ಯರಿಗೆ ಕೃಷ್ಣಾವತಾರದ ಕಥೆ ನೆನಪಿಗೆ ಬಂದಿತು.

ಆಚಾರ್ಯರು ಗೋಪಕರಾಜನ ರಾಜಧಾನಿಯಿಂದ ತಪ್ಪಿಸಿಕೊಂಡು ಹೋದ ಮೇಲೆ ಅವರನ್ನು ಸೆರೆಹಿಡಿದು ತರಲು ದೊರೆಯು ಮೂರ್ಖನಂತೆ ಆಜ್ಞೆ ಮಾಡಿದನು. ಆದರೆ ಆಚಾರ್ಯರಾಗಲೀ, ಅವರ ಶಿಷ್ಯರಾಗಲೀ ಅವನ ಕಣ್ಣಿಗೆ ಬೀಳಲಿಲ್ಲ.

ಶ್ರೀ ಮಧ್ವಾಚಾರ್ಯರು ಶೀಘ್ರವಾಗಿ ಪ್ರಯಾಣಮಾಡಿ ಗೋವಾ ರಾಜ್ಯ ವನ್ನು ಬಿಟ್ಟು ಹೊರಟರು.

ಅವರು ಆ ರಾಜ್ಯದ ಗಡಿಯನ್ನು ದಾಟಿ ಪಶುಪ ಎಂಬ ಹಳ್ಳಿಗೆ ಬಂದರು. ಅಲ್ಲಿನ ಜನರು ಪ್ರೀತ್ಯಾದರಗಳಿಂದ ಅವರನ್ನು ಕಂಡರು. ಅವರು ಆಚಾರ್ಯ ರನ್ನು ಭಕ್ತಿಯಿಂದ ಆ ದಿನ ತಮ್ಮಲ್ಲಿ ಇದ್ದು ಭಿಕ್ಷೆ ಸ್ವೀಕರಿಸಲು ಪ್ರಾರ್ಥಿಸಿದರು.

ಭಕ್ತಜನಪ್ರಿಯರಾದ ಆಚಾರ್ಯರು ಅವರ ಕೋರಿಕೆಯನ್ನು ಈಡೇರಿಸಲು ಅಲ್ಲೇ ನಿಂತರು.

ಆ ಸಂಜೆ ಊರಿನ ಜನಕ್ಕೆ ಭಕ್ತಿಯ ಶ್ರೇಷ್ಠತೆಯನ್ನು ಕುರಿತು ಪ್ರವಚನ ನೀಡಿದರು. ಜ್ಞಾನಯುಕ್ತವಾಗಿ ಮಾಡುವ ಶ್ರೀಹರಿಯ ಸೇವೆ—ಭಕ್ತಿಯು —ಹೇಗೆ ಮೋಕ್ಷಪ್ರದವಾಗುವುದೆಂಬುದನ್ನು ದೃಷ್ಟಾಂತರಗಳಿಂದ ವಿವರಿಸಿದರು.

ಆ ಹಳ್ಳಿಯ ಜನರಿಗೆ ಆಚಾರ್ಯರ ಮೇಲೆ ವಿಶೇಷವಾದ ಅಭಿಮಾನ ಗೌರವಗಳು ಉಂಟಾದವು.

ಅವರನ್ನು ತಮ್ಮ ಭಾಗದ ದೇವರೆಂದು ತಿಳಿದು ಅವರಲ್ಲಿ ತಮ್ಮ ಕಷ್ಟ

ಗಳನ್ನು ಅರಿಕೆಮಾಡಿಕೊಂಡರು.

ಆ ಪ್ರದೇಶದಲ್ಲಿ ಯಾವುದೋ ರೋಗದಿಂದ ಅಡಿಕೆ ಹೂಗಳು ಕಾಯಾಗುವ ಮೊದಲೇ ಉದುರಿಹೋಗುತ್ತಿದ್ದವು. ಅವರು ಅಡಿಕೆಕಾಯಿ ಹಣ್ಣುಗಳನ್ನು ನೋಡಿ ಅನೇಕ ವರ್ಷಗಳಾಗಿದ್ದವು. ಅವರ ತೋಟದಲ್ಲಿದ್ದ ಮಾವಿನ ಗಿಡಗಳಲ್ಲೂ ಫಲ ಬಿಡುತ್ತಿರಲಿಲ್ಲ. ತಮ್ಮ ಈ ಕಷ್ಟವನ್ನು ರೈತರು ಶ್ರೀಮದಾಚಾರ್ಯರಲ್ಲಿ ಹೇಳಿಕೊಂಡು ತಮಗೆ ಸಹಾಯ ಮಾಡಬೇಕೆಂದು ಅವರನ್ನು ವಿನೀತರಾಗಿ ಭಕ್ತಿಯಿಂದ ಪ್ರಾರ್ಥಿಸಿದರು.

ಆಚಾರ್ಯರಿಗೆ ಅವರ ಕಷ್ಟಗಳನ್ನು ಕೇಳಿ ವ್ಯಥೆಯಾಯಿತು. ಕರುಣಾಳು ಗಳಾದ ಅವರು ಮನಸ್ಸಿನಲ್ಲೇ ಶ್ರೀಹರಿಯನ್ನು ಅವರ ಕಷ್ಟಗಳು ನಿವಾರಣೆ ಯಾಗಲೆಂದು ಪ್ರಾರ್ಥಿಸಿದರು.

"ಅಯ್ಯಾ, ಯಜಮಾನ, ನಿಮ್ಮ ಪ್ರಾರ್ಥನೆ ಎಲ್ಲವೂ ಶ್ರೀಹರಿಯ ಚಿತ್ತಕ್ಕೆ ಬಂದಿದೆ. ನಿಮಗೆ ಒಳ್ಳೆಯದಾಗುತ್ತದೆ" ಎಂದು ಹೇಳಿ ಅವರು ಸ್ವಲ್ಪ ಕಾಲ ಕಣ್ಮುಚ್ಚಿ ಧ್ಯಾನಾಸಕ್ತರಾದರು.

ಅನಂತರ, "ಅಯ್ಯ, ಯಾವುವನ್ನು ಚಿಗುರಿಸಿ, ಹೂ, ಫಲ ಬಿಡುವಂತೆ ಮಾಡಬೇಕೆಂದು ನಿಮ್ಮ ಅಪೇಕ್ಷೆ ಇದೆಯೋ ಅವುಗಳ ಬೀಜಗಳನ್ನು ತಂದುಕೊಡಿ"—ಎಂದು ಹೇಳಿದರು.

ಅದರಂತೆ ಊರಿನ ಜನರು ಅಡಿಕೆ, ಮಾವು, ಹಲಸು ಇವುಗಳ ಬೀಜ ಗಳನ್ನು ತಂದು ಆಚಾರ್ಯರಿಗೆ ಒಪ್ಪಿಸಿದರು.

ಶ್ರೀಮದಾಚಾರ್ಯರು ಅವುಗಳನ್ನು ಕೈಗೆ ತೆಗೆದುಕೊಂಡು, ದ್ವಾದಶ ಸ್ತೋತ್ರವನ್ನು ಸುಶ್ರಾವ್ಯವಾಗಿ ಹಾಡಿದರು. ವನಸ್ಪತಿ ಅಭಿಮಾನಿ ದೇವತೆ ಗಳಾದ ಅಶ್ವಿನಿ ದೇವತೆಗಳನ್ನೂ ಪ್ರಾರ್ಥಿಸಿದರು.

ಅನಂತರ ವೇದಮಂತ್ರಗಳನ್ನು ಹೇಳಿಕೊಂಡು ಆ ಬೀಜಗಳನ್ನು ತೀರ್ಥ ದಿಂದ ಸಂಪ್ರೋಕ್ಷಿಸಿ, ರೈತರ ಕೈಗೆ ಕೊಟ್ಟು ಭೂಮಿಯಲ್ಲಿ ಬಿತ್ತಲು ಹೇಳಿದರು.

ರೈತರು ಅದರಂತೆ ಬೀಜಗಳನ್ನು ಭೂಮಿಯಲ್ಲಿ ಬಿತ್ತಿದರು. ಶ್ರೀಮದಾ ಚಾರ್ಯರು ತಾವು ಬಾಲ್ಯದಲ್ಲಿ ರಚಿಸಿದ್ದ ಶ್ರೀಕೃಷ್ಣನ ಕಂದುಕ ಸ್ತುತಿಯನ್ನು ಹಲವು ರಾಗಗಳಲ್ಲಿ ಹಾಡಿದರು. ಈ ಸಂಗೀತದಿಂದ ಹೊರಟ ಶಬ್ದದ

ತರಂಗಗಳು ಭೂಮಿಯಲ್ಲಿ ಬಿತ್ತಿದ್ದ ಬೀಜಗಳನ್ನು ಮೊಳಕೆಯಾಗುವಂತೆ ಮಾಡಿದವು.

ಅಷ್ಟೇ ಅಲ್ಲ. ಅನೇಕ ವರ್ಷಗಳಿಂದ ಹೂ ಕಾಯಿಗಳಿಲ್ಲದೆ ಬರಡಾಗಿ ಬೆಳೆದು ನಿಂತಿದ್ದ ಗಿಡಮರಗಳು ಮಂತ್ರದಂಡದಿಂದ ಪ್ರಭಾವಿತವಾದಂತೆ ಚಿಗುರಿ, ಹೂ, ಕಾಯಿ, ಹಣ್ಣುಗಳಿಂದ ಜೋತು ಬಿದ್ದವು. ಸಣ್ಣವಾಗಿದ್ದ ಫಲ ಪುಷ್ಪಗಳು ದೊಡ್ಡದಾದವು.

ಆಚಾರ್ಯರು ತಮ್ಮ ಮಂತ್ರಶಕ್ತಿ ಹಾಗೂ ಸಂಗೀತಶಕ್ತಿಯಿಂದ ಈ ಅತಿಮಾನುಷ ಘಟನೆಯನ್ನು ಪ್ರದರ್ಶಿಸಿದರು.

ಇದನ್ನು ನೋಡಿದ ಜನರು ಆಶ್ಚರ್ಯಾತಿಶಯದಿಂದ ಅವಾಕ್ಕಾದರು ಅವರು ಅವತಾರಪುರುಷರಾದ ಶ್ರೀಮದಾಚಾರ್ಯರ ಶಕ್ತಿ ಮತ್ತು ಮಹಿಮೆಗಳನ್ನು ಕೊಂಡಾಡುತ್ತಾ ಅವರ ಪಾದಕಮಲಗಳಿಗೆ ಎರಗಿ ಶರಣಾಗತರಾದರು.

## ಧೂರ್ತರಿಂದ ಗ್ರಂಥಗಳ ಕಳವು

ಶ್ರೀಮಧ್ವಾಚಾರ್ಯರು ಸಾಧಾರಣವಾಗಿ ಎಷ್ಟು ಸರಳರಾಗಿದ್ದರೋ ವಾದಕ್ಕೆ ನಿಂತರೆ ಅಷ್ಟೇ ನಿಷ್ಠುರವಾದಿಗಳೂ ಆಗಿದ್ದರು. ಅವರು ಪರಮತ ಖಂಡನೆಗೆ ತೊಡಗಿದರೆ ಪ್ರತಿಪಕ್ಷಗಳ ಅವತಾರ ಸಮಾಪ್ತಿಯಾಯಿತೆಂದೇ ತಿಳಿಯಬೇಕು. ಅವರು ಎಂದೂ ದಾಕ್ಷಿಣ್ಯಕ್ಕೆ ಒಳಗಾಗಿ ಸತ್ಯಕ್ಕೆ ಅಪಚಾರವೆಸಗುತ್ತಿರಲಿಲ್ಲ. ತಾವು ಸತ್ಯವೆಂದು ತಿಳಿದುದ್ದನ್ನು ಲೋಕವೇ ಎದರು ನಿಂತರೂ ನಿರ್ಭಯವಾಗಿ ಘಂಟಾಘೋಷವಾಗಿ ಸಾರುತ್ತಿದ್ದರು. ಇದರಿಂದ ಕೆಲವು ವೇಳೆ ಇತರರ ಮನಸ್ಸು ನೋಯುತ್ತಿತ್ತು. ಅಂಥ ಸಂದರ್ಭಗಳಲ್ಲಿ ಶ್ರೀಮದಾಚಾರ್ಯರು ತಮ್ಮ ವಾಗ್ಬಾಣಗಳನ್ನು ಸೌಮ್ಯವಾಗಿಯೇ ಪ್ರಯೋಗಿಸುತ್ತಿದ್ದರು. ಅವರ ವಿಡಂಬನೆ ವ್ಯಂಗ್ಯೋಕ್ತಿಗಳಿಗೆ ಹೆದರದಿದ್ದವರೇ ಇರಲಿಲ್ಲ.

ಹಿಂದೆ ಅವರು ಎರಡನೆಯ ಬಾರಿ ಉತ್ತರ ಭಾರತದ ಯಾತ್ರೆ ಕೈಗೊಂಡಿದ್ದ ಸಮಯದಲ್ಲಿ ಗಂಗಾತೀರದಲ್ಲಿ ಬೀಡು ಬಿಟ್ಟಿದ್ದಾಗ ಅಮರೇಂದ್ರಪುರಿ ಎಂಬ ಅದ್ವೈತಶಾಸ್ತ್ರವಿದ್ವಾಂಸನು ಶ್ರೀಮದಾಚಾರ್ಯರ ಜೊತೆಯಲ್ಲಿ ಶಾಸ್ತ್ರಗಳಲ್ಲಿ ವಾದ ಮಾಡಲು ಬಂದನು ಅವನು ಸಕಲ ಅದ್ವೈತಸಿದ್ಧಾಂತ ಹೊರತು ಇತರ ಸಿದ್ಧಾಂತಗಳನ್ನು ಅನೇಕ ವಿದ್ವತ್ಸಭೆಗಳಲ್ಲಿ ಬುದ್ಧಿವಂತಿಕೆಯಿಂದ ಖಂಡಿಸಿದ್ದನು.

ಅವನು ಶ್ರೀಮದಾಚಾರ್ಯರನ್ನು ವಾದದಲ್ಲಿ ಜಯಿಸಲಿಚ್ಛಿಸಿ ಅವರನ್ನು ವಾಕ್ಯಾರ್ಥಕ್ಕೆ ದುರಹಂಕಾರದಿಂದಲೂ, ಕುಹಕದಿಂದಲೂ ಆಹ್ವಾನಿಸಿದನು.

ಆಚಾರ್ಯರು ಅವನೊಂದಿಗೆ ಲೋಕಾಭಿರಾಮವಾಗಿ ಮಾತನಾಡುತ್ತಾ,

"ಬ್ರಹ್ಮಜ್ಞಾನಿಗೆ ಗರುಡಪಕ್ಷಿಗಳಂತೆ, ಆಕಾಶದಲ್ಲಿ ಮೇಲೆ ಮೇಲೆ ಹಾರುತ್ತಿದರೂ ಅವುಗಳ ದೃಷ್ಟಿ ಮಾತ್ರ ನೆಲದ ಮೇಲೆಯೇ ಇರುತ್ತದೆ. ಬ್ರಹ್ಮಜ್ಞಾನಿಯು ಲೌಕಿಕ ವ್ಯಾಪಾರ ನಿರ್ವಹಣೆಯಲ್ಲಿ ತೊಡಗಿ ಸಂಸಾರಿಯಾಗಿದ್ದರೂ ಅವನ ಮನಸ್ಸುಮಾತ್ರ ಪರಬ್ರಹ್ಮ ವಸ್ತು ಶ್ರೀಹರಿಯಲ್ಲೇ ಕೇಂದ್ರೀಕೃತವಾಗಿರುತ್ತದೆ. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ತಿಳಿಸಿರುವಂತೆ ಅವನು ನಿಷ್ಕಾಮ್ಯ ಕರ್ಮಾಚರಣೆ ಮಾಡುತ್ತಿರುವುದರಿಂದ ಲಾಭ ನಷ್ಟಗಳಾಗಲೀ, ಸುಖದುಃಖಗಳಾಗಲೀ ಅವನನ್ನು ಬಾಧಿಸುವುದಿಲ್ಲ. ಇಂಥ ನಿಷ್ಕಾಮಿ ಬ್ರಹ್ಮಜ್ಞಾನಿಗಲ್ಲದೆ ಮತ್ತೆ ಯಾರಿಗೆ ಮೋಕ್ಷ ಸಿಕ್ಕೀತು?"[1]

ಈ ವಿವರಣೆಯು ಆ ಅಮರೇಂದ್ರಪುರಿಯನ್ನು ತೃಪ್ತಿ ಪಡಿಸಲಿಲ್ಲ. ಅವನು ಆಚಾರ್ಯರನ್ನು ಬೇಕೆಂದೇ ಕೆಣಕಲು ಬಾಲಿಶಪ್ರಶ್ನೆಯೊಂದನ್ನು ಕೇಳಿದನು.

"ಹಾಗಾದರೆ ಜ್ಞಾನವೆಂದರೇನು ?"

ಶ್ರೀಮದಾಚಾರ್ಯರಿಗೆ ಅವನ ಕುಹಕವೇನೆಂದು ಅರ್ಥವಾಯಿತು.

ಅವರು ಅದೇ ಧಾಟಿಯಲ್ಲಿಯೇ ಪುನಃ ಪ್ರಶ್ನಿಸಿದರು.

---

1) ಪರಮಾಗಮಾರ್ಥವರಶಾಸ್ತ್ರಮಿದಂ
ಭಜತಾಮಮಾನವಕಲಾರಚಿತಮ್।
ವ್ರಜತಾಮಹೋ ಪರಮವೈಷ್ಣವತಾಂ
ರತಯೋ ಸ್ವಲೋಕಮಜಿತೋ ದಿಶತಿ ||
ಮಹಾನಂದತೀರ್ಥಸ್ಯ ಯೋ ಭಾಷ್ಯಭಾವಂ
ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ,
ಸುರಾದ್ಯಾ ನರಾಂತಾ ಮುಕುಂದಪ್ರಸಾದಾ
ದಿಮಂ ಮೋಕ್ಷಮೇತೇ ಭಜಂತೇ ಸದೇತಿ ||
ಮ॥ ವಿ॥ ಸರ್ಗ॥ ಶ್ಲೋಕ॥, 7, ಮತ್ತು 79

" ನೀನು ಜ್ಞಾನವುಳ್ಳವನಾಗಿರುವಿಯಾ ?"

"ಹೌದು !"

"ಹಾಗಿದ್ದರೆ ಜ್ಞಾನ ಶಬ್ದದ ಅರ್ಥ ಚೆನ್ನಾಗಿ ನಿನಗೆ ತಿಳಿದಿದೆ; ಹೀಗಿದ್ದೂ ವ್ಯರ್ಥ ಪ್ರಶ್ನೆ ಕೇಳಬೇಕೆಂದು ಹೊರಟಿದ್ದರೆ ನೀನು ಉನ್ಮತ್ತನೇ ಸರಿ. ಜ್ಞಾನವಿಲ್ಲದ ಮೂಢನಾಗಿದ್ದರೆ ಶಬ್ದ ಮತ್ತು ಅರ್ಥಗಳನ್ನು ತಿಳಿಯುವ ಶಕ್ತಿಯಿಲ್ಲದ ನೀನು ಹಾಗೆ ಪ್ರಶ್ನೆ ಮಾಡುವುದೇ ಸರಿಹೋಗುವುದಿಲ್ಲ. ಯಾವ ದೃಷ್ಟಿಯಿಂದ ನೋಡಿದರೂ ನಿನಗೆ ಪ್ರಶ್ನೆಯನ್ನು ಕೇಳುವ ಯೋಗ್ಯತೆಯೇ ಇಲ್ಲ. ಇನ್ನು ಉತ್ತರಿಸುವ ಅಗತ್ಯ ಎಲ್ಲಿಂದ ಬರಬೇಕು ? "

ಈ ಮಾತನ್ನು ಕೇಳಿ ಅಮರೇಂದ್ರಪುರಿಯು ಶ್ರೀಮದಾಚಾರ್ಯರ ಮುಂದೆ ತನ್ನ ಪಾಂಡಿತ್ಯ ಏನೂ ಪ್ರಯೋಜನವಾಗುವುದಿಲ್ಲವೆಂದು ತಿಳಿದು ಅವರಿಗೆ ಸೋತೊಪ್ಪಿ ಅಲ್ಲಿಂದ ತಲೆತಪ್ಪಿಸಿಕೊಂಡು ಹೋದನು.

ಎರಡನೆಯ ಬಾರಿ ಉತ್ತರದೇಶದ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಉಡುಪಿಗೆ ಹಿಂದಿರುಗಿದ ಮೇಲೆ ಶ್ರೀಮದಾಚಾರ್ಯರನ್ನು ವಾದದಲ್ಲಿ ಕೆಣಕಲು, ಅಲ್ಲಿನ ಅದ್ವೈತವಾದಿಗಳೆಲ್ಲರೂ ಸೇರಿ ಆ ನಾಡಿನಲ್ಲೆಲ್ಲಾ ಪ್ರಕಾಂಡ ಪಂಡಿತರೆಂದೂ, ಚತುರವಾಗ್ಮಿಗಳೆಂದೂ ಪ್ರಸಿದ್ಧಿ ಪಡೆದಿದ್ದ ಪದ್ಮತೀರ್ಥ ಮತ್ತು ಪುಂಡರೀಕಯತಿಗಳನ್ನು ಮುಂದೆಬಿಟ್ಟರು.

ಈ ಪದ್ಮತೀರ್ಥನು ಶ್ರೀಮಧ್ವಾಚಾರ್ಯರನ್ನು ಅಟ್ಟಹಾಸದಿಂದಲೂ ಕುಹಕ ಬುದ್ಧಿಯಿಂದಲೂ ಶಾಸ್ತ್ರ ವಾಕ್ಯಾರ್ಥಕ್ಕೆ ಆಹ್ವಾನಿಸಿದನು.

ಅವನು 'ತತ್ತ್ವಮಸಿ' ಎಂಬ ಉಪನಿಷತ್ತಿನ ವಾಕ್ಯವನ್ನು ಉದ್ಧರಿಸಿ ದೀರ್ಘವಾಗಿ ಅದ್ವೈತ ಪರವಾದವನ್ನು ಚಮತ್ಕಾರದಿಂದ ಮಂಡಿಸಿದನು.

" ಶಂಕರಾಚಾರ್ಯರು ಪ್ರತಿಪಾದಿಸಿದ ಮಾಯಾವಾದ ಮೂಲವಾದ ಅದ್ವೈತ ದರ್ಶನವು ಅನಾದಿಕಾಲದಿಂದಲೂ ಬಂದುದು; ಸುಲಭವಾಗಿ ತಿಳಿಯಲು ಅಶಕ್ಯವಾದುದು. ಆಪಾತತಃ ಅಸಂಗತವಾಗಿ ಕಾಣುವುದೇ ಇದಕ್ಕೆ ಒಂದು ಭೂಷಣ. ಪ್ರಪಂಚದಲ್ಲಿ ಬ್ರಹ್ಮವಸ್ತುವೊಂದೇ ಸತ್ಯವೂ ಅದ್ವಿತೀಯವೂ ಆಗಿರುವುದು. ಇದನ್ನು ವೇದಗಳಿಂದಲೂ, ತಿಳಿಯಲು ಸಾಧ್ಯವಿಲ್ಲ."

" ಈ ಪ್ರಪಂಚದಲ್ಲಿ ಮನುಷ್ಯ, ದೇವ, ದೈತ್ಯ, ಬ್ರಾಹ್ಮಣ, ಶೂದ್ರರೇ ಮೊದಲಾದ ನಾನಾ ಜಾತಿಗಳಿವೆ. ಇವನ್ನು ಪ್ರತ್ಯಕ್ಷ ಆಗಮ ಅನುಮಾನ

ಮೊದಲಾದ ಪ್ರಮಾಣಗಳು ಭೇದವುಳ್ಳದ್ದೆಂದು ಬೋಧಿಸುವುವು. ಇವು ಭೇದವಿಲ್ಲದ್ದೆಂದು ಶಂಕರಾಚಾರ್ಯರ ದರ್ಶನವನ್ನು ತಿಳಿದ ಯಾವ ವಿದ್ವಾಂಸನೂ ಸಮರ್ಥಿಸಲಾರ."

"ಶಂಕರಾಚಾರ್ಯರು ವ್ಯಾವಹಾರಿಕ ಸ್ಥಿತಿ, ಪಾರಮಾರ್ಥಿಕ ಸ್ಥಿತಿ ಪ್ರಾತಿಭಾಸಿಕಸ್ಥಿತಿ ಎಂದು ಮೂರು ಅಂತಸ್ತುಗಳನ್ನು ಕಲ್ಪಿಸಿದ್ದಾರೆ. ನಮಗೆ ಪ್ರತ್ಯಕ್ಷ ಮತ್ತು ಪ್ರಮಾಣಗಳಿಂದ ಈ ಪ್ರಪಂಚವು ವ್ಯಾವಹಾರಿಕ ವಿಷಯದಲ್ಲಿ ಸತ್ಯವಾಗಿ ತೋರುವುದು. ಹೀಗೆ ತೋರುವುದಕ್ಕೆ ನಮಗೆ ಸರಿಯಾದ ತಿಳುವಳಿಕೆ ಇಲ್ಲದಿರುವುದೇ ಕಾರಣ.

" ಪರೋಕ್ಷಜ್ಞಾನವುಂಟಾಗಲು ಜಗತ್ತು, ಸುಟ್ಟ ಬಟ್ಟೆಯಂತೆ ಕಾಣುತ್ತದೆ. ಅರ್ಥಕ್ರಿಯಾಕಾರಿಯಲ್ಲ. ಎಂದರೆ ಸುಟ್ಟ ಬಟ್ಟೆಯನ್ನು ನೋಡಿದವನಿಗೆ ಇದು ಬೂದಿ, ವಸ್ತ್ರವಲ್ಲವೆಂಬ ದೃಢ ಜ್ಞಾನವಿದ್ದರೂ ಅದು ಪುಡಿಯಾಗುವ ವರೆಗೆ, ಅದರ ಹಾಸುಹೊಕ್ಕುಗಳು ಹೇಗೆ ಬಟ್ಟೆಯೇ ಎಂದು ತಿಳಿಸುವುದೊ ಹಾಗೆಯೇ ಜಗತ್ತು ಸಾಮಾನ್ಯವಾಗಿ ಸತ್ಯವೆಂದೇ ತೋರುವುದು. ಪ್ರಪಂಚವು ಸುಳ್ಳು, ಜೀವಬ್ರಹ್ಮರಿಗೆ ಭೇದವಿಲ್ಲವೆಂಬ ಅಪರೋಕ್ಷ ಜ್ಞಾನವುಂಟಾಗಲು ಕಾದ ಕಬ್ಬಿಣದ ಮೇಲೆ ಬಿದ್ದ ನೀರು ಇಂಗಿ ಕಬ್ಬಿಣದಿಂದ ಬೇರೆಯಾಗಿ ತೋರದಿರುವಂತೆ ಎಲ್ಲವೂ ಬ್ರಹ್ಮವೇ ಎಂದು ತೋರಿ ಭೇದಜ್ಞಾನವು ಪೂರ್ತಿಯಾಗಿ ಮಾಯವಾಗುವುದು"

"ಇಂಥ ಜ್ಞಾನ, ಒಂದು ಮಾಯಾ ಮುಸುಕಿನ ಮರೆ ಮಾಡಿದೆ. ಇದೊಂದು ದುರ್ಗಮವಾದ ಕೋಟೆ. ಈ ಅದ್ವೈತ ಶಾಸ್ತ್ರವನ್ನು ಖಂಡಿಸಲು ಪ್ರಯತ್ನಿಸಿದ ಮೀಮಾಂಸಕನಾದ, ಕುಮಾರಿಲಭಟ್ಟನೂ ಈ ದುರ್ಗಮ ಕಾಡಿನಲ್ಲಿ ದಾರಿತಪ್ಪಿದ್ದಾನೆ; ಪ್ರಭಾಕರನ ಸಾಮರ್ಥ್ಯವೂ ಈ ಕಾಡಿನಲ್ಲಿ ಕುಗ್ಗಿ ಹೋಗಿದೆ. ಬೌದ್ಧ ಮಹಾರಥಿಕರೂ ಈ ಕಾಡಿನಲ್ಲಿ ಕುಸಿದು ಬಿದ್ದಿದ್ದಾರೆ.

" ಇಂಥ ಜ್ಞಾನ ಹೊಂದಿದವರು ನಿರ್ಗುಣಸ್ವರೂಪವಾದ ಮೋಕ್ಷವನ್ನು ಹೊಂದಿದ್ದಾರೆ."

ತರಕ್ಷುವಿನಂತಿರುವ ಅದ್ವೈತ ದರ್ಶನದ ಮುಂದೆ ಹರಿಣಶಾಬದಂತಿರುವ ಈ ಪ್ರಪಂಚವನ್ನು ಸತ್ಯವೆಂದು ಹೇಳುವ,. ದ್ವೈತ ಸಿದ್ಧಾಂತದ ಪಾಡೇನು ?" ಎಂದು ತನ್ನ ವಾದವನ್ನು ಪದ್ಮತೀರ್ಥನು ಯುಕ್ತಿಯುಕ್ತವಾಗಿ ಮಂಡಿಸಿದನು.

ಅದನ್ನು ಕೇಳಿ ಶ್ರೀಮದಾಚಾರ್ಯರು "ಇಂಥ ಅದ್ವೈತಸಿದ್ಧಾಂತ ಎಂಬ ಕುಮತಾರಣ್ಯವನ್ನು ದ್ವೈತಸಿದ್ಧಾಂತವೆಂಬ ಕಾಡ್ಕಿಚ್ಚುಸುಟ್ಟು ಬೂದಿಮಾಡಲು ಬಂದಿದೆ! ಮಾಯಾವಾದಿಗಳೇ ಎಚ್ಚರಿಕೆ !"

—ಎಂದು ಮೇಘಗಂಭೀರಧ್ವನಿಯಿಂದ ಗುಡುಗಿದರು.

ಅನಂತರ ಅವರು ಈ ಜಗತ್ತು ಸತ್ಯವೆಂದು, ಹೇಳಿ ಬ್ರಹ್ಮವೂ ಸತ್ಯವೆಂಬುದನ್ನು ಶ್ರುತಿ ಸ್ಮೃತಿ ಸಮ್ಮತವೆಂದು ತೋರಿಸಲು ನೂರಾರು ಶಾಸ್ತ್ರಪ್ರಮಾಣ ವಾಕ್ಯಗಳನ್ನು ಲೀಲಾಜಾಲವಾಗಿ ಉದಾಹರಿಸಿದರು.

ಶಂಕರಾಚಾರ್ಯರು ರಚಿಸಿದ್ದ ಒಂದೂಕಾಲು ಲಕ್ಷ ಅದ್ವೈತಶಾಸ್ತ್ರಗಳನ್ನು ಶ್ರೀಮದಾಚಾರ್ಯರು ಒಂದೇ ವಾಕ್ಯದಿಂದ ಖಂಡಿಸಿದರು.1

---

1) ಸಂಭೂಯಾಮೀ ಚೋಲಜದ್ವೇಷಿಪುರ್ಯೋಃ
ಪಾರ್ಶ್ವೇ ಪಾಪಾ ಮಂತ್ರಯಾಮಾಸುರುಗ್ರಾಃ ।
ಸಾಸೂಯಾಭೂ ಭೂಷಣೇ ವಾಯುದೇವೇ
ಮೂಢಾ ಯದ್ವದ್ಧಾರ್ತರಾಷ್ಟ್ರಾಂತಿಕೇ ಪ್ರಾಕ್ ॥
ಏಕಂ ತತ್ತ್ವಂ ವಷ್ಟಿ ಮಾಯಾಮಯೀಯಂ
ವಾಕ್ಯೈಃ ಪ್ರಾಚ್ಯೈರಪ್ಯವಾಚ್ಯ ವಿಧತ್ತೇ ।
ಪೂರ್ವಾಪೂರ್ವಾ ಹಂತ ದೌರ್ಘಟ್ಯಭೂಷಾ
ಚಿತ್ರಂ ಚಿತ್ರಂ ದರ್ಶನಾಚಾರ್ಯನೀತಿಃ ॥
ಪ್ರಾಚ್ಯಂ ಶಾಸ್ತ್ರಂ ಯತ್ಸಪಾದಂ ತು ಲಕ್ಷ
ವಾಕ್ಯೇನೈಕೇನಾಕ್ಷಿಪದ್ವರ್ತತೀರ್ಥಃ ।
ಇತ್ಥಂ ಪಾಂಥೈರ್ವರ್ಣಿತಂ ಶೃಣ್ವತಃ ಪ್ರಾ
ಗ್ಯ್ಯಪ್ಯಾನ್ ಪ್ರಾಪದ್ಭೂಯಮಾನಂ ಮನೋ ಮೇ ॥
ವೇದವ್ಯಾಸೋನ್ವೇಷ ವೇದೋ ನು ಮೂರ್ತೋ
ದಿವ್ಯಾ ಮೂರ್ತಿಯಸ್ಯ ಸಾ ಸುಸ್ಮಿತಸ್ಯ ।
ತದ್ದ್ರಷ್ಟೃಣಾಂ ಚೇತಿ ವಾಣೀ ಕೃಪಾಣೀ
ನೂನಂ ಮಾಯಾಪಕ್ಷ ಮೂಲಂ ಛನತ್ತಿ ॥

ಮಾ॥ವಿ॥ ಸರ್ಗ॥ 12—ಶ್ಲೋಕ 2, 4, 11, 12

ಅನಂತರ ಶ್ರೀಮದಾಚಾರ್ಯರು ಪದ್ಮತೀರ್ಥನ ಬೆನ್ನಿನ ಮೇಲೆ ಕಶಾವೇತ್ರ ಪ್ರಹಾರ ಮಾಡಿಸಿದರು; ಅವನು ಈ ಕಶಾವೇತ್ರಪ್ರಹಾರದಿಂದ ಅಯ್ಯೋ ಎಂದು ಚೀರಿದನು.

"ಈಗ ಹೇಳು ಈ ಜಗತ್ತು ಸತ್ಯವೋ ಮಿಥ್ಯವೋ" ಎಂದು ಆಚಾರ್ಯರು ಘರ್ಜಿಸಿದರು. ಉತ್ತರಿಸಲು ಅಶಕ್ತನಾಗಿ ನೋವಿನಿಂದ ನರಳುತ್ತಾ ಪದ್ಮತೀರ್ಥನು ತಲೆತಗ್ಗಿಸಿದನು. ಪುಂಡರೀಕಯತಿಯೂ ಸೋತನು.

ಈ ರೀತಿಯಲ್ಲಿ ಶ್ರೀಮದಾಚಾರ್ಯರು ಪದ್ಮತೀರ್ಥನೇ ಮೊದಲಾದ ಅದ್ವೈತಿಗಳನ್ನು ವಾದದಲ್ಲಿ ಸೋಲಿಸಿ ಅಪಮಾನದಿಂದ ಹಿಮ್ಮೆಟ್ಟಿಸಿದರು.

ಇದರಿಂದ ಕುಪಿತರಾದ ಪದ್ಮತೀರ್ಥನು ಮತ್ತು ಪುಂಡರೀಕನು ಆಚಾರ್ಯರ ಮೇಲೆ ಸೇಡುತೀರಿಸಿಕೊಳ್ಳಲು ಒಂದು ಅತ್ಯಂತ ಹೇಯ ಕಾರ್ಯಕ್ಕೆ ಇಳಿದರು.

ಶ್ರೀಮಧ್ವಾಚಾರ್ಯರು ಅಮೂಲ್ಯವಾದ ಶಾಸ್ತ್ರಗ್ರಂಥಗಳನ್ನು ಸಂಗ್ರಹಿಸಿದ್ದರು.

ಅವರು ಎಲ್ಲಿಗೆ ಹೋದರೂ ಒಂದು ಎತ್ತಿನ ಮೇಲೆ ಈ ಗ್ರಂಥ ಭಂಡಾರದಿಂದ ಕೆಲವುಗ್ರಂಥಗಳನ್ನು ಜೊತೆಯಲ್ಲಿಯೇ ಸಾಗಿಸಿಕೊಂಡುಹೋಗುತ್ತಿದ್ದರು. ಉಳಿದ ಗ್ರಂಥಗಳನ್ನು ಅನಂತಾಸನಸ್ವಾಮಿಯ ದೇಗುಲದಲ್ಲಿದ್ದ ತಮ್ಮ ಮಠದಲ್ಲಿ ಪೆಟ್ಟಿಗೆಗಳಲ್ಲಿ ರಕ್ಷಿಸಿದ್ದರು. ಈ ಗ್ರಂಥಗಳನ್ನು ಅವರು ಒಳ್ಳೆ ಬಿಲ್ಗಾರನು ತನ್ನ ಬಾಣಗಳನ್ನು ಹರಿತಗೊಳಿಸಿ, ಸೂಕ್ತ ಸಮಯದಲ್ಲಿ ಉಪಯೋಗಿಸಿಕೊಳ್ಳುವಂತೆ ವಾಕ್ಯಾರ್ಥಕಾಲದಲ್ಲಿ ಉಪಯೋಗಿಸಿಕೊಳ್ಳುತ್ತಿದ್ದರು.

ಇಂಥ ಅಮೂಲ್ಯವಾದ ಗ್ರಂಥರಾಶಿಯನ್ನು ಹೊರುತ್ತಿದ್ದ ಎತ್ತನ್ನು ಕೊಂದು ಗ್ರಂಥಗಳನ್ನು ಅಪಹರಿಸಿದರೆ ಹೇಗೆ? ಅಥವಾ ಗ್ರಂಥ ಭಂಡಾರದಿಂದ ಗ್ರಂಥಗಳನ್ನು ಕದ್ದರೆ ಹೇಗೆ? ಇದರಿಂದ ಆಚಾರ್ಯರ ಕೈಮುರಿದು ಮೂಲೆಯಲ್ಲಿ ಕೂಡುವುದಿಲ್ಲವೆ – ಹೀಗೆ ಆಲೋಚಿಸಿದ ಆ ಪದ್ಮತೀರ್ಥನೇ ಮೊದಲಾದ ಧೂರ್ತರು ಆಚಾರ್ಯರು ಆ ರಾತ್ರಿ ನಿದ್ರಿಸುತ್ತಿದ್ದಾಗ ಅವರ ಗ್ರಂಥ ಭಂಡಾರಕ್ಕೆ ನುಗ್ಗಿ, ಕೆಲವು ಅಮೂಲ್ಯ ಗ್ರಂಥಗಳನ್ನು ಅಪಹರಿಸಿದರು.

ಆ ರಾತ್ರಿಕಳೆದು ಬೆಳಗಾದನಂತರ ಆಚಾರ್ಯರು ತಮ್ಮ ಸ್ನಾನಾಹ್ನಿಕ ಪೂಜೆಗಳನ್ನು ಮುಗಿಸಿಕೊಂಡು ಎಂದಿನಂತೆ ಗ್ರಂಥಭಂಡಾರಕ್ಕೆ ಬಂದಾಗ, ಗ್ರಂಥಗಳನ್ನು ಇರಿಸಿದ್ದ ಪೆಟಾರಿಗಳ ಬಾಗಲುಗಳು ತೆರೆದಿದ್ದವು.

ಅವುಗಳಲ್ಲಿ ಇದ್ದ ಅನೇಕ ಅತ್ಯಂತ ಉಪಯುಕ್ತವಾದ ಗ್ರಂಥಗಳು ಕಣ್ಮರೆಯಾಗಿದ್ದವು.[1]

ಕ್ಷಣಕಾಲ ಶ್ರೀಮದಾಚಾರ್ಯರು ಮೌನವಾಗಿ ಕುಳಿತರು.

ಅನಂತರ ಸರ್ವಜ್ಞರಾದುದರಿಂದ ತಮ್ಮ ಗ್ರಂಥಗಳನ್ನು ಕದ್ದವರು ಯಾರೆಂದೂ ತಿಳಿದುಕೊಂಡರು.

ಅವುಗಳನ್ನು ಆ ನೀಚರು ಎಲ್ಲಿ ಅಡಗಿಸಿಟ್ಟಿದ್ದಾರೆ ಎಂಬುದೂ ತಿಳಿಯಿತು.

ಕೂಡಲೇ ಅವರು ಆ ಗ್ರಂಥ ಸಂಪತ್ತನ್ನು ಆ ಧೂರ್ತರಿಂದ ಮರಳಿ ಪಡೆಯಲು ಮಾಡಬೇಕಾದ ಕಾರ್ಯದಲ್ಲಿ ಪ್ರವೃತ್ತರಾದರು.

## ಶರಣಾಗತರಾದ ಕಳ್ಳರು

ಶ್ರೀಮದಾಚಾರ್ಯರು ತಮ್ಮ ಪುಸ್ತಕ ಭಂಡಾರವನ್ನು ನೋಡಿಕೊಳ್ಳಲು ಶಂಕರಪಂಡಿತರೆಂಬ ಒಬ್ಬ ಯೋಗ್ಯ ವಿದ್ವಾಂಸರನ್ನು ನಿಯಮಿಸಿದ್ದರು.

---

1) ಕೃಷ್ಣಾಭೀಷ್ಟಾ ಶಾಸ್ತ್ರವಿಸ್ಪಷ್ಟಸಂಜ್ಞಾ
ಯಾ ಸ್ವಾಯಾ ಶ್ರೀಃ ಸ್ವೀಪಾಲಿತಾ ಸದ್ದ್ವಿಜೇನ
ಪದ್ಮಾಖ್ಯಾ ಸತ್ಸ್ವಂಧವೇನಾಹೃತಾಂ ತಾಂ
ಸುಶ್ರಾವಾಗ್ರ್ಯಾನಂದತೀರ್ಥಾಖ್ಯಪಾರ್ಥಃ ॥
ತೂರ್ಣಂ ತೀರ್ಣಾದಭ್ರಮಾರ್ಗೋರ್ಥಸಾರ್ಯಃ
ಸಂಪ್ರಾಪ್ತೋಸೌ ಗೋಗಣೈರ್ಭೀಷಯಿತ್ವಾ ।
ಸಂಯಮ್ಯಾಂತರ್ಯಂತೃಕಾಮೇನ ಹಾಸ್ಯಂ
ಸಂಪ್ರಾಪ್ತಶ್ರೀರ್ನಿಜಿತಂ ತಂ ಜಹಾಸ ॥
ದುಷ್ಟಾತ್ಮಾಸೌ ಭದ್ರಮೇಕಾಕಿನಂ ಯಃ
ಕ್ಷೇಪ್ತುಂ ಹೇತುಃ ಸೌಖ್ಯದಾಖ್ಯಂ ಬಭೂವ ।
ಹರ್ಯಂಶೋಯಂ ತಂ ನ ಚಕ್ಷಾಮ ಭೂಯ
ಸ್ತೋಕೇ ಸನ್ನೇ ಸೂಕರಂ ಕೇಸರೀವ ॥
ಮ॥ ವಿ॥ ಸರ್ಗ 12—ಶ್ಲೋಕ 42, 43, 44

ಇವರು ಮಹಾಪಂಡಿತರಾಗಿದ್ದು ಲಿಕುಚ ವಂಶಕ್ಕೆ ಸೇರಿದ್ದರು. ಇವರು ಮೊದಲು ಅದ್ವೈತಿಗಳಾಗಿದ್ದು, ಶ್ರೀಮದಾಚಾರ್ಯರ ಪ್ರತಿಭೆಗೆ ಶರಣು ಬಂದು ದ್ವೈತ ಮತವನ್ನು ಸ್ವೀಕರಿಸಿ, ಆಚಾರ್ಯರ ಅತ್ಯಂತ ನಿಷ್ಠಾವಂತ ಶಿಷ್ಯರಲ್ಲಿ ಒಬ್ಬರಾಗಿದ್ದರು. ಇವರು ತ್ರಿವಿಕ್ರಮಪಂಡಿತಾಚಾರ್ಯರ ಬಂಧುಗಳು.

ಇವರನ್ನು ಆಚಾರ್ಯರು ತಮ್ಮ ಗ್ರಂಥಭಂಡಾರದ ಯಜಮಾನರನ್ನಾಗಿ ನಿಯಮಿಸಿ ಅವುಗಳ ರಕ್ಷಣೆಯ ಜವಾಬ್ದಾರಿಯನ್ನೂ ಅವರಿಗೆ ವಹಿಸಿದ್ದರು. ಗುರುಗಳು ವಹಿಸಿದ ಈ ಕಾರ್ಯವನ್ನು ಶಂಕರಪಂಡಿತರು ಬಹಳ ಶ್ರದ್ಧಾಭಕ್ತಿ ದಕ್ಷತೆಗಳಿಂದ ನಿರ್ವಹಿಸುತ್ತಿದ್ದರು. ಆಚಾರ್ಯರು ಬಯಸಿದಾಗ, ಆಗತ್ಯವಿದ್ದ ಗ್ರಂಥಗಳನ್ನು ಅವರಿಗೆ ಒದಗಿಸುತ್ತಿದ್ದರು.

ಅವರು ಆ ದಿನ ರಾತ್ರಿ ಮಲಗಲು ಮನೆಗೆ ಹೋಗಿದ್ದರು. ರಾತ್ರಿ ಕೆಟ್ಟ ಕನಸೊಂದನ್ನು ಕಂಡರು.

ಕನಸಿನಲ್ಲಿ ತಾವು ರಕ್ಷಿಸುತ್ತಿದ್ದ ಗ್ರಂಥಭಂಡಾರದ ಪತ್ರಗಳು ಬಿರುಗಾಳಿಗೆ ಸಿಕ್ಕಿ ಸಮುದ್ರಕ್ಕೆ ಎಸೆಯಲ್ಪಟ್ಟಂತೆ ಕಂಡರು.

ಇದರ ಸಂಕೇತವನ್ನು ತಿಳಿಯದೆ ಅವರು ಕಂಗಾಲಾಗಿ ಶ್ರೀಮದಾಚಾರ್ಯರಲ್ಲಿ ನಿವೇದಿಸಿಕೊಳ್ಳಲು ಅನಂತಾಸನ ಮಠಕ್ಕೆ ಬಂದರು. ಈ ಮೊದಲೇ ಅಲ್ಲಿಗೆ ಬಂದಿದ್ದ ಶ್ರೀಮದಾಚಾರ್ಯರಿಂದ ಕಳ್ಳರು ಪುಸ್ತಕ ಭಂಡಾರದ ಬೀಗ ಒಡೆದು ಗ್ರಂಥಗಳನ್ನು ಕದ್ದಿರುವ ಸಂಗತಿ ತಿಳಿಯಿತು. ಇದನ್ನು ಕೇಳಿ ಅವರಿಗೆ ಬಹಳ ಖೇದವಾಯಿತು. ದುಃಖ ಒತ್ತರಿಸಿಕೊಂಡು ಬಂದು ಗಳಗಳನೆ ಅತ್ತರು. ಅವರನ್ನು ಶ್ರೀಮದಾಚಾರ್ಯರೇ ಸಮಾಧಾನ ಪಡಿಸಿದರು.

" ಶಂಕರಪಂಡಿತರೇ, ಇದಕ್ಕಾಗಿ ನೀವು ಇಷ್ಟು ವ್ಯಥೆ ಪಡುವುದೆ ? ಈ ಗ್ರಂಥಗಳು ನಷ್ಟವಾದರೆ ಏನು ? ನಾವು ಇವನ್ನೆಲ್ಲಾ ಹೃದ್ಗತ ಮಾಡಿಕೊಂಡಿದ್ದೇವೆ. ಮನಸ್ಸು ಮಾಡಿದರೆ ಇವುಗಳನ್ನು ಮತ್ತೆ ಬರೆಸಬಲ್ಲೆವು. ಈ ಗ್ರಂಥಗಳು ಕಳೆದುಹೋದರೇನಂತೆ, ಇಂಥ ಸಹಸ್ರಾರು ಗ್ರಂಥಗಳನ್ನು ನಾವು ಸೃಷ್ಟಿಸಬಲ್ಲೆವು. ಪಂಚಾಂಗ ಹೋದರೆ ನಕ್ಷತ್ರಗಳು ಹೋಗುತ್ತವೆಯೋ ? ನೀವು ಏನೂ ಯೋಚಿಸಬೇಡಿ. ಇದನ್ನು ಕದ್ದವರು ಯಾರೇ ಆಗಿರಲಿ,

ಇನ್ನು ಕೆಲವು ದಿನಗಳೊಳಗೆ ಇವನ್ನು ಸುರಕ್ಷಿತವಾಗಿ ತಂದು ನಮಗೆ ಒಪ್ಪಿಸುತ್ತಾರೆ"

—ಎಂದು ಧೈರ್ಯ ಹೇಳಿ ಸಮಾಧಾನಪಡಿಸಿದರು.

"ಸ್ವಾಮಿ, ಈ ವಾರ್ತೆಯನ್ನು ಕುಂಬಳೆಯ ಅರಸರಾದ ಶ್ರೀಜಯಸಿಂಹ ದೊರೆಗಳಲ್ಲಿ ವಿಜ್ಞಾಪಿಸಿಕೊಂಡರೆ, ಗ್ರಂಥಗಳನ್ನು ಕದ್ದ ಕಳ್ಳರನ್ನು ಅವರು ಹುಡುಕಿಸಿ, ಶಿಕ್ಷಿಸಬಹುದು. ನಮ್ಮ ಗ್ರಂಥಗಳೂ ದೊರಕುತ್ತವೆ" ಎಂದು ಸಲಹೆ ಮಾಡಿದರು.

"ಇದಕ್ಕೆ ನಮ್ಮ ಆಕ್ಷೇಪವಿಲ್ಲ. ಆದರೆ ನಾವು ಶ್ರೀಅನಂತಾಸನಸ್ವಾಮಿಯೊಬ್ಬನನ್ನು ಮಾತ್ರ ಒಡೆಯನೆಂದು ತಿಳಿದಿರುವವರು. ನೀವು ಬೇಕಿದ್ದರೆ ಜಯಸಿಂಹ ದೊರೆಗಳನ್ನು ಕಂಡುಬನ್ನಿ,

"ನನಗೆ ಇದೆಲ್ಲವೂ ಆ ಪದ್ಮತೀರ್ಥನ ಕುಕಾರ್ಯ ಎಂದು ಅನಿಸುತ್ತಿದೆ. ಅವನು ಕಾವು ಮಠದಲ್ಲಿ ಅಡಗಿದ್ದಾನೆ. ಬಹುಶಃ ತಮ್ಮ ಗ್ರಂಥಗಳೆಲ್ಲವೂ ಅಲ್ಲಿಯೇ ಇರಬೇಕು. ನಾವು ಕೂಡಲೇ ಕಾರ್ಯ ಪ್ರವರ್ತರಾಗಬೇಕು. ಇಲ್ಲದಿದ್ದರೆ ಆ ಧೂರ್ತರು ಗ್ರಂಥಗಳನ್ನು ನಾಶಪಡಿಸಬಹುದು. ಇಲ್ಲವೇ ದೂರದ ಊರಿಗೆ ಒಯ್ದು ನಮ್ಮ ಕೈಗೆ ಸಿಕ್ಕದಂತೆ ಮಾಡಬಹುದು ಆದುದರಿಂದ ನಾನು ಈಗಲೇ ಕುಂಬಳೆಗೆ ಹೋಗಿ ನನ್ನ ಜ್ಞಾತಿ ಸಹೋದರ ತ್ರಿವಿಕ್ರಮಪಂಡಿತಾಚಾರ್ಯನೊಡನೆ ಪ್ರಭುಗಳನ್ನು ಕಂಡು ನಮಗೆ ಕಳ್ಳರಿಂದ ಆಗಿರುವ ಅನ್ಯಾಯವನ್ನು ತಿಳಿಸಿ, ಅವರಿಂದ ಪರಿಹಾರ ಕಲ್ಪಿಸಿಕೊಂಡು ಬರುತ್ತೇನೆ"
—ಎಂದು ಹೇಳಿ ಶ್ರೀಮದಾಚಾರ್ಯರನ್ನು ನಮಸ್ಕರಿಸಿ ಶಂಕರಪಂಡಿತರು ಕುಂಬಳೆಗೆ ಹೊರಟುಹೋದರು.

ತುಳುನಾಡಿನ ಕುಂಬಳೆ ರಾಜ್ಯದಲ್ಲಿ ಲಿಕುಚವೆಂಬ ಕುಲದಲ್ಲಿ ಅಂಗೀರಸ ಗೋತ್ರದಲ್ಲಿ ಸುಬ್ರಹ್ಮಣ್ಯಪಂಡಿತರೆಂಬ ಶ್ರೋತ್ರಿಯರು ಇದ್ದರು. ಇವರಿಗೆ ಪರಮ ಸಾಧ್ವಿಯಾದ ಒಬ್ಬ ಹೆಂಡತಿ ಇದ್ದಳು. ಅವಳಲ್ಲಿ ಅನೇಕ ಮಕ್ಕಳು ಜನಿಸಿದ್ದರೂ ಅವರೆಲ್ಲರೂ ಬಾಲ್ಯದಲ್ಲಿಯೇ ಗತಿಸಿದ್ದರು. ಆದುದರಿಂದ ಈ ದಂಪತಿಗಳು ದೀರ್ಘ ಆಯುಸ್ಸು ಉಳ್ಳ ಸಂತಾನಕ್ಕಾಗಿ ಶಂಕರನಾರಾಯಣ

ದೇವರನ್ನು ಅನನ್ಯ ಭಕ್ತಿಯಿಂದ ಬಹುಕಾಲ ಸೇವಿಸಿದರು. ಅವನ ಅನುಗ್ರಹದಿಂದ ಆಕೆಯ ಉದರದಲ್ಲಿ ಒಂದು ಪುತ್ರರತ್ನವು ಜನಿಸಿತು.

ಸುಬ್ರಹ್ಮಣ್ಯ ಪಂಡಿತರು ಈ ಮಗುವಿನ ತೇಜಸ್ಸನ್ನು ನೋಡಿ, ತನ್ನ ವಿದ್ಯೆಯಿಂದ ಮೂರು ಲೋಕಗಳನ್ನೂ ಜಯಿಸುತ್ತಾನೆ ಎಂಬುದನ್ನು ಭವಿಷ್ಯ ಹೇಳುವಂತೆ ಅವನಿಗೆ ತ್ರಿವಿಕ್ರಮಪಂಡಿತನೆಂದು ಹೆಸರು ಇಟ್ಟರು.[1]

---

1) ತ್ರಿವಿಕ್ರಮಪಂಡಿತಚಾರ್ಯರ ವಿಷಯದಲ್ಲಿ ಒಂದು ಕಥೆ ಪ್ರಚಾರಿತವಾಗಿದೆ. ಒಂದು ದಿನ ಈ ಬಾಲಕನು ಸಮಾನವಯಸ್ಕರೊಡಗೂಡಿ ಊರಿನ ಹೊರಗೆ ಆಟವಾಡುತ್ತಿದ್ದನು ದಾರಿಹೋಕನೊಬ್ಬನು ಇವನನ್ನು ಪ್ರಶ್ನೆ ಮಾಡಿದನು. ಮಗು, ಊರು ಇನ್ನು ಎಷ್ಟು ದೂರವಿದೆ ? ಆ ಹುಡುಗನು ಉತ್ತರಿಸಿದನು. ಈ ಮುಳುಗುತ್ತಿರುವ ಸೂರ್ಯನನ್ನು ನೋಡು, ದನ ಕಾಯುವವರು ಅವರ ದನಗಳನ್ನು ಮನೆ ಕಡೆ ಹೊಡೆದುಕೊಂಡು ಹೋಗುತ್ತಿರುವುದನ್ನು ನೋಡು ನನ್ನನ್ನು ನೋಡು – ಊರು ಸಮಿಪದಲ್ಲಿಯೇ ಇರುವುದನ್ನು ಸೂಚಿಸುತ್ತದೆ. ಇದರಿಂದಲೇ ಇವರ ಬಾಲ್ಯದಿಂದಲೂ ಪ್ರತಿಭೆಯು ಎದ್ದು ಕಾಣುತ್ತಿದೆ. ತ್ರಿವಿಕ್ರಮ ಎಂಬ ಪದದ ಅರ್ಥವನ್ನು ಹೀಗೆ ವರ್ಣಿಸಬಹುದು.

1) ಮಧ್ವವಿಜಯ ವ್ಯಾಖ್ಯಾನಕಾರರಾದ ವಿಶ್ವಪತಿತೀರ್ಥರು "ತ್ರಿಷು, ವೇದೇ ಕವಿತಾಯಾಂ ವೇದಾಂಗೇ ಚೇತಿ" ಎಂದಿದ್ದಾರೆ.

2) "ಪದವಾಕ್ಯಪ್ರಮಾಣೇಷು ತ್ರಿಷು ವಿಕ್ರಮೋ ಸ್ಫೂರ್ತಿವಾ" (ಪದಂ–ವ್ಯಾಕರಣಂ. ವಾಕ್ಯಂ–ಮಿಮಾಂಸಾ, ಪ್ರಮಾಣಂ–ವೇದಾಂತಃ)

3) ವೇದಾಂಗತಯಾ ಸಾಂಗೋವೇದಃ ಮೀಮಾಂಸಾ ನ್ಯಾಯಶಾಸ್ತ್ರಂ ಇತಿ ತ್ರಿಷು ಪಾಂಡಿತ್ಯಂ ಯಸ್ಯ ಸಃ

4) ಸಾಂಗೋವೇದಃ, ಸಾಲಂಕಾರಂ ಸಕಲಾನೀತರಶಾಸ್ತ್ರಾಣಿ ಚೇತಿ ತ್ರಿಷು ವಿಕ್ರಮೋ ಯಸ್ಯ ಸಃ,

5) ಇಲ್ಲಿ ವಿಕ್ರಮ ಶಬ್ದದಿಂದ ಈ ಶಾಸ್ತ್ರಗಳಲ್ಲಿ ಅವರಿಗೆ ಪ್ರವೇಶ ಮಾತ್ರವಲ್ಲ – ಆದರೆ ವಿಕ್ರಮ ಅಂದರೆ ಇತರರನ್ನು ವಾದದಲ್ಲಿ ಪರಾಭವವುಂಟು ಮಾಡುವ ಶಕ್ತಿಯುಳ್ಳವರು ಎಂದು ಅರ್ಥ.

ಮುಂದಿನ ಪುಟಕ್ಕೆ

ಆ ಮಗು ಹುಟ್ಟಿದ ಮೇಲೆ ಅವರ ಜ್ಞಾತಿ ಸಹೋದರನಿಗೂ ಗಂಡು ಮಗು ಹುಟ್ಟಿತು. ಅದಕ್ಕೆ ಶಂಕರಪಂಡಿತನೆಂಬ ಹೆಸರನ್ನು ಇಟ್ಟರು.

ಈ ಇಬ್ಬರು ಮಕ್ಕಳೂ ಚಂದ್ರನಂತೆ ದಿನದಿನಕ್ಕೂ ಬೆಳೆದರು. ತ್ರಿವಿಕ್ರಮ ಪಂಡಿತನಿಗೆ ತಂದೆಯೇ ಗುರುವಾಗಿ ನಿಂತು ಶಾಸ್ತ್ರಗಳನ್ನು ಕಲಿಸಿದನು ; ಅಭಿವೃದ್ಧಿ ಹೊಂದಿ ಸಾಹಿತ್ಯಶಾಸ್ತ್ರದಲ್ಲಿ ಪಾರಂಗತನನ್ನಾಗಿ ಮಾಡಿದನು.

ತನ್ನ ಹದಿನೈದನೆಯ ವಯಸ್ಸಿನಲ್ಲೇ ತ್ರಿವಿಕ್ರಮ ಪಂಡಿತರು ಉಷಾಹರಣ ವೆಂಬ ಸುಂದರ ಕಾವ್ಯವನ್ನು ಪ್ರೌಢಶೈಲಿಯಲ್ಲಿ ರಚಿಸಿ, ರಸಿಕ ವೃಂದಕ್ಕೆ ಅರ್ಪಿಸಿದರು. ಇದಕ್ಕೆ ಶ್ರೀಸುಧೀಂದ್ರತೀರ್ಥರ ವ್ಯಾಖ್ಯಾನವಿದೆ.

ಅನಂತರ ವಂಶಪಾರಂಪರ್ಯವಾಗಿ ಬಂದ ಶ್ರೌತ ಕರ್ಮವನ್ನು ಚೆನ್ನಾಗಿ ಕಲಿತರು. ಅಲ್ಲದೆ ಅದ್ವೈತ ಶಾಸ್ತ್ರವನ್ನು ಚೆನ್ನಾಗಿ ಓದಿ, ಅದರಲ್ಲಿಯೂ ನಿಪುಣರಾದರು. ಅವರು ಭಾರತದೇಶದಲ್ಲಿ ಪ್ರಚುರವಿದ್ದ ಎಲ್ಲ ವೈದಿಕ-ಅವೈದಿಕ ಮತಗಳನ್ನೂ, ವಾದಗಳನ್ನೂ. ಷಡ್ದರ್ಶನಗಳನ್ನೂ, ಚೆನ್ನಾಗಿ ಅಭ್ಯಾಸ ಮಾಡಿ, ಅದ್ವೈತ ಮತದ ಶ್ರೇಷ್ಠತೆಯನ್ನು ಸಮರ್ಥವಾಗಿ ಮಂಡಿಸಬಲ್ಲವರಾಗಿದ್ದರು.

---

ಶ್ರೀಮಧ್ವವಿಜಯ—13ನೇ ಸರ್ಗ.

1) "ಕವಿರಾಖ್ಯಾದುಚಿತಾಂ ತ್ರಿವಿಕ್ರಮಾಖ್ಯಾಂ" ಶ್ಲೋಕ 46.

2) "ಅಪಿ ಭಾನುಪುರಃಸ್ಸರಾಃ ಸಮಸ್ತಾಃ ಪ್ರಯಯುಃ ಕೀಟಮಣಿ ಪ್ರಭಾತ್ವಮಾಶು" ಶ್ಲೋಕ 50.

3) " ಅತಿ ದಕ್ಷಮತಿಂ ಸಪಾದಲಕ್ಷೇ ಸಮಯೇ ಮಾಯಿಜನಸ್ಯ ಯುಕ್ತಿ ಶೂರಮ್ " ಶ್ಲೋಕ 51.

ಲೋಕದಲ್ಲಿ ಪ್ರಾಯಃ ಕಾವ್ಯಾಲಂಕಾರಶಾಸ್ತ್ರಗಳನ್ನು ತಿಳಿದ ರಸಿಕರು ವೇದಾಂತ ಶಾಸ್ತ್ರದಲ್ಲಿ ಪಂಡಿತರಾಗಿರುವುದಿಲ್ಲ—ಹಾಗೆಯೇ ಯಾರು ವೇದಾಂತ ಶಾಸ್ತ್ರದಲ್ಲಿ ಪರಿಣತರೋ ಅವರು ಕಾವ್ಯರಸಿಕರಾಗಿರುವುದಿಲ್ಲ. ಆದರೆ ತ್ರಿವಿಕ್ರಮ ಪಂಡಿತಾಚಾರ್ಯರಲ್ಲಿ ಲೋಕದಲ್ಲಿ ಪರಸ್ಪರ ವಿರೋಧವಾದ ಕಾವ್ಯರಸಿಕತ್ವವೂ ಮತ್ತು ವೇದಾಂತ ಜ್ಞಾನವೂ ಇತ್ತು. ಹೀಗಿರುವುದು ಬಹು ಅಪರೂಪ.

(ಇದು ಉಡುಪಿಯಲ್ಲಿ ಮುದ್ರಿತವಾಗಿರುವ "ತತ್ತ್ವಪ್ರದೀಪ" ದ ಉಪೋದ್ಘಾತದಿಂದ ಉದ್ಧೃತವಾದುದು)

ಇದರಂತೆಯೇ ಅವರ ಸಹೋದರನ ಮಗ ಶಂಕರಪಂಡಿತರೂ ಸಾಹಿತ್ಯದ ಒಲವನ್ನು ಬೆಳೆಸಿಕೊಂಡು ಭಾಗವತ ಧರ್ಮದಲ್ಲಿ ಆಸಕ್ತಿ ತಳೆದಿದ್ದರು. ತಾರುಣ್ಯದಲ್ಲೇ ತಂದೆಯ ಸಲಹೆಯಂತೆ ಆತ್ಮೋದ್ಧಾರ ಮಾಡುವ ಗುರುಗಳನ್ನು ಹುಡುಕಿಕೊಂಡು ಉಡುಪಿ ಕ್ಷೇತ್ರಕ್ಕೆ ಹೋಗಿ ಶ್ರೀಮದಾಚಾರ್ಯರ ಪ್ರಭಾವಕ್ಕೆ ಮಣಿದು ಅವರ ನೆಚ್ಚಿನ ಶಿಷ್ಯರಾಗಿದ್ದರು

ಶ್ರೀಮದಾಚಾರ್ಯರು ಶಂಕರಪಂಡಿತರ ಸಾಹಿತ್ಯ ಪ್ರೇಮವನ್ನೂ, ಕಾರ್ಯದಕ್ಷತೆಯನ್ನೂ ಪರೀಕ್ಷಿಸಿ ಸಂತೋಷಪಟ್ಟರು. ಅವರನ್ನು ತಮ್ಮ ಗ್ರಂಥ ಭಂಡಾರದ ಮೇಲ್ವಿಚಾರಣೆಗೆ ನಿಯಮಿಸಿದ್ದರು,

ತ್ರಿವಿಕ್ರಮಪಂಡಿತರಾದರೋ ಶಂಕರಪಂಡಿತರಂತೆ ಭಾವುಕ ಜೀವಿಗಳಲ್ಲ, ಅವರದು ನಿಶ್ಚಿತವಾದ ಪಾಂಡಿತ್ಯ, ನಿಷ್ಠುರ ಶಾಸ್ತ್ರಗಳನ್ನು ಓದಿದ್ದರು.

ಈಗ ಶಂಕರಪಂಡಿತರು, ಜಯಸಿಂಹರಾಜನ ಸಹಾಯದಿಂದ ಶ್ರೀಮದಾಚಾರ್ಯರ ಕಳುವಾಗಿದ್ದ ಗ್ರಂಥಭಂಡಾರವನ್ನು ದ್ರೋಹಿ ಪದ್ಮತೀರ್ಥನ ಕಡೆಯವರಿಂದ ಮತ್ತೆ ಪಡೆಯಲು ಸಂಕಲ್ಪಿಸಿ, ಕುಂಬಳೆಗೆ ಬಂದಿದ್ದರು.

ಅಷ್ಟರಲ್ಲಿ ತ್ರಿವಿಕ್ರಮಪಂಡಿತಾಚಾರ್ಯರಿಗೆ ಗೂಢಚಾರರಿಂದ ಅನಂತಾಸನ ಮಠದಲ್ಲಿದ್ದ ಶ್ರೀಮದಾಚಾರ್ಯರ ಶ್ರೇಷ್ಠ ಗ್ರಂಥಗಳನ್ನು ಯಾರೋ ಕಳ್ಳರು ಕದ್ದಿರುವರೆಂಬ ವಾರ್ತೆ ಬಂದಿತ್ತು. ಇದನ್ನು ಸಹಜವಾಗಿ ಜಯಸಿಂಹರಾಜನ ಕಿವಿಗೂ ಹಾಕಿದ್ದರು.

ಈಗ ಉಡುಪಿಯಿಂದ ಬಂದ ಜ್ಞಾತಿ ಸಹೋದರನಿಂದ ಎಲ್ಲ ವಿವರಗಳನ್ನು ತಿಳಿದು ತುಂಬಾ ವಿಷಾದಪಟ್ಟರು.

"ನೀನು ಯೋಚಿಸಬೇಡ. ಆ ಗ್ರಂಥಗಳನ್ನು ಆ ದ್ರೋಹಿಗಳು ಎಲ್ಲೇ ಇಟ್ಟರಲಿ, ಶೋಧಿಸಿ ತರಿಸಿಕೊಡುತ್ತೇವೆ"—ಎಂದು ಪುಸ್ತಕ ಪಕ್ಷಪಾತಿಯಾದ ತ್ರಿವಿಕ್ರಮಪಂಡಿತರು ತಮ್ಮನಿಗೆ ಆಶ್ವಾಸನವಿತ್ತರು.

ಅನಂತರ ಗೂಢಚಾರರನ್ನು ನಿಯಮಿಸಿ ಈ ಬಗ್ಗೆ ಶೋಧಿಸಿದರು. ಪದ್ಮತೀರ್ಥನ ಪಡೆಯವರು ಶ್ರೀಮದಾಚಾರ್ಯರ ಗ್ರಂಥಗಳನ್ನು ಮುಟ್ಟಲು ಹೆದರಿ, ಅವುಗಳನ್ನು ಗಂಟುಕಟ್ಟಿ ಕಾವು ಮಠದಲ್ಲಿ ಅಡಗಿಸಿಟ್ಟಿದ್ದರು.

ಈ ಸಂಗತಿಯನ್ನು ತಿಳಿಯುತ್ತಲೇ ತ್ರಿವಿಕ್ರಮಪಂಡಿತರು ಅಲ್ಲಿಗೆ ತೆರಳಿ, ಎಲ್ಲ ಗ್ರಂಥಗಳನ್ನೂ ಸಕಾಲದಲ್ಲಿ ರಕ್ಷಿಸಿ ಸ್ವಾಧೀನಕ್ಕೆ ತೆಗೆದುಕೊಂಡರು.

ಅನಂತರ ಜಯಸಿಂಹ ದೊರೆಗೆ ಈ ಎಲ್ಲ ಸಂಗತಿಯನ್ನು ತಿಳಿಸಿ ಶ್ರೀಮದಾಚಾರ್ಯರನ್ನು ಶ್ರೀಮದನೇಶ್ವರ ದೇವರ ದರ್ಶನಕ್ಕೆ ಕರೆಸಿಕೊಂಡು ಈಗ್ರಂಥಭಂಡಾರವನ್ನು ಅವರಿಗೆ ಹಿಂದಿರುಗಿಸಲು ಸಂಕಲ್ಪಿಸಿ ಈ ಬಗ್ಗೆ ವ್ಯವಸ್ಥೆ ಮಾಡಿದರು.[1]

ಈ ಸುದ್ದಿಯು ಶಂಕರ ಪಂಡಿತರ ಮೂಲಕ ಕೋಡಿಪಾಡಿ ದೇವಾಲಯದಲ್ಲಿ ಚಾತುರ್ಮಾಸ್ಯ ಕಳೆಯುತ್ತಿದ್ದ ಶ್ರೀಮದಾಚಾರ್ಯರಿಗೆ ತಿಳಿಯಿತು. ಅದರೊಂದಿಗೆ ಕುಂಬಳೆ ಜಯಸಿಂಹದೊರೆಗಳ ಆಹ್ವಾನ ಪತ್ರವೂ ತಲುಪಿತು.

ಅಪ್ರಾರ್ಥಿತವಾಗಿ ಒದಗಿದ ಜಯಸಿಂಹ - ದೊರೆಯ ಪ್ರೀತಿಯ ಆಮಂತ್ರಣ, ಮತ್ತು ತಮ್ಮ ಗ್ರಂಥಭಂಡಾರ ಸುರಕ್ಷಿತವಾಗಿರುವ ಸುದ್ದಿ, ಶ್ರೀಮದನೇಶ್ವರ ಸ್ವಾಮಿಯ ದರ್ಶನಭಾಗ್ಯ — ಈ ಮೂರು ಸಂತಸದ ಸುದ್ದಿ ಕೇಳಿ ಶ್ರೀಮದಾಚಾರ್ಯರು ಉಲ್ಲಾಸಗೊಂಡರು.

ಅವರು ಜಯಸಿಂಹದೊರೆಯ ಪ್ರಾರ್ಥನೆಯಂತೆ ಚಾತುರ್ಮಾಸ್ಯಾನಂತರ ಅವನನ್ನು ನೋಡಲು ಮದನಪುರಕ್ಕೆ ಹೊರಟರು.

---

ಮದನೇಶ್ವರವಲ್ಲಭಪ್ರದೇಶೇ
ಪ್ರಭುಮಾಯಾಂತಮಧಾಭ್ಯಪದ್ಯತ ದ್ರಾಕ್ ।
ಜಯಸಿಂಹ ಇಮಂ ನೃಸಿಂಹವರ್ಯಃ
ಶುಭಧೀಃ ಸ್ತಂಭವಿಶಿಷ್ಟಸಿಂಹನಾಮಾ ॥
ಅವತೀರ್ಯ ಪುರೈವ ವಾಹನಾತ್ಸ್ವಾ-
ದಪಿ ಮಾರ್ಗಾದಪಸಾರ್ಯ ಸೈನಿಕಾನ್ ಸಃ ।
ಸಹಕೈಶ್ಚನ ಭೂಸುರೈರವಾಪ್ತಸ್ತ್ರಿ
ಜಗತ್ಪೂಜ್ಯಪದಾಂತಿಕೇ ನನಾಮ ॥

ಮ ॥ ವಿ ॥ ಸರ್ಗ 13–ಶ್ಲೋಕ 21–22

ಪುಂಡರೀಕಪುರಿ ಹಾಗೂ ಪದ್ಮತೀರ್ಥನ ಪ್ರಚೋದನೆಯಂತೆ ಅವರ ಶಿಷ್ಯರು ಈ ಹೇಯ ಕಾರ್ಯವನ್ನು ಮಾಡಿದ್ದಾರೆ ಎಂದು ಆಚಾರ್ಯರಿಗೆ ತಿಳಿದೇ ಇತ್ತು.

ಆಚಾರ್ಯರು ಗ್ರಂಥಭಂಡಾರ ತಮ್ಮದಾಯಿತೆಂಬ ಹಿಗ್ಗಿನಲ್ಲಿ ಆ ದ್ರೋಹಿಗಳ ಅಪರಾಧವನ್ನು ಕ್ಷಮಿಸಿದರು. ಅವರ ಅಕೃತ್ಯವೇ-ಸಾರಸ್ವತ ದ್ರೋಹವೇ, ಅವರನ್ನು ಶಿಕ್ಷಿಸುವುದೆಂದು ತಾವು ಕ್ಷಮಿಸಿದರು.

ಆಚಾರ್ಯರ ನುಡಿ ಸುಳ್ಳಾಗಲಿಲ್ಲ. ಮುಂದೆ ಅವರಿಬ್ಬರೂ ಕಳ್ಳರ ಕೈಗೆ ಸಿಕ್ಕಿ ತಮ್ಮ ಸರ್ವಸ್ವವನ್ನೂ ಕಳೆದುಕೊಂಡರು. ಈ ವ್ಯಥೆಯಿಂದ ಅವರು ಹುಚ್ಚರಂತೆ ದೇಶ ದೇಶ ತಿರುಗಬೇಕಾಯಿತು.

ಶ್ರೀಮದಾಚಾರ್ಯರು ಕಾವು ಮಠಕ್ಕೆ ಬಂದು ಅಲ್ಲಿ ಪುಸ್ತಕಗಳೊಡನೆ ತಮಗಾಗಿ ಕಾದಿದ್ದ ಶಂಕರಪಂಡಿತರನ್ನು ನೋಡಿ ಸಂತೋಷಗೊಂಡರು.

ಅನಂತರ ಪುಸ್ತಕಗಳನ್ನು, ದೊರೆ ಜಯಸಿಂಹರಾಜನ ಸಮ್ಮುಖದಲ್ಲಿ ಪಡೆಯಲು ಆಶಿಸಿ, ಅವುಗಳನ್ನು ಅಲ್ಲೇ ಸುರಕ್ಷಿತವಾಗಿ ಇರಿಸಿದರು. ಶ್ರೀಮದನೇಶ್ವರ ದೇವಾಲಯಕ್ಕೆ ಹೋಗಿ ತಮಗಾಗಿ ಕಾದಿದ್ದ ಜಯಸಿಂಹ ದೊರೆಯ ಸಂದರ್ಶಿಸಿ, ಅವನನ್ನು ಆಶೀರ್ವದಿಸಿದರು.

ಅನಂತರ ಮದನೇಶ್ವರ ಸ್ವಾಮಿಯನ್ನು ಆರಾಧಿಸಿ, ಕುಂಬಳೆ ನಾಡಿನ ರಾಜಧಾನಿ ಮಾದೂರಿನಲ್ಲಿ ಕೆಲವುಕಾಲ ತಂಗಿ, ಜಯಸಿಂಹನರಾಜನ್ನು ಬೀಳ್ಕೊಂಡು ಕೂಡಲು ಗ್ರಾಮಕ್ಕೆ ತೆರಳಿದರು.

## ಅಪೂರ್ವ ಸಮಾಗಮ

ಕುಂಬಳೆ ಸೀಮೆಯ ಕೂಡಲು ಗ್ರಾಮದ ಸಜ್ಜನರ ಕೋರಿಕೆಯಂತೆ ಶ್ರೀಮದಾಚಾರ್ಯರು ಕೆಲವುಕಾಲ ಆ ಗ್ರಾಮದ ದೇವಾಲಯದಲ್ಲಿ ತಂಗಿ ಅವರಿಗೆ ಶ್ರೀಮದ್ಭಾಗವತವನ್ನು ಪ್ರವಚನ ಮಾಡಲು ಒಪ್ಪಿದ್ದರು.

ಅವರ ಪ್ರಿಯ ಶಿಷ್ಯರಾದ ಹೃಷೀಕೇಶತೀರ್ಥರು ತಮ್ಮ ಇಂಪಾದ ಕಂಠದಿಂದ ಭಾಗವತದ ಶ್ಲೋಕಗಳನ್ನು ವಾಚಿಸುತ್ತಿದ್ದರು. ಅದನ್ನು ಇಮ್ಮ

ಗಂಭೀರವಾದ ಅಸ್ಖಲಿತ ವಾಣಿಯಲ್ಲಿ ಶ್ರೀಮದಾಚಾರ್ಯರು ಆಸ್ತಿಕ ಜನತೆಗೆ ವಿವರಿಸುತ್ತಿದ್ದರು.

ಆ ದಿನ ದೇವಾಲಯದ ಪ್ರಾಂಗಣಕ್ಕೆ ಪ್ರವಚನಕ್ಕೆ ಹೊರಟಾಗ ಊರಿನ ಜನರು ಶ್ರೀಮದಾಚಾರ್ಯರ ಭವ್ಯವಾದ ವ್ಯಕ್ತಿತ್ವದಿಂದ ಮಾರು ಹೋಗಿದ್ದರು.

ಈ ಹಿಂದೆ ಶ್ರೀಮದನೇಶ್ವರ ದೇವಾಲಯದಲ್ಲಿ ಅವರನ್ನು ಸಂದರ್ಶಿಸಿದ್ದ ತ್ರಿವಿಕ್ರಮಪಂಡಿತರ ಮನಸ್ಸಿನಮೇಲೆ ಆಚಾರ್ಯರ ರೂಪವು ಅಚ್ಚೊತ್ತಿತ್ತು.

ಶ್ರೀಮದಾಚಾರ್ಯರಿಗೆ1 ಈಗ ಸುಮಾರು ಅರವತ್ತು ವರ್ಷವಯಸ್ಸಾಗಿತ್ತು. ಅವರು ಗೋಪಿಚಂದನದ ದ್ವಾದಶನಾಮಗಳಿಂದ ಅಲಂಕರಿಸಲ್ಪಟ್ಟಿದ್ದರು. ಶಂಖ ಚಕ್ರಾಂಕಿತ ಮುದ್ರೆಗಳನ್ನು ಧರಿಸಿದ್ದರು. ಅಲ್ಲದೆ ಶ್ರೀಹರಿಗೆ ಸಮರ್ಪಿಸಿದ್ದ ತುಲಸಿಕಾಷ್ಠದ ಮಣಿಸರವನ್ನು ಹಾಕಿಕೊಂಡಿದ್ದರು. ಅವರು ಒಂದು ಕಾವಿ ವಸ್ತ್ರವನ್ನು ಉಟ್ಟು, ಒಂದು ಕಾವಿ ವಸ್ತ್ರವನ್ನು ಹೊದ್ದಿದ್ದರು. ಅವರ ಜರಿಯ ಅಂಚು ಅವರ ಶಿರೋಭಾಗವನ್ನು ಸ್ವರ್ಣ ರೇಖೆಯಂತೆ ಅಲಂಕರಿಸಿತ್ತು.

ಶ್ರೀಮದಾಚಾರ್ಯರು ತಾವು ಹೋದೆಡೆಯಲ್ಲೆಲ್ಲಾ ತಮ್ಮ ದೇವರ ಪೆಟ್ಟಿಗೆಯನ್ನು ಶಿಷ್ಯರ ತಲೆಯ ಮೇಲೆ ಹೊರಿಸಿ ತೆಗೆಸಿಕೊಂಡು ಹೋಗುತ್ತಿದ್ದರು, ಅವರು ತಮ್ಮ ಆರಾಧ್ಯ ದೈವವನ್ನು ಚಣಕಾಲ ಬಿಟ್ಟು ಇರುತ್ತಿರಲಿಲ್ಲ.

---

1) ಅಯಮಪ್ರತಿವಾರಣಪ್ರಯಾಣೇ
ಪರಮಾನಂದಸುತೀರ್ಥಸೂರಿರಾಜಃ ।
ವಿಬಭಾವಿತಿಮೇಲಮಚ್ಛರೂಪಃ
ಸುರಸಿಂಧೋರಿವ ಸಂತತಪ್ರವಾಹಃ ॥
ಪುರತೋ ವಿಶ್ರುತಾಃ ಸಮಾಧಿಶುದ್ಧ್ಯೈ
ಯುತಯಸ್ತತ್ರ ಪಟೀಕಷಾಯಮೋಷಾಃ ॥

ಮುಂದಿನ ಪುಟಕ್ಕೆ

ಒಬ್ಬ ಸಂನ್ಯಾಸಿ ಶಿಷ್ಯನು ಶ್ವಾಸವನ್ನು ನಿದಾನವಾಗಿಬಿಡುತ್ತಾ, ಮಾತನ್ನು ಗಟ್ಟಿಯಾಗಿ ಆಡದೆ, ಶುಭ್ರವಾದ ಕೈಗಳಿಂದ ಶ್ರೀಮದಾಚಾರ್ಯರ ಕೃಷ್ಣಾಜಿನವನ್ನು, ದೇವರ ಪೆಟ್ಟಿಗೆಯನ್ನು ಹೊತ್ತು ಒಯ್ಯುತ್ತಿದ್ದನು. ಈ ಪೆಟ್ಟಿಗೆಯಲ್ಲಿ ಅವರು ಪೂಜಿಸುವ ಶಾಲಗ್ರಾಮಗಳು ಇದ್ದವು. ಪೆಟ್ಟಿಗೆಯನ್ನು ಸೆಣಬಿನ ದಾರದಿಂದ ಕಟ್ಟಿದ್ದರು.

ಕೆಲವು ತರುಣ ಶಿಷ್ಯರು ಆಚಾರ್ಯರ ಉಪಕರಣ ಮುಂತಾದ ವಸ್ತುಗಳನ್ನು ಹೊತ್ತಿದ್ದರು.

ದೂರದಿಂದಲೇ ಶ್ರೀಮದನೇಶ್ವರದೇವಾಲಯದ ಮಂಜುಳವಾದ ಘಂಟಾರವ ಕೇಳಿಸುತ್ತಿತ್ತು; ಅಲ್ಲಿ ಜನ ಜಂಗುಳಿ ಆಚಾರ್ಯರ ಆಗಮನವನ್ನು ನಿರೀಕ್ಷಿಸುತ್ತಾ ಕುಳಿತಿತ್ತು.

ಆಚಾರ್ಯರು ನಡೆದುಬರುತ್ತಿದ್ದಾಗ ಶಿಷ್ಯರು ಅವರ ತಲೆಯ ಮೇಲೆ ಉತ್ತಮವಾದ ಛತ್ರಿಯನ್ನು ಹಿಡಿದಿದ್ದರು. ಅದು ಅವರ ತೇಜಸ್ವಿಯಾದ ಮುಖಕ್ಕೆ ಪ್ರಭಾವಳಿಯಂತೆ ಶೋಭಿಸುತ್ತಿತ್ತು. ಶ್ರೀಮದಾಚಾರ್ಯ

---

ಸಹಸೋದಹರನ್ ಸ್ವಯೋಗ್ಯಮುದ್ರಾ—
ಯುತದಂಡಾಧಿಕಧಾರಣೋದ್ಯಮೇನ ॥
ಅವಧಾರ್ಯ ವಿಶೇಷಕಾರಿಶಂಖಂ
ಪ್ರಕಟಾಂಕಾನ್ ಸುಧಿಯಾ ಗತಾರ್ದ್ರಭಾವಾನ್ ।
ಲಸಿತಾ ತುಲಸೀಸ್ರಗಸ್ಯ ಕಂಠೇ
ಹರಿನಿರ್ಮಾಲ್ಯತಯೋಚಿತಾ ನ್ಯಧಾಯಿ ॥
ಪರಿವಾರಜನಾ ನ ಮಾರ್ಗದುಃಖಂ
ಪ್ರಯಯುಃ ಪೂರುಷರತ್ನಮೀಕ್ಷಮಾಣಾಃ ।
ಇತಿ ನಾದ್ಭುತಮಸ್ಯ ಹಿ ಪ್ರಯಾಂತಿ
ಸ್ಮೃತಿಮಾತ್ರಾದ್ಧ್ವನೋ ಭವಾಪವರ್ಗಂ ॥

ಮ ॥ ವಿ ॥ ಸರ್ಗ 13—ಶ್ಲೋಕ, 8, 11, 12, 20

ರನ್ನು ಊರಿನ ಗೃಹಸ್ಥರೂ ಸಾಧು ಸಂನ್ಯಾಸಿಗಳೂ, ಬ್ರಹ್ಮಚಾರಿಗಳೂ, ಬ್ರಾಹ್ಮಣೋತ್ತಮರೂ ಹಿಂಬಾಲಿಸಿದ್ದರು.

ಕೆಲವರು ಶ್ರೀಹರಿಸ್ತೋತ್ರ ಮಾಡುತ್ತಾ ಬರುತ್ತಿದ್ದರು. ತುಲಸಿ ಮಣಿ, ಕಮಲ ಮಣಿಹಾರ ಧರಿಸಿ, ಕುಣಿಯುತ್ತಾ ಸ್ವಾಗತಿಸುತ್ತಿದ್ದರು.

ಸಾಧಾರವಾಗಿ ಆಚಾರ್ಯರದು ವೇಗದ ನಡಿಗೆ. ಈಗ ಅವರು ಮಂದಗತಿಯಿಂದ ನಡೆಯುತ್ತಿದ್ದರು. ಅದು ತರುಣಸಿಂಹದ ನಡಿಗೆಯಂತೆ ಗಂಭೀರವಾಗಿತ್ತು. ತಮ್ಮ ಅತಿ ಕೆಂಪಾದ ಪಾದಗಳಿಂದ ಭೂಮಿಯನ್ನು ಪರಿಶುದ್ಧಗೊಳಿಸುತ್ತಿರುವಂತೆ ತೋರುತ್ತಿತ್ತು.

ಅವರ ಪಾದದ ತುದಿಯು ಆಮೆಯದ್ದಂತಿದ್ದವು. ಉಗುರುಗಳು ಪದ್ಮರಾಗಮಣಿಗಳಂತೆ ಹೊಳೆಯುತ್ತಿದ್ದವು. ಕಾಲಿನ ಗಂಟುಗಳು ಗುಂಡಾ ಗಿದ್ದವು. ಅವರ ತೊಡೆಗಳು ಆನೆಯ ಸೊಂಡಿಲಿನಂತಿದ್ದವು.

ಅವರದು ಸುಂದರವಾದ ನಿತಂಬ. ಅವರ ತೆಳು ದೇಹಕ್ಕೆ ಹೊಟ್ಟೆಯು ಪ್ರಧಾನವಾಗಿ ಕಾಣಿಸುತ್ತಿದ್ದರೂ ಮೂರು ಲೋಕಗಳನ್ನೂ ಉದರದಲ್ಲಿ ಹೊತ್ತ ಶ್ರೀಹರಿಯ ಉದರದಂತೆ ಕಾಣುತ್ತಿತ್ತು.

ಶ್ರೀಮಧ್ವಾಚಾರ್ಯರು ನಯವಾದ ಉಣ್ಣೆಯ ಶಾಲನ್ನು ಧರಿಸಿ ನಡೆದಿದ್ದರು. ಆದರ ಒಳಗಿಂದ ಅವರ ಉನ್ನತವಾದ ವಕ್ಷಸ್ಥಳ ಎದ್ದು ಕಾಣುತಿತ್ತು. ಹೆಗಲು ಉಬ್ಬಿತ್ತು. ತೋಳುಗಳು ಗುಂಡಗೂ, ಉದ್ದವೂ, ಮನೋಹರವೂ ಆಗಿದ್ದವು. ಅವರ ಕೆಂಪಾದ ಅಂಗೈಯಲ್ಲಿ ಧ್ವಜ, ಚಕ್ರ ಮೊದಲಾದ ಚಿಹ್ನೆಗಳಿದ್ದವು.

ಅವರು ಮಾತನಾಡುವಾಗ ಶುಭ್ರವಾದ ಹಲ್ಲುಗಳು ಮಲ್ಲಿಗೆ ಮೊಗ್ಗಿ ನಂತೆ ಕಾಂತಿಯುಕ್ತವಾಗಿ ಕಾಣುತ್ತಿದ್ದವು. ಕೆಂಪಾದ ತುಟಿಗಳೂ, ತಾವರೆ ಹೂವಿನಂತಿದ್ದ ಕಣ್ಣುಗಳೂ ಕಾಂತಿಯಿಂದ ಕೂಡಿದ್ದವು. ಅವರ ಕಿವಿಗಳಲ್ಲಿ ತುಳಸಿ ಮಂಜರಿಗಳು ಶೋಭಿಸುತ್ತಿದ್ದವು. ಅವರ ಕಪ್ಪಾದ ಹುಬ್ಬುಗಳು ಲೋಕದ ಸೃಷ್ಟಿ ಸ್ಥಿತಿ ಲಯಕಾರ್ಯಗಳಿಗೆ ಸಮರ್ಥವಾಗಿದ್ದಂತೆ ಕಾಣುತ್ತಿದ್ದವು.

ಇಂಥ ರಾಜಗಂಭೀರ ನಡಿಗೆಯಿಂದ ಭಕ್ತಿ ಜ್ಞಾನ ವೈರಾಗ್ಯಗಳೇ ಮೂರ್ತಿ ಮಂತಾಗಿ ನಡೆದು ಬರುವಂತೆ ನಡೆದು ಬರುತ್ತಿದ್ದ ಶ್ರೀಮದಾಚಾರ್ಯರನ್ನು ಜಯಸಿಂಹರಾಜನೂ ಊರಿನ ಪ್ರಮುಖರೂ ತ್ರಿವಿಕ್ರಮಪಂಡಿತಾಚಾರ್ಯರೂ ಗೌರವದಿಂದ ಸ್ವಾಗತಿಸಿ, - ಶ್ರೀಮದನೇಶ್ವರ ದೇವಾಲಯದಲ್ಲಿ ಉಪನ್ಯಾಸ ವೇದಿಕೆಗೆ ಕರೆದುಕೊಂಡು ಹೋಗಿ ಉಚಿತ ಆಸನದಲ್ಲಿ ಕೂಡಿಸಿದ್ದರು,1

ಇವೆಲ್ಲ ಚಿತ್ರ ಕೂಡಲುಮಾತದಲ್ಲಿ ಶ್ರೀಮದಾಚಾರ್ಯರನ್ನು ಮತ್ತೆ ಕಂಡಿದ್ದ ತ್ರಿವಿಕ್ರಮಪಂಡಿತಾಚಾರ್ಯರಿಗೆ ಪುನಃ ಮನಃಪಟಲದಲ್ಲಿ ಮೂಡಿತ್ತು.

ಹೃಷೀಕೇಶತೀರ್ಥರಿಂದ ಶ್ರೀಮದ್ಭಾಗವತ ಪಠಣಕ್ಕೆ ಆರಂಭವಾಯಿತು.

ಆಚಾರ್ಯರು ತಮ್ಮ ಸೌಮ್ಯವಾದ ಇಂಪಾದ ಕಂಠದಿಂದ ಈ ಶ್ಲೋಕಗಳನ್ನು ವ್ಯಾಖ್ಯಾನ ಮಾಡತೊಡಗಿದರು.2

---

1) ತಂ ವಿಷ್ಣುಮಂಗಲಗತಂ ಬಹುಲಪ್ರಬೋಧಂ
ಪ್ರಾಪ್ಯಾಭ್ಯವಂದತ ತದಾಯುಗವಿಕ್ರಮಾರ್ಯಃ ।
ಆನನಂದ ಸ ಚತುರಾನನಹಾಸಲಕ್ಷ್ಮ್ಯಾ
ತತ್ತ್ವಂ ಪ್ರವೇತ್ತುಮಮರೇಂದ್ರ ಇವಾಬ್ಜಯೋನಿಂ ॥

ಮ ॥ ವಿ ॥ ಸರ್ಗ 13–ಶ್ಲೋಕ 69

2) ಅಶನೈಃ ಶನಕೈರಿವಾವ್ರಜಂತಂ
ಯುವಸಿಂಹಪ್ರವರಪ್ರಗಲ್ಭಯಾನಮ್ ।
ಅತಿಪಾಟಲಪಾದಪಲ್ಲವಭ್ಯಾ
ಮವನಿಂ ಪಾವನತಾಮಲಂ ನಯಂತಂ ॥
ನಖನಿರ್ಜಿತಪದ್ಮರಾಗರಾಗಂ
ವರಕೂರ್ಮಪ್ರಪದಂ ನಿಗೂಢಗುಲ್ಫಮ್ ।
ಸುರವರ್ಯಕರಾಗ್ರಸೇವ್ಯಜಂಘಂ
ದ್ವಿರದೋದಾರಕರೋಪಮೋರುಯುಗ್ಮಂ ॥
ಅತಿಸುಂದರಮಂದಹಾಸರಾಜ–
ನ್ನವಕುಂದಾಭರದಂ ಶುಭಾರುಣೋಷ್ಠಮ್ ।

ಮುಂದಿನ ಪುಟಕ್ಕೆ

ಈ ಸಭೆಯಲ್ಲಿ ಅನೇಕ ಪಂಡಿತರೂ, ಸಕಲಶಾಸ್ತ್ರಗಳನ್ನೂ ಬಲ್ಲ ಶಾಸ್ತ್ರಕೋವಿದರೂ ಸೇರಿದ್ದರು. ಶ್ರೀಮದಾಚಾರ್ಯರ ನಾಲಿಗೆಯ ಮೇಲೆ ಸರಸ್ವತಿಯು ಕುಣಿಯುತ್ತಿದ್ದಳು. ಅವರ ವಾಣಿಯನ್ನು ಆಲಿಸಿದ ಶ್ರೋತೃಗಳಿಗೆ ಮೋಕ್ಷ ಪ್ರಾಪ್ತವಾಗುತ್ತದೆಂಬ ನಂಬಿಕೆ ಇತ್ತು.

ಇಂಥ ಶ್ರೋತೃಗಳಲ್ಲಿ ಪ್ರಧಾನವಾಗಿ ಶ್ರೀಮದಾಚಾರ್ಯರ ಗಮನವನ್ನು ಸೆಳೆದಿದ್ದ ತ್ರಿವಿಕ್ರಮಪಂಡಿತಾಚಾರ್ಯರು ಅವರ ಎದುರಿನಲ್ಲೇ ಕುಳಿತು ಆಚಾರ್ಯರ ಬಾಯಿಂದ ಬರುತ್ತಿದ್ದ ವಾಗಮೃತಧಾರೆಯನ್ನು ಚಾತಕ ಪಕ್ಷಿಯು ಮಳೆಹನಿಗಳನ್ನು ಹೀರುತ್ತಿದ್ದಂತೆ ಹೀರುತ್ತಿದ್ದರು.

ತ್ರಿವಿಕ್ರಮಪಂಡಿತಾಚಾರ್ಯರು ಪ್ರಕಾಂಡ ಪಂಡಿತರೂ, ಭಗವದ್ಭಕ್ತರೂ ಸಜ್ಜನರೂ ಆಗಿದ್ದರು. ಅವರು ಲಿಕುಚ ವಂಶಕ್ಕೆ ಮಣಿದೀಪದಂತಿದ್ದರು. ಅವರಿಗೆ ಶ್ರೀಮದಾಚಾರ್ಯರನ್ನು ಕಂಡದ್ದು ತಮ್ಮ ಭಾಗ್ಯದ ನಿಧಿಯನ್ನು ಕಂಡಂತೆ ಆಗಿತ್ತು.

ಈ ಮಹಾಪುರುಷರಿಬ್ಬರ ಸಂಗಮವು ಗಂಗಾ ಸಮುದ್ರಗಳ ಸಂಗಮದಂತೆ ಮನೋಹರವಾಗಿತ್ತು.

ತ್ರಿವಿಕ್ರಮಪಂಡಿತಾಚಾರ್ಯರ ಜೀವನದಲ್ಲಿ ಇದೊಂದು ಮಹತ್ವದ ಸಂಗತಿಯಾಗಿತ್ತು.

ತಂದೆ ಸುಬ್ರಹ್ಮಣ್ಯ ಪಂಡಿತರು ತಮ್ಮ ಅಂತ್ಯ ಕಾಲದಲ್ಲಿ ಹೇಳಿದ್ದ ಮಾತು ಅವರ ಕಿವಿಯಲ್ಲಿ ಇನ್ನೂ ಮೊಳಗುತ್ತಿತ್ತು.

"ಮಗೂ, ಚೆನ್ನಾಗಿ ವಿಚಾರ ಮಾಡಿ ನಿಶ್ಚಯಿಸಿದ ನನ್ನ ಈ ಮಾತನ್ನು ಕೇಳು. ಕಲಿಯುಗದಲ್ಲಿ ಬ್ರಹ್ಮನನ್ನು ನಿರ್ಗುಣನೆಂದು ಉಪಾಸನೆ ಮಾಡಿದರೆ ಅಂತಹ ಜ್ಞಾನಾನಂದಾದಿ ಗುಣರಹಿತನಿಂದ ಮೋಕ್ಷ ಲಭಿಸುವುದೇ ಇಲ್ಲ ; ಸೌಖ್ಯ ಉಂಟಾಗುವುದೇ ಇಲ್ಲ. ಆದ್ದರಿಂದ ಗುಣವಿಶಿಷ್ಟನಾದ

---

ಕಮಲಾಯತಲೋಚನಾವಲೋಕೈ-
ರಪಿ ಲೋಕಾನ್ ಸಕಲಾನ್ ಪ್ರಹರ್ಷಯಂತಂ ||

ಮ || ವಿ || ಸರ್ಗ 13 ಶ್ಲೋಕ—28, 29, 34

ಮೋಕ್ಷದಾಯಕನಾದ ಅನಂತಕಲ್ಯಾಣಗುಣಗಳಿಂದ ಕೂಡಿದ ವಾಸುದೇವಸುತ ಶ್ರೀಕೃಷ್ಣನನ್ನು ತ್ರಿಕರಣ ಪೂರ್ವಕವಾಗಿ ಭಜಿಸು."

ಅವರು ತಂದೆಯಾಗಿ, ಗುರುವಾಗಿ ಹೀಗೆ ಹೇಳಿದ್ದರೂ ಅದ್ವೈತಿಗಳ ಒಡನಾಡಿಯಾಗಿ, ಅದ್ವೈತ ಗ್ರಂಥಗಳ ಆಳವಾದ ಅಧ್ಯಯನ ಮಾಡಿ ಒಂದು ನಿಶ್ಚಿತ ನಿಲುವನ್ನು ತಳೆದಿದ್ದ ತ್ರಿವಿಕ್ರಮಪಂಡಿತರಿಗೆ ತಂದೆಯ ಮಾತಿನಲ್ಲಿ ಇನ್ನೂ ನಂಬಿಕೆ ಹುಟ್ಟಿರಲಿಲ್ಲ.1

ನಿರ್ಗುಣೋಪಾಸನೆಯು ಮೋಕ್ಷ ಸಾಧಕವೋ, ಸಗುಣೋಪಾಸನೆಯು ಮೋಕ್ಷ ಸಾಧಕವೋ ಎಂಬ ವಿಷಯದಲ್ಲಿ ಇನ್ನೂ ಸಂಶಯ ಬಾಧಿಸುತ್ತಲೇ ಇತ್ತು.

ಅವರು ಈ ಬಗ್ಗೆ ಹೊಸ ದೃಷ್ಟಿಯಿಂದ ವೇದಾಂತಶಾಸ್ತ್ರವನ್ನು ಅಧ್ಯಯನ ಮಾಡಬೇಕೆಂದು ಯೋಚಿಸಿದ್ದರು.

ಅವರಿಗೆ ತಮ್ಮ ಅಧ್ಯಯನದಿಂದ ನಿರ್ಗುಣೋಪಾಸನೆಗೆ ಬ್ರಹ್ಮ ತತ್ತ್ವದ ವಿಷಯದಲ್ಲಿ ಸರ್ವಜ್ಞ ವೇದವ್ಯಾಸರು ರಚಿಸಿದ್ದ ಬ್ರಹ್ಮಸೂತ್ರಗಳು ಮುಖ್ಯ ಪ್ರಮಾಣವೆಂಬುದು ತಿಳಿದಿತ್ತು. ಇದಕ್ಕೆ ಭಾರತೀವಿಜಯ ಮುಂತಾದ ಇಪ್ಪತ್ತೊಂದು ಮಂದಿ ವಿದ್ವಾಂಸರು ವ್ಯಾಖ್ಯಾನ ಮಾಡಿದ್ದುದನ್ನು ಓದಿದ್ದರು. ಆದರೆ ಅವುಗಳಲ್ಲಿ ಒಂದಕ್ಕೊಂದು ಸಂಬಂಧವಿರಲಿಲ್ಲ. ಒಂದು ಭಾಷ್ಯದಲ್ಲಿ ಹೇಳಿದ್ದಂತೆ ಮತ್ತೊಂದು ಭಾಷ್ಯದಲ್ಲಿ ಹೇಳಿರಲಿಲ್ಲ.

---

1) ಅಥ ವೇದಪುರಾಣಭಾರತಾದಿ
ಸ್ವಯಮಾಲೋಚ್ಯ ಯಥಾವಬೋಧಮತ್ರ ।
ಗುಣವಂತಮುಪಾಸ್ಮಹೇ ಮುಕುಂದಂ
ಸ್ಮೃತಿಧರ್ಮಾನ್ ಭೃಶಮಾಚರಂತ ಏವ ॥
ಅವಧಾರ್ಯ ಯದೇತಿ ಕಾರ್ಯಮಾರ್ಯಃ
ಸವಿವೇಕಾದುಪಚಕ್ರಮೇ ವಿಧಾತುಂ ।
ಪರಿಪೂರ್ಣಮತೇರ್ಜಗತ್ಸು ಕೀರ್ತಿಂ
ಪರಿಪೂರ್ಣಾಮಶೃಣೋತ್ತದಾ ವಿಶುದ್ಧಾಂ ॥
ಮ ॥ ವಿ ॥ ಸರ್ಗ 10 ಶ್ಲೋಕ – 60–61

ಕೆಲವು ಪರಸ್ಪರ ವಿರುದ್ಧವಾಗಿದ್ದವು. ಇವನ್ನು ಪ್ರಮಾಣವಾಗಿ ಸ್ವೀಕರಿಸಲು ಅವರ ಮನಸ್ಸು ಒಪ್ಪಿರಲಿಲ್ಲ

ಪೂರ್ವಾಗ್ರಹವನ್ನು ಬಿಟ್ಟು ನಿರ್ಮತ್ಸರದಿಂದ ಚಿಂತಿಸಿದರೆ ವೇದ-ವ್ಯಾಸರ ಬ್ರಹ್ಮಸೂತ್ರಗಳಿಗೆ ಸಮಂಜಸವಾಗಿ ಅರ್ಥ ನೀಡುವವರು ಯಾರೂ ಇರಲಿಲ್ಲವೆಂದು ಅನಿಸಿತ್ತು. ಶಂಕರಾಚಾರ್ಯರ ಭಾಷ್ಯವು ಇದ್ದುದರಲ್ಲಿ ದೋಷದಿಂದ ದೂರವಿದ್ದಂತೆ ಅವರಿಗೆ ಅನಿಸುತ್ತಿತ್ತು.

ಇಂಥ ಶಂಕರಾಚಾರ್ಯರ ಭಾಷ್ಯವನ್ನು ಶ್ರೀಮಧ್ವಾಚಾರ್ಯರು ಖಂಡಿಸಿ, ಅದು ಅಸಮಂಜಸವೆಂದು ಪ್ರಮಾಣಪೂರ್ವಕವಾಗಿ ತೋರಿಸಿದ್ದರು. ಇದರಿಂದ ಮೊದಲೇ ಅದ್ವೈತದ ಬಗೆಗೆ ಸಂಶಯಗ್ರಸ್ಥರಾಗಿದ್ದ ತ್ರಿವಿಕ್ರಮ ಪಂಡಿತಾಚಾರ್ಯರಿಗೆ ನಿಂತ ನೆಲೆಯೇ ಕುಸಿದು ಬಿದ್ದಂತೆ ಆಗಿತ್ತು.

ಉಪನಿಷತ್ತುಗಳಲ್ಲಿ ಭಗವಂತನ ಉಪಾಸನಾಕ್ರಮವನ್ನು ಹೇಳಿದ್ದರೂ ಅಲ್ಪಮತಿಗಳಿಗೆ ಅದನ್ನು ತಿಳಿಯುವುದು ಕಷ್ಟವಾಗಿತ್ತು.

ಈ ಭಗವದುಪಾಸನೆಯನ್ನು ಬಿಟ್ಟು ಯಾರೂ ಮೋಕ್ಷ ಪಡೆಯಲಾರರು. ಆದ್ದರಿಂದ ಅಲ್ಪಬುದ್ಧಿಯ ಜನರು ಭಾರತ, ಪಂಚರಾತ್ರ, ಬ್ರಹ್ಮ ಸೂತ್ರವೇ ಮೊದಲಾದ ಶಾಸ್ತ್ರ, ಪುರಾಣಗಳನ್ನು ಆಧರಿಸಿ, ಉಪಾಸನೆಯನ್ನು ಮಾಡಬೇಕೆಂದು ತಿಳಿಸಿದ್ದರು.

ಆದರೆ ಭಗವಂತನು ಎಲ್ಲೆಡೆಯಲ್ಲೂ ವ್ಯಾಪಿಸಿರುವನೆಂದು ಬ್ರಹ್ಮ ಜ್ಞಾನಿಗಳು ಅರಿತಿರುತ್ತಾರೆ. ಅವನು ಸುಖ ಹಾಗೂ ನಿರ್ದೋಷ ಜ್ಞಾನ ಸ್ವರೂಪನು, ತನಗೆ ಸಮನೂ, ಅಧಿಕನೂ ಇಲ್ಲದವನು—ಎಂದು ಸರ್ವೋತ್ತಮತ್ವವನ್ನು ತಿಳಿಸಿ ಭಗವಂತನನ್ನು ಉಪಾಸಿಸಬೇಕೆಂದು ವೇದಾ ಗಮಗಳು ಹೇಳಿದ್ದವು.

ಆದುದರಿಂದ ಭಗವಂತನು ಮನುಷ್ಯರ ಹಾಗೆ ಜ್ಞಾನಾನಂದರೂಪ ವಾದ ಕೈಕಾಲು ಮೊದಲಾದ ಅವಯವಗಳನ್ನು ಉಳ್ಳವನೆಂದು ಹೇಳಿದರೆ ತಪ್ಪಾಗುತ್ತದೆ. ಶಾಂಕರಭಾಷ್ಯದಲ್ಲಿ ಹೇಳುವಂತೆ ಬ್ರಹ್ಮನ ತೇಜೋರೂಪವೂ ಸಿದ್ಧಿಸದೆ ಹೋಗುತ್ತದೆ.

ಈ ಬ್ರಹ್ಮನನ್ನು ತೇಜೋರೂಪನಲ್ಲವೆಂದು ಉಪಾಸನೆ ಮಾಡಿದವನು ತಮೋರೂಪವೇ ಆಗುತ್ತಾನೆ. ಇದರಿಂದ ಬ್ರಹ್ಮಜ್ಞಾನ ಸಿದ್ಧಿಸುವ ಬದಲು ನರಕಹೇತುವಾದ ಪಾಪ ಸಂಘಟಿಸುತ್ತದೆ. ಮತ್ತೂ ಭಗವಂತನಿಗೆ ಜ್ಞಾನಾನಂದಾತ್ಮಕತ್ವವು ಸಿದ್ಧಿಸದೆ ಹೋದೀತು. ಅಂಥ ಬ್ರಹ್ಮನನ್ನು ಉಪಾಸನೆ ಮಾಡಿದ ಭಕ್ತರಿಗೆ ತಮೋರೂಪದ ನರಕ ಸಿಕ್ಕೀತು.

ಆದುದರಿಂದ ಭಗವಂತನನ್ನು ಕುರಿತು ಮೋಕ್ಷಕ್ಕಾಗಿ ಮಾಡುವ ಉಪಾಸನಾಕ್ರಮವು ಯಾವುದು ? ದ್ವೈತವೇ ಅದ್ವೈತವೇ — ತ್ರಿವಿಕ್ರಮ ಪಂಡಿತಾಚಾರ್ಯರಿಗೆ ಜಿಜ್ಞಾಸೆಗೆ ಇಟ್ಟುಕೊಂಡಿತು.

ಆ ದಿನ ಶ್ರೀಮದಾಚಾರ್ಯರು ಭಾಗವತದಲ್ಲಿ ದೈತ್ಯಬಾಲಕ ಪ್ರಹ್ಲಾದನು ಶ್ರೀಮನ್ಮಹಾವಿಷ್ಣುವನ್ನು ಸ್ತೋತ್ರಮಾಡಿದ ಭಾಗವನ್ನು ಭಾವಪೂರ್ಣವಾಗಿ ವಿವರಿಸಿ, ಕೊನೆಗೆ ಹೇಳಿದರು–

"ಇಂಥ ಸತ್ವಗುಣಪರಿಪೂರ್ಣನಾದ ಶ್ರೀಮನ್ನಾರಾಯಣನನ್ನು ನಾವು ಸುಗುಣೋಪಾಸನೆಯಿಂದ ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವೇ ಹೊರತು ಮಾಯಾವಾದಿಗಳು ಅನುಸರಿಸಿದ ಮಾರ್ಗದಿಂದ ಸಾಧ್ಯವೇ ಇಲ್ಲ. ನಾವು ಶ್ರುತಿ ಸ್ಮೃತಿಗಳಲ್ಲೂ, ಆಗಮಗಳಲ್ಲೂ ಹೇಳಿರುವಂತೆ ನಮ್ಮ ನಮ್ಮ ವರ್ಣಾಶ್ರಮಧರ್ಮಗಳನ್ನು ಶ್ರದ್ಧಾ ಭಕ್ತಿಗಳಿಂದ ಆಚರಿಸುತ್ತಾ ಪುರುಷೋತ್ತಮನಾದ, ಶ್ರೀಹರಿಯನ್ನು ಗುಣಪೂರ್ಣನನ್ನಾಗಿ ಭಜಿಸೋಣ. ಇದರಿಂದ ಇಹದಲ್ಲಿ ಸುಖ, ಶಾಂತಿ, ಪರದಲ್ಲಿ ಮುಕ್ತಿ ದೊರಕುತ್ತದೆ."

ಈ ನಿರ್ಣೀತ ಸಮಾಪ್ತಿ ವಾಕ್ಯವನ್ನು ಕೇಳಿದ ಮೇಲೆ, ಶ್ರೀಮದಾಚಾರ್ಯರು ತಮ್ಮನ್ನೇ ಗಮನದಲ್ಲಿಟ್ಟುಕೊಂಡು ಈ ಮಾತನ್ನು ಹೇಳಿದಂತೆ ತ್ರಿವಿಕ್ರಮಪಂಡಿತಾಚಾರ್ಯರಿಗೆ ಭಾಸವಾಯಿತು.

ಅವರು ಆ ರಾತ್ರಿಯೆಲ್ಲ ನಿದ್ರೆಯಿಲ್ಲದೆ ಕಳೆದರು. ಮಾರನೆಯ ದಿನ ತಮ್ಮ ಜ್ಞಾತಿ ಸಹೋದರನಾದ ಶಂಕರಪಂಡಿತರಿಂದ ಶ್ರೀಮಧ್ವಾಚಾರ್ಯರು ರಚಿಸಿರುವ ಮುಖ್ಯ ಪ್ರಮೇಯ ಗ್ರಂಥಗಳನ್ನು — ಅದರಲ್ಲೂ ಬ್ರಹ್ಮಸೂತ್ರ ಭಾಷ್ಯ, ಮಾಯಾವಾದ ಖಂಡನಗಳನ್ನು — ತರಿಸಿಕೊಂಡು, ಹಗಲು ರಾತ್ರಿ

ಓದಿ, ವಿಷಯಗಳನ್ನು ಚೆನ್ನಾಗಿ ಮಥಿಸಿದರು.[1]

ಅವರಿಗೆ ಅದ್ವೈತಶಾಸ್ತ್ರದಲ್ಲಿ ಇದ್ದ ನಂಬಿಕೆ ಈಗ ಬಹುದೂರ ಹಾರಿ ಹೋಯಿತು: ಶ್ರೀಮದಾಚಾರ್ಯರ ವಾದದಲ್ಲಿ ಹುರುಳಿದೆ ಎಂದೂ ದೃಢ ವಾಯಿತು.

ಆದರೂ ತಾವು ಸೋಲನ್ನು ಒಪ್ಪದೆ, ತಮ್ಮ ಕೊನೆಯ ಶಾಸ್ತ್ರ ಹೋರಾಟವನ್ನು ನಡೆಸಿ ಶ್ರೀಮದಾಚಾರ್ಯರಿಗೆ ಶರಣು ಬರುವುದೆಂದು ನಿಶ್ಚಯಿಸಿದರು.

## ಎರಡು ದಿಗ್ಗಜಗಳ ಹೋರಾಟ

ತ್ರಿವಿಕ್ರಮಪಂಡಿತಾಚಾರ್ಯರು ಪಾಡಿಕೊಡಲು ಮಾರದ ಪಂಡಿತ ಸಭೆಯಲ್ಲಿ ಸಪ್ತಾಷ್ಟ ದಿನಗಳ ಕಾಲ ಶ್ರೀಮಧ್ವಾಚಾರ್ಯರೊಡನೆ ವೇದಾಂತ ತತ್ತ್ವಗಳ ಬಗೆಗೆ ವಿಮರ್ಶಾಪೂರ್ಣ ಚರ್ಚೆ, ವಾದವಿವಾದ ನಡೆಸಿದರು.[2]

---

1) ಕ್ಷಣದಾಸು ವಿಚಕ್ಷಣಃ ಸ ವೀಕ್ಷ್ಯ
ಪ್ರಚುರಪ್ರಜ್ಞಮನೋಜ್ಞಶಾಸ್ತ್ರಸಾರಂ ।
ಅಪರಾವಿದಿತಃ ಪ್ರಸಾದಗರ್ಭಂ
ವಿದಧೇ ವಿಸ್ಮಯಮಾಂತರಂ ಮಹಾಂತಂ ॥
ವಿದಿತವಾನ್ವ್ಯವಹೃತ್ಯ ಸುದರ್ಶನಂ
ಬಹುಲಬೋಧಮವೇಕ್ಷ್ಯ ಸ ನಿಶ್ಚಯಾತ್ ।
ಅಪಿ ನ ತಸ್ಯ ಮತಂ ಸಹಸಾದದೇ
ನನು ವಿಮೃಶ್ಯ ಕೃತೀ ಕುರುತೇಽಖಿಲಮ್ ॥

ಮ ॥ ವಿ ॥ ಸರ್ಗ 13–ಶ್ಲೋಕ 67–68

2) ಪರಪಕ್ಷರಥಾರೂಢಂ ಖರತರ್ಕಮಹಾಯುಧಮ್ ।
ತ್ರಿವಿಕ್ರಮಾರ್ಯಂ ಸೋಽಪಶ್ಯತ್ತ್ರಿವೀರಮಿವಾಗ್ರತಃ ॥
ತದಾ ತದಾನನಾಂಭೋಜಾದ್ವ್ಯತ್ಯೋಪನ್ಯಾಸಭಾರತೀ ।

ಮುಂದಿನ ಪುಟಕ್ಕೆ

ಅವರು ವೇದಾಂತ ಸಾಗರದಲ್ಲಿ ಮಿಂದ ದಿಗ್ಗಜದಂತೆ ಇದ್ದರು. ಅವರು ಆಗಿನ ಭಾರತದ ಅನ್ಯಪಕ್ಷ ದಾರ್ಶನಿಕಚಕ್ರವರ್ತಿಗಳಾಗಿದ್ದರು. ಅವರನ್ನು ಅನೇಕ ವಿದ್ವಾಂಸರು ತಮ್ಮ ಗುರುಗಳೆಂದು ಒಪ್ಪಿಕೊಂಡಿದ್ದರು. ದೇಶ ದೇಶಗಳಿಂದ ಅವರನ್ನು ಕಾಣಲು, ಅವರ ಅಮೃತ ವಾಣಿಯನ್ನು ಕೇಳಲು ವಿದ್ವಾಂಸರ ತಂಡಗಳೇ ಬರುತ್ತಿದ್ದವು. ಶಂಕರಾಚಾರ್ಯರ ಗುರುಪೀಠದ ಯತಿಗಳಿಗೆ ಅದ್ವೈತ ಮತದಲ್ಲಿ ಏನಾದರೂ ಸಂದೇಹ ಬಂದರೆ ಅವರು ಅದನ್ನು ಬಗೆಹರಿಸಿಕೊಳ್ಳಲು ತ್ರಿವಿಕ್ರಮಪಂಡಿತರ ಬಳಿಗೇ ಬರುತ್ತಿದ್ದರು.

ಇಂಥವರನ್ನು ಅದ್ವೈತವಾದಿಗಳು ತಮ್ಮ ಪಕ್ಷವನ್ನು ಉಳಿಸಿಕೊಳ್ಳಲು ಕಡೆಯ ಹೋರಾಟವಾಗಿ ಶ್ರೀಮನ್ಮಧ್ವಾಚಾರ್ಯರೊಡನೆ ವಾದಿಸಲು ಅವರನ್ನು ರಂಗಕ್ಕೆ ಬಿಟ್ಟಿದ್ದರು.

ತ್ರಿವಿಕ್ರಮಪಂಡಿತಾಚಾರ್ಯರು ಮೊದಲು ಅವೈದಿಕ ಶೂನ್ಯವಾದ ಕುರಿತು ಶ್ರೀಮದಾಚಾರ್ಯರೊಡನೆ ವಾದವನ್ನು ಆರಂಭಿಸಿದರು.

ಈ ಐತಿಹಾಸಿಕ ಘಟನೆಗೆ ಪಾಡಿಕೊಡಲು ಸಾಕ್ಷಿಯಾಗಿತ್ತು. ಅಲ್ಲಿನ ಮದನೇಶ್ವರ ದೇವಾಲಯದಲ್ಲಿ ಊರಿನ ಗಣ್ಯ ಜನರು ಸೇರಿದ್ದರು. ಬ್ರಹ್ಮ ಸೂತ್ರಭಾಷ್ಯವನ್ನು ಶ್ರೀಮದಾಚಾರ್ಯರು ವಿವರಿಸತೊಡಗಿದಾಗ ಸಭೆ ಮಂತ್ರ ಮುಗ್ಧವಾಯಿತು.

ಪೂರ್ಣಪ್ರಜ್ಞರ ಮಾತುಗಳು ಅತಿ ವೇಗವಾಗಿಯೂ ಸ್ಪಷ್ಟವಾಗಿ ಇದ್ದವು. ತುಂಬ ನಿಧಾನವಾಗಿದ್ದು ಬೇಸರ ತರುತ್ತಿರಲಿಲ್ಲ. ಶಬ್ದ ಅಥವಾ ಅರ್ಥದಲ್ಲೂ ತಡವರಿಕೆ ಇರಲಿಲ್ಲ. ಅವರ ಪ್ರವಚನದಲ್ಲಿ ಬ್ರಹ್ಮಸೂತ್ರದ ವಾಕ್ಯಗಳು ಪದೇ ಪದೇ ಕೇಳಿ ಬರುತ್ತಿದ್ದವು. ಅಪೌರುಷೇಯ ವೇದ

---

ಸೇನಾ ಸೇನಾಗ್ರಹಾ ದಿವ್ಯಾ ಶಿಬಿರಾದಿವ ನಿರ್ಯಯೌ ॥
ನಾತ್ಯತ್ವರಾ ನಾತಿರಯಾ ನ ಸ್ಖಲಂತೀ ನಿರಂತರಾ ।
ಅನಾನಾವಯವೇತ್ಯೇವ ದರ್ವೀಯೋಭಿಃ ಪ್ರತರ್ಕಿತಾ ॥

ಮ ॥ ವಿ ॥ ಸರ್ಗ 14 ಶ್ಲೋಕ 2-4

ವಾಕ್ಯಗಳು ಪ್ರಬಲತಮವಾದ ಪ್ರಮಾಣಗಳಾಗಿದ್ದವು. ಅಪ್ರತಿಮವಾದ ಅನೇಕ ಯುಕ್ತಿಗಳು ವಿರಾಜಮಾನವಾಗಿರುತ್ತಿದ್ದುವು. ಸ್ಮೃತಿ ವಾಕ್ಯಗಳು ವಿಷಯಕ್ಕೆ ಪುಷ್ಟಿ ಕೊಡುತ್ತಿದ್ದವು. ಆಚಾರ್ಯರ ವಾಣಿಯು ಗಂಗಾ ಪ್ರವಾಹದಂತೆ ನಿರರ್ಗಳವಾಗಿ ಶಕ್ತಿಯುತವಾಗಿ, ಶ್ರೋತೃಗಳನ್ನು ತನ್ನೊಡನೆ ಕರೆದೊಯ್ಯುತ್ತಾ ಹರಿಯುತಿತ್ತು.

ಶ್ರೀಮದಾಚಾರ್ಯರು ಪ ಮೇಯ ವಾಕ್ಯಗಳಾಗಿ, "ಶ್ರೀನಾರಾಯಣನು ಅನಂತ ಕಲ್ಯಾಣಗುಣಗಳಿಂದ ಪರಿಪೂರ್ಣನು, ಬ್ರಹ್ಮ ಶಬ್ದವಾಚ್ಯನು, ವೇದಗಳಿಂದ ಮಾತ್ರವೇ ತಿಳಿಯಲ್ಪಡತಕ್ಕವನು, ಎಲ್ಲ ಕರ್ಮಗಳನ್ನೂ ತಾವೇ ಪ್ರೇರಕನಾಗಿ ನಿಂತು ಮಾಡಿಸುವವನು"—ಎಂದು ಘೋಷಿಸಿ ಶ್ರುತಿ ವಾಕ್ಯಗಳಿಂದಲೂ, ನಿರ್ದುಷ್ಟ ಅನುಮಾನಗಳಿಂದಲೂ ಪ್ರಬಲವಾದ ಪ್ರತ್ಯಕ್ಷಸಿದ್ಧ ಉದಾಹರಣೆಗಳಿಂದಲೂ ತಮ್ಮ ಪಕ್ಷವನ್ನು ಸಭೆಯಲ್ಲಿ ಆನನುಕರಣೀಯ ರೀತಿಯಲ್ಲಿ ಮಂಡಿಸಿದರು. 1

ಇದನ್ನು ಕೇಳಿದ ತ್ರಿವಿಕ್ರಮಪಂಡಿತರು—

"ಸ್ವಾಮಿ, ನಾರಾಯಣನೇ ಸೃಷ್ಟ್ಯಾದಿ ಸಮಸ್ತ ಕಾರ್ಯಗಳಿಗೂ ಸ್ವತಂತ್ರ ಕಾರಣನೆಂದು ತಾವು ಹೇಳಿದಿರಿ. ಪ್ರಧಾನವೆನಿಸಿಕೊಂಡ ಮೂಲ ಪ್ರಕೃತಿಯೇ ಸ್ವತಂತ್ರ ಕಾರಣವೆಂದು ನಾವು ಹೇಳುತ್ತೇವೆ. ಹಾಲು ಪರಿಣಾಮಗೊಂಡು, ರೂಪಾಂತರ ಹೊಂದಿ ಬೇರೆಬೇರೆ ಗುಣಗಳನ್ನು ಪಡೆದು ಮೊಸರಾಗುವುದಿಲ್ಲವೆ ? ವಿಕಾರವನ್ನು ಉಂಟು ಮಾಡುವ ಪರಿಣಾಮದಿಂದ ಪ್ರಭಾವವು ನಾನಾ ಬಗೆಯ ವಸ್ತುಗಳಾಗುವುದಿಲ್ಲವೆ ?"

"ಹಾಗಲ್ಲ, ಪರಮಾತ್ಮನ ಮಹಿಮೆಯಿಂದಲೇ ಹಾಲು ಮೊಸರಾಗುವುದು. ಪದಾರ್ಥಗಳು, ಕರ್ಮ, ಕಾಲ, ಸ್ವಭಾವ, ಜೀವ ಎಲ್ಲವೂ ಆ ದೇವನ ಅನುಗ್ರಹದಿಂದಲೇ ನಿತ್ಯವಾಗಿರುವುವು. ಅವನ ಇಚ್ಛೆಯಂತೆ

---

1) ನಾರಾಯಣೋಽನಂತಗುಣೋ ಬ್ರಹ್ಮಾಖ್ಯೋ ವೇದವೇದಿತಃ ।
ವಿಶ್ವಕರ್ತೇತಿ ವಿಶ್ವಜ್ಞಃ ಶ್ರುತ್ಯಾ ಯುಕ್ತ್ಯಾಪ್ಯಸೀಷಧತ್ ॥
ಮ ॥ ವಿ ॥ ಸರ್ಗ 15–ಶ್ಲೋಕ 8

ನಾಶ ಹೊಂದುವುವು—ಈ ಮಾತಿಗೆ ಅನೇಕ ಶ್ರುತಿಗಳ ಆಧಾರವಿದೆ" ಎಂದು ಹೇಳಿ "ನ ಋತೇ ತ್ವತ್ಕ್ರಿಯತೇ ಕಿಂಚನಾ ರೇ" ಮೊದಲಾದ ಶ್ರುತಿ ವಾಕ್ಯಗಳನ್ನು ಉದಾಹರಿಸಿದರು.

"ಅಲ್ಲದೆ, "ಓಂ ರಚನಾನುಪಪತ್ತೇಶ್ಚ ನಾನುಮಾನಮ್ ಓಂ"— ಅಂದರೆ ಅಚೇತನ ಪದಾರ್ಥವು ಸ್ವತಃ ಕಾರ್ಯ ಸಾಧನೆ ಮಾಡುವ ಪ್ರವೃತ್ತಿಯನ್ನು ಹೊಂದಿರುವುದಿಲ್ಲ"—ಎಂದು ಘೋಷಿಸಿದರು.

ಬೃಹದಾರಣ್ಯಕೋಪನಿಷತ್ತಿನಲ್ಲಿ ನದಿಗಳು ಬೇರೆಬೇರೆ ದಿಕ್ಕುಗಳಿಗೆ ಹರಿಯುವುದು ಭಗವಂತನ ಮಹಿಮೆಯಿಂದಲೇ—ಎಂದು ಯಾಜ್ಞವಲ್ಕ್ಯರು ತಮ್ಮ ಪತ್ನಿ ಗಾರ್ಗಿಗೆ ಹೇಳಿದ ಉಪದೇಶವನ್ನು ಉದಾಹರಿಸಿದರು.

"ಪರಮಾತ್ಮನ ಸಾಮರ್ಥ್ಯದಿಂದಲೇ ಹಾಲು ಮೊಸರಾಗುವುದು" ಎಂದು ನಿರ್ಣಯ ಹೇಳಿದರು.

"ವಿಶ್ವದ ಸೃಷ್ಟಿಗೆ ಜಡವಸ್ತುವಿನ ಪರಿಣಾಮ ಕಾರಣವಾಗುವುದೇ ?"

"ಇಲ್ಲ, ವಿಶ್ವದ ಸೃಷ್ಟಿಗೆ ಜಡವಸ್ತುವಿನ ಸ್ವಯಂ ಪರಿಣಾಮವೇ ಕಾರಣವಲ್ಲ. ಸೃಷ್ಟಿಕರ್ತನಾದ ಸ್ವತಂತ್ರ ಚೇತನನ ಇಚ್ಛೆಯೇ ಇದಕ್ಕೆ ಕಾರಣ—ಎಂದು ಹೇಳಿ "ಜಡವಾದ ಹತ್ತಿಯಿಂದ ಬಟ್ಟೆಯು ಹೇಗೆ ನಿರ್ಮಿತವಾಗದೆ ನೇಯ್ಗೆಯವನ ಮೂಲಕ ನಿರ್ಮಿತವಾಗುವುದೋ ಅಂತೆಯೇ ಈ ಸೃಷ್ಟಿಗೆ ಭಗವಂತನು ಕಾರಣನಾಗಿದ್ದಾನೆ", ಎಂದು ಉದಾಹರಣೆಯಿಂದ ಮನದಟ್ಟು ಮಾಡಿಕೊಟ್ಟರು.

"ಹಾಲು ಮೊಸರಾಗಬೇಕಾದರೆ ಒಬ್ಬನು ಹುಳಿ ಹಿಂಡಬೇಕಾಗುವುದು. ಹುಳಿಹಾಕದೆ ಹಾಲು ಮೊಸರಾಗುವುದೇ ಇಲ್ಲ. ಅಂದರೆ ಚೇತನ ಮತ್ತು ಜಡದ ಸಂಯುಕ್ತ ಕಾರ್ಯಕ್ರಮದಿಂದಲೇ ಹಾಲು ಮೊಸರಾಯಿತು. ಇದಕ್ಕೆ ಈಶ್ವರನ ಕಲ್ಪನೆ ಏಕೆ ಬೇಕು ?" ಪಂಡಿತರು ಪ್ರಶ್ನಿಸಿದರು.

"ಇಲ್ಲಿ ಚೇತನವನ್ನು ಅಚೇತನದೊಂದಿಗೆ ಸಂಸರ್ಗಪಡಿಸುವ ಚೈತನ್ಯ ಯಾವುದು ? ಅದರ ನಿಯಾಮಕನಾದ ಭಗವಂತನೊಬ್ಬನಿರಬೇಕೆಂದು ಒಪ್ಪ

ಬೇಕಾಗುತ್ತದೆ"—ಎಂದು ಹೇಳಿ ಶ್ರೀಮದಾಚಾರ್ಯರು ಲೋಕಾಯತ, ಚಾರ್ವಾಕ, ಪ್ರಭಾಕರಾದಿ ನಿರೀಶ್ವರ ಸಿದ್ಧಾಂತಗಳನ್ನು ಖಂಡಿಸಿದರು.

"ಮಳೆಯಿಂದ ಹುಲ್ಲು ಹುಟ್ಟುವಂತೆ ಈಶ್ವರನ ಅನುಗ್ರಹದಿಂದ ಜಗತ್ತು ಹುಟ್ಟುವುದು—ಎಂಬ ಸೇಶ್ವರ ಸಾಂಖ್ಯರ ಅಭಿಪ್ರಾಯಕ್ಕೆ ಏನು ಹೇಳುತ್ತೀರಿ ?" ಪಂಡಿತರು ಕೇಳಿದರು.

"ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇsಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ ಎಂಬ ಶ್ರುತಿ ವಾಕ್ಯದಂತೆ ಜಗತ್ತಿನಲ್ಲಿ ಏನೇನು ಕಾಣಬರುತ್ತದೆಯೋ ಅಥವಾ ಕೇಳಲ್ಪಡುತ್ತದೆಯೋ ಅವನ್ನೆಲ್ಲ ಒಳಗೂ ಹೊರಗೂ ನಾರಾಯಣನು ವ್ಯಾಪಿಸಿಕೊಂಡು ಇರುವನು"

—ಎಂದು ಹೇಳಿ ಈ ಜಗತ್ತು ಶ್ರೀಹರಿಯಿಂದಲೇಯೆ ಹುಟ್ಟಿ ಸ್ಥಿತಿ ಹೊಂದಿ ಅವನಲ್ಲೇ ಲಯಹೊಂದುವುದಾಗಿ ತಿಳಿಸಿ ಆಚಾರ್ಯರು ಅನೇಕ ಶ್ರುತಿಸ್ಮೃತಿ ಪ್ರಮಾಣಗಳನ್ನು ಉದಾಹರಿಸಿದರು.

ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರವೇ ಒಪ್ಪುವರು. ಇವರ ಅಭಿಪ್ರಾಯವನ್ನು ಖಂಡಿಸಲು ದೇಹವು ಹೇಗೆ ಆತ್ಮವಲ್ಲವೆಂಬುದನ್ನು ಪ್ರತ್ಯಕ್ಷ ಪ್ರಮಾಣಗಳಿಂದ ಆಚಾರ್ಯರು ಸಾಧಿಸಿದರು.

ಆದರಂತೆ ವೈಶೇಷಿಕರ ಪರಮಾಣು ವಾದವನ್ನು ಆಚಾರ್ಯರು ಖಂಡಿಸಿ, ಅವುಗಳಲ್ಲಿನ ದೋಷಗಳನ್ನು ಹೊರಗೆಡಹಿದರು. ಪರಮಾಣುಗಳಿಗೆ ರೂಪಾದಿಗಳಿರುವುದರಿಂದ ಲೋಕದ ಇತರ ಪದಾರ್ಥಗಳಂತೆ ಅವೂ ನಾಶ ಹೊಂದಿ ಅನಿತ್ಯವೆನಿಸಿಕೊಳ್ಳುವುವು. ಆದುದರಿಂದ ಪರಮಾಣು ವಾದದಿಂದ ಭಗವಂತನನ್ನು ತಿಳಿಯಲು ಸಾಧ್ಯವೇ ಇಲ್ಲವೆಂದು ಹೇಳಿದರು.

ಇದರಂತೆ ತ್ರಿವಿಕ್ರಮ ಪಂಡಿತರು ಎತ್ತಿದ ಪರಮಾಣುಪುಂಜವಾದದ ಆಕ್ಷೇಪಣೆಗಳನ್ನು ಯುಕ್ತಿಯುಕ್ತವಾಗಿ ಆಚಾರ್ಯರು ವಿವರಿಸಿದರು.

"ಭಾಸ್ಕರ ಮೊದಲಾದವರು ಬ್ರಹ್ಮನೇ ಪರಿಣಾಮ ಹೊಂದಿ ಜಗತ್ತಿನ ಆಕಾರದಲ್ಲಿ ಕಾಣಬರುವನು ಎನ್ನುತ್ತಾರೆ. ಇದಕ್ಕೇನು ಹೇಳುವಿರಿ ?"—

ಎಂದು ತ್ರಿವಿಕ್ರಮ ಪಂಡಿತರು ಪ್ರಶ್ನಿಸಿದರು.

"ಇದು ಸರಿಯಲ್ಲ. ಬ್ರಹ್ಮ ಜಡವಲ್ಲ ಚೇತನ. ಯಾವುದು ಪರಿಣಾಮ ಹೊಂದಿ ಸೃಷ್ಟಿಗೆ ಕಾರಣವಾಗುವುದೋ ಅದು ಚೇತನವಾಗಲಾರದು. ಇದಕ್ಕೆ ಉದಾಹರಣೆ ಹಾಲು ಇತ್ಯಾದಿ. ಚೇತನ ರೂಪಿಯಾದ ಈಶ್ವರನು ಪರಿಣಾಮ ಹೊಂದಿ ಜಗತ್ತಿನ ಉತ್ಪತ್ತಿಗೆ ಕಾರಣನಾಗುವುದಿಲ್ಲ" ಎಂದು ಆಚಾರ್ಯರು ಸ್ಪಷ್ಟವಾಗಿ ಹೇಳಿದರು.

"ನಾರಾಯಣನೇ ವಿಶ್ವಕರ್ತನೆನ್ನುವಿರಿ ಅದೇಕೆ ? ಪಶುಪತಿ ಆಗಲಾರನೇ?"

"ಶಿವನಿಗೆ ಶರೀರವಿಲ್ಲದಿರುವುದರಿಂದ ಅವನಿಗೆ ಜಗತ್ತಿನೊಡನೆ ಕರ್ತೃತ್ವ ಸಂಬಂಧ ಯುಕ್ತವಲ್ಲ. ಇಲ್ಲದ ಪುರುಷನು ಹೇಗೆ ಸೃಷ್ಟಿಗೆ ಕರ್ತೃವಾಗ ಬಲ್ಲ ? ಅಲ್ಲದೆ ಸ್ಮೃತಿಗಳು ಹೇಳುತ್ತವೆ: ದೇಹವಿದ್ದರೆ ನಾಶವೂ ಇರ ಬೇಕು. ಇಲ್ಲದಿದ್ದರೆ ಜ್ಞಾನವೂ ಇರುವುದಿಲ್ಲ, ಶರೀರ ಇರುವವರಿಗೆ ಮಾತ್ರ ಜ್ಞಾನ ದೊರಕುವುದು. ವಿಷ್ಣುವಿನ ವಿಷಯದಲ್ಲಿ ಇಂಥ ವಿರೋಧಗಳನ್ನು ಶ್ರುತಿಗಳು ಪರಿಹರಿಸಿವೆ. ಭಗವಂತನು ಯಾವ ಸ್ವರೂಪದಲ್ಲಿರುವನೋ ಹಾಗೆಯೇ ಅಭಿವ್ಯಕ್ತನಾಗುವನು. ಜ್ಞಾನಾತ್ಮಕ, ಐಶ್ವರ್ಯಾತ್ಮಕ, ಶಕ್ತ್ಯಾತ್ಮ ಕನಾದ ಭಗವಂತನು ಜ್ಞಾನವುಳ್ಳವನೂ, ಐಶ್ವರ್ಯವುಳ್ಳವನೂ ಹಾಗೂ ಶಕ್ತಿವಂತನೂ ಆಗಿ ಅಭಿವ್ಯಕ್ತನಾಗುತ್ತಾನೆ."

–ಹೀಗೆ ಪಾಶುಪತಮತವನ್ನು ಆಚಾರ್ಯರು ದೃಢವಾಗಿ ನಿರಾಕರಿಸಿದರು.

"ಲೋಕದಲ್ಲಿ ಪುರುಷನೇ ಸೃಷ್ಟಿಕರ್ತ. ಸ್ತ್ರೀಸಂಪರ್ಕದಿಂದ ಸೃಷ್ಟಿ ಕಾರ್ಯವಾಗುತ್ತದೆ. ಕೇವಲ ಪುರುಷ ಅನನುಗೃಹೀತ ಸ್ತ್ರೀಯಿಂದ ಇದು ಸಾಧ್ಯವಿಲ್ಲ. ಆದುದರಿಂದ ಶಕ್ತಿಯೇ ಸೃಷ್ಟಿಕಾರಿಣಿ ಎಂಬ ಮಹಾವಾಮ ಪಕ್ಷದವರ ಮಾತು ಸಾಧುವಲ್ಲ. ಶಿವನ ಅನುಗ್ರಹದಿಂದ ಶಕ್ತಿ ಸೃಷ್ಟಿ ಮಾಡುವ ಳೆಂದು ಹೇಳುವುದೂ ಸರಿಯಲ್ಲ. ಏಕೆಂದರೆ ಕರ್ತೃವಿನ ದೆಸೆಯಿಂದ ಕರಣ ಹುಟ್ಟುವುದಿಲ್ಲ. "ಓಂ ನ ಚ ಕರ್ತುಃ ಕರಣಂ ಓಂ". ಎಂಬ ಬ್ರಹ್ಮಸೂತ್ರವೇ ಇದೆ."

—ಎಂದು ಆಚಾರ್ಯರು ಶಕ್ತಿಪಕ್ಷವನ್ನೂ ತಳ್ಳಿಹಾಕಿದರು.

"ವಿಜ್ಞಾನ ಮೊದಲಾದುವು ಸೃಷ್ಟಿಗೆ ಕಾರಣವೆನ್ನುವುದಾದರೆ ಆ ತರ್ಕವು ಈಶ್ವರನೇ ಸೃಷ್ಟಿಗೆ ಕಾರಣ ಎನ್ನುವುದರಲ್ಲಿ ಸರಿಹೋಗುತ್ತದೆ. ಏಕೆಂದರೆ ವಿಜ್ಞಾನಾದಿಗಳು ಅವನಿಂದಲೇ ಹುಟ್ಟುವುವು. ಆದರೆ ಈ ವಾದಕ್ಕೆ "ಓಂ ವಿಪ್ರತಿಷೇಧಾಚ್ಚ ಓಂ" ಅಂದರೆ ಎಲ್ಲ ಶ್ರುತಿ ಸ್ಮೃತಿಗಳೂ ಈ ವಾದದ ವಿರುದ್ಧವಾಗಿವೆ.

"ಇನ್ನು ವೈಶೇಷಿಕರವಾದ : ಈಶ್ವರನು ಸರ್ವಗುಣಪರಿಪೂರ್ಣನಲ್ಲ. ಕೆಲವು ಗುಣಗಳನ್ನು ಮಾತ್ರವೇ ಪಡೆದಿರುವನು—ಎನ್ನುವ ಅವರ ಯುಕ್ತಿ ಸರಿಯಿಲ್ಲ. ಏಕೆಂದರ ಲೋಕದಲ್ಲಿ ಸುಖ ಅಥವಾ ದುಃಖ ಎರಡರಲ್ಲಿ ಒಂದು ಇರಲೇಬೇಕು ಯಾವನು ಸುಖ ದುಃಖಗಳೆರಡನ್ನೂ ಪಡೆಯದ ಇರುವನೋ ಅವನು ಚೇತನನಲ್ಲ, ಜಡ. ಈ ದೃಷ್ಟಿಯಿಂದ ವೈಶೇಷಿಕರ ವಾದ ಯುಕ್ತಿ ಯುಕ್ತವಲ್ಲ"—ಎಂದು ಆಚಾರ್ಯರು ಅದನ್ನೂ ನಿರಾಕರಿಸಿದರು.

ಅಂತೆಯೇ ಶೂನ್ಯವಾದವು. ಶೂನ್ಯವು ಈ ಕಾಣುತ್ತಿರುವ ಜಗತ್ತಿಗೆ ಉಪಾದಾನ ಕಾರಣವೆನ್ನುತ್ತದೆ. ಶೂನ್ಯದಿಂದ ಶೂನ್ಯವು ಹುಟ್ಟುವುದೇ ಹೊರತು ಜಗತ್ತಲ್ಲ, ವಿವಾದಾಸ್ಪದವಾದ ಈ ಶೂನ್ಯವು ಜಗತ್ಕಾರಣವಲ್ಲ-ಅದು ವಾಸ್ತವವಾಗಿ ಇಲ್ಲದೆ ಇರುವುದು-ಅಂದರೆ ಅವಿದ್ಯಮಾನ. ನೋಡಲ್ಪಡದಿರುವ ಶೂನ್ಯವು-ಅಸತ್-ಜಗತ್ತಿಗೆ ಕಾರಣವಾಗುವುದಿಲ್ಲ. "ಓಂ ನಾಸತೋಽದೃಷ್ಟತ್ವಾತ್ ಓಂ!"—ಎಂದು ಬೌದ್ಧವಾದವನ್ನೂ ತಿರಸ್ಕರಿಸಿದರು.

ಜೈನರು ನಂಬುವ ಸ್ಯಾದ್ವಾದವು ಹೇಳುವುದೇನೆಂದರೆ— ಜೀವನು ನಿತ್ಯವಾಗಿ ಊರ್ಧ್ವಗತಿ ಹೊಂದುತ್ತಿರುತ್ತಾನೆ. ಲೋಕಗಳನ್ನೆಲ್ಲಾ ದಾಟಿ ಆಕಾಶಕ್ಕೆ ಹೋದಮೇಲೆ ಅದೋದು ವಿಕಾರವೇ, ನಾಶವೇ ಅಲ್ಲವೆ ? ಉದಾಹರಣೆ : ಅಣುದೇಹದೊಳಗಿನ ಜೀವ ಆನೆಯ ದೇಹದೊಳಗೆ ಸೇರಿ ಅದೇ ಗಾತ್ರವನ್ನು ಹೊಂದಿದರೆ ವಿಕಾರನಲ್ಲವೆ ? ಮನುಷ್ಯನು ಮರವಾಗಿ ಹುಟ್ಟಿದಾಗ ಏನಾಗಬಹುದು ? ಸಂಗೀತದಿಂದ ಪುಷ್ಪ ಫಲಪ್ರಾಪ್ತಿ, ಸ್ಪರ್ಶದಿಂದ ಸಣ್ಣದಾಗುವಿಕೆ, ರಸದಿಂದ ಏಕಸ್ಥಿತಿ—ಇವು ಮರಗಳಲ್ಲಿ ಕಾಣಬರುವ ಗುಣಗಳು. ಆಗ ಅವುಗಳಲ್ಲಿ ಆಂತ್ಯವಿಲ್ಲವೆಂದು ಹೇಳಬಹುದೆ ? ಅಂತೆಯೇ

ಬಾದರಾಯಣರು ಇದನ್ನು ನಿರಾಕರಿಸಿರುವರು— ಎಂದು ಜೈನಸಿದ್ಧಾಂತವನ್ನು ಆಚಾರ್ಯರು ಖಂಡಿಸಿದರು.

ಹೀಗೆ ಅದ್ವೈತ ಸಿದ್ಧಾಂತ ಹೊರತು ಉಳಿದ ಅವೈದಿಕ ದರ್ಶನಗಳನ್ನು ಶ್ರೀಮಧ್ವಾಚಾರ್ಯರು ಪರಿಶೀಲಿಸಿದರು, ಅವುಗಳ ಪ್ರಮೇಯದಲ್ಲಿರುವ ನ್ಯೂನತೆಗಳನ್ನು ಎತ್ತಿ ತೋರಿಸಿ ಅವುಗಳು ತರ್ಕ, ಪ್ರಮಾಣ, ಶ್ರುತಿಗಳಿಗೆ ಹೇಗೆ ನಿಲ್ಲುವುದಿಲ್ಲವೆಂದು ಬಿಡಿಸಿ ತೋರಿಸಿದರು.

ತ್ರಿವಿಕ್ರಮಪಂಡಿತರು ಶ್ರೀಮದಾಚಾರ್ಯರ ವಾದದಿಂದ ಸೋತು ನಿರುತ್ತರರಾದರು.1

## ಪಂಡಿತರ ಮಹಾಪರಿವರ್ತನೆ

ಇದುವರೆಗೆ ಬೇರೆಬೇರೆ ಸಿದ್ಧಾಂತಗಳನ್ನು ಪ್ರತಿಪಾದಿಸಿ, ಶ್ರೀಮದಾಚಾರ್ಯರಿಂದ ಖಂಡಿಸಲ್ಪಟ್ಟು, ಅವುಗಳನ್ನು ಕೈ ಬಿಟ್ಟ ತ್ರಿವಿಕ್ರಮ ಪಂಡಿತಾಚಾರ್ಯರು ಅದ್ವೈತ ಸಿದ್ಧಾಂತ ವಿಷಯಕ್ಕೆ ಸಂಬಂಧಿಸಿದಂತೆ ವಾದಕ್ಕೆ

---

1) ತತಃ ಸ್ವತಃ ಪ್ರಮಾಣೇನ ದೇವೋ ವೇದೇನ ವೇದಿತಃ ।
ವಿಷ್ಣುರ್ಮೋಕ್ಷಾದಿದಾತೇತಿ ತಿಶ್ವಂ ಭವತಿ ಶೋಭನಂ ॥
ಇತ್ಯಾದೀನ್ ದರ್ಶಯಂತ್ಯರ್ಥಾನ್ ವ್ಯಾಖ್ಯೋಪನ್ಯಾಸಸಂಯುತಾ ।
ತ್ರಿವಿಕ್ರಮಾರ್ಯೇಣ ತದಾ ವಿಶ್ವಾಭಿಜ್ಞೈಸ್ಯ ಶುಶ್ರುವೇ ॥
ವಾಕ್ಯೈರತಿಬಲೀಯೋಭಿಃ ಪ್ರತ್ಯಸ್ತ್ರೈರಿವ ವೈದಿಕೈಃ ।
ಅರ್ಥಾಂತರಂ ಪ್ರಕಟಯಂಸ್ತ್ವಸೌ ಸನ್ನ್ಯವರ್ತಯತ್ ॥
ಸಪ್ತಾಷ್ಟಾನಿ ದಿನಾನ್ಯೇವಂ ವಾದಂ ಕೃತ್ವಾ ಸಹಾಮುನಾ ।
ನಿರುತ್ತರಂ ತಂ ನಿಶ್ಶೋದ್ಯಂ ಚಕ್ರೇ ಚಕ್ರಾಯುಧಪ್ರಿಯಃ ॥
ಪ್ರಣಮ್ಯಾಚಷ್ಟ ಶಿಷ್ಯೋಽಸೌ ಕ್ಷಮ್ಯತಾಂ ನಾಥ ಚಾಪಲಂ ।
ಪದಪದ್ಮರಜೋದಾಸ್ಯಂ ಧ್ರುವಂ ಮೇ ದೀಯತಾಮಿತಿ ॥
ಮ ॥ ವಿ ॥ ಸರ್ಗ 15–ಶ್ಲೋಕ–63–70

ಆರಂಭಿಸಿದಾಗ ತಮ್ಮ ನೆಲೆಗೆ ತಾವು ಬಂದಂತೆ, ಅವರು ಸಮಾಧಾನದ ನಿಟ್ಟುಸಿರು ಬಿಟ್ಟರು.

ಅದ್ವೈತ ಶಾಸ್ತ್ರದ ಎಲ್ಲ ಪ್ರಮೇಯಗಳನ್ನು ಚೆನ್ನಾಗಿ ಅಧ್ಯಯನ ಮಾಡಿ ತಿಳಿದಿದ್ದ ತ್ರಿವಿಕ್ರಮ ಪಂಡಿತರು ಇದನ್ನು ಯುಕ್ತಿ ಯುಕ್ತವಾಗಿ ಸಾಧಿಸಲು ಶಕ್ತರಾಗಿದ್ದರು.

ಪಂಡಿತರು ಒಂದು ಪ್ರಶ್ನೆ ಎತ್ತಿದರು.

"ಆಚಾರ್ಯರೇ, ನೀವು ಶೂನ್ಯವಾದಿಗಳಿಗೂ, ಮಾಯಾವಾದಿಗಳಿಗೂ ಯಾವ ಭೇದವೂ ಇಲ್ಲವೆಂದು ಹೇಳಿದಿರಿ, ಇದು ಸರಿಯಲ್ಲ, ಬೌದ್ಧರು ವೇದ ಪ್ರಾಮಣ್ಯವನ್ನೇ ಒಪ್ಪುವುದಿಲ್ಲ, ಅದ್ವೈತವು ಒಪ್ಪುತ್ತದೆ. ಆದ್ದರಿಂದ ಮಾಯಾವಾದಿಗಳನ್ನು ಪ್ರಚ್ಛನ್ನಬೌದ್ಧರೆಂದೇ ಹೇಳಬಹುದು."

"ಅದ್ವೈತವು ಬೇರೆ ಮಾತಿನಿಂದ ವೇದ ಪ್ರಾಮಾಣ್ಯವನ್ನು ಹೇಳಿದರೂ ತಾತ್ಪರ್ಯದಲ್ಲಿ ಶೂನ್ಯವಾದಿಗಳಂತೆ ಅದು ನಡೆದುಕೊಳ್ಳುತ್ತದೆ. ಬ್ರಹ್ಮನನ್ನು ಅವಾಚ್ಯ, ಅನಿರ್ವಚನೀಯವೆಂದು ವರ್ಣಿಸಿದರೆ ಏನು ತತ್ತ್ವ ತಿಳಿಸಿದಂತೆ ಆಯಿತು? ತತ್ತ್ವಾ ತತ್ತ್ವ ಮಿಶ್ರಣ ಗ್ರಂಥ ರಾಶಿ ಪ್ರಮಾಣ ವಾಗುವುದೇ ಇಲ್ಲ."

"ಸತ್ಯಂ ಜ್ಞಾನಮನಂತಂ ಬ್ರಹ್ಮ"— ಎಂಬ ಶ್ರುತಿವಾಕ್ಯಕ್ಕೆ ನಿಮ್ಮ ಉತ್ತರ ವೇನು?" ಎಂದು ಪ್ರಶ್ನಿಸಿದರು ತ್ರಿವಿಕ್ರಮ ಪಂಡಿತರು.

"ಪ್ರಪಂಚವು ಸತ್ಯ; ಬ್ರಹ್ಮನು ಜ್ಞಾನಾನಂದಾದಿ ಅನಂತಕಲ್ಯಾಣ ಗುಣಪರಿಪೂರ್ಣ"— ಎಂದು ವೇದಗಳು ತಿಳಿಸುವುವು. ಅದ್ವೈತವು ಇವನ್ನು ಸಂಪೂರ್ಣವಾಗಿ ನಿರಾಕರಿಸುವುದು. ಹೀಗಿರುವಾಗ ಅದಕ್ಕೆ ವೇದ ಪ್ರಾಮಾಣ್ಯ ಹೇಗೆ ಸಾಧ್ಯ?"

"ಬ್ರಹ್ಮ ಅಸತ್" ಎಂದು ಒಪ್ಪಿಕೊಂಡರೆ ಏನು ತೊಂದರೆ?"

"ಬ್ರಹ್ಮ ವಸ್ತುವು ಅಸತ್; ಆದರೆ ಅದನ್ನು ಶ್ರವಣ, ಮನನ, ನಿದಿಧ್ಯಾಸನಾದಿ ಕ್ರಮಗಳಿಂದ ವಿಚಾರ ಮಾಡಲು, ಧ್ಯಾನ ಮಾಡಲು ಸಾಧ್ಯ

ವಾಗುವುದಿಲ್ಲ, ಆದುದರಿಂದ ಅದು ನಿತ್ಯಾನಂದಪ್ರದವಲ್ಲ ; ಮೋಕ್ಷಕಾರಕವೂ ಅಲ್ಲ ; ಆದುದರಿಂದ ಅದು ಹಿತವಲ್ಲ."

"ಸ್ವಾಮಿ, ಅನಂತಕಲ್ಯಾಣಗುಣಪೂರ್ಣನಾದ ನಾರಾಯಣನು ವೇದಗಳಿಂದಲೇ ತಿಳಿಯಲ್ಪಡುವವನು ಎಂದಿರಿ ; ಇವನನ್ನು ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯಲು ಸಾಧ್ಯವಿಲ್ಲವೆ ?"

"ಅನುಮಾನದಿಂದ ತಿಳಿಯಬಹುದು. ಧರ್ಮಾದಿಗಳು ; ಅತೀಂದ್ರಿಯ ವೇದಗಳನ್ನು ಒಪ್ಪದವರಿಗೆ ಅವು ಪ್ರತ್ಯಕ್ಷ ಪ್ರಮಾಣವಾಗಲಾರವು. ಪ್ರತ್ಯಕ್ಷವೇ ಮುಖ್ಯ ಪ್ರಮಾಣವೆನ್ನುವವನಿಗೆ ಧರ್ಮಾದಿಗಳಿಲ್ಲ."

"ವೇದಗಳನ್ನು ಒಪ್ಪದವರಿಗೆ ಧರ್ಮಾಧರ್ಮಗಳು ಸಿದ್ಧವಾಗುವುದಿಲ್ಲವೆ? ಪ್ರಾಜ್ಞರೂ ಸಜ್ಜನರೂ ಹೇಳುವ ಮಾತುಗಳನ್ನು ಧರ್ಮವೆಂದು ಇಂತಹ ಜನರು ತಿಳಿಯುವುದಿಲ್ಲವೆ ?"

"ವೇದಗಳು ಅಪೌರುಷೇಯ. ಅಂದರೆ ಯಾವ ಪುರುಷನಿಂದಲೂ ಅವು ರಚಿತವಾದವುಗಳಲ್ಲ, ಹೀಗಿರುವುದರಿಂದಲೇ ಅವುಗಳಿಗೆ ಪ್ರಾಮಾಣ್ಯ ಸಿದ್ಧಿಸುವುದು. ಬುದ್ಧಿವಂತನ ಮಾತು ಹಾಗಲ್ಲ; ಯಾವಾಗಲೂ ಅವನ ಮಾತು ಪ್ರಮಾಣವಾಗಲಾರದು. ಅಲ್ಲದೆ ಪೌರುಷೇಯವಾದ ಮಾತುಗಳಲ್ಲಿ ನಾನಾ ದೋಷಗಳಿಗೆ ಎಡೆಯಿದೆ."

"ಶ್ರುತಿಗಳನ್ನು ಒಪ್ಪದಿದ್ದರೂ ಗೌತಮ ಬುದ್ಧನನ್ನು ಸರ್ವಜ್ಞನೆಂದು ಹೇಳಿಲ್ಲವೆ ? ಅವನ ವಿಚಾರಗಳು ದುಷ್ಟವೆಂದು ತಿರಸ್ಕರಿಸಬಹುದೆ?"

"ನಿಮ್ಮ ಸರ್ವಜ್ಞನೂ ಮನುಷ್ಯನೇ. ಅವನು ಮನುಷ್ಯನಾಗಿರುವುದರಿಂದ ಪ್ರಮಾದವಶನಾಗದೆ ಇರಬಲ್ಲವೆ ?"

"ವೇದಬಾಹ್ಯವಾದ ಕರ್ಮ ಮಾಡಿದವನಿಗೆ ಫಲವೇನು ?"

"ಅವಿದ್ಯೆಯನ್ನು ಉಪಾಸಿಸುವವನು ಅಂಧತಮಸ್ಸಿಗೆ ಹೋಗುವನು — ಎಂದು ಈಶಾವಾಸ್ಯ ಉಪನಿಷತ್ತು ಹೇಳುತ್ತದೆ."

"ವೇದಗಳು ಹೇಳುವ ಸಚ್ಛಾಸ್ತ್ರಗಳ ಅನುಷ್ಠಾನದಿಂದ ಬರುವ ಫಲವೇನು?"

"ಸಜ್ಜನರು ಇಹದಲ್ಲಿ ತಮ್ಮ ಸ್ವರೂಪಕ್ಕೆ ಅನುಗುಣವಾದ ಆನಂದವನ್ನು ಪಡೆದು, ದುಃಖ ಮಿಶ್ರಿತವಲ್ಲದ ಮುಕ್ತಿ ಹೊಂದುವರು."

"ನಿರ್ವಿಶೇಷಬ್ರಹ್ಮಭಾವವೇ ಮುಕ್ತಿ ಎಂದು ಅದ್ವೈತಮತ ಸಾರುವುದು. ಬ್ರಹ್ಮತ್ವವನ್ನು ಪಡೆಯದವನಿಗೆ ಯಾವ ಸೌಖ್ಯವಿದ್ದೀತು ?"

"ಮುಕ್ತಿ ಸ್ವರೂಪಾನಂದ ಆವಿರ್ಭಾವರೂಪವಾದದು. ಅಂತಃಕರಣ ಹಾಗೂ ಬಹಿರಿಂದ್ರಿಯಗಳ ವ್ಯಾಪಾರಗಳಾದ ದೃಷ್ಟಿ, ಶ್ರವಣಗಳಿಂದ ಬಿಡಲ್ಪಟ್ಟಿದ್ದರೆ ಮುಕ್ತನು ಯಾವ ಪುರುಷಾರ್ಥವನ್ನೂ ಪಡೆಯಲಾರ.

ಜಗದೀಶ್ವರನಾದ ನಾರಾಯಣನಿಗೆ ಜ್ಞಾನ, ಅಪೇಕ್ಷೆ, ಪ್ರಯತ್ನ, ಎಲ್ಲವೂ ಇವೆ. ತನ್ನ ಸಾಮರ್ಥ್ಯದಿಂದಲೇ ಅವನು ಅಶುಭಗಳಾದ ದುಃಖಾದಿಗಳನ್ನು ನಿವಾರಿಸಿಕೊಳ್ಳುವನು ; ತನ್ನನ್ನು ಉಪಾಸನೆ ಮಾಡಿದವನನ್ನು ಈ ಶಕ್ತಿಯಿಂದಲೇ ದುಃಖಗಳಿಂದ ಬಿಡುಗಡೆ ಮಾಡಿ ಮುಕ್ತಿಯನ್ನೀಯುವನು."

"ಮುಕ್ತನಿಗೂ ಬುದ್ಧಿ ಮೊದಲಾದವು ಇರುವುದಾದರೆ ಅವುಗಳಿಗೆ ಆಶ್ರಯದಾತವಾದ ದೇಹವೂ ಇರಬೇಕಷ್ಟೇ. ಆಗ ಹುಟ್ಟು, ಸಾವು, ಬೆಳವಣಿಗೆ, ಕ್ಷಯ, ಕುಗ್ಗುವುದು, ನಾಶ ಎಂಬ ಈ ಆರು ಅವಸ್ಥೆಗಳನ್ನು ಹೊಂದಿ ಊರ್ಮಿ ಎಂಬ ದೋಷಗಳು ಬರುವುದಿಲ್ಲವೆ ?"

"ಜಗದೀಶ್ವರನು ಊರ್ಮಿಗಳಿಲ್ಲದವನು ; ಅವನ ಭಕ್ತನೂ ಪರಮೇಶ್ವರನಂತೆ ದೋಷರಹಿತ."

"ಮುಕ್ತನಿಗೆ ಅವಯವಗಳುಂಟೆ ? ಇಂದ್ರಿಯಗಳುಂಟೆ ?"

"ಅವನಿಗೆ ಜ್ಞಾನಾನಂದಮಯವೇ ಆದ ಇಂದ್ರಿಯಗಳು ಇವೆ. ಅವುಗಳಿಂದ ಅವನು ಚೇತನರೂಪಿಯಾಗಿದ್ದಾನೆ. ಈಶ್ವರನಂತೆಯೇ ಅವನು ರೂಪಾದಿಗಳನ್ನು ತಿಳಿಯುತ್ತಾನೆ"

ವೇದಗಳಲ್ಲಿ ವಿವರಿಸಲ್ಪಟ್ಟು, ಯುಕ್ತಿಯಿಂದ ಸ್ಥಾಪಿಸಲ್ಪಟ್ಟಿರುವ ಸ್ವರೂಪಾನಂದ ಪ್ರಾಪ್ತಿಯೇ ಮೋಕ್ಷ. ಸರ್ವೋತ್ತಮನೂ, ಸರ್ವವ್ಯಾಪಿಯೂ ಅನಂತಕಲ್ಯಾಣಗುಣಪರಿಪೂರ್ಣನೂ ಆದ ವಿಷ್ಣುವೇ ಮೋಕ್ಷಪ್ರದನು —

ಎಂಬುದನ್ನು ಶ್ರೀಮಧ್ವಾಚಾರ್ಯರು ಯುಕ್ತಿಯುಕ್ತವಾಗಿ, ಪ್ರಮಾಣಗಳ ಮೂಲಕ ಸಿದ್ಧಾಂತ ಪಡಿಸಿದರು.

ಅವರ ವಾದಗಳನ್ನು ಕೇಳಿದ ಮೇಲೆ ತ್ರಿವಿಕ್ರಮಪಂಡಿತರು ಬೆಳಕಿನ ಹೊಳೆಯಲ್ಲಿ ಮಿಂದಂತೆ ಆದರು. ಮನಸ್ಸಿನ ಮೈಲಿಗೆಯನ್ನೂ, ಶಂಕೆ, ಕಾತರಗಳನ್ನೂ ಕಳೆದುಕೊಂಡು ಶುದ್ಧ ಸಾತ್ವಿಕ ಚೇತನರಾದರು. ಅವರ ಭಾವುಕ ಕಣ್ಣಿಗೆ ಶ್ರೀಮಧ್ವಾಚಾರ್ಯರು ಮನುಷ್ಯರಾಗಿ ಕಾಣಲಿಲ್ಲ. ರಾಮಾವತಾರದ ಶ್ರೀಹನುಮಂತದೇವರಾಗಿಯೂ, ಕೃಷ್ಣಾವತಾರದ ಭೀಮಸೇನದೇವರಾಗಿಯೂ ಕಂಡರು.

ಅಂಥ ಮಹಾಪುರುಷರೊಡನೆ ಸಪ್ತಾಷ್ಟ ದಿನಗಳ ಕಾಲ ವಾದಿಸಿದ್ದು ತಮ್ಮ ಜೀವನದ ಪರಮ ಭಾಗ್ಯವೆಂದು ತಿಳಿದರು.

ಅವರು ಮಗುವಿನಂತೆ ಎದ್ದು ಬಂದು ಶ್ರೀಮದಾಚಾರ್ಯರ ಪಾದ ಕಮಲಗಳ ಮೇಲೆ ಬಿದ್ದರು,

"ಮಹಾಸ್ವಾಮಿ, ಈಗ ನನ್ನ ಕಣ್ಣಿಗೆ ಕವಿದಿದ್ದ ಸಂಶಯದ ಪೊರೆ ಸಂಪೂರ್ಣವಾಗಿ ಕಳೆಚಿತು. ನನ್ನನ್ನು ತಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಿ, ಕಾಪಾಡಬೇಕು"– ಎಂದು ಭಕ್ತಿ, ವಿನಯಪೂರ್ವಕವಾಗಿ ಪ್ರಾರ್ಥಿಸಿದರು.

ಅವರನ್ನು ಪ್ರೀತಿಯಿಂದ ಹಿಡಿದೆತ್ತಿ ಶ್ರೀಮದಾಚಾರ್ಯರು ಆಲಂಗಿಸಿಕೊಂಡರು. ಅಮೃತಸದೃಶ ಮಾತುಗಳಿಂದ ಅವರನ್ನು ಸಾಂತ್ವನ ಗೊಳಿಸಿದರು. ಶಿಷ್ಯರನ್ನಾಗಿಯೂ ಅನುಗ್ರಹಿಸಿದರು.

ಅನಂತರ ಅವರು ತ್ರಿವಿಕ್ರಮಪಂಡಿತರನ್ನು ಕುರಿತು ಹೀಗೆಂದರು:

"ಪಂಡಿತವರ್ಯರೇ, ನಾವೂ ನಿಮ್ಮಂತಹ ಮೇಧಾವಿಗಳನ್ನು ಶಿಷ್ಯರಾಗಿ ಪಡೆಯುವುದು ಭಾಗ್ಯವೆಂದೇ ತಿಳಿಯುತ್ತೇವೆ. ನಿಮ್ಮಂಥ ಪ್ರಾಜ್ಞರು ದ್ವೈತಮತವನ್ನು ಸ್ವೀಕರಿಸಿ, ಈ ಸಚ್ಛಿದ್ಧಾಂತವನ್ನು ಒಪ್ಪಿ ನಡೆದರೆ ಸಾತ್ವಿಕರೆಲ್ಲರೂ ನಿಮ್ಮನ್ನೇ ಅನುಸರಿಸುತ್ತಾರೆ. ಇದರಿಂದ ನೀವು ಭಗವಂತನ ಪ್ರಸಾದಕ್ಕೆ ಪಾತ್ರರಾಗಿ, ಅವನ ಪವಿತ್ರ ಕಾರ್ಯಕ್ಕೆ ನೆರವಾದ ಸಾಧಕ

ವರೇಣ್ಯರಾಗುತ್ತೀರಿ. ಇದಕ್ಕಿಂತ ನಮಗೆ ಬೇರೆ ಭಾಗ್ಯ ಬೇಕೆ ?"—ಎಂದು ಹೇಳಿ ತ್ರಿವಿಕ್ರಮಪಂಡಿತಾಚಾರ್ಯರನ್ನು ಅನುಗ್ರಹಿಸಿದರು.

ಮುಂದೆ ತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮದಾಚಾರ್ಯರನ್ನು ಸೇವಿಸುತ್ತಾ ಅವರ ಬಳಿ ಅತ್ಯಂತ ಆಪ್ತ ಶಿಷ್ಯರಾಗಿ ನಿಂತರು.1

ಅವರು ಆಚಾರ್ಯರ ತತ್ತ್ವವಾದದಿಂದ ಎಷ್ಟರ ಮಟ್ಟಿಗೆ ಪ್ರಭಾವಿ ರಾದರೆಂದರೆ ಪಂಡಿತ ಗುರುಗಳ ಅಪ್ಪಣೆ ಪ್ರಕಾರ ತತ್ತ್ವಪ್ರದೀಪ ಎಂಬ ತಾತ್ತ್ವಿಕ ಗ್ರಂಥವನ್ನು ರಚಿಸಿ ಮಾಧ್ವ ಸಿದ್ಧಾಂತಕ್ಕೆ ಭದ್ರವಾದ ನೆಲಗಟ್ಟನ್ನು ಹಾಕಿದರು. ಇದು ಸೂತ್ರಭಾಷ್ಯದ ಪ್ರಾಚೀನ ಟೀಕೆ.

ಅಲ್ಲದೆ ಶ್ರೀಮದಾಚಾರ್ಯರು ವಾಯುದೇವರ ಮೂರನೆಯ ಅವತಾರ ವೆಂದು ಶ್ರದ್ಧಾಪೂರ್ವಕವಾಗಿ ನಂಬಿ, ಶ್ರೀವಾಯುಸ್ತುತಿ ಎಂಬ ಸ್ತೋತ್ರ ವನ್ನು ರಚಿಸಿ ಅದರಲ್ಲಿ ಹನುಮಭೀಮ ಮಧ್ವಾವತಾರಗಳನ್ನು ಕೊಂಡಾಡಿದರು.

ಈ ಹರಿ ವಾಯುಸ್ತುತಿಯಿಂದ ಸುಪ್ರೀತರಾದ ಶ್ರೀಮದಾಚಾರ್ಯರು ಅದಕ್ಕೆ ಮಂಗಳ ಶ್ಲೋಕಗಳಾಗಿ ಶ್ರೀನರಸಿಂಹನಖಸ್ತುತಿ ಎಂಬ ಎರಡು ಶ್ಲೋಕಗಳನ್ನು ರಚಿಸಿ ಅವರನ್ನು ಅನುಗ್ರಹಿಸಿದರು.

ಅವರು ತಾವು ಜೀವಿಸಿರುವವರೆಗೆ ಶ್ರೀಮದಾಚಾರ್ಯರ ಸೇವೆಯನ್ನು ತ್ರಿಕರಣಪೂರ್ವಕವಾಗಿ ಶ್ರದ್ಧಾಭಕ್ತಿಗಳಿಂದ ಮಾಡಿದರು.

ಅವರು ಶ್ರೀಮದಾಚಾರ್ಯರಲ್ಲಿ ಇಟ್ಟಿದ್ದ ಶ್ರದ್ಧಾ ಭಕ್ತಿಗಳನ್ನು ನೋಡಿದ ಅವರ ಪುತ್ರ ನಾರಾಯಣಪಂಡಿತಾಚಾರ್ಯರು ಶ್ರೀಮದಾ ಚಾರ್ಯರ ಜೀವನ ಚರಿತ್ರೆಯನ್ನು ಕುರಿತು ಸುಮಧ್ವವಿಜಯವೆಂಬ ಹದಿನಾರು

---

1) ವ್ಯಾಖ್ಯಾಂ ಭಾಷ್ಯಸ್ಯ ಭೂಯೋಧೀಃ ಶ್ರವಣಂ ಸೂರಿವಂದನಃ ।
ಸಂತಃ ಪ್ರೀತಿಮಸಂತೋऽನ್ಯಾಂ ಸಮುಮಾರೇಭಿರೆ ತತಃ ॥
ಗೀರ್ವಾಣಜ್ಞಾಗೌರವಾಟ್ಟೀಕಾಂ ಕುರ್ವನ್ ಭಾಷ್ಯಸ್ಯ ದುಷ್ಕರಾಮ್ ।
ಪದರ್ಥವಿಕ್ರಮಯಯೋರ್ಽಸೌ ಮಹಾಚಾರ್ಯಮವೋಚತ ॥
ಮ ॥ ವಿ ॥ ಸರ್ಗ 15-ಶ್ಲೋಕ-71-72

ಅಧ್ಯಾಯಗಳುಳ್ಳ ಮತ್ತು 1001 ಶ್ಲೋಕಗಳುಳ್ಳ ಮಹಾಕಾವ್ಯವನ್ನು ಸಂಸ್ಕೃತ ಭಾಷೆಯಲ್ಲಿ ಪದ್ಯರೂಪವಾಗಿ ರಚಿಸಿ ಲೋಕೋಪಕಾರ ಮಾಡಿದರು

ಇವರು ತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳು. ಶ್ರೀಮದಾಚಾರ್ಯರನ್ನು ಅವರ ವೃದ್ಧಾಪ್ಯದಲ್ಲಿ ನೋಡಿದ್ದರು. ಶ್ರೀಮದಾಚಾರ್ಯರ ಅವತಾರ ಸಮಾಪ್ತಿಯಾದ ಮೇಲೆ ತಮ್ಮ ಕಿವಿಗೆಬಿದ್ದ ಎಲ್ಲ ಸತ್ಯ ಸಂಗತಿಗಳನ್ನು ಕಾವ್ಯರೂಪವಾಗಿ ನಿರೂಪಿಸಿದರು. ಸುಮಧ್ವವಿಜಯವೆಂಬ ಅಮರಕಾವ್ಯವನ್ನು ರಚಿಸಿ ಆಚಾರ್ಯರ ಕೀರ್ತಿಕಂಬವನ್ನು ನಿಲ್ಲಿಸಿದ ಶ್ರೀನಾರಾಯಣಪಂಡಿತಾಚಾರ್ಯರಂಥ ಪುತ್ರರತ್ನವನ್ನು ಲೋಕಕ್ಕೆ ಅನುಗ್ರಹಿಸಿದ ತ್ರಿವಿಕ್ರಮಪಂಡಿತಾಚಾರ್ಯರೇ ಧನ್ಯರು.

## ಸಮುದ್ರರಾಜನ ಶರಣಾಗತಿ

ಆಧುನಿಕ ವಿಜ್ಞಾನವು ಕಣ್ಣಿಗೆ ಕಾಣುವ ಈ ಸ್ಥೂಲಜಗತ್ತನ್ನು ಮಾತ್ರವೇ ಸತ್ಯವೆಂದು ಒಪ್ಪಿಕೊಳ್ಳುತ್ತದೆ. ಅದರ ವ್ಯಾಪ್ತಿಗೆ ಹೊರತಾದ ಸಂಗತಿಗಳನ್ನು, ಫೆನಾಮಿನ ಅಂದರೆ ಪವಾಡಗಳ ಸಾಲಿಗೆ ಸೇರಿಸಿ ಅವುಗಳ ಬಗ್ಗೆ ತಾಟಸ್ಥ್ಯ ವಹಿಸುತ್ತದೆ: ವಿಜ್ಞಾನವು ತನಗೆ ಅರ್ಥವಾಗದ ಸಂಗತಿಗಳನ್ನು ಹೀಗೆ ಉಪಸಂಹಾರ ಮಾಡುತ್ತದೆ.

ಆದರೆ ಭೌತ ಜಗತ್ತಿನ ವಸ್ತುಗಳು ಗೆಲಿಲಿಯೋ, ಕೆಪ್ಲರ್, ನ್ಯೂಟನ್, ಐನ್‌ಸ್ಟೀನ್ ಮುಂತಾದ ವಿಜ್ಞಾನಿಗಳ ಸಿದ್ಧಾಂತಗಳಿಗೆ ಬದ್ಧವಾಗಿ ಕೆಲಸ ಮಾಡುವುದನ್ನು ನೋಡಿದ ವಿಚಾರಪರರಿಗೆ ಅತೀಂದ್ರಿಯಜಗತ್ತೊಂದಿದೆ ; ಅಲ್ಲಿಯೂ ಇಂಥವೇ ವ್ಯಾಪಾರಗಳನ್ನು ಸೂತ್ರ ರೂಪದಲ್ಲಿ ಸಿದ್ಧಾಂತ ಪಡಿಸಬಹುದು ಎಂದು ಹೇಳಿದರೆ ನಂಬುವುದು ಕಷ್ಟವಾಗುತ್ತದೆ.

ಇಂದಿನ ಭೌತವಿಜ್ಞಾನವು ಜಡ ಚೈತನ್ಯಗಳಿಗೆ ಇರುವ ವ್ಯತ್ಯಾಸ ಅತ್ಯಲ್ಪ ಅಥವಾ ಇಲ್ಲವೆಂದೇ ಹೇಳಬಹುದು—ಎಂಬ ನಿಲುವಿಗೆ ಬಂದು ಮುಟ್ಟಿದೆ. ಅನಿಲ, ಘನ, ದ್ರವ ರೂಪಗಳು ಕೇವಲ ವಸ್ತು ಸ್ಥಿತಿಯ ಬದಲಾವಣೆ ಎಂದು ಎಲ್ಲರೂ ಒಪ್ಪುವ ಮಾತಾದರೂ, ಭೌತವಸ್ತುಗಳ ಅತಿ ಚಿಕ್ಕ ಅಣುವನ್ನು ವಿಭಜಿಸಿದಾಗ ಅವುಗಳು ಕೇವಲ ಶಕ್ತಿ ರೂಪದಲ್ಲಿ ಪ್ರಕಟವಾಗುವುವೆಂಬುದು ಇಂದಿನ ವಿಜ್ಞಾನಕ್ಕೆ ಪ್ರಕಟವಾದ

ಸಂಗತಿ. ಈ ಶಕ್ತಿಯನ್ನು ಶಬ್ದರೂಪವಾಗಿಯೂ, ದೃಶ್ಯರೂಪವಾಗಿಯೂ ಮಾರ್ಪಡಿಸಬಹುದು ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಸಾರ ಮಾಡಬಹುದೆಂಬುದನ್ನೂ ವಿಜ್ಞಾನ ತೋರಿಸಿದೆ.

ಹೀಗಿದ್ದೂ ವಿಜ್ಞಾನವು ಪ್ರಗತಿ ಪಥದಲ್ಲಿ ಹೆಚ್ಚು ಹೆಚ್ಚು ಸಾಧಿಸಿದಷ್ಟೂ ಖಚಿತವಾಗಿ ಗೊತ್ತಿದ್ದ ಸಂಗತಿಗಳ ಸಿದ್ಧಾಂತದ ಬಗೆಗೆ ಸಂದೇಹ ತಾಳುವ ಸ್ಥಿತಿಗೆ ಬಂದಿದೆ. ಗೋಡೆನ್ ಎಂಬ ವಿಜ್ಞಾನಿಯು ಗಣಿತಶಾಸ್ತ್ರದ ಅನೇಕ ಪ್ರಮೇಯಗಳನ್ನು ಅಸತ್ಯ ಎಂದು ಸಿದ್ಧಾಂತ ಮಾಡಿ ತೋರಿಸಿದ್ದಾನೆ. ನ್ಯೂಟನ್ನನ ಚಲನೆಯ ನಿಯಮಗಳು ಐನ್‌ಸ್ಟೀನ್‌ನ ಸಾಪೇಕ್ಷ ವಾದದಿಂದ ಮಾರ್ಪಾಡು ಹೊಂದಿವೆ. ಈ ಸಾಪೇಕ್ಷವಾದವೂ ಸಹ ಕ್ವಾನ್‌ಟಂ ಡೈನಮಿಕ್ಸ್ ಎಂಬ ನೂತನ ಸಿದ್ಧಾಂತದಿಂದ ಪ್ರಭಾವಿತವಾಗಿದೆ. ಬೆಳೆಯುತ್ತಿರುವ ವಿಶ್ವವನ್ನು ಕುರಿತು ಹಾಯ್ಲ ಮತ್ತು ನಾರ್ಲೀಕರರೆಂಬ ವಿಜ್ಞಾನಿಗಳು ಕಣ್ಣಿಗೆ ಕಾಣದ ಅದೆಷ್ಟೋ ವಿಶ್ವಗಳನ್ನು ಗುರುತಿಸಿದ್ದಾರೆ. ಈ ಅತಿ ದೂರದ ನಕ್ಷತ್ರಗಳಿಂದ ಬರುವ ಕ್ವಾಸ್ವಾರ್ ಮುಂತಾದ ಕಿರಣಗಳ ಬಗ್ಗೆ ಸಂಶೋಧನೆ ಇನ್ನೂ ನಡೆಯಬೇಕಾಗಿದೆ.

ಹೀಗೆ ವಿಜ್ಞಾನವು ಭೌತಪ್ರಪಂಚದಲ್ಲೇ ಎಡವಿ ಬೀಳುತ್ತಿರುವಾಗ ಇನ್ನು ಜೈವಿಕ ಜಗತ್ತಿನಲ್ಲಿ, ಮನೋವ್ಯಾಪಾರಗಳ ಜಗತ್ತಿನಲ್ಲಿ ಅದು ಸ್ಥಾಪಿಸಿರುವ ಪ್ರಗತಿ ತೀರಾ ಅಲ್ಪವೆಂದೇ ಹೇಳಬಹುದು.

ಇಂದು ಮನೋವಿಜ್ಞಾನವು ಮನಸ್ಸಿನ ಬೇರೆ ಬೇರೆ ಸ್ತರಗಳನ್ನೂ, ಅವುಗಳ ಶಕ್ತಿ ವಿಶೇಷಗಳನ್ನೂ ಗುರುತಿಸುವುದರಲ್ಲಿ ಕೂಡಾ ಯಶಸ್ಸು ಪಡೆದಿದೆ. ಅತೀಂದ್ರಿಯ ವ್ಯಾಪಾರಗಳನ್ನೂ, ಭೂತ ಪ್ರೇತ ಜಗತ್ತುಗಳನ್ನೂ ಇಂದಿನ ವಿಜ್ಞಾನ ಒಪ್ಪಿಕೊಳ್ಳುತ್ತಿದೆ. ಒಬ್ಬ ವ್ಯಕ್ತಿ ಒಂದು ವಸ್ತುವನ್ನು ಸಂಕಲ್ಪ ಮಾತ್ರದಿಂದಲೇ ನಿರ್ಮಿಸುವುದು, ಒಂದು ಕಡೆಯಿಂದ ಮತ್ತೊಂದು ಕಡೆಗೆ ಅದನ್ನು ಚಲಿಸುವಂತೆ ಮಾಡುವುದು, ವಸ್ತು ಸ್ಥಿತಿಯನ್ನು ಬದಲಾಯಿಸುವುದು, ಶಕ್ತಿಪಾತದಿಂದ ರೋಗಗಳನ್ನು ಗುಣಪಡಿಸುವುದು, ದೂರದ ವಸ್ತುಗಳ ಅತೀಂದ್ರಿಯಜ್ಞಾನ, ಭವಿಷ್ಯವನ್ನು ತಿಳಿಯುವುದು ಇವೇ ಮೊದಲಾದ ಸಂಗತಿಗಳು ಅತೀಂದ್ರಿಯ ಜಗತ್ತಿಗೆ ಸಂಬಂಧಿಸಿದಂತೆ ಯಾವುದೋ ಒಂದು

ನಿಶ್ಚಿತತತ್ತ್ವದಂತೆ ಕೆಲಸ ಮಾಡುತ್ತಿದೆ ಎಂಬುದನ್ನು ಈಗೀಗ ಗುರುತಿಸಿಕೊಳ್ಳುವಂತೆ ಮಾಡಿದೆ. ಜನ್ಮಾಂತರಗಳಲ್ಲಿ, ವಿಜ್ಞಾನಿಗಳಿಗೂ ನಂಬಿಕೆ ಈಗೀಗ ಮೂಡುತ್ತಿದೆ. ಪ್ರೇತ ಜಗತ್ತು ಇರುವ ಬಗೆಗೆ ಆಧಾರಗಳು ದೊರಕುತ್ತಿವೆ. ಮನುಷ್ಯ ಹಾಗೂ ಸಸ್ಯಗಳ ಮೇಲೆ ಇತರ ಗ್ರಹಗಳು ಪ್ರಭಾವ ಬೀರುತ್ತಿವೆ ಎಂಬುದನ್ನು ವೈಜ್ಞಾನಿಕವಾಗಿ ಸಾಧಿಸುವ ಪ್ರಯತ್ನಗಳು ನಡೆಯುತ್ತಿವೆ. ಹೀಗೆ ಮನೋವಿಜ್ಞಾನ ಒಂದು ಕಡೆ, ಅತೀಂದ್ರಿಯ ವಿಜ್ಞಾನ ಮತ್ತೊಂದು ಕಡೆ, ನಮಗೆ ಕಾಣದಿರುವ ಹೊಸ ಜಗತ್ತಿನ ಪರಿಚಯ ಮಾಡಿ ಕೊಡಲು ಹೊರಟಿವೆ.

ನಮ್ಮ ಜನ ಮೊದಲಿನಿಂದಲೂ ವಿಭೂತಿಪುರುಷರೂ, ಸಾಧು ಸತ್ಪುರುಷರೂ, ಜ್ಞಾನಿಗಳೂ, ಯೋಗಿಗಳೂ, ತಪಸ್ವಿಗಳೂ ಇಂಥ ಅದ್ಭುತ ಶಕ್ತಿಯನ್ನೂ—ಪವಾಡ ಶಕ್ತಿಯನ್ನೂ—ಪಡೆದಿದ್ದಾರೆಂದು ನಂಬುತ್ತಾ ಬಂದಿದ್ದಾರೆ. ಇಂದಿಗೂ ನಮ್ಮ ದೇಶದಲ್ಲಿ ಇಂಥ ಅನೇಕ ಪವಾಡಪುರುಷರನ್ನು ಅಪರೂಪವಾಗಿ ಅಲ್ಲಲ್ಲಿ ಕಾಣಬಹುದು.

ಎಂದಮೇಲೆ ಒಬ್ಬ ಯೋಗಿ ಇಲ್ಲವೇ, ಅವತಾರ ಪುರುಷನು ಮಾಡಬಹುದಾದ ಪವಾಡಗಳಿಗೂ, ತೋರಿಸಬಹುದಾದ ಅತೀಂದ್ರಿಯ ಶಕ್ತಿಗಳಿಗೂ ಕೊನೆ ಮೊದಲಿರುವುದೇ ?

ಪತಂಜಲಿಯ ಯೋಗ ಸೂತ್ರದಲ್ಲಿ ಊರ್ಧ್ವರೇತಸ್ಕನಾದ ವ್ಯಕ್ತಿಗೆ ಅಣಿಮಾದಿ ಅಷ್ಟ ಸಿದ್ಧಿಗಳು ಪ್ರಾಪ್ತವಾಗುವುವೆಂದು ಹೇಳಿದೆ ಆಸನ, ಪ್ರಾಣಾಯಾಮಗಳಿಂದ ಚಿತ್ತನಿರೋಧಗೊಳಿಸಿ, ಮನಸ್ಸಿನ ಸಂಕಲ್ಪ ಶಕ್ತಿಯನ್ನು ಅಂತರ್ಮುಖಿಗೊಳಿಸಿದಾಗ ಕುಂಡಲಿನಿಯು ಜಾಗ್ರತವಾಗಿ, ಷಟ್ಚಕ್ರಗಳು ಕಾರ್ಯಾರಂಭ ಮಾಡುವುವೆಂದೂ, ಅಂಥವನಿಗೆ ರಾಕ್ಷಸ ದೇವ ಗಂಧರ್ವ ಸಿದ್ಧಿಗಳು ದೊರಕುವುವೆಂದೂ ಹೇಳುತ್ತಾರೆ. ಇನ್ನು ಸದಾ ಕಾಲ ಭಗವಂತನಲ್ಲಿಯೇ ಮನಸ್ಸನ್ನು ನೆಟ್ಟು ತಮ್ಮ ಬಾಳಿನ ಪ್ರತಿಯೊಂದು ಕ್ಷಣವನ್ನೂ ಲೋಕಕಲ್ಯಾಣಕ್ಕೇ ಮೀಸಲಿಟ್ಟವರ ವಿಷಯದಲ್ಲಿ ಏನು ಹೇಳುವುದು ?

ಶ್ರೀಮದಾಚಾರ್ಯರಂತಹ ಅವತಾರಪುರುಷರ ಪಾಲಿಗೆ ಈ ಬಗೆಯ ಮಹಿಮೆಗಳು ಒಂದು ರೀತಿಯ ಮಕ್ಕಳ ಆಟಿಕೆ ಎನಿಸುತ್ತದೆ. !

ಯೋಗಿಯು ತನ್ನ ತಪಸ್ಸಿನಿಂದ ಪಡೆಯಬಹುದಾದ ಅಷ್ಟಸಿದ್ಧಿಗಳು — ಅಣಿಮಾ ಮಹಿಮಾಚೈವ ಗರಿಮಾ ಲಘಿಮಾ ತಥಾ । ಪ್ರಾಪ್ತಿಃ ಪ್ರಾಕಾಮ್ಯ ಮೀಶತ್ವಂಚಾ ವಶಿತ್ವಂ ಚ ಷ್ಟಸಿದ್ಧಯಃ ॥ ಯಾವುವೆಂದರೆ ಅಣಿಮಾ(ಅತಿ ಸಣ್ಣ ಆಕಾರ ಪಡೆಯುವುದು) ; ಮಹಿಮಾ (ಅತಿ ದೊಡ್ಡ ಆಕಾರ ಪಡೆಯುವುದು); ಗರಿಮಾ (ತುಂಬ ಭಾರವಾಗುವುದು); ಲಘಿಮಾ (ತುಂಬ ಹಗುರವಾಗಿ ಗಾಳಿಯಲ್ಲಿ ಹಾರಾಡುವುದು) ; ಪ್ರಾಪ್ತಿ (ಸಾಮಾನ್ಯವಾಗಿ ಪಡೆಯಲಾಗದ್ದನ್ನು ಪಡೆಯುವುದು) ; ಪ್ರಕಾಮ್ಯ (ಸ್ವಲ್ಪವಾಗಿರುವ ಪದಾರ್ಥಗಳನ್ನು ಹೆಚ್ಚಿಸುವ ಶಕ್ತಿ); ಈಶತ್ವ (ಎಲ್ಲ ಸಂದರ್ಭಗಳಲ್ಲಿಯೂ ಒಡೆತನವನ್ನು ಮಾಡಿ ತನ್ನ ಪ್ರಭಾವವನ್ನು ಬೀರುವುದು) ಮತ್ತು ವಶಿತ್ವ (ಇಂದ್ರಿಯಗಳನ್ನು ನಿಯಮನ ಮಾಡಿಕೊಳ್ಳುವುದು)–ಹೀಗೆ ಯೋಗ ಮಾರ್ಗದಿಂದ ತಪಸ್ವಿಯು ಅತೀಂದ್ರಿಯ ಶಕ್ತಿಗಳನ್ನು ಪಡೆಯಬಲ್ಲನೆಂಬುದಕ್ಕೆ ಇಂಥ ಶಕ್ತಿ ಪಡೆದವರು ಈಗಲೂ ಇದ್ದಾರೆ ; ಹಿಮಾಲಯಪರ್ವತದ ಗಿರಿಗಹ್ವರಗಳು ಇಂಥವರ ನೆಲೆವೀಡಾಗಿವೆ.

ತಮ್ಮ ತಪಶ್ಶಕ್ತಿಯನ್ನೆಲ್ಲಾ ಲೋಕಕಲ್ಯಾಣಕ್ಕಾಗಿಯೇ ಮೀಸಲಿಟ್ಟ ಮಹಾಪುರುಷರಿಗೆ ಪಂಚಭೂತಗಳ ಮೇಲೆ ಪ್ರಭಾವವನ್ನು ಬೀರಲು ಸಾಧ್ಯ ವಾದರೆ ಇದರಲ್ಲಿ ವಿಶೇಷವೇನು ?

ಶ್ರೀಮಧ್ವಾಚಾರ್ಯರ ಜೀವನದಲ್ಲೂ ಇಂತಹ ಅನೇಕ ಅತಿಮಾನವ ವ್ಯಾಪಾರಗಳು ನಡೆದಿರುವುದನ್ನು ಕಾಣಬಹುದು

ಅಂತಹ ಕೆಲವು ಘಟನೆಗಳು ಇಲ್ಲಿ ಪ್ರಸ್ತಾಪಿಸಲ್ಪಟ್ಟಿವೆ.

ಉಡುಪಿಗೂ ಮಲ್ಪೆಗೂ ಸುಮಾರು ಮೂರುಮೈಲಿ ದೂರ. ಅದೊಂದು ನಿಸರ್ಗದ ಚಲುವಿನ ಸಮುದ್ರತೀರಪ್ರದೇಶ. ಇಲ್ಲೇ ಶ್ರೀಮದಾಚಾರ್ಯರಿಗೆ ಶ್ರೀಕೃಷ್ಣನ ಪ್ರತಿಮೆಯು ವ್ಯಾಪಾರಿಯ ನಾವೆಯಿಂದ ದೊರೆತದ್ದು.

ಆಚಾರ್ಯರು ಮೇಲಿಂದ ಮೇಲೆ ಸಮುದ್ರಸ್ನಾನಕ್ಕೆಂದು ಮಲ್ಪೆಗೆ ಹೋಗುತ್ತಿದ್ದರು. ಎಷ್ಟೋ ಬಾರಿ ಅವರು ಅಲ್ಲಿನ ಸಮುದ್ರ ತೀರದಮರಳು ದಂಡೆಯಲ್ಲಿ ಕುಳಿತುಕೊಂಡು ತಮ್ಮ ಶಿಷ್ಯರಿಗೆ ಪ್ರವಚನವನ್ನೂ ನಡೆಸುತ್ತಿದ್ದರು.

ಒಂದು ಪೌರ್ಣಮಿಯ ದಿನ ಶ್ರೀಮದಾಚಾರ್ಯರು ಚಂದ್ರಗ್ರಹಣದ ನಿಮಿತ್ತ ಸಮುದ್ರದಲ್ಲಿ ಸ್ನಾನ ಮಾಡಲು ಶಿಷ್ಯರೊಡನೆ ಮಲ್ಪೆಗೆ ಬಂದಿದ್ದರು

ಸಂಜೆ ಕಳೆದು ರಾತ್ರಿಯಾಗುತ್ತಿದ್ದಂತೆ ಸಮುದ್ರದ ಅಲೆಗಳು ಅಲ್ಲೋಲ ಕಲ್ಲೋಲವಾಗಿ ಹುಚ್ಚೆದ್ದು ಕುಣಿಯ ತೊಡಗಿದ್ದವು. ಪ್ರಚಂಡವಾದ ಬಿರುಗಾಳಿ ಬೀಸಿ, ಆವೆಗಾತ್ರದ ಅಲೆಗಳನ್ನು ಎಬ್ಬಿಸುತ್ತಿತ್ತು.

ಈ ಅಲೆಗಳೆತ್ತರವನ್ನು ನೋಡಿದರೆ ಸಮುದ್ರ ರಾಜನು ಶ್ರೀಮಧ್ವಾಚಾರ್ಯರನ್ನು ತೆಗಳಲು ಬಂದ ದುಷ್ಟರನ್ನು ಹೆದರಿಸಿ ಶಿಕ್ಷಿಸುವಂತೆ ತೋರುತ್ತಿತ್ತು. ಭಾವುಕರ ಕಣ್ಣಿಗೆ, ಗುರು ರಕ್ಷಕನಾದ ದೊರೆಯು, ತನ್ನ ಗುರುವನ್ನು ನಿಂದಿಸುವುದನ್ನು ಕೇಳಿದಾಗ ಕೆರಳಿ ಕೋಪದಿಂದ ಶಿಕ್ಷಿಸಲು ಕೈಗಳನ್ನು ಎತ್ತಿಕೊಂಡು ಬರುವಂತೆ ತೋರುತ್ತಿತ್ತು.

ಬಹು ಅಪರೂಪವಾಗಿ ತನ್ನ ಮನೆಗೆ ಬಂದ ಅತಿಥಿಯನ್ನು ಸ್ವಾಗತಿಸಿ ಪ್ರೀತಿ ಆದರಗಳಿಂದ ಒಳಗೆ ಕರೆದೊಯ್ಯುವ ಆತಿಥೇಯನಂತೆ, ಸಮುದ್ರದ ಮೊರೆತ ಸ್ತೋತ್ರ ಮಾಡುತ್ತಿರುವಂತೆ ಕೇಳಿಸಿತು. ನೊರೆಯಿಂದ ಕೂಡಿದ ಎತ್ತರವಾದ ಬಿಳಿಯ ಅಲೆಗಳು ಶ್ರೀಮದಾಚಾರ್ಯರಿಗೆ ಅರ್ಘ್ಯಪಾದ್ಯಗಳನ್ನು ಸಮರ್ಪಿಸುತ್ತಿರುವಂತೆ ತೋರಿತು. ಇಬ್ಬರೂ ಗುಣಿಗಳೇ. ಸಮುದ್ರ ರಾಜನ ಭಕ್ತಿ ಎಂಬ ಗುಣದಿಂದ ಶ್ರೀಮದಾಚಾರ್ಯರು ಪ್ರಸನ್ನರಾಗಿದ್ದಾರೆ. ಅಂತಲೇ ಸಂಕೋಚದಿಂದ ಹಿಂಜರಿದು ಸಮುದ್ರರಾಜನು ಉಪ್ಪಾದಂತೆ ಕಂಡನು.

ಶ್ರೀಮದಾಚಾರ್ಯರು ತಮ್ಮ ಇಂಪಾದ ಆದರೆ ಗಾಂಭೀರ್ಯ ಕಂಠದಿಂದ 1 ಸಮುದ್ರದ ಅಲೆಗಳನ್ನು ಸ್ತಬ್ಧಗೊಳಿಸುವ ರೀತಿಯಲ್ಲಿ ವೇದ

---

1) ಅಂಭೋಧೇಸ್ತ್ವರಿತತರೋರ್ಮಿಪಾಣಿಮೃಷ್ಟೇ
ಸ್ವಚ್ಛೇsಸೌ ವಿಕಟತಟಾಸನೇ ನಿಷಣ್ಣಃ ।
ವ್ಯಾಚಖ್ಯಾವತಿಚಿರಮೈತರೇಯಶಾಖಾ-
ಸೂಕ್ತಾನಿ ಪ್ರಭುರತಿಸುಂದರಪ್ರಕಾರಂ ॥
ಗಾಂಭೀರ್ಯೋತ್ಸ್ವನಮಧರೀಕರೋತಿ ಸಿಂಧೋ.
ಶ್ರಾವ್ಯತ್ವಂ ವಹತಿ ತಥಾಪ್ಯಹೋ ಸ್ವನೋsಸ್ಯ ।

ಮುಂದಿನ ಪುಟಕ್ಕೆ

ಮಂತ್ರಗಳನ್ನು ಅಧ್ಯಯನ ಮಾಡುತ್ತಿದ್ದರು. ಅವರು ಐತರೇಯ ಸೂಕ್ತಗಳನ್ನು ಆ ದಿನ ವ್ಯಾಖ್ಯಾನ ಮಾಡುತ್ತಿದ್ದರು.

ಹೀಗೆ ಪ್ರವಚನ ಸಾಗಿರಲು, ಬಿರುಗಾಳಿಯಿಂದ, ಉರಿಯುತ್ತಿದ್ದ ಹಣತೆಯ ದೀಪವು ಆರಿಹೋಯಿತು. ಕೂಡಲೇ ಸಮುದ್ರದ ದಂಡೆಯೂ ಕತ್ತಲೆಯಿಂದ ತುಂಬಿತು. ಆಗ ಆಚಾರ್ಯರು ತಮ್ಮ ಕಾಲಿನ ಹೆಬ್ಬೆರಳಿನ ಉಗುರನ್ನು ಉಜ್ಜಲು ಅದು ದೀಪದಂತೆ ಪ್ರಕಾಶಮಾನವಾಗಿ ಪ್ರಜ್ವಲಿಸಿತು. ಆ ದೀಪದ ಬೆಳಕಿನಲ್ಲಿ ಸತ್ಯತೀರ್ಥರು ಶ್ರೀಮದಾಚಾರ್ಯರ ಭಾಷ್ಯಗಳನ್ನು ಸುಶ್ರಾವ್ಯವಾಗಿ ಓದುತ್ತಾ ಹೊರಟರು ! ಶ್ರೀಮದಾಚಾರ್ಯರು ಅವುಗಳಿಗೆ ತಮ್ಮ ವ್ಯಾಖ್ಯಾನವನ್ನು ನೀಡುತ್ತಾ ಹೊರಟರು. ಈ ಅದ್ಭುತವನ್ನು ನೋಡಿ ಅಲ್ಲಿದ್ದವರು ಮಾತ್ರವಲ್ಲ, ದೇವತೆಗಳೂ ಸಹ ಬೆರಗಾದರಂತೆ.

ಆಚಾರ್ಯರ ಪ್ರವಚನವನ್ನು ಕೇಳಲು ಬಂದ ದೇವತೆಗಳು ಆಚಾರ್ಯರನ್ನು ಸೇವಿಸಿ, ಸ್ತುತಿಸಿ ಹೋಗುತ್ತಿರುವಂತೆ ಆಕಾಶದಲ್ಲಿ ನಕ್ಷತ್ರಗಳು ಹೊಳೆಯುತ್ತಿದ್ದವು.

ಚಂದ್ರನು ಬರಲಿರುವ ಗ್ರಹಣವನ್ನು — ಶತ್ರು ಭಯವನ್ನು – ಕಂಡು ತಲ್ಲಣಗೊಂಡಂತೆ ಮಂಕಾಗಿದ್ದನು. ಚಂದ್ರಗ್ರಹಣವಾಗಿ ಅವನು ಕಣ್ಮರೆಯಾದನು ; ಅವನು ಲೋಕೋಪಕಾರಕ್ಕೆಂದು ಪುನರ್ಜನ್ಮ ಪಡೆದಂತೆ ಮತ್ತೆ ಕಾಣಿಸಿಕೊಂಡನು.

---

ಪೂರ್ಣೇಂದುಪ್ರಭವದನಃ ಕ ಏಷ ಧನ್ಯೋ
ಮತ್ವೇತ್ಥಂ ಜನಜಲಧಿಸ್ತಮಾಶು ಪರ್ಯೈತ್ ॥
ಮ ॥ ವಿ ॥ ಸರ್ಗ 16–ಶ್ಲೋಕ 16–17

ವ್ಯಾಖ್ಯಾತಾ ನಿಶಿ ಸ ಕದಾಚನ ಪ್ರದೀಪೇ
ಸಂಶಾಂತೇ ಪುನರಪಿ ವಾಚಯಾಂ ಬಭೂವ ।
ಶಿಷ್ಯಾನ್ಸ್ವಾನ್ ಪುರುಕರುಣಾಂಬುಧಿರ್ನಿಜಾಂಘ್ರೇ
ರಂಗುಷ್ಠಸ್ಫುಟನಖರಾಂತರೋಚಿಷ್ಟೈವ ॥
ಮ ॥ ವಿ ॥ ಸರ್ಗ 16–ಶ್ಲೋಕ–6

ಶ್ರೀಮದಾಚಾರ್ಯರು ಸಮುದ್ರಸ್ನಾನ ಮಾಡಲು ತಮ್ಮ ಶಿಷ್ಯರೊಡನೆ ಸಮುದ್ರಕ್ಕೆ ಇಳಿದರು.

ಆ ಸಮಯದಲ್ಲಿ ಸಮುದ್ರದ ಅಲೆಗಳು ಪ್ರಚಂಡವಾಗಿ ಮುಗಿಲೆತ್ತರ ಎದ್ದು, ಒಳಗೆ ಬಂದವರನ್ನು ನುಂಗುವ ರಾಕ್ಷಸರಂತೆ ಆರ್ಭಟಿಸಿದವು.

ಆಚಾರ್ಯರು ಮಾತ್ರ ಹೇಗೋ ಈ ಸಮುದ್ರ ಸ್ನಾನಕ್ಕೆ ಸಿದ್ಧರಿದ್ದರು ; ಆದರೆ ಅವರ ಶಿಷ್ಯರು ಈ ಅಲ್ಲೋಲ ಕಲ್ಲೋಲ ಸಮುದ್ರದಲ್ಲಿ ಇಳಿಯಲು ಹಿಂಜರಿದರು.

ಅವರ ಭೀತಮುಖಗಳನ್ನು ನೋಡಿ ಕರುಣಾಸಮುದ್ರರಾದ ಆಚಾರ್ಯರು ಮನಸ್ಸಿನಲ್ಲೇ ಸಮುದ್ರರಾಜನನ್ನು ಧ್ಯಾನಿಸಿದರು. ಶಿಷ್ಯರ ಬಳಿ ಇದ್ದ ಮಂತ್ರಾಕ್ಷತೆಯನ್ನು ನೀರಿನಲ್ಲಿ ಎಸೆದರು.

ಅದೇನು ಆಶ್ಚರ್ಯ ! 1 ಸಮುದ್ರದ ಅಲೆಗಳು ಮಂತ್ರಮುಗ್ಧವಾದಂತೆ, ಆಚಾರ್ಯರ ಪ್ರಭಾವದಿಂದ ವಶೀಕರಣಕ್ಕೆ ಒಳಪಟ್ಟಂತೆ ನಿಸ್ತರಂಗವಾಯಿತು. ಎಳೆಯ ಮಕ್ಕಳೂ ಸಹ ಸ್ನಾನ ಮಾಡಲು ಅನುಕೂಲವಾದ ಕೆರೆಯಂತೆ ಸ್ತಬ್ಧವಾಯಿತು.

ಶ್ರೀಮದಾಚಾರ್ಯರೂ ಅವರ ಶಿಷ್ಯರೂ ಸಂತೋಷದಿಂದ ಕಡಲಿಗೆ ಇಳಿದು ಸಮುದ್ರ ಸ್ನಾನವನ್ನು ಶಾಸ್ತ್ರೋಕ್ತವಾಗಿ ಮಾಡಿದರು.

---

1) ಆದ್ರಾಂಗಾಃ ಸಪದಿ ನಿಮಜ್ಜಮಾನಾತ್ಸರಸ್ಯಾಂ
   ಕಣ್ವಸ್ಯ ದ್ವಿಜವೃಷಭಸ್ಯ ವಲ್ಲಭಾಯಾಂ ।
ತತ್ರಾಯನ್ ವಿರಕಿಣೋಪರಾಗಹೇತೋ
   ರ್ಗ್ರಾಮೀಣಾ ಅಪಿ ಸಕಲಾಃ ಸಬಾಲವೃದ್ಧಾಃ ॥
ಸಂಮೋದಾತ್ತರಲತರೋ ದ್ರುತಾಭಿಗಾಮೀ
   ಗಂಭೀರಸ್ವನಮತಿಮಾನ್ ಸುಫೇನಹಾಸಃ ।
ವೀಚ್ಯಂಗೈರಧಿಕತರೈರಿಹಾಧಿವೇಲಂ
   ಮಧ್ವಾಯ ಪ್ರಣತಿಮಿವ ವ್ಯಧಾತ್ಸಮುದ್ರಃ ॥

ಮ ॥ ವಿ ॥ ಸರ್ಗ 16–ಶ್ಲೋಕ 11–14

ಅನಂತರ ಎಲ್ಲರೂ ಶ್ರೀಮದಾಚಾರ್ಯರು ಸಮುದ್ರದ ಮೇಲೆ ಬೀರಿದ ಪ್ರಭಾವವನ್ನು ಕೊಂಡಾಡುತ್ತಾ ಉಡುಪಿಗೆ ಹಿಂತಿರುಗಿದರು.

ಶಿಷ್ಯರು ಅವರ ಅಚಿಂತ್ಯಾದ್ಭುತ ಮಹಿಮೆಯನ್ನು ಹಾಡಿ ಹೊಗಳಿದರು.

## ಕಲಿಯುಗದ ಭೀಮಸೇನ

ಭಾವೀ ಬ್ರಹ್ಮರಾದ ವಾಯುದೇವರಿಗೆ ದ್ವೈತಸಿದ್ಧಾಂತದಲ್ಲಿ ಅತ್ಯಂತ ಪೂಜ್ಯ ಸ್ಥಾನ ಕೊಡಲಾಗಿದೆ.

ಮಧ್ವ ಸಿದ್ಧಾಂತದಲ್ಲಿ ತಾರತಮ್ಯವು ಅತ್ಯಂತ ಮುಖ್ಯವಾದ ಒಂದು ಪ್ರಮೇಯ. ಜೀವರು ನೀಚೋಚ್ಚ ಭಾವವನ್ನು ಹೊಂದಿರುತ್ತಾರೆಂಬುದು ಶ್ರೀಮದಾಚಾರ್ಯರ ಮತ. ಶ್ರೀಮನ್ಮಹಾವಿಷ್ಣುವು ಹದಿನಾಲ್ಕು ಲೋಕಗಳನ್ನು ರಕ್ಷಿಸುವುದಕ್ಕೋಸ್ಕರ ಬ್ರಹ್ಮಾದಿ ದೇವತೆಗಳನ್ನು ಸೃಷ್ಟಿಸಿ ಅವರ ಅಂತರ್ಯಾಮಿಯಾಗಿದ್ದುಕೊಂಡು ರಕ್ಷಣೆ ಮಾಡುತ್ತಿದ್ದಾನೆಂದು ಮಾಧ್ವರ ನಂಬಿಕೆ.

ಇಂಥ ತಾರತಮ್ಯಕ್ಕೆ ತೈತ್ತಿರೀಯ ಶ್ರುತಿಯ 'ತಸ್ಯೇಯಂ ಪೃಥಿವೀ ಸರ್ವವಿತ್ತಸ್ಯ ಪೂರ್ಣಾ ಸ್ಯಾತ್' ಎಂಬ ಮಾತೂ ಆಧಾರವಾಗಿದೆ.

ಶ್ರೀಹರಿಯೇ ಸರ್ವತಂತ್ರಸ್ವತಂತ್ರನಾದ ಪ್ರಭು, ಜಗತ್ತಿನ ಚೇತನಾಚೇತನದ ಸ್ವಾಮಿ. ಬಿಂಬರೂಪಿಯಾದ ಅವನು ನಿತ್ಯಮುಕ್ತನಾದ ಜಗತ್ತಿನ ನಿಯಾಮಕನು.

ಲಕ್ಷ್ಮೀದೇವಿಯು ನಿತ್ಯ ಮುಕ್ತಳಾಗಿ ಶ್ರೀಹರಿಗೆ ಅಧೀನಳಾಗಿ ಜಡ ಪ್ರಕೃತಿಗೆ ನಿಯಾಮಕಳು. ಬ್ರಹ್ಮಾದಿ ದೇವತೆಗಳು ಲಕ್ಷ್ಮೀದೇವಿ ಶ್ರೀ ಹರಿಯರ ಅಧೀನರು. ಸಾತ್ವಿಕಜೀವರಾಶಿಯಲ್ಲಿ ದೇವತಾ, ಋಷಿ, ಪಿತೃ, ಚಕ್ರವರ್ತಿ ಮನುಷ್ಯರೆಂದು ಐದು ಗಣಗಳಿರುವುವು.

ವಾಯು ಜೀವೋತ್ತಮನು, ಅವನು ಜಗದ್ಗುರು, ಅವನು ಜ್ಞಾನಿ, ಮುಕ್ತ, ಹರಿ ಸೇವೆಯನ್ನು ನಿಷ್ಠೆಯಿಂದ ಮಾಡುವವನು. ಅವನು

ಭಗವಂತನ ಕಾರ್ಯಸಾಧನೆಗಾಗಿ ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಅವತಾರ ಮಾಡಿರುವನೆಂದು ಪ್ರತೀತಿ ಇದೆ.

ಶ್ರೀಮದಾಚಾರ್ಯರು ವಾಯುದೇವರ ಅವತಾರವೆಂಬುದನ್ನು ಅವರ ಬಾಲ್ಯದಿಂದಲೇ ತೋರಿಸುತ್ತಾ ಬಂದಿದ್ದರು.

ಅವರು ವಾತಾತ್ಮಜರೆಂಬುದನ್ನು ತೋಂಟತಿಲ್ಲಾಯರ ಗುರುಕುಲದಲ್ಲಿ ಇದ್ದಾಗಲೇ ತೋರಿಸಿದ್ದರು. ಗುರುಗಳೊಡನೆ ಹೂಡಿದ ಸ್ಪರ್ಧೆಯಲ್ಲಿ ಗಾಳಿಯನ್ನು ಕುಡಿದುಕೊಂಡೇ ಒಂದು ವಾರ ಇದ್ದರು. ಅನಂತರ ಕಿವಿಯಲ್ಲಿ ಗಾಳಿಯನ್ನು ಊದಿ ಗುರುಪುತ್ರನ ಶಿರೋವ್ಯಾಧಿಯನ್ನು ಪರಿಹರಿಸಿದ್ದರು. ಉತ್ತರಭಾರತದ ಯಾತ್ರೆಯಲ್ಲಿ ಗಂಗಾನದಿಯ ನೀರಿನ ಮೇಲೆ ನಡೆದುಕೊಂಡು ಹೋಗಿದ್ದರು, ವಿಶಾಲಬದರಿಯಲ್ಲಿದ್ದ ಶ್ರೀಬಾದರಾಯಣದೇವರನ್ನು ನೋಡಲು ಹೋದಾಗ, ಶಿಖರ ಶಿಖರಗಳನ್ನು ಹಾರಿಕೊಂಡು ಹೋಗಿದ್ದರು. ಕಳಸಗ್ರಾಮದ ಬಳಿ ಭದ್ರನದಿಗೆ ಸೇತುವೆಯಾಗಿ ಬಿಟ್ಟದಂತಹ ಕಲ್ಲನ್ನು ತಂದಿಟ್ಟರು ಗೋಪಕರಾಜನ ಕಣ್ಣಿಗೆ! ಮಣ್ಣೆರಚಿ, ವಾಯುವಿನಂತೆ ಕಣ್ಮರೆಯಾಗಿದ್ದರು-ಹೀಗೆ ತಾವು ವಾಯುದೇವರ ಅಂಶವೆಂಬುದನ್ನು ಅನೇಕ ಸಲ ತೋರಿಸಿದ್ದರು.

ಅವರ ಭೀಮಶಕ್ತಿಯನ್ನು ನೋಡಿದವರು ಆಚಾರ್ಯರನ್ನು ಉಪೇಕ್ಷಿಸುವಂತೆ ಇರಲಿಲ್ಲ. ಸಹಸ್ರ ಸಹಸ್ರ ದೊಡ್ಡ ಬಾಳೆಯ ಹಣ್ಣುಗಳನ್ನು ಊಟವಾದಮೇಲೆ ತಿಂದು ಜೀರ್ಣಿಸಿಕೊಳ್ಳುವ ಶಕ್ತಿ ಅವರಲ್ಲಿತ್ತು ; ಕೊಡಗಟ್ಟಲೆ ಹಾಲನ್ನು ಕುಡಿದು ಜೀರ್ಣಿಸಿಕೊಳ್ಳುವ ಸಾಮರ್ಥ್ಯವೂ ಅವರಿಗೆ ಇತ್ತು.

ಇಂಥವರು ಭಕ್ತಾನುಕಂಪಿತರಾಗಿದ್ದರೆಂಬುದು ಅಚ್ಚರಿಯ ಮಾತು.

---

1) ತೀರ್ಥಾರ್ಥಂ ಪೃಥುತರವಪ್ರಪಾತಿವರಾಂ
ಧಾರಾಣಾಂ ರಯಸಹನಕ್ಷಮಾಂ ಮಹೇಶ್ವಃ ।
ಆನೀತಾಂ ದಶಶತಪುಂಭಿರತ್ಯಶಕ್ತ್ಯಾ
ಪ್ರೇಕ್ಷ್ಯೋಚೇ ವಿಪುಲಶಿಲಾಂ ಕ್ವಚಿತ್ಸ ಮುಕ್ತಾಮ್ ||
ಮ ॥ ವಿ ॥ ಸರ್ಗ 16–ಶ್ಲೋಕ 7

ಒಮ್ಮೆ ಒಂದು ಊರಿನಲ್ಲಿ ಶ್ರೀಮದಾಚಾರ್ಯರನ್ನು ಪರೀಕ್ಷಿಸಲು ಊರಿನ ಶ್ರೀಮಂತರೆಲ್ಲರೂ ಸೇರಿ ಸಾವಿರ ಜನರ ಸಂತರ್ಪಣೆಗಾಗುವಷ್ಟು ಅನ್ನದ ರಾಶಿಯನ್ನು ಅಡಿಗೆ ಮಾಡಿಸಿದ್ದರು. ಶ್ರೀಮದಾಚಾರ್ಯರನ್ನು ಭೋಜನಕ್ಕೆ ಆಹ್ವಾನಿಸಿದಾಗ, ಇದನ್ನೆಲ್ಲಾ ತಾವೊಬ್ಬರೇ ಉಂಡು ಮುಗಿಸಿ ಶ್ರೀಮಂತರ ಅಹಂಕಾರವನ್ನು ನಾಶಮಾಡಿದ್ದರು.

ಮತ್ತೊಮ್ಮೆ ಬಡವರಾದರೂ ಭಕ್ತರಾಗಿದ್ದ ಸದ್ಗೃಹಸ್ಥರೊಬ್ಬರು ಆಚಾರ್ಯರನ್ನು ಭೋಜನಕ್ಕೆ ಆಹ್ವಾನಿಸಿದ್ದರು. ಆದರೆ ಅವರ ಶಿಷ್ಯ ಪರಿವಾರವೆಲ್ಲಾ ಭೋಜನಕ್ಕೆ ಬಂದುಬಿಟ್ಟಿತು. ಮಾಡಿದ್ದ ಅಡಿಗೆ ಸಾಲದಾಗಿತ್ತು. ಆಗ ಶ್ರೀಮದಾಚಾರ್ಯರು ತಮ್ಮ ಕಮಂಡಲದ ತೀರ್ಥವನ್ನು ಹಾಕಿ, ತುಳಸಿದಳವನ್ನು ಸಮರ್ಪಿಸಿ, ಅಡಿಗೆ ಅಕ್ಷಯವಾಗಲೆಂದು ಹರಸಿದಾಗ, ಅನ್ನಪೂರ್ಣೆಯೇ ಬಡಿಸಲು ನಿಂತಂತೆ, ಹತ್ತಾರು ಜನಕ್ಕೆಂದು ಮಾಡಿದ್ದ ಅಡಿಗೆ ಸಹಸ್ರಾರು ಜನಕ್ಕೆ ಒದಗಿಬಂದಿತ್ತು.

ಹೀಗೆ ಹಲವು ಪವಾಡಗಳನ್ನು ಮಾಡಿದ ಶ್ರೀಮದಾಚಾರ್ಯರನ್ನು ನೋಡಿದ ಜನ ಹನುಭೀಮಮಧ್ವರನ್ನು ಏಕೀಕರಿಸಿ ಪೂಜಿಸುತ್ತಿದ್ದರು.

ಆಚಾರ್ಯರ ರೂಪವೂ ರಮಣೀಯವಾಗಿಯೇ ಇತ್ತು. ಅವರು ಪೂಜೆಗೆ ಕುಳಿತರೆಂದರೆ ನೋಡಲು ಎರಡು ಕಣ್ಣು ಸಾಕಾಗುತ್ತಿರಲಿಲ್ಲ. ಅವರು ಉಪನಿಷತ್ತುಗಳ ಪ್ರವಚನಕ್ಕೆ ಆರಂಭಿಸಿದರೆ ದೇವತೆಗಳೂ ಬಂದು ಕೇಳುತ್ತಿದ್ದರು. ಇಂಥ ಮಹಾಮಹಿಮೆಯುಳ್ಳ ಅವರನ್ನು ಹೇಗಾದರೂ ನಿವಾರಿಸಿಕೊಳ್ಳಲು ಹಲವು ಧೂರ್ತರು ಒಂದು ಸಂಚನ್ನು ಸಿದ್ಧಗೊಳಿಸಿದರು.

ಈ ಸಂಚಿನ ಸೂತ್ರಧಾರರು ಕೆಲವು ಅದ್ವೈತಿಗಳೇ ಆಗಿದ್ದರು.

ಅವರು ಗಂಡವಾಟನೆಂಬ ಬ್ರಾಹ್ಮಣನನ್ನು ಶ್ರೀಮಧ್ವಾಚಾರ್ಯರ ಮೇಲೆ ಎತ್ತಿಕಟ್ಟಿದರು. ಇವನಿಗೆ ಗಂಡವ್ವಾಟ, ಕೊಡ್ಡಿವಾಡಿ ಎಂಬ ಹೆಸರುಗಳೂ ಇದ್ದವು. ಇವನು ತನ್ನ ಸಹೋದರ ಗಂಡವಾಟನೊಡನೆ ಸೇರಿಕೊಂಡು ಆ ಪ್ರದೇಶದಲ್ಲಿನ ಸಜ್ಜನರಿಗೆ ಬಹುವಾಗಿ ಕಿರುಕುಳ ಕೊಡುತ್ತಿದ್ದನು.

ದೇವರು ಈ ಸಹೋದರರಿಗೆ—ರಾವಣ ಕುಂಭಕರ್ಣರಂತಿದ್ದ ಈ ಸಹೋದರರಿಗೆ—ಅದ್ಭುತವಾದ ದೇಹಶಕ್ತಿಯನ್ನು ಕೊಟ್ಟಿದ್ದನು. ಅವರು

ಚೆನ್ನಾಗಿ ತಿಂದು, ವ್ಯಾಯಾಮಮಾಡಿ, ಒಳ್ಳೆ ಮದಗಜಮಲ್ಲರಾಗಿ ಮೆರೆಯುತ್ತಿದ್ದರು. ಅವರು ತಮ್ಮ ಗರಡಿಯಲ್ಲಿ ಅನೇಕ ಶಿಷ್ಯರನ್ನು ಮಲ್ಲಯೋಧರನ್ನಾಗಿ ಶಿಕ್ಷಣ ಕೊಟ್ಟಿದ್ದರು.

ಒಮ್ಮೆ ಈ ಸಹೋದರರು ಪ್ರಯಾಣ ಹೊರಟಿದ್ದರು. ಅವರು ಆ ಊರಿನ ಶ್ರೀಕಾಂತೇಶ್ವರ ದೇವಾಲಯದ ಬಳಿಗೆ ಬರುತ್ತಿದ್ದರು. ಅಲ್ಲಿ ದೇವಸ್ಥಾನದ ಮುಂದೆ ಒಂದು ಧ್ವಜಸ್ತಂಬವನ್ನು ನೆಡುವ ಕಾರ್ಯ ನಡೆದಿತ್ತು. ಸುಮಾರು ಮೂವತ್ತು ಕೆಲಸಗಾರರು ಈ ಸಾಹಸಕಾರ್ಯವನ್ನು ಕಷ್ಟದಿಂದ ಮಾಡುತ್ತಿದ್ದರು.

ಇದನ್ನು ನೋಡಿದ ಕೊಡಿಪಾಡಿ ಸಹೋದರರು ಅವರಿಗೆ ನೆರವಾಗಲು ಬಂದರು. ಅವರಲ್ಲಿ ಒಬ್ಬ ಕೊಡಿಪಾಡಿಯು ತಾನೊಬ್ಬನೇ ಈ ಕಲ್ಲಿನ ಕಂಬವನ್ನು ಹೊತ್ತು ನಡೆದು ಅದನ್ನು ಸ್ವಸ್ಥಾನದಲ್ಲಿ ಇರಿಸಿದನು.

ಅವನು ಬಾಲಕನಾಗಿರುವಾಗಲೇ ಇಂಥ ಅಪ್ರತಿಮ ಶೌರ್ಯ ಸಾಹಸಗಳಿಂದ ಮೆರೆದಿದ್ದನು. ಅವನು ಹದಿನೆಂಟರ ಯುವಕನಾಗಿರುವಾಗ ಊರಿನ ಮುಖಂಡನೊಬ್ಬನ ತೆಂಗಿನ ತೋಟಕ್ಕೆ ಹೋಗಿದ್ದಾಗ ತನಗೆ ಬೇಕಾದಷ್ಟು ಕಾಯಿಗಳನ್ನು ತೆಂಗಿನ ಮರಗಳನ್ನು ಅಲ್ಲಾಡಿಸಿ ಉದುರಿಸಿ ತೆಗೆದುಕೊಂಡಿದ್ದನು.

ಇಂಥ ಬಲಭೀಮನಾದ ಜಗಜಟ್ಟಿಯನ್ನು ಹಣದ ಪ್ರಲೋಭದಿಂದ ವಶಪಡಿಸಿಕೊಂಡು, ಧೂರ್ತರು ಶ್ರೀಮಧ್ವಾಚಾರ್ಯರ ಮೇಲೆ ಸೇಡು ತೀರಿಸಿಕೊಳ್ಳಲು ಯೋಚಿಸಿದ್ದರು.

ಅವರಲ್ಲಿ ಒಬ್ಬ ಧೂರ್ತನು ಆಚಾರ್ಯರ ಬಳಿಗೆ ಬಂದು, "ಸ್ವಾಮಿ ತಮ್ಮಲ್ಲಿ ಒಂದು ಪ್ರಾರ್ಥನೆ ಇದೆ, ನಡೆಸಿಕೊಡಬೇಕು"-ಎಂದನು.

"ಏನದು ಹೇಳಿ !"

"ಈ ಸಹೋದರರು ನಮ್ಮ ಊರಿನ ಮಲ್ಲರು, ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದರೂ ಹೊಟ್ಟೆಪಾಡಿಗಾಗಿ ಗರಡಿ ಮನೆ ನಡೆಸುತ್ತಿದ್ದಾರೆ. ಅವರಿಗೆ ತಮ್ಮ ಬಳಿ ನಿಂತು ಸೇವೆ ಮಾಡಬೇಕೆಂದು ಆಸೆಯಾಗಿದೆ, ಇದಕ್ಕೆ ಅವಕಾಶ ಕೊಟ್ಟು ಕಾಪಾಡಬೇಕು"-ಎಂದನು.

"ಅವರಿಂದ ನಮಗೆ ಯಾವ ಸೇವೆ ಸಲ್ಲಲು ಸಾಧ್ಯ?"

"ಅವರು ಭೀಮಕಾಯದವರು. ಅಡಿಗೆಗೆ ಬೇಕಾದ ಸೌದೆ ಸೀಳುತ್ತಾರೆ, ತಮ್ಮ ಮೇನೆಯನ್ನು ಹೊರಬಲ್ಲರು, ಅಡಿಗೆ ಮಾಡಬಲ್ಲರು, ತಮ್ಮ ದೇಹವನ್ನು ನೀವಿ ಆಯಾಸವನ್ನು ಪರಿಹರಿಸಬಲ್ಲರು."

"ತುಂಬಾ ಸಂತೋಷ. ನಮಗೂ ವಯಸ್ಸಾಯಿತು. ದೇಹದಲ್ಲಿ ಹಲವೆಡೆಗಳಲ್ಲಿ ನೋವು ಕಾಣಿಸಿಕೊಂಡಿದೆ. ಅದನ್ನು ನೀವಿ ಸರಿಪಡಿಸಬಲ್ಲರೇ?" ಎಂದು ನಟಿಸುತ್ತಾ ಕೇಳಿದರು.

"ಸಂತೋಷದಿಂದ ಈ ಕಾರ್ಯ ಮಾಡಬಲ್ಲರು. ಅವರಿಗೆ ವ್ಯಾಯಾಮ ಕಲೆ ತಿಳಿದಿದೆ. ಅಂತೆಯೇ ರೋಗಲಕ್ಷಣ, ಔಷಧೋಪಚಾರದ ಕಲೆಯಲ್ಲಿಯೂ ಪಳಗಿದ್ದಾರೆ."

"ಹಾಗಿದ್ದರೆ ಇಂದೇ ಅವರನ್ನು ಸಮ್ಮುಖಕ್ಕೆ ಕರೆತನ್ನಿರಿ ; ಇಂದಿನಿಂದಲೇ ಅವರ ಸೇವೆ ಆರಂಭವಾಗಲಿ"–ಎಂದರು ಆಚಾರ್ಯರು.

ಈ ಮಾತನ್ನು ಕೇಳಿ ಗಂಡವಾಟ ಸಹೋದರರು ಹಿಗ್ಗಿದರು. ತಮ್ಮ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಿತೆಂದು ಹರ್ಷಿಸಿದರು.

ಮಾರನೆಯ ದಿನದಿಂದಲೇ ಈ ಸಹೋದರರು ಶ್ರೀಮದಾಚಾರ್ಯರ ಆಪ್ತ ಶಿಷ್ಯರಲ್ಲಿ ಸೇರಿಕೊಂಡರು.

ಒಂದು ದಿನ ರಾತ್ರಿ, ಮಲಗಿಕೊಳ್ಳುವಾಗ ಶ್ರೀಮದಾಚಾರ್ಯರು ತಮ್ಮ ಕತ್ತು ನೋಯುತ್ತಿದೆ ಎಂದು ಹೇಳಿದರು.

"ಸ್ವಾಮಿ, [1] ನನ್ನ ಸಲಹೆ ಸ್ವೀಕರಿಸುವುದಾದರೆ, ಇದೆಲ್ಲ ನರಮಂಡಲದ

---

1) ಸಂಪ್ರಾಪ್ತಂ ಸಹ ಸಹಜೇನ ಗಂಡವಾಟಂ
ಸ್ವೋಜಸ್ಸಂಪ್ರಕಟನ ಆದಿಶದ್ವಿಶಂಕಮ್ ।
ಶುಶ್ರೂಷಾಮಯಮುಚಿತೋ ವಿಧಾತುಮೀಷ-
ಲ್ಲೋಕಾನಾಮಿತಿ ವಚಸಾ ಪರೀಕ್ಷಕಾಣಾಂ ॥
ಶ್ರೀಕಾಂತೇಶ್ವರಸದನೇನಯತ್ಕಿಲೈಕೋ
ಯಸ್ಮಿಂಸನ್ನರವರನೀತಕೇತುಯಷ್ಟಿಮ್ ।

ಮುಂದಿನ ಪುಟಕ್ಕೆ

ರೋಗ, ವಾತ ಸಂಬಂಧವಾದುದು. ಇದನ್ನು ಅಂಗಾಂಗಳಲ್ಲಿ ನೆಟಿಕೆ ತೆಗೆದು ನೀವಿ ಸರಿಪಡಿಸುತ್ತೇವೆ. ನಮ್ಮ ಸೇವೆಯಿಂದ ತಮಗೆ ತಾತ್ಕಾಲಿಕವಾಗಿ ಕೊಂಚ ನೋವೂ ಆಯಾಸವೂ ಆಗುತ್ತದೆ ; ಉಸಿರು ಕಟ್ಟಿದಂತೆ ಆದರೂ ಆದೀತು ; ಇದನ್ನು ಚಣಕಾಲ ಸಹಿಸಿಕೊಂಡರೆ–ಮುಂದೆ ಎಲ್ಲವೂ ಸರಿಹೋಗುತ್ತದೆ. ಇನ್ನೆಂದೂ ಈ ಖಾಯಿಲೆ ತಮ್ಮ ಬಳಿಗೆ ಸುಳಿಯದಂತೆ ಮಾಡುತ್ತೇವೆ"

—ಎಂದು ಹೇಳಿ ಪರಸ್ಪರ ಮುಖ ನೋಡಿ ಕೊಂಡು ಆ ಸಹೋದರರು ಕುಹಕವಾಗಿ ನಕ್ಕರು.

ಆ ನಗೆಯ ಹಿಂದೆ ಇದ್ದ ಮೋಸದ ಭಾವವು ಸರ್ವಜ್ಞರಾದ ಆಚಾರ್ಯ ರಿಗೆ ತಿಳಿಯಿತು. ತ್ರೇತಾಯುಗದ ಅಂಜನಾಸುತರಾಗಿ, ಲಂಕಿಣಿಯನ್ನು ಕೊಂದರಲ್ಲವೆ ? ರಾವಣನ ರಾಕ್ಷಸ ಸೈನ್ಯವನ್ನೆಲ್ಲಾ ನಾಶಮಾಡಿದವರಲ್ಲವೇ ? ದ್ವಾಪರಯುಗದಲ್ಲಿ ಭೀಮಸೇನದೇವರಾಗಿ ಜರಾಸಂಧ, ಕೀಚಕ, ಬಕ, ಹಿಡಿಂಬ ಮುಂತಾದರನ್ನು ಕೊಂದವರಲ್ಲವೇ ? ಅವರಿಗೆ ಇದೆಲ್ಲ ಒಂದು ವಿನೋದವೇ ಆಗಿತ್ತು !

ಈ ಧೂರ್ತಮಲ್ಲಸಹೋದರರು ಸರದಿಗೊಬ್ಬರಂತೆ ಆಚಾರ್ಯರ ದೇಹದ ಅಂಗಾಂಗಗಳನ್ನು ಬಲವಾಗಿ ಒತ್ತುತ್ತಾ ಬಂದು ಕಡೆಗೆ ಕುತ್ತಿಗೆಗೆ ಕೈಹಾಕಿ ಅತಿಬಲವಾಗಿ ಹಿಸುಕ ತೊಡಗಿದರು.

ಬೇರೊಬ್ಬರಾಗಿದ್ದರೆ ಅವರು ಹಿಸುಕುವುದರಿಂದ ಉಸಿರು ಕಟ್ಟಿ ಸಾಯು

---

1) ಆಹತ್ಯ ಗುರುಗದಯೈವ ನಾರಿಕೇಲಾದ್ಯೋ
ಲೇಭೇ ತರಲತರಾತ್ಪಲಾನಿ ಕಾಮಂ ||
ಆಶ್ವಸ್ತೌ ಕುಚಿಹೃದಿಮಾವನೂನಮಾನಾ
ವೃದ್ಧತುರ್ಂ ಸಮಗದದಂಗುಲೀಂ ಧರಾಸ್ಥಾಂ |
ಸಂಗೃಹ್ಯ ಪ್ರಸಭರಸಾದಿತಿಪ್ರಯತ್ನೌ
ಸಾಮರ್ಥ್ಯಂ ಯಯತುರಿಮೌ ನ ಕಂಪನೇsಸ್ಯಾಃ ||
ಮ || ವಿ || ಸರ್ಗ 16–ಶ್ಲೋಕ 25, 26, 29

ತ್ತಿದ್ದರು. ಅಂಥ ಪಟ್ಟನ್ನು ಕುತ್ತಿಗೆಗೆ ಅವರು ಹಾಕಿದ್ದರು : ಆಚಾರ್ಯರು ಮಾತ್ರ ಅಲ್ಲಾಡದೆ, ಆಯಾಸ ಪಡದೆ ನಗುನಗುತ್ತಲೇ ಇದ್ದರು. 1

ಆ ಮಲ್ಲರ ಮೈ ಬೆವರಿತು. ಆಚಾರ್ಯರು ತಮ್ಮ ಇಬ್ಬರು ಶಿಷ್ಯರಿಗೆ ಬೀಸಣಿಗೆಯಿಂದ ಗಾಳಿ ಹಾಕಲು ಹೇಳಿದರು. ಆಚಾರ್ಯರು ಆ ಇಬ್ಬರು ಯುವಕರಿಗೆ ತಾವೇ ಗಾಳಿ ಬೀಸಿದರು. ಆ ಧೂರ್ತರು ಆಚಾರ್ಯರ ಕಬ್ಬಿಣದ ಕತ್ತನ್ನು ಅಮುಕಿ ಅಮುಕಿ ಬಸವಳಿದು ಸೋತು ಹಣ್ಣಾಗಿ ನೆಲಕ್ಕೆ ಉರುಳಿದರು. ಆಚಾರ್ಯರಿಗೆ ಎಳ್ಳಷ್ಟೂ ಆಯಾಸವಾಗಲೀ, ನೋವಾಗಲೀ ಆಗಲೇ ಇಲ್ಲ. ಆ ಮಲ್ಲರೇ ಸೋತರು.

ಕರುಣಾಸಮುದ್ರರಾದ ಆಚಾರ್ಯರು ಅವರನ್ನು ಉದಾರಬುದ್ಧಿಯಿಂದ ಕ್ಷಮಿಸಿ ಹಿಂದಕ್ಕೆ ಕಳುಹಿಸಿ, ಅವರ ಅಪರಾಧವನ್ನೂ ಅಲ್ಲಿಗೇ ಮರೆತರು.

ಇಷ್ಟಾದರೂ ಆ ಧೂರ್ತರು ಆಚಾರ್ಯರ ದೈಹಿಕ ಶಕ್ತಿಯನ್ನು ಮತ್ತೊಮ್ಮೆ ಪರೀಕ್ಷಿಸಲು ಪ್ರಯತ್ನಿಸಿದರು.

ಈ ಬಾರಿ ಆಚಾರ್ಯರು ತಮ್ಮ ಕೈಬೆರಳೊಂದನ್ನು ನೆಲದ ಮೇಲೆ ಇಟ್ಟು ಇದನ್ನು ಅಲ್ಲಾಡಿಸಿದರೆ ಅವರಿಗೆ ಉತ್ತಮ ಬಹುಮಾನ ನೀಡುವುದಾಗಿ ಸಾರಿದರು.

ಆ ಸಹೋದರರು ಈ ಸವಾಲನ್ನು ಒಪ್ಪಿ ಎಷ್ಟು ಸಾಹಸ ಪಟ್ಟರೂ ಶ್ರೀಮದಾಚಾರ್ಯರ ಬೆರಳನ್ನು ಅಲ್ಲಾಡಿಸಲಾಗಲೇ ಇಲ್ಲ.

ಕೊನೆಗೆ ಅವರು ಸೋತು ಶ್ರೀಮದಾಚಾರ್ಯರಿಗೆ ಶರಣು ಬಂದು ಅವರಲ್ಲಿ ತಮ್ಮ ನಿಜವಾದ ಉದ್ದಿಶ್ಯವನ್ನು ವಿಜ್ಞಾಪಿಸಿ, ಅವರ ಕ್ಷಮೆಯನ್ನು ದೈನ್ಯದಿಂದಲೂ ವಿನಯದಿಂದಲೂ ಯಾಚಿಸಿದರು.

---

1) ಪಂಚಾಶನ್ನರಪನರೋಪನೀತಮಾತ್ರಾಂ ಯೋ
ವಾರ್ಕ್ಷೀಂ ಗೃಹಮಧಿರೋಹಿಣೀಂ ನೀನಾಯ ।
ಸ ವ್ಯಾಖ್ಯಾಸ್ವರದಮನಾಯ ಪೂರ್ವಪಾಟೋ
ನಿರ್ದಶಾ ದ್ವ್ಯಥಿತ ಗುರೋರ್ಗಳಪ್ರವೇಷಮ್ ॥

ಮ ॥ ವಿ ॥ ಸರ್ಗ 16–ಶ್ಲೋಕ 31

ಪರಮದಯಾಳುಗಳಾದ ಆಚಾರ್ಯರು ಈ ಸಹೋದರರನ್ನು ಕ್ಷಮಿಸಿ "ಇದರಲ್ಲಿ ನಿಮ್ಮ ತಪ್ಪು ಯಾವುದು ಇಲ್ಲ. ನೀವು ಹೋಗಿ ನಿಮ್ಮನ್ನು ಈ ನೀಚ ಕಾರ್ಯಕ್ಕೆ ಪ್ರೇರಿಸಿದ ಆ ನೀಚರಿಗೆ ನಿಜವಾದ ವಾರ್ತೆ ತಿಳಿಸಿರಿ"—ಎಂದು ಅಪ್ಪಣೆ ಮಾಡಿ ಕಳುಹಿಸಿಕೊಟ್ಟರು.

ಈ ಮಲ್ಲರು ತಮ್ಮ ಊರಿಗೆ ಹಿಂತಿರುಗಿ ತಮ್ಮನ್ನು ಈ ಕಾರ್ಯಕ್ಕೆ ಪ್ರೇರೇಪಿಸಿದ್ದ ನೀಚರ ಕೈಕಾಲುಗಳನ್ನು ಮುರಿದು, ತಮ್ಮ ಸಿಟ್ಟನ್ನು ಅವರ ಮೇಲೆ ತೀರಿಸಿಕೊಂಡರು.

ಹೀಗೆ ಆಚಾರ್ಯರ ಭೀಮಶಕ್ತಿ, ಅವರನ್ನು ಮಣಿಸಲು ಬಂದವರನ್ನೇ, ಮಣಿಸಿತ್ತು. ಇದನ್ನು ನೋಡಿದವರು ಶ್ರೀಮಧ್ವಾಚಾರ್ಯರು ಸಾಮಾನ್ಯ ಮನುಷ್ಯರಲ್ಲ, ಕಲಿಯುಗದ ಭೀಮಸೇನನೇ ದಿಟ ಎಂದು ಉದ್ಗಾರ ತೆಗೆದರು. 1

## ಕೆರೆಯನ್ನು ತುಂಬಿಸಿದ ಕೃಪಾಸಾಗರರು

ಯೋಗಿಯಾದವನಿಗೆ ಅಣಿಮಾದಿ ಅಷ್ಟಸಿದ್ಧಿಗಳು ತಾವಾಗಿಯೇ ಪ್ರಾಪ್ತವಾಗುವುವೆಂದು ಹಿಂದೆಯೇ ತಿಳಿಸಿದೆ. ಶ್ರೀಮದಾಚಾರ್ಯರು ಪೂರ್ಣಪ್ರಜ್ಞರೂ, ಸರ್ವಜ್ಞಾಚಾರ್ಯರೂ ಆಗಿದ್ದರು. ವಾಯುದೇವರ ಅವತಾರಿಗಳಾದ ಅವರಿಗೆ ಕುಂಭಕ, ರೇಚಕ, ಪೂರಕಗಳು ಸಿದ್ಧಿಸಿದ್ದವು. ಅವರು ಮಧ್ವಮುನಿಗಳು ಎಂದು ಬ್ರಹ್ಮಾಂಡಪುರಾಣಾಂತರ್ಗತ ಶ್ರೀಮುಷ್ಣ ಮಾಹಾತ್ಮ್ಯಯಲ್ಲಿ ಸೂಚಿತವಾಗಿದೆ.

ಇಂಥ ಸಂಯಮ ಶೀಲರೂ, ನಿಷ್ಠುರಬ್ರಹ್ಮಚಾರಿಗಳೂ, ಭಗವಂತನ ಅಸೀಮಭಕ್ತರೂ, ಪ್ರತಿವಾದಿಭಯಂಕರರೂ ಶ್ರೀಮಧ್ವಾಚಾರ್ಯರು

---

1) ಪರ್ಯೈಕ್ಷಿ ಪ್ರಭುರಿತರೈಃ ಶಿವಾಗ್ನಿಪೂರ್ವೈ
ರ್ಮೋಕ್ಷ್ಯೈಕ್ಷಿ ಪ್ರಬಲತರೈಸ್ತಥಾ ಪ್ರಯತ್ನೈಃ ।
ನಾಪ್ಯೈಕ್ಷಿ ಕ್ವಚಿದಪಿ ಶಕ್ತ್ಯಪೂರ್ತಿರಸ್ಯ
ನ್ಯತ್ಯೈಕ್ಷಿ ಸ್ವಯಮಪಿ ಭೀಮ ಇತ್ಯವಶ್ಯಂ ॥
ಮ ॥ ವಿ ॥ ಸರ್ಗ 16–ಶ್ಲೋಕ 33

ಅಷ್ಟಸಿದ್ಧಿಗಳಿಗೂ ಮಿಗಿಲಾದ ಅನೇಕ ಸಿದ್ಧಿಗಳನ್ನೂ ಪಡೆದಿದ್ದರು. ಇವನ್ನೆಂದಿಗೂ ಅವರು ಬಹಿರಂಗವಾಗಿ ತೋರ್ಪಡಿಸಿಕೊಳ್ಳುತ್ತಿರಲಿಲ್ಲ.

ಸಿದ್ಧಿಗಳು ಅರವತ್ತುನಾಲ್ಕು ಬಗೆಯೆಂದೂ, ಇದರಲ್ಲಿ ಮಾನವ, ಪ್ರೇತ, ರಾಕ್ಷಸ, ದೇವತಾ, ಗಂಧರ್ವ, ಯಕ್ಷ, ಕಿನ್ನರ, ಕಿಂಪುರುಷ ಸಿದ್ಧಿಗಳೆಂದು ಹೇಳುತ್ತಾರೆ. ಪ್ರತಿಯೊಂದು ವರ್ಗಕ್ಕೂ ಎಂಟೆಂಟು ಬಗೆಯ ಸಿದ್ಧಿಗಳು; ಬ್ರಹ್ಮನಲ್ಲಿ ಈ ಸಿದ್ಧಿಗಳೆಲ್ಲ ಸಮಾವೇಶಗೊಂಡಿವೆ ಎಂದು ಹೇಳುತ್ತಾರೆ. ಭಾವೀ ಬ್ರಹ್ಮರಿಗೂ ಈ ಅರವತ್ತುನಾಲ್ಕು ಸಿದ್ಧಿಗಳಿವೆ ಎಂದು ಶ್ರುತಿ ವಾಕ್ಯವಿದೆ. ಭಾವೀಬ್ರಹ್ಮರಾದ, ಜೀವೋತ್ತಮರಾದ, ವಾಯು ಅವತಾರಿಗಳಾದ ಶ್ರೀಮಧ್ವಾಚಾರ್ಯರಿಗೆ ಬಯಸಿದಾಗ ಅತೀಂದ್ರಿಯಶಕ್ತಿಗಳು ವಶವಾಗಿದ್ದರೆ ಆಚ್ಚರಿ ಏನು ?

ಈ ಅರವತ್ತುನಾಲ್ಕು ಸಿದ್ಧಿಗಳಲ್ಲಿ ಲಘಿಮಾ ಶಕ್ತಿಯು ಅಲ್ಪದ್ದು; ಅಂದರೆ ಸಾಧಕನು ಗಾಳಿಗಿಂತ ಹಗುರವಾಗಿ ಗಾಳಿಯಲ್ಲಿ ತೇಲುವುದು. ಗರಿಮಾ ಎಂಬುದು ಅಥವಾ ಮಹಿಮಾ ಎಂಬುದು ಅತ್ಯಂತ ಭಾರವಾಗುವುದು—ಈ ಎರಡು ಶಕ್ತಿಗಳನ್ನೂ ಶ್ರೀಮದಾಚಾರ್ಯರು ಬಹಿರಂಗವಾಗಿ ಪ್ರದರ್ಶಿಸಿದ್ದರು.

ಒಂದು ದಿನ ಶ್ರೀಮದಾಚಾರ್ಯರು ಕೇರಳದೇಶದಲ್ಲಿ ಸಂಚರಿಸುತ್ತಿದ್ದರು. ಶ್ರೀನರಸಿಂಹಸ್ವಾಮಿಯ ದರ್ಶನ ಮಾಡಿಕೊಂಡು ತಮ್ಮ ಬಿಡಾರಕ್ಕೆ ಹಿಂತಿರುಗುತ್ತಿದ್ದರು. ಆಗ ದೇವಾಲಯದ ಪ್ರಾಂಗಣದಲ್ಲಿ ಇಬ್ಬರು ಬಾಲಕರು ಒಬ್ಬರ ಮೇಲೆ ಒಬ್ಬರು ಬೆನ್ನಿಗೆ ಜೋತು ಬಿದ್ದು, ಉಪ್ಪಿನ ಮೂಟೆಯ ಆಟವನ್ನು ಆಡುತ್ತಿದ್ದರು.

ಅವರಲ್ಲಿ ಹಿರಿಯನಿಗೆ ಅದೇನೆನಿಸಿತೋ, ಆಚಾರ್ಯರ ಬಳಿಗೆ ಬಂದು,

"ಸ್ವಾಮಿ, ಉಪ್ಪಿನ ಮೂಟೆ ಆಟ ಆಡೋಣ ಬರುತ್ತೀರಾ ?"— ಎಂದು ಬಾಲಕ ಸಹಜವಾದ ವಿನಯದಿಂದ ಪ್ರಾರ್ಥಿಸಿದನು.

ಆಚಾರ್ಯರು ತಮ್ಮ ಶಿಷ್ಯರ ಮುಖ ನೋಡಿ ನಕ್ಕರು,

"ಆಗಲಿ ಮಗು, ಮೊದಲು ನೀನು ನನ್ನ ಹೆಗಲೇರು. ದೇವಾಲಯಕ್ಕೆ ಪ್ರದಕ್ಷಿಣೆ ಹಾಕಿದ ಮೇಲೆ, ನಾನು ನಿನ್ನ ಹೆಗಲೇರುತ್ತೇನೆ."

"ಹಾಗೇ ಆಗಲಿ"– ಆ ಹುಡುಗ ಸಂತೋಷದಿಂದಲೇ ಹೇಳಿದ.

ಅದರಂತೆ ಶ್ರೀಮದಾಚಾರ್ಯರು ಹಿಂದಿನ ಜನ್ಮದಲ್ಲಿ ಪರಮಭಾಗವತೋತ್ತಮನಾಗಿದ್ದ ಅವನನ್ನು ತಮ್ಮ ಹೆಗಲಿನ ಮೇಲೆ ಕೂರಿಸಿಕೊಂಡು, ನರಸಿಂಹಸ್ವಾಮಿಯ ದೇವಾಲಯಕ್ಕೆ ಒಂದು ಪ್ರದಕ್ಷಿಣೆ ಹಾಕಿದರು.

ಅನಂತರ ಬಾಲಕನು ಆಚಾರ್ಯರ ಬೆನ್ನಿನಿಂದ ನೆಲಕ್ಕೆ ಇಳಿದನು. ಅವನು ಮನೆಗೆ ತೆರಳದೆ ಆಚಾರ್ಯರು ತನ್ನ ಹೆಗಲಿನ ಮೇಲೆ ಕುಳಿತುಕೊಳ್ಳಬೇಕೆಂದು ಹಠ ಹಿಡಿದು ಪ್ರಾರ್ಥಿಸಿದನು. ಅವನಿಗೆ ಬುದ್ಧಿ ಹೇಳಿ ಎಲ್ಲರೂ ಸೋತರು. ಕಡೆಗೆ ಆಚಾರ್ಯರು "ಆಗಲಿ" ಎಂದು ಹೇಳಿ, ಅವನ ಹೆಗಲಿನ ಮೇಲೆ ಕುಳಿತುಕೊಂಡು, ಲಘಿಮಾಸಿದ್ಧಿಯಿಂದ ಆ ಬಾಲಕನಿಗೆ ಭಾರವನ್ನು ಕೊಡದೆ ಗುಡಿಗೆ ಒಂದು ಪ್ರದಕ್ಷಿಣೆ ಮಾಡಿದರು.

ಇದನ್ನು ನೋಡಿದವರಿಗೆ ಬಲಿಚಕ್ರವರ್ತಿ ಮತ್ತು ಅಜಿನದಂಡಕಮಂಡಲಧರನಾದ ವಾಮನ ಇವರ ನೆನಪಾಯಿತು. ಹನೂಮಂತನಾಗಿದ್ದಾಗ ಸೂಕ್ಷ್ಮರೂಪದಿಂದ ಸುರಸೆಯ ಜಠರ ಸೇರಿ ಹೊರಗೆ ಬಂದ ಮಾರುತಿ ಅವತಾರದ ಜ್ಞಾಪಕ ಬಂದಿತು.

ಈ ಘಟನೆಯನ್ನು ನೋಡಿದ ಮೇಲೆ ಶ್ರೀಮದಾಚಾರ್ಯರನ್ನು ಸಾಮಾನ್ಯಮಾನವರೆಂದು ತಿಳಿಯಲು ಶಿಷ್ಯರು ಹಿಂಜರಿದರು. ಆದರೇನು? ಅವರನ್ನು ಸಾಮಾನ್ಯ ಮನುಷ್ಯರೆಂದೂ, ತಮ್ಮ ಪರಮ ಶತ್ರುವೆಂದೂ, ಇತರರನ್ನು ಮುಗಿಸಿಬಿಡುವಂತೆ ಅವರನ್ನು ಮುಗಿಸಿಬಿಡುವುದು ಸುಲಭವೆಂದೂ ಯೋಚಿಸಿದ್ದ ನೀಚರಿಗೇನೂ ಕೊರತೆ ಇಲ್ಲದೆ ಇರಲಿಲ್ಲ.

ಅವರಲ್ಲಿ ಕೆಲವರು ಸೇರಿಕೊಂಡು ಶ್ರೀಮದಾಚಾರ್ಯರನ್ನು ಕೊಲೆ ಮಾಡಲು ಸಂಕಲ್ಪಿಸಿ ತಮ್ಮ ಅಂತಿಮ ಪ್ರಯತ್ನ ನಡೆಸಿದರು.

ಈ ಬಾರಿ ಅವರನ್ನು ನಾಶಪಡಿಸಲು ಮೂಡಂಪಾಡಿತ್ತಾಯನೆಂಬುವನು ಮತ್ಸರ ತಾಳಿ ಬಂದನು. ಅವನು ಮಹಾ ಬಲಾಢ್ಯನೆಂದು ಹೆಸರು ಪಡೆದಿದ್ದನು ; ಒಮ್ಮೆ ಅವನು ಜಯಸಿಂಹರಾಜನ ಆಳುಗಳು ಐವತ್ತು ಮಂದಿ

ಒಟ್ಟಿಗೆ ಸೇರಿ ಕಷ್ಟದಿಂದ ಹೊತ್ತುಕೊಂಡು ಹೋಗುತ್ತಿದ್ದ ಭಾರವಾದ ಮರದ ರಥದ ಮೆಟ್ಟಿಲು ಏಣಿಯನ್ನು ತಾನೊಬ್ಬನೇ ಹೊತ್ತುಕೊಂಡು ಹೋಗಿ ಕೊಟ್ಟಿದ್ದನು. ಇದರಿಂದ ಅವನು ರಾಜಸನ್ಮಾನವನ್ನೂ ಸಂಪಾದಿಸಿದ್ದನು.

ತನ್ನ ಬಾಹುಗಳಿಗೆ ಕಲ್ಲಿನ ಚಪ್ಪಡಿಯನ್ನು ತುಂಡು ಮಾಡುವ ಶಕ್ತಿ ಇದೆ ಎಂದೂ ಹೇಳಿಕೊಳ್ಳುತ್ತಿದ್ದನು. ಅವನು ತನ್ನ ಬಾಹುಬಲವನ್ನು ಅವರೆದುರಿಗೆ ಪ್ರದರ್ಶಿಸಲು ಶ್ರೀಮದಾಚಾರ್ಯರ ಅನುಮತಿಯನ್ನು ಬೇಡಿದನು.

ಅವನು ಬಂದು ಅವರ ಎದುರಿಗೆ ನಿಂತನು.

"ನಾವು ಪ್ರವಚನ ಮಾಡುವಾಗ ನೀನು ನಮ್ಮ ಧ್ವನಿ ನಿಲ್ಲುವಂತೆ ಕತ್ತನ್ನು ಹಿಸುಕುವುದಾದರೆ ನೀನು ಗೆದ್ದಂತೆ ತಿಳಿಯುತ್ತೇವೆ. ನೀನು ಸೋತರೆ ಏನು ದಂಡ ಕೊಡುತ್ತಿ ?"

"ನಾನು ನಿಮ್ಮ ದಾಸನಾಗಿ ಸೇವೆ ಸಲ್ಲಿಸುತ್ತೇನೆ."

"ನಮ್ಮ ದಾಸನಾಗುವುದು ಬೇಡ, ಹರಿದಾಸನಾಗು , ಸಾಕು"

— ಎಂದು ಹೇಳಿ ಆಚಾರ್ಯರು ಪ್ರವಚನಕ್ಕೆ ಆರಂಭಿಸಿದರು.

ಇದನ್ನು ನೋಡಲು ಸಹಸ್ರಾರು ಶಿಷ್ಯರು ಪ್ರೇಕ್ಷಕರಾಗಿ ಅಲ್ಲಿ ನೆರೆದರು.

ಮೂಡಂಪಾಡಿತ್ತಾಯನು ತನ್ನ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಆಚಾರ್ಯರ ಕತ್ತನ್ನು ಅಮುಕಿದನು. ಇದರಿಂದ ಏನೂ ಪ್ರಯೋಜನವಾಗಲೇ ಇಲ್ಲ. ಹೀಗೆ ಮಾಡಿದ್ದರಿಂದ ಅವನ ತೋಳುಗಳು ನೊಂದವೇ ಹೊರತು, ಆಚಾರ್ಯರ ಮುಖದಲ್ಲಿದ್ದ ಮುಗುಳ್ನಗೆ ಬಾಡಲೇ ಇಲ್ಲ.

ಅವನು ಗಂಟಲನ್ನು ಹಿಸುಕಿದಷ್ಟೂ ಅವನಿಗೇ ಆಯಾಸವಾಯಿತು. ಆಚಾರ್ಯ ಗಂಟಲು ದೊಡ್ಡದಾಯಿತು. ಪ್ರವಚನ ನಡದೇ ಇತ್ತು, ಕಡೆಗೆ ಅವನೇ ಸೋತು ಸೋಲನ್ನೂ ಒಪ್ಪಿದನು. ಅವನಿಗೆ ಆಚಾರ್ಯರ ಒಂದೇ ಒಂದು ಸ್ನಾಯುವನ್ನು ಮುಟ್ಟುವುದು ಇರಲಿ, ಅವರು ನೆಲದ ಮೇಲೆ ಊರಿದ್ದ ಒಂದು ಕಿರುಬೆರಳನ್ನೂ ಅಲ್ಲಾಡಿಸಲು ಸಾಧ್ಯವಾಗಲಿಲ್ಲ. ಈ ಅದ್ಭುತ ಶಕ್ತಿಯನ್ನು ನೋಡಿ ಎಲ್ಲರೂ ಮಂತ್ರಮುಗ್ಧರಾದಂತೆ ಆಚಾರ್ಯರನ್ನು ಮನಸಾರೆ ಕೊಂಡಾಡಿದರು.

ಇದೇ ಸಮಯದಲ್ಲಿ ಪ್ರೇಕ್ಷಕರಾಗಿ ಬಂದಿದ್ದ ಶಿವಾಗ್ನಿ, ವಾಸುದೇವ ಉಗ್ರ, ಅವರೋದರೆಂಬ, ಚವ್ವಾಗಿ ತಿಂದು ಬಲಿತ ಧೃಢಾಂಗ ಶಿಷ್ಯರು ಆಚಾರ್ಯರ ಸಮೀಪಕ್ಕೆ ಬಂದು,

"ಸ್ವಾಮಿ, ನಾವೂ ಈ ಕಾರ್ಯದಲ್ಲಿ ಒಮ್ಮೆ ಪ್ರಯತ್ನ ಮಾಡಬಹುದೇ" —ಎಂದು ಪ್ರಾರ್ಥಿಸಿದರು.

ಈ ನೆವದಿಂದಾದರೂ ಆಚಾರ್ಯರ ದೇಹ ಸ್ಪರ್ಶವಾಗಿ, ತಾವು ಪುಣ್ಯ ಸಂಪಾದಿಸಿಕೊಳ್ಳಬಹುದೆಂದು ಅವರ ಆಲೋಚನೆಯಾಗಿತ್ತು.

"ಆಗಲಿ, ನೀವೂ ಪ್ರಯತ್ನಿಸಿ"—ಎಂದು ಆಚಾರ್ಯರು ಸಂತೋಷ ದಿಂದಲೇ ಒಪ್ಪಿಗೆ ಇತ್ತರು.

ಅವರೂ ಸಹ ಪರೀಕ್ಷಿಸಿ ಆಚಾರ್ಯರಿಗೆ ಸೋತುಶರಣಾಗತರಾದರು. ಈ ಕಥೆ ಕರ್ಣಾಕರ್ಣಿಯಾಗಿ ಹರಡಿ ಅನೇಕ ಮಲ್ಲರನ್ನೂ, ಜಟ್ಟಿಗಳನ್ನೂ ಆಚಾರ್ಯರ ಸಮೀಪಕ್ಕೆ ಉಡುಹಿಗೆ ಬರುವಂತೆ ಮಾಡಿತು.

ದೂರದೂರಿನಿಂದ ಬಂದಿದ್ದ ಒಬ್ಬ ಜಟ್ಟಿಗೆ, ಆಚಾರ್ಯರು ತಮ್ಮ ಒಂದು ಕೂದಲನ್ನು ಕಿತ್ತರೆ ಸಾಕು ಬಹುಮಾನಿಸುವುದಾಗಿ ಹೇಳಿದರು.

ಅವನು ಆಚಾರ್ಯರ ಒಂದು ರೋಮವನ್ನೂ ಅಲ್ಲಾಡಿಸಲು ಆಗದೆ, ಅಪಮಾನದಿಂದ ಕಾಲಿಗೆ ಬುದ್ಧಿ ಹೇಳಿದನು.

ತಮ್ಮನ್ನು ಸೋಲಿಸಲು ಬಂದ ಮತ್ತೊಬ್ಬ ಜಟ್ಟಿಯನ್ನು ಆಚಾರ್ಯರು ತಮ್ಮ ಮೂಗಿನ ತುದಿಯಮೇಲೆ ಗುದ್ದಲು ಹೇಳಿದರು. ಅವನು ಅದರಂತೆ ಗುದ್ದಲು ಕಬ್ಬಿಣದ ಮೇಲೆ ಪ್ರಹಾರ ಮಾಡಿದಂತೆ, ಅವನ ಕೈ ಜಜ್ಜಿ ಹೋಗಿ ನೋವಿನಿಂದ ನರಳಿದನು. ಆಚಾರ್ಯರಿಗೆ ಏನೂ ಆಗಲೇ ಇಲ್ಲ. ಅವರ ಸುಂದರವಾದ ಮುಖವು ಮೊದಲಿನಂತೆಯೇ ಉಲ್ಲಾಸದಿಂದಲೇ ಕೂಡಿತ್ತು.

ಶ್ರೀಮದಾಚಾರ್ಯರು ತಾವು ವಾಯುದೇವರ ಅವತಾರಿಗಳಾಗಿದ್ದರೂ ಜಗತ್ತಿನ ಪಾಲಿಗೆ ಕೇವಲ ಮಾನವರಂತೆ ತೋರಿಸಿಕೊಳ್ಳುತ್ತಿದ್ದರು. ಅವರು, ನದಿಯ ನೀರನ್ನೆಲ್ಲ ತುಂಬಿಕೊಂಡ ಸಮುದ್ರರಾಜನಂತೆ ಭಕ್ತಜನರಿಗೆ ಆಶ್ರಯ,

ಕೊಡುತ್ತಲೇ ಇದ್ದರು. ಆದರೂ ಸೂರ್ಯನು ತನ್ನ ಕಿರಣದಿಂದ ಮಿಂಚುಹುಳು ಗಳನ್ನು ದುರ್ಬಲಗೊಳಿಸುವಂತೆ, ಪ್ರತಿವಾದಿಗಳನ್ನು ದುರ್ಬಲಗೊಳಿಸುತ್ತಲೇ ಇದ್ದರು.

ಹೀಗೆ ಶ್ರೀಮದಾಚಾರ್ಯರು ತಾವು ಸಾಮಾನ್ಯಮನುಷ್ಯರಲ್ಲವೆಂಬುದನ್ನು ಬಾರಿಬಾರಿಗೂ ಪ್ರಕಟಿಸುತ್ತಿದ್ದರೂ ಅವರ ನಡವಳಿಕೆ ಎಲ್ಲವೂ ಸಾಮಾನ್ಯ ಮನುಷ್ಯರ ನಡವಳಿಕೆಯಂತೆಯೇ ಇತ್ತು.

ಆದರೂ ಒಮ್ಮೊಮ್ಮೆ ಸಮಯ ಬಂದಾಗ ಅವರು ತಾವು ಸರ್ವಜ್ಞ ರೆಂಬುದನ್ನು ತೋರಿಸದೆ ಇರುತ್ತಿರಲಿಲ್ಲ.

ಒಮ್ಮೆ ಕೇರಳದೇಶಕ್ಕೆ ಬಂದಿದ್ದಾಗ ಪಾರಂತೀ ಎಂಬ ಗ್ರಾಮಕ್ಕೆ ಭೇಟಿ ನೀಡಿದರು. 1 ಅದನ್ನು ಜನ ಕೇವುಡದೇಲವೆಂದೂ ಕರೆಯುತ್ತಿದ್ದರು. ಅಲ್ಲಿ ಒಂದು ದೇವಾಲಯುವಿತ್ತು.

ಆ ದೇವಾಲಯವು ಜೀರ್ಣಾವಸ್ಥೆಯಲ್ಲಿದ್ದು, ದೇವರಿಗೆ ಪೂಜಾದಿಗಳು ನಿಂತು ಹೋಗಿದ್ದವು. ಹೀಗಾಗಿ ಆ ಗ್ರಾಮದ ದೇವರನ್ನು ಅನಾದರ ಮಾಡಿದ ಜನತೆಗೆ, ಘೋರ ಶಿಕ್ಷೆ ಬಂದಿತ್ತು. ಅಲ್ಲಿನ ಕೆರೆ ಎಂಥ ಮಳೆ ಬಿದ್ದರೂ ನೀರು ನಿಲ್ಲದೆ, ಸದಾ ಬರಿದಾಗಿಯೇ ಇರುತ್ತಿತ್ತು. ಜನಕ್ಕೆ ಬೇಸಾಯ ಮಾಡಲು ನೀರಿಲ್ಲದೆ ಕಂಗೆಟ್ಟಿದ್ದರು. ಪಶು ಪಕ್ಷಿಗಳಿಗೂ ಕುಡಿಯಲು ನೀರು ಇಲ್ಲದೆ ಕ್ಷಾಮ ಬಂದಿತ್ತು. ಜನತೆ ತಿನ್ನಲು ಕುಡಿಯಲು ನೀರಿಲ್ಲದೆ ತೊಂದರೆ ಪಡುವುದನ್ನು ನೋಡಿ, ಶ್ರೀಮದಾಚಾರ್ಯರಿಗೆ ಅವರ ಮೇಲೆ ಕರುಣೆ ಉಕ್ಕಿತು. ಅವರನ್ನು ಅನುಗ್ರಹಿಸಲು ಅಲ್ಲಿಗೆ ಬಂದರು.

ಇಡೀತುಡಿ ಎಂಬ ಊರಿಗೆ ಹೊರಟಿದ್ದ ಅವರು ಪಾರಂತೀ ಗ್ರಾಮಕ್ಕೆ

---

1) ಪಾರಂತೀಸುರಸದನಂ ವಿಶಾಲಸಂವಿತ್
ಸಂಪ್ರಾಪ್ತಃ ಖಲು ಸುಚಿರಾನ್ನಿವೇದ್ಯಹೀನಮ್ ।
ಗ್ರಾಮ್ಯಾಗ್ರ್ಯಕ್ಷಿತಿಪತಿಭಿರ್ದಿನಾರ್ಧಮಾತ್ರಾ
ತ್ತದ್ಭೂತೀರ್ವ್ಯಧಿತ ಸಭೂತಬಲ್ಯನಲ್ಪಾಃ ॥

ಮ ॥ ವಿ ॥ ಸರ್ಗ 16–ಶ್ಲೋಕ 36

ಅಲ್ಲಿಗೆ ಬಂದ ಕೂಡಲೇ ಆ ಗ್ರಾಮಕ್ಕೆ ಬಂದಿದ್ದ ಮಳೆಬರಬಾರದೆಂಬ ಶಾಪಕ್ಕೆ ಕಾರಣವೇನೆಂಬುದು ತಿಳಿಯಿತು.

ಆಚಾರ್ಯರು ಹಿಂದೆ ಭೀಮಸೇನರ ಅವತಾರ ಮಾಡಿದ್ದಾಗ ಆ ಗ್ರಾಮಕ್ಕೆ ಬಂದಿದ್ದರು ಪಾಂಡವರು ವನವಾಸದಲ್ಲಿದ್ದಾಗ ಅಲ್ಲಿ ಕೆಲವು ಕಾಲ ವಾಸಿಸಿದ್ದರು. ಆ ಸಮಯದಲ್ಲಿ ಧರ್ಮರಾಜಾದಿ ಐವರು ಸಹೋದರರೂ ಒಂದೊಂದರಂತೆ, ವಿಷ್ಣುವಿನ ಐದು ಪ್ರತಿಮೆಗಳನ್ನು ಆ ಪಾರಂತೀ ದೇವಾಲಯದಲ್ಲಿ ಪ್ರತಿಷ್ಠಿಸಿದ್ದರು, ದ್ರೌಪದೀದೇವಿಯೇ ನೀರನ್ನು ತಂದು ಬಲಿ ಕೊಡಲು ನೆರವಾಗಿದ್ದಳು. ಈ ಪ್ರತಿಮೆಗಳಿಗೆ ಕಲಿಗಾಲದಲ್ಲಿ ಪೂಜೆಯು ನಿಂತು ಹೋಗಿತ್ತು. ಅಂತಲೇ ಆ ಊರಿಗೆ ಅನಾವೃಷ್ಟಿಯ ಶಾಪ ತಟ್ಟಿತ್ತು.1 ಜನರು ಕಂಗಾಲಾಗಿದ್ದರು.

ಆಚಾರ್ಯರು ಕೂಡಲೇ ಊರಿನ ಮುಖಂಡರನ್ನು ಕರೆಸಿಕೊಂಡು ಶೀಘ್ರದಲ್ಲಿಯೇ ಆ ವಿಗ್ರಹಗಳಿಗೆ ಶಾಶ್ವತವಾದ ಪೂಜೆ, ನೈವೇದ್ಯಗಳಿಗೆ ವ್ಯವಸ್ಥೆ ಮಾಡಿ ಭೂತಬಲಿಯನ್ನೂ ಏರ್ಪಡಿಸಿದರು. ಜನರು ಸಂತೋಷದಿಂದಲೇ ಈ ಕಾರ್ಯ ಮಾಡಿದರು.

ಇದರಿಂದ ಶ್ರೀಹರಿಯು ಸುಪ್ರೀತನಾಗಿ ಪ್ರಸನ್ನನಾದನು.

ಅವನ ಪರಮಾನುಗ್ರಹಕ್ಕೆ ಆ ಗ್ರಾಮಸ್ಥರು ಪಾತ್ರರಾದರು. ಆಚಾರ್ಯರು ಅವರ ದುಃಖವನ್ನು ನೋಡಲಾರದೆ ತಮ್ಮ ಕಾವಿ ಶಾಟಿಯಿಂದ ಗಾಳಿ ಬೀಸಿದರು. ಅದು ಗ್ರೀಷ್ಮ ಋತು. ಆದರೂ ಮೋಡಗಳು ಇಲ್ಲದಿದ್ದ ಆಕಾಶದಲ್ಲಿ ಮೋಡಗಳು ಕಾಣಿಸಿಕೊಂಡವು. ಕೆರೆಯನ್ನು ತುಂಬುವಷ್ಟು ಮಳೆಬಿದ್ದು, ನೋಡುತ್ತಿದ್ದವರನ್ನೆಲ್ಲಾ ಆತ್ಯಾಶ್ಚರ್ಯಚಕಿತರನ್ನಾಗಿ ಮಾಡಿತು.

---

1) ಭೀಮತ್ವೇ ಸಹ ಸಹಜೈಃ ಪ್ರತಿಷ್ಠಿತಃ ಪ್ರಾಕ್
ಪಂಚಾತ್ಮಾ ಮುರರಿಪುರಂಚಿತೋ ಯದತ್ರ ।
ಪಾಂಚಾಲ್ಯಾ ಬಲಿಸಲಿಲಂ ಸಮಂ ದದತ್ಯಾ
ಸೋಽಸ್ಮಾಷೀತ್ತದಿಮಮಥ ಪ್ರಪೂಜ್ಯಪೂಜ್ಯಃ ॥
ಮ ॥ ವಿ ॥ ಸರ್ಗ-16 ಶ್ಲೋಕ-37

ಪಾರಂತೀ ಗ್ರಾಮದ ಕೆರೆ ತುಂಬಿ ಕೋಡಿ ಹರಿಯಿತು. ಆಚಾರ್ಯರ ಈ ಅದ್ಭುತ ಮಹಿಮೆಯನ್ನು ಕೇಳಿ ಗ್ರಾಮದ ಒಡೆಯನಾಗಿದ್ದ ಗೌಡನಿಗೆ ಅಸೂಯೆಯುಂಟಾಯಿತು. ಇದರಿಂದ ತನ್ನ ಪ್ರತಿಷ್ಠೆ ಊರಿನಲ್ಲಿ ಕಡಿಮೆಯಾಗುತ್ತದೆ-ಎಂದು ಆಲೋಚಿಸಿ ಆ ಧೂರ್ತನು ಆಚಾರ್ಯರ ಮೇಲೆ ಮನಸ್ಸಿನಲ್ಲಿಯೇ ಸಿಡಿಮಿಡಿಗೊಂಡನು.

ಇದಕ್ಕೆ ತಕ್ಕಂತೆ ಅದ್ವೈತಿಗಳಲ್ಲಿ ಕೆಲವರು ತಾವು ಶ್ರೀಮದಾಚಾರ್ಯರ ಮುಂದೆ ತಲೆ ಎತ್ತಿ ನಡೆಯಲಸಾಧ್ಯವೆಂದು ತಿಳಿದು ಅವನ ದ್ವೇಷಾಗ್ನಿಗೆ ಆಜ್ಯ ಸುರಿದರು.

ಇದೆಲ್ಲ ಕಾರಣದಿಂದ ಆ ನಾಡಗೌಡನು ಆಚಾರ್ಯರನ್ನು ಆ ರಾತ್ರಿ ಹೊಡೆಯಲು ನಿಶ್ಚಯಿಸಿ ಸಮರ್ಥರಾದ ನಾಲ್ವರು ಜಟ್ಟಿಗಳನ್ನು ಆಚಾರ್ಯರು ತಂಗಿದ್ದ ಗುಡಿಗೆ ಗುಪ್ತವಾಗಿ ಕಳುಹಿಸಿಕೊಟ್ಟನು.1

ಆ ಜಟ್ಟಿಗಳು ಆ ಗುಡಿಗೆ ಬರುವವರೆಗೆ ಸರಿಯಾಗಿಯೇ ಇದ್ದರು. ಗುಡಿಯ ಪ್ರಾಕಾರದೊಳಗೆ ಕಾಲಿಡುತ್ತಿದ್ದಂತೆ ಅವರು ಕಣ್ಣು ಕಳೆದುಕೊಂಡು ಕುರುಡರಾಗಿ ದಾರಿ ಕಾಣದೆ ಬೆಳಗಿನವರೆಗೂ ಅಲ್ಲೇ ಸುತ್ತುತ್ತಾ ಇದ್ದರು.

ಅವರನ್ನು ಹುಡುಕಿಕೊಂಡು ಆ ರಾತ್ರಿ ದೇವಸ್ಥಾನಕ್ಕೆ ಬಂದ ಗೌಡನಿಗೂ ಇದೇ ಗತಿ ಆಯಿತು.

ಬೆಳಗಾದ ಮೇಲೇ ಅವರಿಗೆ ದೃಷ್ಟಿ ಮರಳಿ ಬಂದುದು. ಗೌಡನೂ ಅವನ ಅನುಚರರೂ ಪಶ್ಚಾತ್ತಾಪದಿಂದ ಶ್ರೀಮದಾಚಾರ್ಯರ ಪಾದಗಳ ಮೇಲೆ ಬಿದ್ದು, ತಮ್ಮ ಅಕೃತ್ಯಕ್ಕಾಗಿ ಕ್ಷಮೆ ಯಾಚಿಸಿ ಕೃತಜ್ಞತೆಯಿಂದ ಹೊರಟು ಹೋದರು.

---

1) ದುರ್ಮಂತ್ರ್ಯೈಃ ಖಲಪಟಲೈಃ ಪ್ರಚೋದ್ಯಮಾನೋ
ಗ್ರಾಮೇಶೋ ವೃಷಲಪತಿಃ ಪ್ರಹರ್ತುಮೇನಂ ।
ಸಂಪ್ರಾಪ್ತಸ್ತತ ಉತ ಯಾಂತಮೀಕ್ಷಮಾಣಃ
ಪ್ರೋದ್ಯಂತಂ ರವಿಮಿವ ವಿಸ್ಮಿತೋ ನನಾಮ ॥

ಮ ॥ ವಿ ॥ ಸರ್ಗ-16 ಶ್ಲೋಕ-39

ಇಂಥ ಅಚಿಂತ್ಯಾದ್ಭುತ ಘಟನೆಗಳು ಶ್ರೀಮದಾಚಾರ್ಯರ ಜೀವನದಲ್ಲಿ ಹೇರಳವಾಗಿ ನಡೆದಿದ್ದವು.

ಈ ಎಲ್ಲ ಘಟನೆಗಳಲ್ಲಿಯೂ ಶ್ರೀಮಧ್ವಾಚಾರ್ಯರು ದುರ್ಬಲರ ಮೇಲೂ ಮೂರ್ಖರಾದ ಅಜ್ಞಾನಿಗಳ ಮೇಲೂ ಆಗ್ರಹಗೊಳ್ಳದೆ ಅವರನ್ನು ಉದಾರವಾಗಿ ಕ್ಷಮಿಸಿ ಉದ್ಧಾರ ಮಾಡಿದರೆಂಬುದಕ್ಕೆ ಅವರ ಉದಾತ್ತ ಜೀವನವೇ ಸಾಕ್ಷಿ. ಪಾರಂತೀ ಸಮೀಪದ ಸರಿದಂತರ ಗ್ರಾಮದಲ್ಲಿ ಅವರು ಶಿಷ್ಯರ ಅಭ್ಯುದಯಕ್ಕಾಗಿ ಕೃಷ್ಣಾಮೃತ ಮಹಾರ್ಣವವೆಂಬ ಗ್ರಂಥವನ್ನು ರಚಿಸಿದರು.

## ಸರ್ವಮೂಲ ಗ್ರಂಥ ಸಮುಚ್ಚಯ

ಭಗವಂತನ ಕಾರ್ಯಸಾಧಕರಾಗಿ, ಲೋಕದಲ್ಲಿ ಶ್ರೀವಿಷ್ಣುಸರ್ವೋತ್ತಮತ್ವವನ್ನೂ, ಅದನ್ನು ಅರಿಯಲು ಮಹಾತ್ಮ್ಯ ಜ್ಞಾನಪೂರ್ವಕ ಮಾಡುವ ಭಕ್ತಿ ವೈರಾಗ್ಯಗಳನ್ನೂ ಪ್ರಸಾರ ಮಾಡಿದ ಶ್ರೀಮಧ್ವಾಚಾರ್ಯರು ತಮ್ಮ ನಂತರ ದ್ವೈತ ಸಿದ್ಧಾಂತವು ಮುಂದಿನವರಿಗೆ ದಾರೀದೀಪವಾಗಬೇಕೆಂದು ಬಯಸಿ, ಅವುಗಳಿಗೆ ಸುಭದ್ರವಾದ ಒಂದು ನೆಲೆ ಗಟ್ಟನ್ನು ಹಾಕಿದರು. ಅದೇ ಸರ್ವಮೂಲವೆಂಬ ಹೆಸರಿನ ಸಂಸ್ಕೃತ ಭಾಷೆಯಲ್ಲಿ ರಚಿಸಲ್ಪಟ್ಟ ಮೂವತ್ತೇಳು ಅನರ್ಘ್ಯ ಗ್ರಂಥ ರತ್ನಗಳ ಸಮುಚ್ಚಯ.

ಈ ಗ್ರಂಥಸಮುಚ್ಚಯದಿಂದ ಶ್ರೀಮದಾಚಾರ್ಯರು ತತ್ತ್ವವಾದದ ಮಹಾ ಸೌಧವನ್ನು ನಿರ್ಮಿಸಿ, ಬರಲಿರುವ ಮಹಾ ಪಂಡಿತರಿಗೆ ಇವುಗಳನ್ನು ಅಲಂಕರಿಸುವ ಕಾರ್ಯವನ್ನು ಮಾತ್ರ ಬಿಟ್ಟಿದ್ದರು. ಇಂಥ ಅಲಂಕರಣಕಾರ್ಯವನ್ನು ಕೈಗೊಂಡ ಮಹನೀಯರಲ್ಲಿ ಟೀಕಾಚಾರ್ಯರೆನಿಸಿದ ಶ್ರೀಜಯತೀರ್ಥರೇ ಮುಖ್ಯರು.

ಅವರು ತಮ್ಮ ಪೂರ್ವಜನ್ಮದಲ್ಲಿ ಶ್ರೀಮದಾಚಾರ್ಯರ ವಿಶೇಷ ಕೃಪೆಗೆ ಪಾತ್ರರಾಗಿ, ಸರ್ವಮೂಲ ಗ್ರಂಥಗಳನ್ನು ಹೊತ್ತಿದ್ದ ಎತ್ತಾಗಿದ್ದ ಇಂದ್ರಾಂಶದ ಮಹನೀಯರು. ಮುಂದೆ ಶ್ರೀಮದಾಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ರಚಿಸಿ ಟೀಕಾಚಾರ್ಯರೆಂಬ ಕೀರ್ತಿಗೆ ಪಾತ್ರರಾದರು.

ಶ್ರೀಜಯತೀರ್ಥರು ಶ್ರೀಮದಾಚಾರ್ಯರ ಬಹುಪಾಲು ಕೃತಿಗಳಿಗೆ ದಿವ್ಯವೂ, ಯುಕ್ತಯುಕ್ತವೂ, ಪ್ರೌಢವೂ ಆದ ವ್ಯಾಖ್ಯಾನಮಾಲೆಯನ್ನು ನಿರ್ಮಿಸಿ ಆಸ್ತಿಕರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.1

ಅವರು ಶ್ರೀಮದಾಚಾರ್ಯರ ಗ್ರಂಥಗಳೆಂಬ ಶ್ರೇಷ್ಠವರಗಳಿಗೆ ಅವರ ಟೀಕೆಗಳೆಂಬ ಕಮನೀಯ ವಧುಗಳನ್ನು ಇತ್ತು ಅವರ ಅನುಕೂಲ ದಾಂಪತ್ಯ ವನ್ನು ನೋಡಿ ನಲಿದ ಭಾಗ್ಯವಂತರು ತಾವೆಂದು ಉದ್ಗಾರ ತೆಗೆದಿದ್ದಾರೆ.2

ವಂಗದೇಶದ ಚೈತನ್ಯಮತಾವಲಂಬಿಯಾದ ವಿದ್ಯಾಭೂಷಣ ಬಲದೇವ ನೆಂಬುವನು ತನ್ನ ಪ್ರಮೇಯರತ್ನಾವಳಿ ಎಂಬ ಗ್ರಂಥದಲ್ಲಿ, ಶ್ರೀಮದಾಚಾರ್ಯರ ದ್ವೈತಸಿದ್ಧಾಂತದ ಬಗೆಗೆ ಬರೆಯುತ್ತಾ 'ಈ ರತ್ನಗಳನ್ನು ಅತ್ಯವಶ್ಯವಾಗಿ ಹೃದಯದಲ್ಲಿ ಧರಿಸಲೇಬೇಕು'—ಎಂದು ತಿಳಿಸಿದ್ದಾನೆ.

ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಾಘವೇಂದ ತೀರ್ಥರು ಮೊದಲಾದವರು ಶ್ರೀಮದಾಚಾರ್ಯರ ಸರ್ವಮೂಲ ಮತ್ತು ಜಯತೀರ್ಥರ ಗ್ರಂಥರಾಶಿಗೆ ಅನರ್ಘ್ಯ ಟೀಕೆ, ಟಿಪ್ಪಣಿ, ವ್ಯಾಖ್ಯಾನಗಳನ್ನು ರಚಿಸಿದ್ದಾರೆ.

---

1) ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ
ಪ್ರತ್ನೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ ।
ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾತ್
ಅದ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ॥
ಶ್ರೀಧೀರೇಂದ್ರರ ಗುರುಗುಣಸ್ತವ-ಶ್ಲೋಕ-37

2) ಮಾಧ್ವಗ್ರಂಥಾನ್ಸ್ವಬಂಧೂನಿವ ಸರಸಹೃದಯಾಲಿಂಗ್ಯ ವಿಜ್ಞಾತಭಾವಃ।
ಸಂಯೋಜ್ಯಾಲಂಕೃತಾಭಿಃ ಸ್ವಸಹಜಮತಿಸಂಭೂತವಾಗ್ವಿರ್ವಧೂಭಿಃ ।
ಕೃತ್ವಾಽನ್ಯೋಕ್ತೀಶ್ಚದಾಸೀರ್ಬುಧಹೃದಯಗೃಹಂ ಪ್ರೌಢವೃತ್ತೀಶ್ಚ ವೃತ್ತೀಃ
ದತ್ವಾಽನ್ಯೋನ್ಯಾಭಿಯೋಗಂ ಜಯಮುನಿರಸಕೃದ್ವೀಕ್ಷ್ಯ ರೇಮೇ ಕೃತಾರ್ಥಃ ॥
ತೀರ್ಥಪ್ರಬಂದ-ಪೂರ್ವಪ್ರಬಂಧ-ಶ್ಲೋಕ-18

ಇದುವರೆಗೆ ಶ್ರೀಮದಾಚಾರ್ಯರ ಮೂವತ್ತೇಳು ಕೃತಿಗಳಿಗೆ ಇನ್ನೂರ ಐವತ್ತಕ್ಕೂ ಹೆಚ್ಚು ಚಿಕ್ಕ ದೊಡ್ಡ ವ್ಯಾಖ್ಯಾನ ಗ್ರಂಥಗಳು ಸಂಸ್ಕೃತ ಭಾಷೆ ಒಂದರಲ್ಲಿಯೇ ಇವೆ. ಇತರ ದೇಶ ಭಾಷೆಗಳಲ್ಲಿ ರಚಿಸಿರುವ ಗ್ರಂಥಗಳನ್ನು ಗಣನೆಗೆ ತೆಗೆದುಕೊಂಡರೆ ಇವುಗಳ ಸಂಖ್ಯೆ ಸುಮಾರು ಐನೂರಾಗುತ್ತದೆ. ಅಲ್ಲದೆ ಶ್ರೀಮದಾಚಾರ್ಯರ ತತ್ತ್ವವಾದವನ್ನು ಅಂದರೆ ದ್ವೈತಸಿದ್ಧಾಂತದ ಮುಖ್ಯ ಪ್ರಮೇಯಗಳನ್ನು ತಮ್ಮ ಕೀರ್ತನೆ, ಪದ, ಸುಳಾದಿ, ಉಗಾಭೋಗಾದಿಗಳಲ್ಲಿ ಪ್ರಸ್ತಾಪಿಸಿ, ವ್ಯಾಖ್ಯಾನ ಮಾಡಿರುವ ಹರಿದಾಸರ ಸಂಖ್ಯೆ ಸಾವಿರವನ್ನೂ ಮೀರುತ್ತದೆ ; ಅವರು ರಚಿಸಿದ ಕೃತಿಗಳ ಸಂಖ್ಯೆ ಹತ್ತು ಸಾವಿರವಾಗುತ್ತದೆ.

ಈ ಎಲ್ಲ ಹರಿದಾಸಸಾಹಿತ್ಯವು ಶ್ರೀಮದಾಚಾರ್ಯರು ರಚಿಸಿದ ಕೇವಲ ಮೂವತ್ತೇಳು ಗ್ರಂಥಗಳುಳ್ಳ ಸರ್ವಮೂಲಕ್ಕೆ ಸಂಸ್ಕೃತ ಭಾಷೆ ಬರದವರ ಸಲುವಾಗಿ ಮಾಡಿದ ಪ್ರಾಕೃತ ವಿವರಣೆ ಎಂದು ತಿಳಿದಾಗ, ಶ್ರೀಮದಾಚಾರ್ಯರ ಪ್ರತಿಭೆ ಎಷ್ಟು ಅಚಿಂತ್ಯಾದ್ಭುತವೆಂದು ಗೋಚರವಾಗುತ್ತದೆ.

ಅವರ ಸರ್ವಮೂಲಗ್ರಂಥದ ಸಂಖ್ಯೆ ಮೂವತ್ತೇಳು. ಇದೂ ಸಹ ಹರಿದಾಸ ಭಾವಕ್ಕೆ ಸಂಕೇತವೇ ಆಗಿದೆ ಎಂದು ಬಲ್ಲವರು ಹೇಳುತ್ತಾರೆ.

ತವರ್ಗದ ಮೂರನೆಯ ಅಕ್ಷರವಾದ 'ದ', ಯಕಾರದಿಂದ ಏಳನೆಯ ಅಕ್ಷರವಾದ 'ಸ'—ಇವುಗಳ ಸಂಯೋಜನೆಯೇ ದಾಸ ಶಬ್ದವಾಚ್ಯವಾಗಿದ್ದು ಶ್ರೀಮದಾಚಾರ್ಯರು ಲೋಕಕ್ಕೆ ಸಾರಿದ 'ದಾಸೋಹಂ' ಭಾವಕ್ಕೆ ಅವರ ಸರ್ವಮೂಲಗ್ರಂಥಸಮುಚ್ಚಯ ಜೀವಂತ ವ್ಯಾಖ್ಯಾನ ರೂಪವಾಗಿದೆ ಎಂದು ತಿಳಿಯಬಹುದಾಗಿದೆ.

ಶ್ರೀಮದಾಚಾರ್ಯರು ರಚಿಸಿರುವ ಸರ್ವಮೂಲ ಗ್ರಂಥಗಳ ಬಗೆಗೆ ಶ್ರೀವ್ಯಾಸರಾಜರು ತಮ್ಮಿಂದ ರಚಿತವಾದ ಗ್ರಂಥಮಾಲಿಕಾಸ್ತೋತ್ರದಲ್ಲಿ ಹೀಗೆ ಹೇಳಿದ್ದಾರೆ—

ಕೃಷ್ಣಂ ವಿದ್ಯಾಪತಿಂ ನತ್ವಾ ಪೂರ್ಣಬೋಧಾರ್ಯಸದ್ಗುರೂನ್ ।
ಗ್ರಂಥಾನ್ವಕ್ಷ್ಯೇಽನಂದತೀರ್ಥಮುಖಾಂಬುಜವಿನಿಸ್ಸೃತಾನ್ ॥

ನಾರಾಯಣೇನ ವ್ಯಾಸೇನ ಪ್ರೇರಿತಸ್ತತ್ತ್ವಸಂವಿದೇ ।
ಗ್ರಂಥಾನ್ಮಧ್ವಶ್ಚಕಾರಾಸೌ ಸಪ್ತತ್ರಿಂಶದಮಂದಧೀಃ ॥

ಗೀತಾಭಾಷ್ಯಂ ಚಕಾರಾಸೌ ಪ್ರಥಮಂ ತುಷ್ಟಿದಂ ಹರೇಃ ।
ಭಾಷ್ಯಾಣುಭಾಷ್ಯೇ ಚಕ್ರೇಽಥ ಹ್ಯನುವ್ಯಾಖ್ಯಾನಮುತ್ತಮಂ ॥

ಪ್ರಮಾಣಲಕ್ಷಣಂ ನಾಮ ಕಥಾಲಕ್ಷಣಸಂಜ್ಞಿತಮ್ ।
ಉಪಾಧಿಖಂಡನಂ ಚಕ್ರೇ ಮಾಯಾವಾದಸ್ಯ ಖಂಡನಂ ॥

ಚಕ್ರೇ ಪ್ರಪಂಚಮಿಥ್ಯಾತ್ವಮಾನಖಂಡನಮೇವ ಚ ।
ಚಕಾರ ತತ್ತ್ವ ಸಂಖ್ಯಾನಂ ಸಾಧನಂ ವಿಷ್ಣುದರ್ಶನಂ ॥

ಗ್ರಂಥಂ ತತ್ತ್ವವಿವೇಕಾಖ್ಯಂ ತತ್ತ್ವೋದ್ಯೋತಂ ಹರೇಃ ಪ್ರಿಯಂ ।
ಕರ್ಮನಿರ್ಣಯನಾಮಾನಂ ಗ್ರಂಥಂ ನ್ಯಾಯಾರ್ಥಬೃಂಹಿತಂ ॥

ಸುಖತೀರ್ಥಯತಿಶ್ಚಕ್ರೇ ವಿಷ್ಣುತತ್ತ್ವವಿನಿರ್ಣಯಂ ।
ಋಗ್ಭಾಷ್ಯಂ ಚ ಚಕಾರಾಸೌ ಸರ್ವವೇದಾರ್ಥನಿರ್ಣಯಂ ॥

ಐತರೇಯಂ ತೈತ್ತಿರೀಯಂ ಬೃಹದಾರಣ್ಯಮೇವ ಚ।
ಈಶಾವಾಸ್ಯಂ ಕಾಠಕಂ ಚ ಛಾಂದೋಗ್ಯಾಥರ್ವಣೇ ತಥಾ ॥

ಮಾಂಡೂಕಂ ನಾಮ ಷಟ್‌ಪ್ರಶ್ನಂ ತಥಾ ತಲವಕಾರಕಂ ।
ಚಕ್ರೇ ಭಾಷ್ಯಾಣಿ ದಿವ್ಯಾನಿ ದಶೋಪನಿಷದಾಂ ಗುರುಃ ॥

ನಿರ್ಣಯಂ ಸರ್ವಶಾಸ್ತ್ರಾಣಾಂ ಗೀತಾತಾತ್ಪರ್ಯನಿರ್ಣಯಂ ।
ಸನ್ನ್ಯಾಯವಿವೃತಿಂ ನಾಮ ನ್ಯಾಯಶಾಸ್ತ್ರನಿಕೃಂತನಂ ॥

ನರಸಿಂಹನಖಸ್ತೋತ್ರಂ ಚಕ್ರೇ ಯಮಕಭಾರತಂ ।
ದ್ವಾದಶಸ್ತೋತ್ರಮಕರೋತ್ಕೃಷ್ಣಾಮೃತಮಹಾರ್ಣವಂ ॥

ತಂತ್ರಸಾರಂ ಚಕಾರಾಸೌ ಸದಾಚಾರಸ್ಮೃತಿಂ ಸುಧೀಃ ।
ಶ್ರೀಮದ್ಭಾಗವತಸ್ಯಾಪಿ ತಾತ್ಪರ್ಯಂ ಜ್ಞಾನಸಾಧನಂ ॥

ಮಹಾಭಾರತತಾತ್ಪರ್ಯನಿರ್ಣಯಂ ಸಂಶಯಚ್ಛಿದಂ ।
ಯತಿಪ್ರಣವಕಲ್ಪಂ ಚ ಪ್ರಣವಾರ್ಥಪ್ರಕಾಶಕಂ ॥

ಜಯಂತೀನಿರ್ಣಯಂ ಚಕ್ರೇ ದೇವಕೀಗರ್ಭಜನ್ಮನಃ ।
ಕೃಷ್ಣಸ್ಯ ಕೃಷ್ಣಭಕ್ತ್ಯೈಯಂ ದ್ವೈಪಾಯನಕರಾಬ್ಜಭೂಃ ॥
ತ್ರಿಂಶತ್ಸಹಸ್ರಸಂಖ್ಯಾಕಂ ದ್ವ್ಯಧಿಕಂ ತುಷ್ಟಿದಂ ಹರೇಃ ।
ಏತೇಷಾಂ ಪಾಠಮಾತ್ರೇಣ ಮಧ್ವೇಶಃ ಪ್ರೀಯತೇ ಸದಾ ॥

ಇತಿ ಶ್ರೀಮದ್ವ್ಯಾಸರಾಜ ವಿರಚಿತ ಗ್ರಂಥಮಾಲಿಕಾ ಸ್ತೋತ್ರಂ ಸಂಪೂರ್ಣಂ.

ಈ ಗ್ರಂಥ ಸಮುಚ್ಚಯದಲ್ಲಿ ಭಾಷ್ಯಗಳೂ, ವ್ಯಾಖ್ಯಾನಗಳೂ, ಸ್ವತಂತ್ರ ಗ್ರಂಥಗಳೂ, ವಿಮರ್ಶೆಗಳೂ, ಶಾಸ್ತ್ರ ವಿಚಾರಗಳೂ ಸೇರಿವೆ.1

ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಿಗೆ ಆಧಾರವಾಗಿ ಅನೇಕ ಪ್ರಾಚೀನ ಗ್ರಂಥಗಳಿಂದ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಇಷ್ಟು ವಿದ್ವತ್ಪೂರ್ಣವಾಗಿ, ವೇದ, ಉಪನಿಷತ್ತು, ಪುರಾಣಗಳನ್ನು ಸಂಶೋಧಿಸಿ ಪ್ರಕಟಿಸಿದವರು ಭಾರತದಲ್ಲಿ ಇನ್ನೊಬ್ಬ ದಾರ್ಶನಿಕರು ಇಲ್ಲವೇ ಇಲ್ಲ.

---

1) ಈ ವಿಷಯಗಳನ್ನು ಪೂಜ್ಯಯಾದವಾಚಾರ್ಯರು ಹೀಗೆ ಕ್ರೋಡೀಕರಿಸಿರುತ್ತಾರೆ.

ಭಾಷ್ಯಾಣಾಂ ದಶಕಂ ಚ ಪಂಚಕಯುತಂ ತಿಸ್ರಶ್ಚ ನಿರ್ಣೀತಯಃ
ವಿಷ್ಣೋಃಸ್ತೋತ್ರಯುಗಂ ದಶಪ್ರಕರಣಂ ಕಲ್ಪದ್ವಯಂ ಚ ಶ್ರುತಿಃ ।
ಶ್ರೀಕೃಷ್ಣಾಮೃತತಂತ್ರಸಾರಯಮಕಂ ನ್ಯಾಯಾವಲೀದೀಪನಂ
ಯೇನಾಕಾರಿ ಸದೈವ ಮಧ್ವಮುನಿರಾಟ್ ದದ್ಯಾತ್ಸುವಿದ್ಯಾಂ ಮಮ ॥

ತಾತ್ಪರ್ಯ : ಹತ್ತು ಉಪನಿಷದ್ಭಾಷ್ಯಗಳು, ಸೂತ್ರಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ, ಗೀತಾಭಾಷ್ಯ, ಋಗ್ಭಾಷ್ಯ ಎಂಬ 15 ಭಾಷ್ಯಗಳು ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯ, ಗೀತಾತಾತ್ಪರ್ಯನಿರ್ಣಯ ಎಂಬ ಮೂರು ನಿರ್ಣಯಗಳು, ದ್ವಾದಶ ಸ್ತೋತ್ರ, ನಖಸ್ತುತಿ ಎಂಬೆರಡು ಸ್ತೋತ್ರಗಳು. ಹತ್ತು ಪ್ರಕರಣಗಳು : ಕೃಷ್ಣಾಮೃತ ಮಹಾರ್ಣವ, ಜಯಂತೀನಿರ್ಣಯ, ತಂತ್ರಸಾರಸಂಗ್ರಹ, ಯಮಕಭಾರತ, ಯತಿಪ್ರಣವಕಲ್ಪ, ನ್ಯಾಯವಿವರಣ ಎಂಬ 37 ಗ್ರಂಥಗಳು.

ಈ ಸರ್ವಮೂಲಗ್ರಂಥಗಳಲ್ಲಿ ಹೇಳಿರುವ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು :

ಅವರು ರಚಿಸಿದ ಗ್ರಂಥಗಳಲ್ಲಿ ಮೊದಲು ಬರುವುದು ಗೀತಾ ಭಾಷ್ಯ, ಕೊನೆಯದು ಜಯಂತೀ ನಿರ್ಣಯ.

೧. **ಗೀತಾ ಭಾಷ್ಯ :** ಇದು ಸುಪ್ರಸಿದ್ಧ ಶ್ರೀಮದ್ಭಗವದ್ಗೀತೆಯ ವ್ಯಾಖ್ಯಾನ. ಇದು ಅವರ ಪ್ರಥಮ ಕೃತಿ.

**ಆದಿ.** ದೇವಂ ನಾರಾಯಣಂ ನತ್ವಾ ಸರ್ವದೋಷವಿವರ್ಜಿತಂ ।
ಪರಿಪೂರ್ಣಗುರೂಂಶ್ಚಾನ್ಗೀತಾರ್ಥಂ ವಕ್ಷ್ಯಾಮಿ ಲೇಶತಃ ॥

**ಅಂತ್ಯ.** ಪೂರ್ಣಾದೋಷಮಹಾವಿಷ್ಣೋರ್ಗೀತಾಮಾಶ್ರಿತ್ಯ ಲೇಶತಃ ।
ನಿರೂಪಣಂ ಕೃತಂ ತೇನ ಪ್ರಿಯತಾಂ ಮೇ ಸದಾ ವಿಭುಃ ॥

೨. **ಗೀತಾತಾತ್ಪರ್ಯನಿರ್ಣಯ ;** ಗೀತಾಭಾಷ್ಯದ ಪೂರಕ ಗ್ರಂಥ ; ಇದನ್ನು ಶ್ರೀಮದಾಚಾರ್ಯರು ಬದರಿಯಲ್ಲಿ ರಚಿಸಿದರೆಂದು ಪ್ರತೀತಿ.

**ಆದಿ,** ಇಂದಿರಾವದನಾಂಭೋಜರಾಜಹಂಸಾಯ ವಿಷ್ಣವೇ ।
ಅಮಂದಾನಂದಸಂದೋಹಸುಂದರಾಕೃತಯೇ ನಮಃ ॥

**ಅಂತ್ಯ,** ನಿಃಶೇಷದೋಷರಹಿತಕಲ್ಯಾಣಾಶೇಷಸದ್ಗುಣ ।
ಭೂತಿಸ್ವಯಂಭುಶರ್ವಾದಿವಂದ್ಯಂ ತ್ವಾಂ ನೌಮಿ ಮೇ ಪ್ರಿಯಂ ॥

೩. **ಬ್ರಹ್ಮಸೂತ್ರಭಾಷ್ಯ ;** ಶ್ರೀವೇದವ್ಯಾಸರಿಂದ ರಚಿತವಾಗಿ, ಸರ್ವ ವೇದಾರ್ಥನಿರ್ಣಾಯಕವೆಂದು ಸುಪ್ರಸಿದ್ಧವಾಗಿರುವ ಬ್ರಹ್ಮ ಸೂತ್ರಗಳ ವ್ಯಾಖ್ಯಾನ. ಇದರಿಂದಲೇ ಭಾಷ್ಯಕಾರರೆಂಬ ಕೀರ್ತಿ ; ಸರ್ವಜ್ಞಾಚಾರ್ಯರೆಂಬ ಬಿರುದು ; ಇಲ್ಲಿಯ ಅವರ ವಿದ್ವದ್ವೈಭವದಿಂದ ವಿದಿತವಾಗಿದೆ. ಇದನ್ನು ವಿದ್ವಾಂಸರು "ಸುಂದರ ಮುತ್ತು ರತ್ನಗಳಿಂದ ತುಂಬಿರುವ ಅಪಾರ ಸಮುದ್ರದಂತಿರುವ ಅರ್ಥಗರ್ಭಿತ ಕೃತಿ"—ಎಂದು ವರ್ಣಿಸಿದ್ದಾರೆ.

**ಆದಿ.**—ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಂ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥

ಅಂತ್ಯ. ಜ್ಞಾನಾನಂದಾದಿಭಿಃ ಸರ್ವೈರ್ಗುಣೈಃ ಪೂರ್ಣಾಯ ವಿಷ್ಣವೇ ।
ನಮೋಽಸ್ತು ಗುರವೇ ನಿತ್ಯಂ ಸರ್ವದಾತಿಪ್ರಿಯಾಯ ಮೇ ॥
ನಿತ್ಯಾನಂದೋ ಹರಿಃ ಪೂರ್ಣೋ ನಿತ್ಯದಾ ಪ್ರೀಯತಾಂ ಮಮ।
ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಚ ವಿಷ್ಣವೇ ॥

೪. ಅನುವ್ಯಾಖ್ಯಾನ :- ಇದು ಸೂತ್ರಭಾಷ್ಯದ ಪೂರಕ ಗ್ರಂಥ. ಪರಪಕ್ಷದೋಷಗಳನ್ನು ಇಲ್ಲಿ ಸ್ಪಷ್ಟವಾಗಿ ತೋರಿಸಲಾಗಿದೆ. ಸಾಧನೆಗೆ ತಮ್ಮ ಸಿದ್ಧಾಂತದಲ್ಲಿ ನಿರ್ಭಯ ವಿಶ್ವಾಸ ಭಕ್ತಿಗಳನ್ನು ಹುಟ್ಟಿಸುವ ಮಹಾಕೃತಿ, ಈ ಕೃತಿಯ ಮಹಾ ವ್ಯಾಖ್ಯಾನವೇ ಸುಪ್ರಸಿದ್ಧ (ಶ್ರೀ ಜಯತೀರ್ಥಮುನಿಗಳ) ಶ್ರೀಮನ್ನ್ಯಾಯಸುಧಾ. ಅನುವ್ಯಾಖ್ಯಾನದ ರಚನೆ ಗ್ರಂಥಕರ್ತಾರ ಸರ್ವಜ್ಞತೆಗೆ ಸಾಕ್ಷಿ ಅದರ ನಾಲ್ಕು ಅಧ್ಯಾಯಗಳನ್ನು ನಾಲ್ವರು ಶಿಷ್ಯರಿಂದ ಏಕ ಕಾಲದಲ್ಲಿ ಹೇಳಿ ಬರೆಸಿದರು ಎಂದು ತಿಳಿಸಲಾಗಿದೆ, ಒಬ್ಬೊಬ್ಬ ಶಿಷ್ಯನಿಗೂ ಒಂದೊಂದು ಅಧ್ಯಾಯದ ಒಂದೊಂದು ಶ್ಲೋಕವನ್ನು ಉಕ್ತಲೇಖನ ಹೇಳಿದರಂತೆ ! ಇಂಥ ದಿವ್ಯ ಪ್ರಜ್ಞೆಯ ದ್ಯೋತಕ ಈ ಗ್ರಂಥ ಒಂದು ಅತ್ಯಂತ ಶೋಭಾಯಮಾನವಾದ ಕೃತಿರತ್ನ. ನ್ಯಾಯಮಾಲೆ ಎಂದೂ ಹೆಸರಿದೆ.

ಆದಿ ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ಅಂತ್ಯ. ನಿಃಶೇಷದೋಷರಹಿತಕಲ್ಯಾಣಾಖಿಲಸದ್ಗುಣ ।
ಭೂತಿಸ್ವಯಂಭುಶರ್ವಾದಿವಂದ್ಯಂ ತ್ವಾಂ ನೌಮಿ ಮೇ ಪ್ರಿಯಮ್ ॥

೫. ನ್ಯಾಯವಿವರಣೆ : ಬ್ರಹ್ಮಸೂತ್ರ ಅದು ಭಾಷ್ಯಕ್ಕೆ ಈ ಕೃತಿಯು ಉಪಷ್ಟಂಭಕವಾಗಿದೆ. ಇಲ್ಲಿ ಪೂರ್ವಪಕ್ಷಗಳನ್ನು ಯುಕ್ತಿಯುಕ್ತವಾಗಿ ಖಂಡಿಸಲಾಗಿದೆ, ಸಿದ್ಧಾಂತ ಪಕ್ಷಗಳು ಸಾಧಿಸಲ್ಪವೆ,

ಅನುವ್ಯಾಖ್ಯಾನದಲ್ಲಿ ಸೂಕ್ಷ್ಮವಾಗಿ ಸೂಚಿತವಾಗಿರುವ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳು ಈ ಗ್ರಂಥದಲ್ಲಿ ವಿಸ್ತೃತವಾಗಿವೆ. ಇದಕ್ಕೆ ಜಯ ತೀರ್ಥರ ಟೀಕೆ ಮೊದಲನೆಯ ಅಧ್ಯಾಯದ ಮೊದಲೆರಡೂಪರೆ ಪಾದಗಳಿಗೆ ಮಾತ್ರ ಇದೆ. ಮುಂದಕ್ಕೆ ಭಾವಬೋಧಕ ಟೀಕೆ ಇದೆ.

ಆದಿ. ಚೇತನಾಚೇತನಜಗನ್ನಿಯಂತ್ರೇಽಶೇಷಸಂವಿದೇ ।
ನಮೋ ನಾರಾಯಣಾಯಾಜಶರ್ವಶಕ್ರಾದಿವಂದಿತ ॥

ಅಂತ್ಯ. ನಮೋಽಜಭವಭೂರ್ಯಕ್ಷಪೂರಸ್ಸರಸುರಾಶ್ರಯ ।
ನರಾಯಣಾರಣಂ ಪಾಹ್ಯಂ ಮಾಪತೇ ಪ್ರೇಯಸಾಂ ಪ್ರಿಯ ॥

೬. ಅಣುಭಾಷ್ಯ (ಸಂಕ್ಷೇಪಭಾಷ್ಯ): ಬ್ರಹ್ಮಸೂತ್ರದ ಅನಂತಾರ್ಥಗಳನ್ನು ಸೂಕ್ಷ್ಮವಾಗಿ ಸಂಗ್ರಹಿಸಿ ತಿಳಿಸುವ ಸೂತ್ರ ಪ್ರಸ್ಥಾನದ ಕೈಪಿಡಿ.

ಆದಿ. ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಂ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥
ವಿಷ್ಣುರೇವ ವಿಜಿಜ್ಞಾಸ್ಯಃ ಸರ್ವಕರ್ತಾಗಮೋದಿತಃ ।
ಸಮನ್ವಯಾದೀಕ್ಷತೇಶ್ಚ ಪೂರ್ಣಾನಂದೋಂತರಃಖವತ್ ॥

ಅಂತ್ಯ. ನಮೋ ನಮೋಽಶೇಷದೋಷದೂರಪೂರ್ಣಗುಣಾತ್ಮನೇ ।
ವಿರಿಂಚಿಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ ತೇ ॥

೭. ಋಗ್ಭಾಷ್ಯ: ಸರ್ವವೇದಗಳೂ ಋಕ್ಕುಗಳೂ ಶ್ರೀವಿಷ್ಣುವಿನ ಶ್ರೇಷ್ಠತೆಯನ್ನು ಪ್ರತಿಪಾದಿಸುತ್ತವೆ ಎಂಬುದನ್ನು ಸಾಧಿಸುವ ವೇದವ್ಯಾಖ್ಯಾನ ರೂಪ ಗ್ರಂಥ.

ಆದಿ. ನಾರಾಯಣಂ ನಿಖಿಲಪೂರ್ಣಗುಣಾರ್ಣವಮುಚ್ಚ-
ಸೂರ್ಯಾಮಿತದ್ಯುತಿಮಶೇಷನಿರಸ್ತದೋಷಮ್ ।
ಸರ್ವೇಶ್ವರಂ ಗುರುಮಜೇಶನುತಂ ಪ್ರಣಮ್ಯ
ವಕ್ಷ್ಯಾಮ್ಯೃಗರ್ಥಮತಿತುಷ್ಟಿಕರಂ ತದಸ್ಯ ॥

ಅಂತ್ಯ. ಉಪಪ್ಲುತ್ತಃ ಕ್ಷತ್ರಿಯ್ಯೈಃ ಸ ಆವೇಶೇವ ಜನಾರ್ದನಃ ।
ಹಂತಿ ಶತ್ರೂಂಶ್ಚ ತೈರ್ದೇವೋ ಭಯೇ ಚ ಸ್ವಾಶ್ರಯಂ ದದೌ ।
ವಾರ್ತಾಭಿಗಂತಾ ಶರುತಾ ಜೇತಾ ಚಾಸ್ಯ ನ ಹಿ ಕ್ವಚಿತ್ ।
ಯುದ್ಧಂ ಮಹಾಧನಂ ತ್ವರ್ಥಂ ಪ್ರಸಿದ್ಧಂ ಧನಮೇವ ಹಿ ॥

೮. ಪ್ರಮಾಣಲಕ್ಷಣ : ಪ್ರತ್ಯಕ್ಷ ಅನುಮಾನ ಆಗಮಗಳೆಂಬ ಪ್ರಮಾಣಗಳ ಲಕ್ಷಣಗಳನ್ನು ತಿಳಿಸಿ ಪರಾಪರ ವಸ್ತುಗಳ ಜ್ಞಾನಕ್ಕೆ ಅಳವಡಿಸಿ ಕೊಳ್ಳಲು ಸಹಾಯಕವಾದ ಸನ್ಮಾರ್ಗದೀಪಿಕೆ.

ಆದಿ. ಅಶೇಷಗುರುಮೀಶೇಶಂ ನಾರಾಯಣಮನಾಮಯಂ ।
ಸಂಪ್ರಣಮ್ಯ ಪ್ರವಕ್ಷ್ಯಾಮಿ ಪ್ರಮಾಣಾನಾಂ ಸ್ವಲಕ್ಷಣಂ ॥

ಅಂತ್ಯ. ಅಶೇಷಮಾನಮೇಕೈಕಸಾಕ್ಷಿಣೇಽಕ್ಷಯಮೂರ್ತಯೇ ॥
ಅಜೇಶಪುರುಹೂತೇಡ್ಯ ನಮೋ ನಾರಾಯಣಾಯ ಚ ॥

೯. ಕಥಾಲಕ್ಷಣ : ಶಾಸ್ತ್ರಗಳ ವಾಕ್ಯಾರ್ಥವಿಚಾರಗಳಲ್ಲಿ ಗಮನಿಸ ಬೇಕಾದ ಮುಖ್ಯಾಂಶಗಳನ್ನು ಇಲ್ಲಿ ನಿರೂಪಿಸಲಾಗಿದೆ. ಪ್ರಮಾಣಲಕ್ಷಣ ಮತ್ತು ಕಥಾಲಕ್ಷಣ ಗ್ರಂಥಗಳು "ಪ್ರಮಾಣ ಲೋಕವನ್ನೆಲ್ಲಾ ನಿಚ್ಚಳವಾಗಿ ಬೆಳಗುವ ಎರಡೂ ಕಣ್ಣುಗಳು" ಎಂದು ತಿಳಿಯಬಹುದು.

ಆದಿ. ನೃಸಿಂಹಮಖಿಲಾಜ್ಞಾನತಿಮಿರಾಶಿಶಿರದ್ಯುತಿಮ್ ।
ಸಂಪ್ರಣಮ್ಯ ಪ್ರವಕ್ಷ್ಯಾಮಿ ಕಥಾಲಕ್ಷಣಮಂಜಸಾ ॥

ಅಂತ್ಯ. ಸದೋದಿತಾಮಿತಾಜ್ಞಾನಪೂರವಾರಿತಹೃತ್ತಮಃ ।
ನರಸಿಂಹಃ ಪ್ರಿಯತಮಃ ಪ್ರೀಯತಾಂ ಪುರುಷೋತ್ತಮಃ ॥

೧೦. ಮಾಯಾವಾದಖಂಡನ : ಪ್ರಪಂಚ ಮಿಥ್ಯೆ ಎಂಬ ಅದ್ವೈತ ವಾದವನ್ನು ಸಾಧಾರಣವಾಗಿ ಖಂಡಿಸಿ ಜಗತ್ತು ಸತ್ಯ, ಶ್ರೀನಾರಾಯಣನು ಸರ್ವೋತ್ತಮ ಎಂದು ಸಾಧಿಸುವ ಗ್ರಂಥ.

ಆದಿ. ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸಾದ್‌ಜ್ಞಾನಸುಖಶಕ್ತಿಪಯೋನಿಧಿಃ ॥

ಅಂತ್ಯ. ನಾಸ್ತಿ ನಾರಾಯಣಸಮಂ ನ ಭೂತೋ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥
ಇತಿ ಸರ್ವಜ್ಞಮುನಿನಾ ಮಾಯಾವಾದತಮೋಽಖಿಲಮ್ ।
ನಿರಸ್ತಂ ತತ್ತ್ವವಾದೇನ ಸತಾಂ ಸಂಶಯನುತ್ತಯೇ ॥

೧೧. **ಉಪಾಧಿಖಂಡನ :** ಜಗತ್ತು ಸತ್ಯವೆಂದು ತೋರುವುದಕ್ಕೆ ಅಜ್ಞಾನವೇ ಕಾರಣ ಎಂಬ ಅದ್ವೈತಸಿದ್ಧಾಂತದ ವ್ಯಾವಹಾರಿಕ ಸತ್ಯವೆಂಬ ವಾದವನ್ನು ಖಂಡಿಸುವ ಕೃತಿರತ್ನ.

ಆದಿ. ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।
ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ।

ಅಂತ್ಯ. ಮಾಯಾವಾದತಮೋವ್ಯಾಪ್ತಮಿತಿತತ್ತ್ವದೃಶಾ ಜಗತ್ ।
ಭಾತಂ ಸರ್ವಜ್ಞಸೂರ್ಯೋಣ ಪ್ರೀತಯೇ ಶ್ರೀಪತೇಃ ಸದಾ ॥
ನಮೋಽಮಂದಜನಾನಂದಸಾಂದ್ರಸುಂದರಮೂರ್ತಯೇ ।
ಇಂದಿರಾಪತಯೇ ನಿತ್ಯಾನಂದಭೋಜನದಾಯಿನೇ ॥

೧೨. **ಪ್ರಪಂಚಮಿಥ್ಯಾತ್ವಾನುಮಾನಖಂಡನ :** ಇದು ಒಂದು ಅದ್ವೈತ ಸಿದ್ಧಾಂತದ ಖಂಡನ ಗ್ರಂಥ, ಜಗತ್ತು ಮಿಥ್ಯೆ ಎಂಬ ವಾದಕ್ಕೆ ಸಾಧಕವಾಗಿ ಉದಹರಿಸುವ ಅನುಮಾನಗಳು ಹೇಗೆ ದೋಷಯುಕ್ತವಾಗಿವೆಂಬುದನ್ನು ತಿಳಿಸುವ ಗ್ರಂಥ.

ಆದಿ ವಿಮತಂ ಮಿಥ್ಯಾ ದೃಶ್ಯತ್ವಾತ್ ಯದಿತ್ಥಂ
ತತ್ತಥಾ ಯಥಾ ಸಂಪ್ರತಿಪನ್ನಂ ।
ಇತ್ಯುಕ್ತೇರ್ಜಗತಾಭಾವಾದಾಶ್ರಯಾಸಿದ್ಧಿಃ ಪಕ್ಷಃ ॥

ಅಂತ್ಯ. ಯೋಽಸೌ ದೈತ್ಯೈತೇ ಸದಾನಂದನಿತ್ಯವ್ಯಕ್ತಚಿದಾತ್ಮನಾ ।
ನಿರ್ದೋಷಾಖಿಲಕಲ್ಯಾಣಗುಣಂ ವಂದೇ ರಮಾಪತಿಂ ॥

೧೩. **ತತ್ತ್ವಸಂಖ್ಯಾನ :** ದ್ವೈತಮತದಲ್ಲಿ ತತ್ತ್ವಗಳ ಲಕ್ಷಣಗಳನ್ನು ವಿಶದಪಡಿಸು ಗ್ರಂಥ.

ಆದಿ. ಸ್ವತಂತ್ರಮಸ್ವತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ ।
ಸ್ವತಂತ್ರೋ ಭಗವಾನ್ವಿಷ್ಣುರ್ಭಾವಾಭಾವೌ ದ್ವಿಧೇತರತ್ ॥

ಅಂತ್ಯ. ಸೃಷ್ಟಿಃ ಸ್ಥಿತಿಃ ಸಂಹೃತಿಶ್ಚ ನಿಯಮೋ ಜ್ಞಾನಬೋಧನೇ ।
ಬಂಧೋ ಮೋಕ್ಷಃ ಸುಖಂ ದುಃಖಮಾವೃತಿರ್ಜ್ಯೋತಿರೇವ ಚ ॥
ವಿಷ್ಣುನಾಸ್ಯ ಸಮಸ್ತಸ್ಯ ಸಮಾಸವ್ಯಾಸಯೋಗತಃ ।

೧೪. **ತತ್ತ್ವವಿವೇಕ :** ದ್ವೈತಮತದ ಸ್ವತಂತ್ರ ಮತ್ತು ಅಸ್ವತಂತ್ರ ಪ್ರಮೇಯಗಳ ವಿಶದೀಕರಣವನ್ನು ತಿಳಿಸುವ ಗ್ರಂಥ

ಆದಿ. ಸ್ವತಂತ್ರಂ ಪರತಂತ್ರಂ ಚ ಪ್ರಮೇಯಂ ದ್ವಿವಿಧಂ ಮತಮ್ ।
ಸ್ವತಂತ್ರೋ ಭಗವಾನ್ವಿಷ್ಣುರ್ನಿರ್ದೋಷಾಖಿಲಸದ್ಗುಣಃ ॥

ಅಂತ್ಯ. ಯ ಏತತ್ಪರತಂತ್ರಂ ತು ಸರ್ವಮೇವ ಹರೇಃ ಸದಾ ।
ವಶಮಿತ್ಯೇವ ಜಾನಾತಿ ಸಂಸಾರಾನ್ಮುಚ್ಯತೇ ಹಿ ಸಃ ॥

೧೫. **ತತ್ತ್ವೋದ್ಯೋತ :** ಅದ್ವೈತ ಸಿದ್ಧಾಂತಗಳನ್ನು ಖಂಡಿಸುವ ಮತ್ತೊಂದು ತತ್ತ್ವವಾದ ಬೋಧಕ ಗ್ರಂಥ.

ಆದಿ. ಸರ್ವಶಾಸ್ತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ ।
ನಿತ್ಯತಾದ್ಯೈಶ್ಚಿಕೀರ್ಷಿತ್ಯಯಂತಃ ಪ್ರೋ ನೋ ರಮಾಪತಿಃ ॥

ಅಂತ್ಯ. ಸರ್ವಜ್ಞಸನ್ಮುನೀಂದ್ರೋಚ್ಚಸನ್ಮನಃಪಂಕಜಾಲಯಃ ।
ಅಜಿತೋ ಜಯತೇ ಶ್ರೀಶೋ ರಾಮಾಬಾಹುಲತಾಶಯಃ ॥

೧೬. **ಕರ್ಮನಿರ್ಣಯ :** ಋಗ್ವೇದ ಬ್ರಾಹ್ಮಣದಲ್ಲಿನ ಮಹಾನಾಮ್ನಿ ಖಂಡದ ಅರ್ಥ ವಿವರಣೆ. ಈ ಗ್ರಂಥವನ್ನು ಉಚ್ಚಭೂತಿ (ಉಜಿರೆ) ಗ್ರಾಮದಲ್ಲಿ ಕರ್ಮಕಾಂಡ ವ್ಯಾಖ್ಯಾನಾವಸರದಲ್ಲಿ ಅದ್ವೈತಿಗಳನ್ನು ಜಯಿಸಿ ರಚಿಸಿದರು. ಇದು ಕರ್ಮಕಾಂಡ ಗ್ರಂಥ.

ಆದಿ. ಯ ಇಜ್ಯತೇ ವಿಧೀಶಾನಶಕ್ರಪೂರ್ವೈಃ ಸದಾ ಮಖೈಃ ।
ರಮಾಪ್ರಣಯಿನೇ ತಸ್ಮೈ ಸರ್ವಯಜ್ಞಭುಜೇ ನಮಃ ॥

ಅಂತ್ಯ. ನಮೋ ನಾರಾಯಣಾಯೋಜಭವಶಕ್ರೋರುಗ್ಯೈರ್ಮುಖ್ಯೈಃ ।
ಸದಾವಂದಿತಪಾದಾಯ ಶ್ರೀಶಾಯ ಪ್ರೇಯಸೇಽಧಿಕಮ್ ॥

೧೭. ವಿಷ್ಣುತತ್ತ್ವನಿರ್ಣಯ (ತತ್ತ್ವನಿರ್ಣಯ): ದ್ವೈತಸಿದ್ಧಾಂತದ ಬಹು ಮುಖ್ಯ ಪ್ರಮೇಯಗಳನ್ನು ಸದಾಗಮ ವಾಕ್ಯಗಳ ದೃಷ್ಟಾಂತಗಳೊಂದಿಗೆ ಸಾಧಾರಣವಾಗಿ ಸಮರ್ಥಿಸಿ ಸಿದ್ಧಾಂತಗಳನ್ನು ಸ್ಥಾಪಿಸುವ ಪ್ರಮುಖ ಪ್ರಕರಣ ಗ್ರಂಥ, ಇದಕ್ಕೆ ಅಣುಸುಧಾ ಎಂದೂ ಹೆಸರು. ವೇದಾಂತ ಗ್ರಂಥಗಳಲ್ಲಿ 4 ಅಧ್ಯಾಯಗಳಿರುತ್ತವೆ. ಈ ಗ್ರಂಥದಲ್ಲಿ ಮೂರೇ ಅಧ್ಯಾಯಗಳಿವೆ. ಪ್ರಮಾಣಗಳು ಮೂರೇ ಎಂದು ತಿಳಿಸುತ್ತದೆ.

ಆದಿ. ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಮ್ ।
ನಾರಾಯಣಂ ಸದಾ ವಂದೇ ನಿರ್ದೋಷಾಶೇಷಸದ್ಗುಣಮ್ ॥

ಅಂತ್ಯ. ಸ್ವತಂತ್ರಾಯಾಖಿಲೇಶಾಯ ನಿರ್ದೋಷಗುಣರೂಪಿಣೇ ॥
ಪ್ರೇಯಸೇ ಮೇ ಸುಪೂರ್ಣಾಯ ನಮೋ ನಾರಾಯಣಾಯ ತೇ ।

೧೮. ಈಶಾವಾಸ್ಯಭಾಷ್ಯ

ಆದಿ. ನಿತ್ಯಾನಿತ್ಯಜಗದ್ಧಾತ್ರೇ ನಿತ್ಯಾಯ ಜ್ಞಾನಮೂರ್ತಯೇ ।
ಪೂರ್ಣಾನಂದಾಯ ಹರಯೇ ಸರ್ವಯಜ್ಞಭುಜೇ ನಮಃ ॥

ಅಂತ್ಯ. ಪೂರ್ಣಶಕ್ತಿಚಿದಾನಂದಶ್ರೀಶೇಡಿತಸ್ವರೂಪಮೂರ್ತಯೇ ।
ಮಮಾಭ್ಯಧಿಕಮಿತ್ರಾಯ ನಮೋ ನಾರಾಯಣಾಯ ತೇ ॥

೧೯. ಕಾಠಕಭಾಷ್ಯ

ಆದಿ. ನಮೋ ಭಗವತೇ ತಸ್ಮೈ ಸರ್ವತಃ ಪರಮಾಯ ತೇ ।
ಸರ್ವಪ್ರಾಣಿಹೃದಿಸ್ಥಾಯ ವಾಮನಾಯ ನಮೋ ನಮಃ ॥

ಅಂತ್ಯ. ನಮೋ ಭಗವತೇ ತಸ್ಮೈ ವಿಷ್ಣವೇ ಪ್ರಭವಿಷ್ಣವೇ ।
ಯಸ್ಯಾಹಮಾಪ್ತಮಾಪ್ತೇಭ್ಯೋ ಯೋ ಮ ಆಪ್ತತಮಸ್ಸದಾ ॥

### ೨೦. ಛಾಂದೋಗ್ಯಭಾಷ್ಯ

ಆದಿ. ಅತ್ಯುದ್ರಿಕ್ತವಿಶೇಷಸತ್ಸುಖಮಹಾಜ್ಞಾನೈಕತಾನಪ್ರಭಾ
ಸರ್ವಪ್ರಾಭವಶಕ್ತಿಭೋಗಬಲಸತ್ಸಾರಾತ್ಮದಿವ್ಯಾಕೃತಿಂ ।
ಸೃಷ್ಟಿಸ್ಥಾನನಿರೋಧ ನಿತ್ಯನಿಯತಿಜ್ಞಾನಪ್ರಕಾಶಾವೃತಿ
ಧ್ವಾಂತಾದೋಷವಿಮೋಕ್ಷದಂ ಹರಿಮಜಂ ನಿತ್ಯಂ ಸದೋಪಾಸ್ಮಹೇ ॥

ಅಂತ್ಯ. ನಿತ್ಯಾನಂದೋ ಹರಿಃ ಪೂರ್ಣೋ ನಿತ್ಯದಾ ಪ್ರೀಯತಾಂ ಮಮ ।
ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಚ ವಿಷ್ಣವೇ ॥

### ೨೧. ಆಥರ್ವಣಭಾಷ್ಯ

ಆದಿ. ಆನಂದಮಜರಂ ನಿತ್ಯಮಮಕ್ಷಯಮಚ್ಯುತಂ ।
ಅನಂತಶಕ್ತಿಂ ಸರ್ವಜ್ಞಂ ನಮಸ್ಯೇ ಪುರುಷೋತ್ತಮಂ ॥

ಅಂತ್ಯ. ಪ್ರೀಯತಾಂ ಭಗವಾನ್ನಿತ್ಯಂ ಪ್ರೇಷ್ಠಃ ಪ್ರೇಷ್ಠತಮಃ ಸದಾ ।
ಮಮ ನಿತ್ಯಂ ನಮಾಮ್ಯೇನಂ ಪರಮೋದಾರಸದ್ಗುಣಂ ॥

### ೨೨. ಮಾಂಡೂಕಭಾಷ್ಯ

ಆದಿ. ಪೂರ್ಣಾನಂದಜ್ಞಾನಶಕ್ತಿಸ್ವರೂಪಂ ನಿತ್ಯಮವ್ಯಯಂ ।
ಚತುರ್ಧಾ ಸರ್ವಭೋಕ್ತಾರಂ ವಂದೇ ವಿಷ್ಣುಂ ಪರಂ ಪದಂ ॥

ಅಂತ್ಯ. ಏಕೋಽಪಿ ನಿರ್ವಿಶೇಷೋಽಪಿ ಚತುರ್ಧಾ ವ್ಯವಹಾರಭಾಕ್ ।
ಯಸ್ತಂ ವಂದೇ ಚಿದಾತ್ಮಾನಂ ವಿಷ್ಣುಂ ವಿಶ್ವಾದಿರೂಪಿಣಮ್ ॥

### ೨೩. ಷಟ್ಪ್ರಶ್ನಭಾಷ್ಯ

ಆದಿ. ನಮೋ ಭಗವತೇ ತಸ್ಮೈ ಪ್ರಾಣಾದಿಪ್ರಭವಿಷ್ಣವೇ ।
ಅಮಂದಾನಂದಸಾಂದ್ರಾಯ ವಾಸುದೇವಾಯ ಮೇಧಸೇ ॥

ಅಂತ್ಯ. ನಮೋ ನಮೋಽಸ್ತು ಹರಯೇ ಪ್ರೇಷ್ಠ ಪ್ರೇಷ್ಠತಮಾಯ ಮೇ ।
ಪರಮಾನಂದಸಂದೋಹ ಸಾಂದ್ರಾನಂದವಪುಷ್ಮತೇ ॥

೨೪. ತಲವಕಾರಭಾಷ್ಯ

ಆದಿ. ಅನಂತಗುಣಪೂರ್ಣತ್ವಾದಗಮ್ಯಾಯ ಸುರೈರಪಿ ।
ಸರ್ವೇಷ್ಟದಾತ್ರೇ ದೇವಾನಾಂ ನಮೋ ನಾರಾಯಣಾಯ ತೇ ॥

ಅಂತ್ಯ. ಯಶ್ಚಿದಾನಂದಸಚ್ಛಕ್ತಿಸಂಪೂರ್ಣೋ ಭಗವಾನ್ಪರಃ ।
ನಮೋಽಸ್ತು ವಿಷ್ಣವೇ ತಸ್ಮೈ ಪ್ರೇಷ್ಠಾಯ ಪ್ರೇಯಸಾಂ ಚ ಮೇ ॥

೨೫. ಐತರೇಯಭಾಷ್ಯ

ಆದಿ. ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ಸರ್ವಜ್ಞಮಚ್ಯುತಮಪೇತಸಮಸ್ತದೋಷಮ್ ।
ಪ್ರಾಣಸ್ಯ ಸರ್ವಚಿದಚಿತ್ಪರಮೇಶ್ವರಸ್ಯ
ಸಾಕ್ಷಾದಧೀಶ್ವರಮಿಯಾಂ ಶರಣಂ ರಮೇಶಂ ॥

ಅಂತ್ಯ. ಪೂರ್ಣಾನಗಣ್ಯಗುಣೋದಾರಧಾಮ್ನೇ ನಿತ್ಯಾಯ ವೇಧಸೇ ।
ಅಮಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ ।

೨೬. ತೈತ್ತಿರೇಯಭಾಷ್ಯ

ಆದಿ ಸತ್ಯಂ ಜ್ಞಾನಮನಂತಮಾನಂದಬ್ರಹ್ಮ ಸರ್ವಶಕ್ತ್ಯೇಕಂ ।
ಸ ವೈದೇರ್ವ್ಯೈರೀಡ್ಯಂ ವಿಷ್ಣ್ವಾಖ್ಯಂ ಸರ್ವದೈವ ಸುಪ್ರೇಷ್ಠಮ್ ॥

ಅಂತ್ಯ. ಪೂರ್ಣಾಗಣ್ಯಗುಣೋದಾರಧಾಮ್ನೇ ನಿತ್ಯಾಯ ವೇಧಸೇ ।
ಅಮಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ ॥

೨೭. ಬೃಹದಾರಣ್ಯಕಭಾಷ್ಯ

ಆದಿ. ಪ್ರಾಣಾದೇರೀಶಿತಾರಂ ಪರಮಸುಖನಿಧಿಂ ಸರ್ವದೋಷವ್ಯಪೇತಂ
ಸರ್ವಾಂತಸ್ಥಂ ಸುಪೂರ್ಣಂ ಪ್ರಕೃತಿಪತಿಮಜಂ
ಸರ್ವಬಾಹ್ಯಂ ಸುನಿತ್ಯಂ ।
ಸರ್ವಜ್ಞಂ ಸರ್ವಶಕ್ತಿಂ ಸುರಮುನಿಮನುಜಾದ್ಯೈಃ
ಸದಾಸೇವ್ಯಮಾನಂ ವಿಷ್ಣುಂ ವಂದೇ ಸದಾಹಂ
ಸಕಲಜಗದಾದ್ಯಂತಮಾನಂದದಂ ತಂ

ಅಂತ್ಯ. ಪೂರ್ಣಾಗಣ್ಯಗುಣೋದಾರಧಾಮ್ನೇ ನಿತ್ಯಾಯ ವೇಧಸೇ ।
ಅಮಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ ॥

೨೮. ನರಸಿಂಹನಖಸ್ತೋತ್ರ : ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ರಚಿಸಿದ ವಾಯುಸ್ತುತಿಯನ್ನು ಆದ್ಯಂತ ರಕ್ಷಿಸುವ ವಜ್ರ ಕವಚದಂತಿರುವ ಶ್ರೀಲಕ್ಷ್ಮೀನರಸಿಂಹದೇವರ ಸ್ತುತಿ.

ಆದಿ. ಪಾಂತ್ವಸ್ಮಾನ್ಪುರುಹೂತವೈರಿಬಲವನ್ಮಾತಂಗಮಾದ್ಯದ್ಘಟಾ ।
ಕುಂಭೋಚ್ಚಾದ್ರಿವಿಪಾಟನಾಧಿಕಪಟುಪ್ರತ್ಯೇಕವಜ್ರಾಯಿತಾಃ ।
ಶ್ರೀಮತ್ಕಂಠೀರವಾಸ್ಯಪ್ರತತಸುನಖರಾದಾರಿತಾರಾತಿದೂರ ।
ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ನಾಕಿವೃಂದೈಃ ॥

ಅಂತ್ಯ. ಲಕ್ಷ್ಮೀಕಾಂತ ಸಮಂತತೋ ವಿಕಲಯನ್ನೈವೇಶಿತುಸ್ತೇ ಸಮಂ
ಪಶ್ಯಾಮ್ಯುತ್ತಮವಸ್ತು ದೂರತರೋಽಪಾಸ್ತಂ ರಸೋ ಯೋಽಷ್ಟಮಃ ।
ಯದ್ರೋಷೋತ್ಕರದಕ್ಷನೇತ್ರಕುಟಿಲಪ್ರಾಂತೋತ್ಥಿತಾಗ್ನಿಸ್ಫುರತ್–
ಖದ್ಯೋತೋಪಮವಿಷ್ಫುಲಿಂಗಭಸಿತಾ ಬ್ರಹ್ಮೇಶಶಕ್ರೋತ್ಕರಾಃ ॥

೨೯. ದ್ವಾದಶಸ್ತೋತ್ರ: ಶ್ರೀಕೃಷ್ಣಪರಮಾತ್ಮನನ್ನು ಕುರಿತು ಸ್ತುತಿಸುವ ಹನ್ನೆರಡು ದಿವ್ಯ ಸ್ತೋತ್ರಗಳು. ಇದರಲ್ಲಿ ಶ್ರೀಮದಾಚಾರ್ಯರ ಕವಿತಾ ಮಾಧುರ್ಯವನ್ನೂ, ಭಕ್ತಿಪುಂಜವಾದ ಗಾನರಸಸಾಧನೆಯನ್ನೂ, ಸಂಗೀತ ಸುಧೆಯನ್ನೂ ಸವಿಯಬಹುದು; ವಿಷವನ್ನು ನಾಶಮಾಡುವ ಮಹಾ ಶಕ್ತಿಯುಳ್ಳ ಕೃತಿ ಇದು. ಶ್ರೀಮದಾಚಾರ್ಯರು ಟೀಕಾಚಾರ್ಯರಾಗಿದ್ದ ಎತ್ತಿಗೆ ಶಾಪದಿಂದ ಬಂದಿದ್ದ ದುರ್ಮರಣವನ್ನು ಈ ಸ್ತೋತ್ರ ಪಠನದಿಂದ ಪರಿಹರಿಸಿದರು.

ಆದಿ. ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಂ ।
ಇಂದಿರಾಪತಿಮಾದ್ಯಾದಿವರದೇಶವರಪ್ರದಮ್ ॥

ಅಂತ್ಯ. ಆನಂದಚಂದ್ರಿಕಾಸ್ಯಂದಕವಂದೇ ।
ಆನಂದತೀರ್ಥಪರಾನಂದಪುರದ ॥

೩೦. **ಯಮಕಭಾರತ**· ಚಿತ್ರಕವಿತೆಯ ಚಮತ್ಕೃತಿಯುಳ್ಳ ಗ್ರಂಥ. ಭಾರತ ಭಾಗವತಗಳಲ್ಲಿನ ಶ್ರೀಕೃಷ್ಣ ಮತ್ತು ಅವನ ಕಾಂತೆಯರ ಚರಿತ್ರೆಯನ್ನು ತಿಳಿಯಬಹುದು. ಮನೋಹರವಾಗಿರುವ ಪದಪುಂಜಗಳಿಂದಲೂ, ಬಂಧುರ ಛಂದಸ್ಸಿನಿಂದಲೂ, ಯಮಕದಿಂದಲೂ ಕಥೆಯನ್ನು ರಸವತ್ತಾಗಿ ತಿಳಿಸುವ ಕೃತಿ. ಇದು ಸಂಕ್ಷೇಪ ಮಹಾಭಾರತ.

ಆದಿ. ಧ್ಯಾಯೇತ್ತಂ ಪರಮಾನಂದಂ ಯನ್ಮಾತಾ ಪತಿಮಂಯದ
ಪರಮಾನಂದಂ ।
ಉಜ್ಝಿತಪರಮಾನಂ ದಂಪತ್ಯಾದ್ಯಾದ್ಯಾಶ್ರಮ್ಯೈಃ ಸದ್ವೈವ
ಪರಮಾನಂದಂ ॥

ಅಂತ್ಯ. ಇತಿ ನಾರಾಯಣನಾಮಾ ಸುಖತೀರ್ಥಪೂಜಿತಃ
ಸುನಾರಾಯಣನಾಮಾ ।
ಪೂರ್ಣಗುಣೈರಧಿಕಜ್ಞಾನೇಚ್ಛಾ ಭಕ್ತಿಭಿಃ ಸ್ವಧಿಕಪೂರ್ಣಃ ॥

ಯಮಕದ ಲಕ್ಷಣವು ಸಾಹಿತ್ಯದರ್ಪಣದಲ್ಲಿ ಹೀಗೆ ಹೇಳಿದೆ :—

ಸತ್ಯರ್ಥೇ ಪೃಥಗರ್ಥಾಯಾಃ ಸ್ವರವ್ಯಂ ಜನಯುಗ್ಮಯೋಃ ।
ಕ್ರಮೇಣ ತೇನೈವಾ ವೃತ್ತಿರ್ಯಮಕಂ ವಿನಿಗದ್ಯತೇ ॥

೩೧. **ಕೃಷ್ಣಾಮೃತಮಹಾರ್ಣವ**: ವೈಷ್ಣವ ತತ್ತ್ವಗಳನ್ನು ತಿಳಿಸುವುದರ ಜೊತೆಗೆ ಧರ್ಮ–ಕರ್ಮಗಳನ್ನೂ ಏಕಾದಶೀಮಹಾತ್ಮ್ಯೆಯನ್ನೂ ವಿವರಿಸುವ ಗ್ರಂಥ. ಮುಖ್ಯವಾಗಿ ಪರಮಾತ್ಮನನ್ನು ಸದಾ ಸ್ಮರಿಸಲೇಬೇಕೆಂದು ಹೇಳುವ ಕೃತಿ. ಅನೇಕ ಪುರಾಣ ಪ್ರಮಾಣ ವಚನಗಳು ಸೂಚಿತವಾಗಿವೆ.

ಆದಿ. ಅರ್ಚಿತಃ ಸಂಸ್ಮೃತೋ ಧ್ಯಾತಃ ಕೀರ್ತಿತಃ ಕಥಿತಃ ಶ್ರುತಃ ।
ಯೋ ದದಾತ್ಯಮೃತತ್ವಂ ಹಿ ಸ ಮಾಂ ರಕ್ಷತು ಕೇಶವಃ ॥

ಅಂತ್ಯ. ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥

೩೨. **ತಂತ್ರಸಾರಸಂಗ್ರಹ :** ವೇದಗಳಲ್ಲಿನ ಪಂಚರಾತ್ರಭಾಗದ ತಂತ್ರಸಾರಸಂಹಿತೆಯ ಸೂಕ್ಷ್ಮ ಸಂಗ್ರಹ, ವಿಗ್ರಹಗಳ ನಿರ್ಮಾಣ, ಪ್ರತಿಷ್ಠೆ ದೇವಸ್ಥಾನ ನಿರ್ಮಾಣ ಮುಂತಾದುವು ಹೇಳಲ್ಪಟ್ಟಿವೆ.

ಆದಿ. ಜಯತ್ಯಬ್ಜಭವೇಶೇಂದ್ರವಂದಿತಃ ಕಮಲಾಪತಿಃ ।
ಅನಂತವಿಭವಾನಂದಶಕ್ತಿಜ್ಞಾನಾದಿಸದ್ಗುಣಃ ॥

ಅಂತ್ಯ. ಅಶೇಷದೋಷೋಜ್ಝಿತಪೂರ್ಣಸದ್ಗುಣಂ
ಸದಾ ವಿಶೇಷಾವಗತೋರುರೂಪಮ್ ।
ನಮಾಮಿ ನಾರಾಯಣಮಪ್ರತೀಪಂ
ಸದಾ ಪ್ರಿಯೇಭ್ಯಃ ಪರಮಾದರೇಣ ॥

೩೩. **ಸದಾಚಾರಸ್ಮೃತಿ :** ಅಧ್ಯಾತ್ಮಿಕಸಾಧನೆಗೆ ಅವಶ್ಯಕವಾಗಿ ಬೇಕಾದ ನಿತ್ಯಕರ್ಮಾನುಷ್ಠಾನ ಕ್ರಮವನ್ನು ವಿವರಿಸುವ ಗ್ರಂಥ.

ಆದಿ. ಯಸ್ಮಿನ್ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀ ನಿರ್ಮಮೋ ಯಾತಿ ಪರಂ ಜಯತಿ ಸೋಽಚ್ಯುತಃ ॥

ಅಂತ್ಯ. ಅಶೇಷಕಲ್ಯಾಣಗುಣನಿತ್ಯಾನುಭವಸತ್ತನುಃ ।
ಅಶೇಷದೋಷರಹಿತಃ ಪ್ರೀಯತಾಂ ಪುರುಷೋತ್ತಮಃ ॥

೩೪. **ಭಾಗವತತಾತ್ಪರ್ಯನಿರ್ಣಯ :** ವೇದವ್ಯಾಸನಿರ್ಮಿತ ಶ್ರೀಮದ್ಭಾಗವತಪುರಾಣದ ಕೆಲವು ಶ್ಲೋಕಗಳಿಗೆ ಇದೊಂದು ವಿಶೇಷ ನಿರ್ದಿಷ್ಟ ವ್ಯಾಖ್ಯಾನ, ಸೂಕ್ಷ್ಮ ವಿಚಾರಗಳ ದಿಗ್ದರ್ಶನವನ್ನೂ ಕಠಿಣ ಸನ್ನಿವೇಶಗಳಿಗೆ ವಿವರಣೆಗಳನ್ನೂ ನೀಡಿದ್ದಾರೆ. "ಭಾಷೆಯ ರಹಸ್ಯವನ್ನು ತಿಳಿದಿರುವ ಪೌರಾಣಿಕರಿಗೆ ಸನ್ಮಾರ್ಗ ತೋರುವ ಗೆಳೆಯನಂತಿರುವುದು"— ಎಂದಿದ್ದಾರೆ ವಿಮರ್ಶಕರು.

ಆದಿ. ಸೃಷ್ಟಿಸ್ಥಿತ್ಯಪ್ಯಯೇಹಾನಿಯತಿದೃಶಿತಮೋ ಬಂಧಮೋಕ್ಷಾಶ್ಚ ಯಸ್ಮಾತ್
ಅಸ್ಯ ಶ್ರೀಬ್ರಹ್ಮರುದ್ರಪ್ರಭೃತಿಸುರನರದ್ವ್ಯೇಶಶಶ್ವಾತ್ಪ್ರತ್ಯಕಸ್ಯ ।

ವಿಷ್ಣೋರ್ವ್ಯಸ್ತಾಃ ಸಮಸ್ತಾಃ ಸಕಲಗುಣನಿಧಿಃ ಸರ್ವದೋಷವ್ಯಪೇತಃ
ಪೂರ್ಣಾನಂದೋಽವ್ಯಯೋ ಯೋ ಗುರುರಪಿ ಪರಮಶ್ಚಿಂತಯೇ
ತಂ ಮಹಾಂತಂ ||

ಅಂತ್ಯ. ನಿತ್ಯಾದೋಷಸ್ವರೂಪಾಯ ಗುಣಪೂರ್ಣಾಯ ಸರ್ವದಾ ।
ನಾರಾಯಣಾಯ ಹರಯೇ ನಮಃ ಪ್ರೇಷ್ಠತಮಾಯ ಮೇ ||

೩೫. **ಮಹಾಭಾರತತಾತ್ಪರ್ಯನಿರ್ಣಯ :** ಎಲ್ಲ ಸಚ್ಛಾಸ್ತ್ರಗಳ ಸಾರವನ್ನು ಇಲ್ಲಿ ತಿಳಿಸಿದ್ದಾರೆ. ಮುಖ್ಯವಾಗಿ ಮಹಾಭಾರತದಲ್ಲಿ ಬರುವ ಹಲವು ಕಷ್ಟವೂ ಸಂಶಯಾತ್ಮಕವೂ ಆದ ಸನ್ನಿವೇಶಗಳಲ್ಲಿ ಸಿದ್ಧಾಂತಕ್ಕೆ ವಿರೋಧವಿಲ್ಲದಂತೆ ಸಮರ್ಪಕವಾಗಿಯೂ, ಗೂಢವಾದ ಅರ್ಥಗಳನ್ನು ಸ್ಪಷ್ಟವಾಗಿಯೂ ತಿಳಿಸಿದ್ದಾರೆ. ಸಮಸ್ತ ಸಮಸ್ಯೆಗಳಿಗೂ ಪರಿಹಾರ ದೊರಕಿಸುವ ನಿರ್ಣಯ ಗ್ರಂಥ. ಇದು ದ್ವೈತಸಿದ್ಧಾಂತದ ಪ್ರಮೇಯಗಳ ಸಾರರೂಪವಾಗಿದೆ.

ಆದಿ. ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ||

ಅಂತ್ಯ. ಯಃ ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ ।
ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ||

೩೬. **ಯತಿಪ್ರಣವಕಲ್ಪ :** ಸಂನ್ಯಾಸಾಶ್ರಮ ಸ್ವೀಕಾರಕಾಲದಲ್ಲಿ ಅನುಸರಿಸಬೇಕಾದ ಪದ್ಧತಿ ಮತ್ತು ಮಾಡಬೇಕಾದ ಕ್ರಿಯಾಕಲಾಪಗಳನ್ನು ಪ್ರಮಾಣಪೂರ್ವಕವಾಗಿ ವಿವರಿಸುವ ಉತ್ಕೃಷ್ಟ ಧರ್ಮಶಾಸ್ತ್ರ ಗ್ರಂಥ.

ಆದಿ. ಸಮ್ಯಕ್ಸರ್ವಾಜ್ಯಕಾನ್ ಹುತ್ವಾ ಸಮ್ಯಕ್ಪುರುಷಸೂಕ್ತತಃ ।
ಸರ್ವೇಷಾಮಭಯಂ ದತ್ವಾ ವಿರಕ್ತಃ ಪ್ರವ್ರಜೇದ್ಧರಿಮ್ ||

ಅಂತ್ಯ. ತದರ್ಥಾನ್ ಬ್ರಹ್ಮಸೂತ್ರೈಶ್ಚ ಸಮ್ಯಗ್ನಿರ್ಣೀಯ ತತ್ತ್ವತಃ ।
ವಿಷ್ಣೋಃ ಸರ್ವೋತ್ತಮತ್ವಂ ತು ಸರ್ವದಾ ಪ್ರತಿಪಾದಯ ||

೩೭. ಜಯಂತೀನಿರ್ಣಯ : ಶ್ರೀಕೃಷ್ಣಜನ್ಮಾಷ್ಟಮಿಯ ವ್ರತ ವಿಧಿಯನ್ನೂ, ಪೂಜಾಪದ್ಧತಿಯನ್ನೂ ವಿವರಿಸುವ ಒಂದು ಕಲ್ಪ ಗ್ರಂಥ.

ಆದಿ. ರೋಹಿಣ್ಯಾಮರ್ಧರಾತ್ರೇ ತು ಯದಾ ಕೃಷ್ಣಾಷ್ಟಮೀ ಭವೇತ್ ।
ಜಯಂತೀ ನಾಮ ಸಾ ಪ್ರೋಕ್ತಾ ಸರ್ವಪಾಪಪ್ರಣಾಶಿನೀ ॥

ಅಂತ್ಯ. ಸರ್ವಾಯೇತಿ ಚ ಮಂತ್ರೇಣ ತತಃ ಪಾರಣಮಾಚರೇತ್ ।
ಧರ್ಮಾಯೇತಿ ತತಃ ಸ್ವಸ್ಥೋ ಮುಚ್ಯತೇ ಸರ್ವಕಿಲ್ಬಿಷೈಃ ॥

## ಶ್ರೀಮಧ್ವಾಚಾರ್ಯರ ಶಿಷ್ಯರು

**ಶ್ರೀಪದ್ಮನಾಭತೀರ್ಥರು :** ದ್ವೈತಮತಪ್ರತಿಷ್ಠಾಪನಾಚಾರ್ಯರೂ, ವಾಯ್ವವತಾರಿಗಳೂ ಆದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಉಡುಪಿ ಸಮೀಪದ ಪಾಜಕಕ್ಷೇತ್ರದಲ್ಲಿ ಕ್ರಿ. ಶ. 1238ರಲ್ಲಿ ಜನಿಸಿದರು. ಸರ್ವಜ್ಞಾಚಾರ್ಯರಾದ ಈ ಮಹನೀಯರು ಅಚ್ಯುತಪ್ರೇಕ್ಷಾಚಾರ್ಯರೆಂಬ ಮಹಾಮಹಿಮರನ್ನು ಆಶ್ರಮಗುರುಗಳನ್ನಾಗಿ ಸ್ವೀಕರಿಸಿ ಸರ್ವಮೂಲಗಳೆಂಬ ಮೂವತ್ತೇಳು ಗ್ರಂಥ ರತ್ನಗಳನ್ನು ರಚಿಸಿದ್ದಾರೆ.

ಇವು ಯಾವುವೆಂದರೆ ;

"ಭಾಷ್ಯಾಣಾಂ ದಶಕಂ ಚ ಪಂಚಕಯುತಂ ತಿಸ್ರಶ್ಚ ನಿರ್ಣೀತಯಃ
ವಿಷ್ಣೋಃ ಸ್ತೋತ್ರಯುಗಂ ದಶಪ್ರಕರಣಕಂ ಕಲ್ಪದ್ವಯಂ ಚ ಶ್ರುತಿಃ।
ಶ್ರೀಕೃಷ್ಣಾಮೃತತಂತ್ರಸಾರಯಮಕಂ ನ್ಯಾಯಾವಲೀದೀಪನಂ
ಯೇನಾಕಾರಿ ಸದೈವ ಮಧ್ವಮುನಿರಾಟ್ ದದ್ಯಾತ್ಸುವಿದ್ಯಾಂ ಮಮ॥1

1) —ಯಾದವಾಚಾರ್ಯಕೃತ

ಅಂದರೆ ಹತ್ತು ಉಪನಿಷದ್ಭಾಷ್ಯಗಳು, ಸೂತ್ರಭಾಷ್ಯ, ಅಣುಭಾಷ್ಯ, ಅನುಭಾಷ್ಯ, ಗೀತಾಭಾಷ್ಯ, ಋಗ್ಭಾಷ್ಯ ಎಂಬ 15 ಭಾಷ್ಯಗಳು, ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯ, ಗೀತಾ ತಾತ್ಪರ್ಯನಿರ್ಣಯವೆಂಬ ಮೂರು ನಿರ್ಣಯಗಳು, ದ್ವಾದಶಸ್ತೋತ್ರ, ನಖಸ್ತುತಿಗಳೆಂಬ ಎರಡು ಸ್ತೋತ್ರಗಳು–ಹತ್ತು ಪ್ರಕರಣಗಳು. ಕೃಷ್ಣಾಮೃತ ಮಹಾರ್ಣವ, ಜಯಂತೀ ನಿರ್ಣಯ, ಯತಿಪ್ರಣವಕಲ್ಪ, ತಂತ್ರಸಾರ ಸಂಗ್ರಹ, ಯಮಕಭಾರತ, ಸದಾಚಾರ ಸ್ಮೃತಿ, ನ್ಯಾಯವಿವರಣ — ಹೀಗೆ ಒಟ್ಟು 37 ಗ್ರಂಥರತ್ನಗಳು.

ಶ್ರೀಮದಾಚಾರ್ಯರು ಕ್ರಿ. ಶ. 1318 ರಲ್ಲಿ ಅದೃಶ್ಯರಾಗಿ ವಿಶಾಲ ಬದರಿಗೆ ಹೋಗುವುದಕ್ಕೆ ಮುಂಚೆಯೇ ನಾಲ್ಕು ಜನ ಶಿಷ್ಯರಿಗೆ ಅನುಕ್ರಮವಾಗಿ ಸಂನ್ಯಾಸಾಶ್ರಮವನ್ನು ಅನುಗ್ರಹಿಸಿದ್ದರು. ಅವರು ಪದ್ಮನಾಭತೀರ್ಥರು, ನರಹರಿತೀರ್ಥರು, ಮಾಧವತೀರ್ಥರು ಮತ್ತು ಅಕ್ಷೋಭ್ಯತೀರ್ಥರು. ಇವರ ಪೈಕಿ ಶ್ರೀಪದ್ಮನಾಭತೀರ್ಥರಿಗೆ ಕರಕಮಲಸಂಜಾತತ್ವವನ್ನು ಅನುಗ್ರಹಿಸಿ ತಮ್ಮ ಉತ್ತರಾಧಿಕಾರಿಗಳನ್ನಾಗಿ ನಿಯಮಿಸಿದ್ದರು.

ಶ್ರೀಪದ್ಮನಾಭತೀರ್ಥರು ವೇದಾಂತವಿದ್ಯಾ ನಿಜಸಾಮ್ರಾಜ್ಯದಲ್ಲಿ ಚಕ್ರವರ್ತಿಗಳಾಗಿದ್ದರು. ಇತರ ಮೂವರು ಈ ವೇದಾಂತವಿದ್ಯಾಚಕ್ರವರ್ತಿಗಳ ಮಾಂಡಲಿಕರಾಗಿದ್ದರು. ಶ್ರೀಮದಾಚಾರ್ಯರು ಪ್ರಥಮಸಲ ವಿಶಾಲಬದರಿಗೆ ಪ್ರಯಾಣ ಮಾಡಿ ತಾವು ರಚಿಸಿದ್ದ 'ಗೀತಾಭಾಷ್ಯ' ಗ್ರಂಥವನ್ನು ಶ್ರೀಬಾದರಾಯಣರಿಗೆ ಸಮರ್ಪಿಸಿ, ಉಡುಪಿಗೆ ಹಿಂತಿರುಗುತ್ತಿದ್ದಾಗ, ಗೋದಾವರೀನದೀ ತೀರದಲ್ಲಿದ್ದ ಕಾಕತೀಯರಾಜಧಾನಿಯಾದ ರಾಜಮಹೇಂದ್ರಕ್ಷೇತ್ರಕ್ಕೆ ಮಾರ್ಗತ್ವೇನ ಬಂದರು. ಅಲ್ಲಿ ಕಾಕತೀಯರಾಜ್ಯದ ರಾಜನಾದ ಗಣಪತಿದೇವನ ಆಸ್ಥಾನದಲ್ಲಿ ಶೋಭನಭಟ್ಟರೆಂಬ ಪ್ರಧಾನಾಮಾತ್ಯರಿದ್ದರು. ಇವರು ಶ್ರೇಷ್ಠ ರಾಜಕಾರಣನಿಪುಣರಲ್ಲದೆ ಚತುಃಶಾಸ್ತ್ರಗಳಲ್ಲಿಯೂ ದಿಗ್ದಂತಿ ಪಂಡಿತರಾಗಿ ಇದ್ದರು. ಶ್ರೀಮದಾಚಾರ್ಯರ ಸಂಗಡ ಶಾಸ್ತ್ರಾರ್ಥವಿಚಾರದಲ್ಲಿ ಕೆಲವು ದಿನ ವಾದ ಮಾಡಿ, ಪರಾಜಿತರಾಗಿ, ಅವರ ಶಿಷ್ಯತ್ವವನ್ನು ಶಿರಸಾವಹಿಸಿ, ಪರಮವಿರಕ್ತರಾಗಿ ಅವರಿಂದಲೇ

ತುರೀಯಾಶ್ರಮವನ್ನು ಅಲ್ಲಿಯೇ ಸ್ವೀಕರಿಸಿ ಪದ್ಮನಾಭತೀರ್ಥರೆಂಬ ಯತಿನಾಮವನ್ನೂ ಹೊಂದಿದರು. ಇವರು ಶ್ರೀಮದಾಚಾರ್ಯರ ಸಂಗಡವೇ ಶಿಷ್ಯರಾಗಿ ಸಂಚಾರ ಮಾಡುತ್ತಾ ಉಡುಪಿಯಲ್ಲಿಯೂ ಕೆಲಕಾಲ ವಾಸವಾಗಿದ್ದರು.

ಲಿಕುಚಕುಲತಿಲಕರೂ, ಸುಮಧ್ವವಿಜಯಕಾರರೂ ಆದ ಶ್ರೀನಾರಾಯಣ ಪಂಡಿತಾಚಾರ್ಯರು ಪಕ್ಷಪಾತರಹಿತರಾಗಿ ಶ್ರೀಪದ್ಮನಾಭತೀರ್ಥರನ್ನು ಸ್ತುತಿಸಿದ್ದಾರೆ. ಇದರಿಂದ ಪದ್ಮನಾಭತೀರ್ಥರ ಮಹಾಮಹಿಮೆಯು ಗೋಚರವಾಗುತ್ತದೆ.ನಾರಾಯಣ ಪಂಡಿತಾಚಾರ್ಯರಂತೆ ಇನ್ನೂ ಕೆಲವು ಮಹನೀಯರೂ ಸಹ ಈ ಸುಮಹನೀಯರನ್ನು ಪರಮ ಭಕ್ತಿಯಿಂದ ಸ್ತುತಿಸಿದ್ದಾರೆ. ಇವರಲ್ಲಿ ಕೆಲವರು ಮಾತ್ರ ಇಲ್ಲಿ ಸೂಚಿತರಾಗಿದ್ದಾರೆ. ಟೀಕಾಚತುರಚಕ್ರವರ್ತಿಗಳೆಂದು ಪ್ರಸಿದ್ಧರಾದ ಶ್ರೀಮಜ್ಜಯತೀರ್ಥಪೂಜ್ಯಚರಣರು ರಾಜಕಾರಣನಿಪುಣರೂ ಉದ್ದಾಮ ಪಂಡಿತರೂ ಆದ ನರಹರಿತೀರ್ಥರು ಮತ್ತು ಭಾವಬೋಧಕಾರರೆಂದು ಪ್ರಸಿದ್ಧರಾದ ಶ್ರೀರಘೋತ್ತಮತೀರ್ಥರು,

ಸುಮಧ್ವವಿಜಯದಲ್ಲಿ ಪದ್ಮನಾಭತೀರ್ಥರ ಸ್ತುತಿ ಪರವಾದ ಶ್ಲೋಕಗಳು ವಾಚಕರ ಅವಗಾಹನೆಗಾಗಿ ಇಲ್ಲಿ ಉದ್ಧೃತವಾಗಿವೆ.

ಯಸ್ತ್ರಯೀಸಕಲಪಕ್ಷಶಿಕ್ಷಕಸ್ತತ್ರ ಸಂಸದಿ ವರಿಷ್ಠಸಂಮತಃ ।
ಶೋಭನೋಃಪಪದಭಟ್ಟನಾಮಕಃ ಪೂರ್ಣಸಂಖ್ಯಮನ ಮನ್ಮಹಾಮುದಾ ॥

ಆ ಕಾಕತೀಯ ರಾಜಸಭೆಯಲ್ಲಿ ಸೇರಿದ್ದ ವಿದ್ವಾಂಸರ ಸಮೂಹದ ಮಧ್ಯದಲ್ಲಿ ಶ್ರೇಷ್ಠನಾದ, ವೇದಲಕ್ಷಣಗಳನ್ನು ನಿರ್ಣಯ ಮಾಡಲು ಶಕ್ತನಾದ ಶೋಭನಭಟ್ಟನು ವೇದಾದಿ ಶಾಸ್ತ್ರಗಳಲ್ಲಿ ಶ್ರೀಮದಾಚಾರ್ಯರನ್ನು ಪರೀಕ್ಷಿಸಿ, ಪರಾಜಿತನಾಗಿ, ಇವರೇ ಸರ್ವಜ್ಞರು, ಇವರೇ ಗುರುಗಳು, ಇವರಿಂದಲೇ ಸಕಲ ಶಾಸ್ತ್ರಾರ್ಥಗಳನ್ನೂ ತಿಳಿಯಬೇಕೆಂದು ನಿಶ್ಚಯಿಸಿ ಸಂತೋಷದಿಂದ ಆತ್ಮಾದರಪೂರ್ವಕವಾಗಿ ಶ್ರೀಮದಾಚಾರ್ಯರಿಗೆ ಪುನಃ ಪುನಃ ನಮಸ್ಕರಿಸಿದನು.

ಯಸ್ತು ತಾರ್ಕಿಕಶಿಖಾಮಣಿಃ ಸುಧೀ-
ರ್ವತಮಾನಸಮಯಾನ್ನಿರಾಕರೋತ್ ।
ವೇದಭಾರತಪುರಾಣ ನಿಷ್ಠಿತೋ
ಭಾಷ್ಯಮೇತದ ಶ್ರುಣೋತ್ಸಮಧ್ವತಃ ॥

ತಾರ್ಕಿಕಶ್ರೇಷ್ಠನಾದ ಶೋಭನಭಟ್ಟನು ಆ ಕಾಲದಲ್ಲಿದ್ದ ಭಾಟ್ಟಾದಿ ಸಕಲ ಮತಗಳನ್ನು • ನಿರಾಕರಿಸಿ, ವೇದಭಾರತಪುರಾಣಗಳಲ್ಲಿ ಆಸಕ್ತನಾಗಿ, ಶ್ರೀಮದಾಚಾರ್ಯರಿಂದ, ರಚಿತವಾದ ಸೂತ್ರಭಾಷ್ಯವನ್ನು ಅವರಿಂದಲೇ ಶ್ರವಣ ಮಾಡಿದನು.

ನಾಪರೇಷು ರತಿಮಾಯಯೌ ಕ್ವಚಿ-
ದ್ಭಾಷ್ಯಮದ್ಭುತಮಿದಂ ಸ ಶುಶ್ರುವಾನ್ ।
ನಾರವಿಂದಮಕರಂದಮಾಪ್ತವಾ-
ನಟ್ಟಪಿಟ್ಟ ಇವ ವಾಂಛತೀತರತ್ ॥

ಕಮಲಮಕರಂದವನ್ನು ಹೊಂದಿದ ಹಂಸವು ಬೇರೆ ಹೂವಿನ ಪರಾಗ ವನ್ನು ಹೇಗೆ ಅಪೇಕ್ಷಿಸುವುದಿಲ್ಲವೋ ಹಾಗೆಯೇ ಶೋಭನಭಟ್ಟನು ಶ್ರೀಮಧ್ವರಚಿತ ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡಿ, ಅನ್ಯಶಾಸ್ತ್ರಗಳಲ್ಲಿ ಸರ್ವಥಾ ಆಸಕ್ತಿರಹಿತನಾದನು.

ಶ್ರುತ್ಯಾ ಮತ್ಯಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯಸೇವಯಾ ।
ಅಸ್ಮೈ ಪ್ರಸನ್ನಃ ಪ್ರಾಜ್ಞ್ಯೇಕ್ಷಃ ಸದ್ಯೋ ವಿದ್ಯಾಂ ದದೌ ಶುಭಾಂ ॥

ವೇದಾಂತಶಾಸ್ತ್ರಶ್ರವಣ ಮನನದಿಂದಲೂ ನಿರಂತರವಾದ ಭಕ್ತಿಯಿಂದಲೂ, ವೈರಾಗ್ಯದಿಂದಲೂ, ಸದಾಕಾಲ ಸೇವೆಯಿಂದಲೂ, ಸಂತುಷ್ಟರಾದ ಶ್ರೀಮದಾ ಚಾರ್ಯರು ಈ ಶೋಭನಭಟ್ಟನಿಗೆ ದ್ವೈತಸಿದ್ಧಾಂತದಲ್ಲಿ ಅತಿಶಯವಾಗಿ ಶಿಕ್ಷಣವಿತ್ತರು.1

1) ಸುಮಧ್ವವಿಜಯ—ಸರ್ಗ-9, ಶ್ಲೋಕ-17-19 ಮತ್ತು ಸರ್ಗ-15 ಶ್ಲೋಕ-121ರಿಂದ126.

ವೇದಾಂತಾಬ್ಧಿಂ ನ ಯೋ ಜಾತು ಜಹೌ ವಿದ್ವತ್ತಿಮಿಂಗಿಲಃ ।
ಯುಕ್ತಿಪ್ರವಾಹಸಂರಂಭಾತ್ಪರಶಾಸ್ತ್ರನದೀಚರಃ ॥

ಇತರ ಶಾಸ್ತ್ರಗಳ ಯುಕ್ತಿಗಳನ್ನು ನಿರಾಕರಿಸಿ ಸ್ವಶಾಸ್ತ್ರದಲ್ಲಿ ಪಂಡಿತವಾದ ಪದ್ಮನಾಭತೀರ್ಥನೆಂಬ ತಿಮಿಂಗಿಲವು ವೇದಾಂತಶಾಸ್ತ್ರವೆಂಬ ಸಮುದ್ರವನ್ನು ಬಿಡಲೇ ಇಲ್ಲ. ಸರ್ವದಾ ವೇದಾಂತಶಾಸ್ತ್ರವನ್ನೇ ಅಭ್ಯಾಸಮಾಡುತ್ತಿದ್ದನು.

ವ್ಯಾಖ್ಯಾಪ್ರಣಾದಮಾತ್ರೇಣ ವೀರಂಮನ್ಯಾನ್ ಸ್ವಮಂಡಲೇ ।
ಮಾಯಾವಿಗ್ರಾಮಸಿಂಹಾನ್ಯೋ ವಾದಿಸಿಂಹೋ ನಿರಾಕರೋತ್ ॥

ಪದ್ಮನಾಭತೀರ್ಥನೆಂಬ ಸಿಂಹವು ಸ್ವಯೂಥದಲ್ಲಿ ನಾವೇ ಶ್ರೇಷ್ಠರೆಂದು ತಿಳಿಯುವ ಮಾಯಾವಾದಿಗಳೆಂಬ ಗ್ರಾಮಸಿಂಹಗಳನ್ನು ವ್ಯಾಖ್ಯಾನರೂಪ ಧ್ವನಿಮಾತ್ರದಿಂದಲೇ ನಿರಾಕರಿಸಿದನು ಅಂದರೆ ವ್ಯಾಖ್ಯಾವ ಶ್ರವಣಮಾತ್ರ ದಿಂದಲೇ ಭಯಪಡಿಸಿದನು.

ಮತ್ತದುರ್ವಾದಿಮಾತಂಗತರ್ಕಮಸ್ತಕದಾರಣೇ ।
ಪಂಚಾಸ್ಯೋ ಯೋಽಭವದ್ವ್ಯಕ್ತಂ ಚತುರಾಸ್ಯೋಽಪಿ ಕೇವಲಂ ॥

ಪದ್ಮನಾಭತೀರ್ಥ ಚತುರಾಸ್ಯನಾದಾಗ್ಯೂ, ವಿದ್ಯೆಯಿಂದ ಗರ್ವಿತರಾದ ದುರ್ವಾದಿಗಳೆಂಬ ಗಜಗಳ ತರ್ಕಗಳೆಂಬ ಕುಂಭಸ್ಥಳಗಳನ್ನು ಸೀಳುವುದರಲ್ಲಿ ಸಿಂಹನಂತೆ ಆದನು.

ಸಂನ್ಯಾಯರತ್ನಾವಲ್ಯುಪಪಾದಯ್ಯತಃ ಶುಭಂ ।
ಟೀಕಾ ಪರಾನುವ್ಯಾಖ್ಯಾಯಾ ಅನರ್ಘಾಬೋಧಸಾಗರಾತ್ ॥

ಜ್ಞಾನಸಮುದ್ರನಾದ ಪದ್ಮನಾಭತೀರ್ಥನು ಮಧ್ವಾಚಾರ್ಯರಿಂದ ರಚಿಸಲ್ಪಟ್ಟ ಅನುವ್ಯಾಖ್ಯಾನಕ್ಕೆ ಅತ್ಯುತ್ತಮವಾದ ಸಂನ್ಯಾಯರತ್ನಾವಲಿ ಎಂಬ ಟೀಕೆಯನ್ನು ರಚಿಸಿದನು.

ವೇದಪ್ರವಚನಾಚಾರ್ಯಶಿಷ್ಯೋಽಸಾವಿತಿ ಪೂಜಿತಃ ।
ಸಭ್ಯಃ ಸಭಾಯಾಂ ಯೋ ವೇದಂ ವ್ಯಾಚಖ್ಯೌ ವೇದಸಾರವಿತ್ ॥

ವೇದಾಭ್ಯಾಸವನ್ನು ಮಾಡುವವರಿಗೆ ಗುರುಗಳಾದ ಶ್ರೀಮದಾಚಾರ್ಯರ ಶಿಷ್ಯನೆಂದು ಜನರಿಂದ ಪೂಜಿತನಾಗಿ ವಿದ್ವತ್ಸಭೆಗೆ ಯೋಗ್ಯವಾದ ವೇದಗಳ ತಾತ್ಪರ್ಯವನ್ನು ತಿಳಿದ ಪದ್ಮನಾಭತೀರ್ಥನು, ಸಭೆಯಲ್ಲಿ ವೇದಗಳ ಅರ್ಥವನ್ನು ಸಾರ್ಥವಾಗಿ ಪಠಿಸಿದನು.

ಸತೀರ್ಥ್ಯರಾದ ನರಹರಿತೀರ್ಥರು ಪದ್ಮನಾಭತೀರ್ಥರನ್ನು ಹೀಗೆ ಸ್ತುತಿಸಿದ್ದಾರೆ.

ಯೇ ಭಾರತೀನ ಸತತಂ ಹಿ ಪರಿವ್ರಜಂತಿ
ಭಾಷಾಸು ರೀತಿಶತಕೇ ಚತುರಾ ಅನಂತಂ ।
ತತ್ಪಾದಪಂಕಜನವಾಯುಕೃತೋರು ಮಾರ್ಗಾ-
ಸ್ತಾನ್ಪದ್ಮನಾಭತೀರ್ಥವರತೀರ್ಥಗುರೂನ್ನಮಾಮಿ ॥

(ಯಮಕಭಾರತ ಶ್ಲೋಕ ಟೀಕಾ ಶ್ಲೋಕ-5)

ಯೈರೇವಂ ಸ್ತುತಿಮಾಪಿತೋSತಿಮಹತೀಂ ಶ್ರೀವಿಷ್ಣುಪಾದಾಂಬುಜೇ।
ಹಂಸಾ ಮೇ ಸುವಿವರ್ಧಿತಾಂ ಚ ಮಹತಾಂ ಸೇವೇನ ನಿಷ್ಕಂಟಕಾಮ್।
ಸಂಸೇವ್ಯೇ ರಮಯಾಖಿಲಾಪರಮಯಾ ಬ್ರಹ್ಮೇಶಪೂರ್ವೈಃ ಸುರೈಃ
ಶ್ರೀಮತ್ಪಾತಿಜನಾಭತೀರ್ಥಮುನಿಭಿಸ್ತೇಭ್ಯೋ ಗುರುಭ್ಯೋ ನಮಃ ॥

(ಯಮಕ ಭಾರತ ಶ್ಲೋಕ ಟೀಕಾ ಶ್ಲೋಕ 364)

ಶ್ರೀಮಜ್ಜಯತೀರ್ಥ ಪೂಜ್ಯಚರಣರು ಶ್ರೀಮನ್ನ್ಯಾಯಸುಧಾ ಗ್ರಂಥಾರಂಭದಲ್ಲಿ ಹೀಗೆ ಸ್ತುತಿಸಿದ್ದಾರೆ.

ರಮಾನಿವಾಸೋಚಿತವಾಸಭೂಮಿ-
ಸ್ಸನ್ನ್ಯಾಯರತ್ನಾವಲಿಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭ-
ತೀರ್ಥಾಮೃತಾಬ್ಧಿರ್ಭವತಾ ದ್ವಿಭೂತ್ಯೈ ॥

ಗೀತಾತಾತ್ಪರ್ಯನಿರ್ಣಯಟೀಕೆ ನ್ಯಾಯದೀಪಿಕಾದಲ್ಲಿ ಹೀಗೆ ಸ್ತುತಿಸಿದ್ದಾರೆ.

ಶ್ರೀಪದ್ಮನಾಭತೀರ್ಥಾರ್ಕಗೋಗಣೋಽಸ್ತು ದೃಶೇ ಮಮ ।
ನ ತತ್ತ್ವಮಾರ್ಗೇ ಗಮನಂ ವಿನಾ ಯದುಪಜೀವನಮ್ ॥

ತತ್ತ್ವ ಪ್ರಕಾಶಿಕೆಯ ಆದಿ ಭಾಗದಲ್ಲಿ ಹೀಗೆ ಸ್ತುತಿಸಿದ್ದಾರೆ :

ಶ್ರೀಮಧ್ವಸಂಸೇವನಲಬ್ಧ ಶುದ್ಧ-
ವಿದ್ಯಾಸುಧಾಂಭೋನಿಧಯೋಽಮಲಾ ಯೇ ।

ಕೃಪಾಲವಃ ಪಂಕಜನಾಭತೀರ್ಥಾಃ
ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥

ಭಾವಬೋಧಕಾರರಾದ ಶ್ರೀರಘೋತ್ತಮತೀರ್ಥರು ನ್ಯಾಯವಿವರಣ ಭಾವಬೋಧದಲ್ಲಿ ಹೀಗೆ ಸ್ತುತಿಸಿದ್ದಾರೆ. (ವಿಶೇಷ ಸೂಚನೆ–ನ್ಯಾಯವಿವರಣಕ್ಕೆ ಶ್ರೀಜಯತೀರ್ಥರು ಮೊದಲನೆಯ ಅಧ್ಯಾಯದ ಮೊದಲು ಎರಡೂವರೆ ಪಾದಗಳಿಗೆ ಮಾತ್ರ ಟೀಕೆಯನ್ನು ರಚಿಸಿದ್ದಾರೆ. ಅಲ್ಲಿಂದ ಮುಂದಕ್ಕೆ ರಘೋತ್ತಮರು ರಚಿಸಿದ್ದಾರೆ.)

ಆದ್ಯಾಧ್ಯಾಯಗತೇ ಸಾರ್ಧಪೂರ್ವಪಾದದ್ವಯೇಽಸ್ತಿ ಹಿ ।
ಪಂಚಿಕಾ ಜಯತೀರ್ಥೀಯಾ ತಸ್ಮಾತ್ತ್ಯಕ್ತಂ ಮಯಾತ್ರ ತತ್ ॥

ಸುಗುಣನರಹರಿಶ್ರೀಮಾಧವಾಕ್ಷೋಭ್ಯರೂಪಾನ್
ಹರಿಭಜನನಿಯುಕ್ತಾನ್ ಶುದ್ಧಧರ್ಮಾರ್ಥಕಾಮಾನ್ ।

ಸುಜನನಿಯಮುವಾರ್ಥಂ ಯಃ ಪ್ರಸಾಧ್ಯಾಪರೋಕ್ಷಂ
ಸ ಭವತು ಮಮ ಭೂತ್ಯೈ ಪದ್ಮನಾಭಾಖ್ಯಯೋಗೀ ॥

ರಾಘವೇಂದ್ರವಿಜಯ ಮಹಾಕಾವ್ಯದ ಕರ್ತೃಗಳಾದ ನಾರಾಯಣ ಕವಿಗಳು (ಸರ್ಗ—2 ಶ್ಲೋಕ 4–5) ಹೀಗೆ ಸ್ತುತಿಸಿದ್ದಾರೆ.

ಸಿದ್ಧಾಂತಸಂರೋಹವಿಧೌ ನಿಯುಕ್ತೇ-
ಷ್ವೇತೇಷ್ವನೇಕವ್ರತಿಷು ಪ್ರಧಾನಃ ।

ಪ್ರೇಮಾಸ್ಪದಂ ಸ್ವೀಯಗುರೋಃ ಸಪದ್ಮ-
ನಾಭಾರ್ಯವರ್ಯೋऽಕೃತ ದರ್ಶನದ್ಧಿವಮ್ ॥

ಸತ್ತರ್ಕದೀಪಾವಲಿಮುತ್ಯುದಾಕಾಂ
ಸನ್ನ್ಯಾಯರತ್ನಾವಲಿಮಪ್ಯನಿಂದ್ಯಾಮ್ ।
ಭಾಷ್ಯಾನುಭಾಷ್ಯಾಶಯಬೋಧಹೇತೂ
ತತಾನ ಯಸ್ತಾರ್ಕಿಕಮೌಲಿರತ್ನಮ್ ॥

ನಾರಾಯಣಪಂಡಿತಾಚಾರ್ಯರು ಸುಮಧ್ವವಿಜಯ (ಸರ್ಗ-15 ಶ್ಲೋಕ-120)ದಲ್ಲಿ ಹೀಗೆ ಹೇಳಿದ್ದಾರೆ.

ಆಕೃಷ್ಟೋऽಸ್ಯ ಗುಣೈರ್ವ್ಯಾಪ್ತ್ಯೋರ್ಗೋದಾವರ್ಯಾ ಉಪಾಯಯೌ
ಸ ಪದ್ಮನಾಭತೀರ್ಥಾಖ್ಯಃ ಶಿಷ್ಯೋऽನ್ಯೋऽಭೂತ್ಸುಚೇತಸಃ ॥

ಶ್ರೀಮಧ್ವಾಚಾರ್ಯರ ಗುಣಗಳಿಂದ ಆಕರ್ಷಿಸಲ್ಪಟ್ಟ ಗೋದಾವರೀ ತೀರದಿಂದ ಬಂದ ಪದ್ಮನಾಭತೀರ್ಥರು ಇವರೊಬ್ಬ ಶಿಷ್ಯರಾದರು. ಮೊದಲನೆಯ ಶಿಷ್ಯರು ಶ್ರೀವಿಷ್ಣುತೀರ್ಥರು.

**ಶ್ರೀಪದ್ಮನಾಭತೀರ್ಥರ ಗ್ರಂಥಸಮುಚ್ಚಯ :**

**೧. ಮಾಯಾವಾದಖಂಡನಟೀಕಾ :**

ಆದಿ. ಅಮಿತಸದ್‌ಜ್ಞಾನ ಸುಖಶಕ್ತಿಪಯೋನಿಧಿತ್ವಾನ್ನರಸಿಂಹೋऽಖಿಲಾ ಜ್ಞಾನಮತಧ್ವಾಂತ ದಿವಾಕರಃ

ಅಂತ್ಯ. ನಾಸ್ತಿ ನಾರಾಯಣ ಸಮಮಿತಿ । ನಾಸ್ತಿ ನಾರಾಯಣೋ ನ ಭೂತೋ ನಭವಿಷ್ಯತೀತ್ಯಸ್ಯ ವಾಕ್ಯಸ್ಯಸತ್ಸತ್ವಕಥನೇನ ರುದ್ರಾದೇರ್ಜಗದುತ್ತಮತ್ವವಚನಂ ಪುರಾಣಾದಿಗತಮನ್ಯಥಾರ್ಥಮಿತಿ ಸೂಚಿತಂ ।

**೨. ಉಪಾಧಿಖಂಡನಟೀಕಾ :**

ಆದಿ. ಅಜ್ಞಾನವಶಾದೀಶಸ್ಯ 'ಸಂಸಾರಿತ್ವಂ ಇತಿ ಯನ್ಮಾಯಿಮತಂ ತತ್ಪೂರ್ವಶ್ಲೋಕೋಕ್ತಾಶೇಷ ದೋಷೋಜ್ಝಿತತ್ವ ಸಿದ್ಧ್ಯರ್ಥಂ ನಿರಾಕರೋತಿ ಆಜ್ಞತ್ವಾಖಿಲ ಸಂವೇತ್ತುರಿತ್ಯಾದಿನಾ ।

ಅಂತ್ಯ. ಮಾಯಾವಾದಂ ನಿರಸ್ಯ ಯದಾ ಪಶ್ಯಃ ಪಶ್ಯತೇ ಋಗ್ಮವರ್ಣ
ಮಿತ್ಯಾದಿ ಶ್ರುತ್ಯುಕ್ತಪ್ರಕಾರಸಿದ್ಧಂ ನಾರಾಯಣಂ ನಮತಿ ನಮ ಇತಿ-

೩. ಮಿಥ್ಯಾತ್ವಾನುಮಾನಖಂಡನಟೀಕಾ :

ಆದಿ. ಪ್ರಪಂಚ ಮಿಥ್ಯಾತ್ವಸಾಧನಂ ಯತ್ತದ್ದೂಷಯಿತುಂ ತತ್ತ್ವವಾದಾ
ಚಾರ್ಯೋsನುವದತಿ ವಿಮತಮಿತಿ-

ಅಂತ್ಯ. ಇತ್ಯಾದಿ ಶ್ರುತಿಸಿದ್ಧವಿಷ್ಣುಂ ಪ್ರಣಮೇತಿ ಯೋ ದೃಶ್ಯತೇತ ಇತಿ-

೪. ಕಥಾಲಕ್ಷಣ ಟೀಕಾ :

ಆದಿ. ಪ್ರವಕ್ಷ್ಯಾಮಿ ಕಥಾಲಕ್ಷಣಮಿತಿ ಪ್ರತಿಜ್ಞಾತಂ ನಿರೂಪಯಿತುಮಾಹ
ವಾದೋ ಜಲ್ಪೋ ವಿತಂಡೇತಿ-

೫. ಗೀತಾಭಾಷ್ಯಪ್ರಾಚೀನಟೀಕಾ :

ಆದಿ. ಗುಣಗಣನಿಲಯಂ ಪ್ರಣಮ್ಯ ಕೃಷ್ಣಂ
ಜಗದಘದಹನಂ ಚ ವಾಸವೀಸೂನುಮ್ ।
ಗುರುಕುಲತಿಲಕಂ ಸುಪೂರ್ಣಬೋಧಂ
ಗುರುಮಪಿ ವಿವೃಣೋಮಿ ಗೀತಿಕಾಭಾಷ್ಯಮ್ ॥

ಅಂತ್ಯ. ನಮೋ ಜಲದನೀಲಾಯ ವಲ್ಲಭೀವಲ್ಲಭಾಯ ತೇ ।
ರಮಾಕರಸಮಾರಾಧ್ಯಚರಣಾಯ ಮುರದ್ವಿಷೇ ॥
ಶ್ರೀಮನ್ಮಧ್ವಮಹಾಚಾರ್ಯಪದಪದ್ಮೈಕಸದ್ಮನಾಂ ।
ಅಣೂನಾಂ ಮಹತಾಂ ಚಾಪಿ ಭವತಾತ್ಕರುಣಾ ಮಯಿ ॥

೬. ಗೀತಾತಾತ್ಪರ್ಯನಿರ್ಣಯಟೀಕಾ :

ಆದಿ. ಶ್ರಿಯಃ ಪತಿಂ ಹರಿಂ ನತ್ವಾ ಗೀತಾತಾತ್ಪರ್ಯನಿರ್ಣಯಂ ।
ಗ್ರಂಥಮಾನಂದತೀರ್ಥಾರ್ಯಕೃತಂ ಸ್ಪಷ್ಟೀಕರೋಮ್ಯಹಮ್ ॥
ಅಥಾಶೇಷವೇದಪಂಚರಾತ್ರಾದಿಸದಾಗಮೈಕವೇದ್ಯಂ ವಿಷ್ಣುಂ ನಮ
ಸ್ಕೃತ್ಯ ಗ್ರಂಥಾರಂಭಂ ಪ್ರತಿಜಾನೀತೇ ಸಮಸ್ತೇತಿ-

ಅಂತ್ಯ. ಲಕ್ಷ್ಮೀವಿರಿಂಚಸರ್ವೇಂದ್ರಪ್ರಮುಖಾಮರವಂದಿತಮ್ ।
ವಂದೇ ಆನಂದತೀರ್ಥಾಖ್ಯೈರುಪವರ್ಣಿತಮಚ್ಯುತಮ್ ॥

೭. ಸತ್ತರ್ಕದೀಪಾವಲೀ :

ಆದಿ. ನಿರ್ದೋಷಂ ಗುಣಪೂರ್ಣಂ ಚ ಜ್ಞೇಯಂ ಗಮ್ಯಂ ರಮಾಪತಿಂ ।
ಶ್ರೀಮದಾನಂದತೀರ್ಥಾಖ್ಯಂ ವಂದೇ ಸರ್ವಜ್ಞ ಪೂರುಷಮ್ ॥
ಪ್ರಸನ್ನಮಪಿ ಗೂಢಾರ್ಥಂ ಭಾಷ್ಯಂ ತತ್ಸುಮನೋಹರಮ್ ।
ವ್ಯಾಖ್ಯಾಸ್ಯೇ ಲೇಶತೋ ಭಕ್ತ್ಯಾ ಗುರುದೇವಪ್ರಸಾದತಃ ॥

ಅಂತ್ಯ. ಉಪಲಬ್ಧವಿಲ್ಲ.

೮. ಸನ್ನ್ಯಾಯರತ್ನಾವಲೀ :

ಆದಿ. ನಾರಾಯಣಮಸಂಖ್ಯೇಯಂ ಕಲ್ಯಾಣಗುಣವಿಗ್ರಹಂ ।
ವಂದೇ ಭಕ್ತ್ಯಾ ಸದಾಧ್ವಸ್ತದೂಷಣಂ ಪರಮಪ್ರಿಯಮ್ ॥
ನಮೋ ಭಗವತೇ ತಸ್ಮೈ ವೇದವ್ಯಾಸಾಯ ವಿಷ್ಣವೇ ।
ಯತ್ಪ್ರಸಾದಾತ್ಪರಂ ಜ್ಞಾನಂ ಪ್ರಾಪ್ಯತೇ ವಿಬುಧಾದಿಭಿಃ ।

ಅಂತ್ಯ. ಲಕ್ಷ್ಮೀನಾರಾಯಣಂ ವಂದೇ ತಯೋರ್ವೋರ್ಭಕ್ತಿಮಾತ್ರತಃ ।
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್ ॥
ಈಶಾಯ ನಾರಾಯಣಸಂಜ್ಞಕಾಯ
ಜನ್ಮಾದಿಕರ್ತ್ರೇ ಜಗತೋ ನಮೋಽಸ್ತು ।
ವ್ಯಾಸಾಭಿಧಾನಾಯ ತಥಾ ಗುರುಭ್ಯೋ–
ಪ್ಯಾನಂದತೀರ್ಥಾಭಿಧಯಾ ಯುತೇಭ್ಯಃ ॥

೯. ತತ್ತ್ವೋದ್ಯೋತಪ್ರಾಚೀನಟೀಕಾ :

ಆದಿ. ಸರ್ವತ್ರಾಖಿಲಸಚ್ಛಕ್ತಿರಿತ್ಯಾದೌಯತಂ ಸ್ವರ್ವತ್ರಾಖಿಲ ಸ್ವತಂತ್ರೋ
ಶೇಷದರ್ಶನ–

ಅಂತ್ಯ. ಅತಃ ಪ್ರಾಕ್ಪ್ರತಿಪಾದಿತಮೇವ ತತ್ಸಿದ್ಧ್ಯರ್ಥಂ–

೧೦. ಪ್ರಮಾಣಲಕ್ಷಣಪ್ರಾಚೀನಟೀಕಾ :

ಆದಿ. ಪ್ರವಕ್ಷ್ಯಾಮಿ ಪ್ರಮಾಣಾನಾಂ ಸ್ವಲಕ್ಷಣಮಿತ್ಯನೇನ ತದ್ವಿಶೇಷ ಲಕ್ಷಣಂ ಯುಕ್ತಂ ವಾ ಅನ್ಯತ್ರ ತದ್ವಕ್ಷ್ಯಾಮೀತಿ ಪ್ರತಿಜ್ಞಾಂ
ಕರೋತೀತಿ ಪ್ರತಿಜ್ಞಾರ್ಥಂ ದರ್ಶಯತಿ–

ಅಂತ್ಯ. ತದ್ಬ್ರಹ್ಮಶಬ್ದಾರ್ಥತ್ವೇನ ವಿಷ್ಣುಂ ನಮಸ್ಕರೋತಿ
ಶ್ರೀಮನ್ಮಧ್ವನಾಮತೋ ಮುನಿಃ ಅಶೇಷೇತಿ

೧೧. ವಿಷ್ಣುತತ್ತ್ವನಿರ್ಣಯಪ್ರಾಚೀನಟೀಕಾ :

ಆದಿ. ಶ್ರೀವಿಷ್ಣುಂ ಮೋಕ್ಷದಂ ವಂದೇ ಭಕ್ತ್ಯ—— ತ್ಯಧಿಕಂ ।
ಪ್ರತ್ಯಯಾದ್ವೇದಯದ್ವೇದ್ಯಃ ಪೂರ್ಣಪ್ರಜ್ಞಂ ನಮಾಮ್ಯಹಮ್ ॥

ಅಂತ್ಯ. ಲಕ್ಷ್ಮೀವಿರಿಂಚ ಶೇಷೇಂದ್ರಪ್ರಮುಖಾಮರವಂದಿತಮ್
ವಂದೇ ಆನಂದತೀರ್ಥಾಖ್ಯ ಮಧ್ವವರ್ಣಿತಮಚ್ಯುತಮ್ ॥

ಶ್ರೀಮಜ್ಜಯತೀರ್ಥರು ಪೂರ್ವ ಪ್ರಸ್ಥಾನವಾದ ತತ್ತ್ವಪ್ರಕಾಶಿಕೆಯಲ್ಲೂ, ಉತ್ತರಪ್ರಸ್ಥಾನವಾದ ಶ್ರೀಮನ್ನ್ಯಾಯಸುಧೆಯಲ್ಲೂ ಟೀಕಾಕಾರರು ಅಂದರೆ ಶ್ರೀಪದ್ಮನಾಭತೀರ್ಥರು, ಟೀಕಾ ಅಂದರೆ ಅನುವ್ಯಾಖ್ಯಾನಕ್ಕೆ ಪ್ರಾಚೀನ ಟೀಕೆಯಾದ ಸನ್ನ್ಯಾಯ ರತ್ನಾವಲಿ ಎಂದೇ ಅನೇಕ ಸಂದರ್ಭಗಳಲ್ಲಿ ತೋರಿಸಿದ್ದಾರೆ. ಪ್ರಥಮ ಸೂತ್ರ ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಎಂಬಲ್ಲಿ ಪ್ರಥಮ ಓಂಕಾರವು ಸೂತ್ರದ ಅವಯವವೇ ಅಥವಾ ಅನವಯವವೇ ಎಂದು ಸಂಶಯ ಬಂದಲ್ಲಿ ಶ್ರೀಮನ್ನ್ಯಾಯಸುಧಾ ರೀತ್ಯಾ ಓಂಕಾರವು ಅವಯವವು. ಸನ್ನ್ಯಾಯ ರತ್ನಾವಲೀ ರೀತ್ಯ ಅನವಯವವು

ಶ್ರೀಮದಾಚಾರ್ಯರು ಇದ್ದಾಗಲೆ ನಾಲ್ಕು ಜನ ಸಂನ್ಯಾಸಿಶಿಷ್ಯರಿದ್ದರು. ಅವರ ನಿತ್ಯ ಪೂಜೆಗಾಗಿ ಶ್ರೀಮದಾಚಾರ್ಯರು ಸ್ವಕರಾರ್ಚಿತಮೂರ್ತಿಗಳನ್ನು ಒಬ್ಬೊಬ್ಬರಿಗೆ ಒಂದೊಂದನ್ನು ಅನುಗ್ರಹಿಸಿದ್ದರು. ಹಿರಿಯರಾದ ಶ್ರೀಪದ್ಮನಾಭತೀರ್ಥರಿಗೆ ಗೋಪೀನಾಥ ದೇವರನ್ನು ಅನುಗ್ರಹಿಸಿದ್ದರು. ಪದ್ಮನಾಭತೀರ್ಥರೂ ತಮ್ಮದೇ ಆದ ಮಠವನ್ನು ಸ್ಥಾಪಿಸಿದರು. ಅದರ ಮೂಲ

ಪುರುಷರು ಶ್ರೀಲಕ್ಷ್ಮೀಧರತೀರ್ಥರು. ತಾವು ಶ್ರೀಮದಾಚಾರ್ಯರ ಪೀಠಕ್ಕೆ ಬಂದಮೇಲೆ ಗೋಪೀನಾಥದೇವರ ಪ್ರತಿಮೆಯನ್ನು ಶ್ರೀಲಕ್ಷ್ಮೀಧರತೀರ್ಥರಿಗೆ ಅನುಗ್ರಹಿಸಿದರು. ಶ್ರೀಪದ್ಮನಾಭತೀರ್ಥರಿಂದ ಸ್ಥಾಪಿತವಾದ ಮಠವೇ ಇಂದಿನ ಶ್ರೀಶ್ರೀಪಾದರಾಜರ ಸಂಸ್ಥಾನ. ಇದರ ಮೂಲ ಸ್ಥಳವು ಕೋಲಾರ ಜಿಲ್ಲೆಯ ಮುಳಬಾಗಲು. ಶ್ರೀಪದ್ಮನಾಭತೀರ್ಥರು ಶೇಷಾಂಶ ಸಂಭೂತರು. ಶ್ರೀವ್ಯಾಸರಾಜರು ಮುಳಬಾಗಲು ನರಸಿಂಹತೀರ್ಥದಲ್ಲಿ ಶ್ರೀಶ್ರೀಪಾದರಾಜರಲ್ಲಿ ವ್ಯಾಸಂಗ ಮಾಡುತ್ತಾ ಗುಹೆಯಲ್ಲಿ ಇದ್ದಾಗ ಒಂದು ಮಹಾ ಸರ್ಪ ಬಂದು ವ್ಯಾಸರಾಜರ ಶರೀರವನ್ನು ಸುತ್ತುಗಟ್ಟಿತು. ಇದನ್ನು ನೋಡಿದ ಶಿಷ್ಯರು ಗುರುಗಳಾದ ಶ್ರೀ ಶ್ರೀಪಾದರಾಜರಿಗೆ ತಿಳಿಸಲು ಅವರು ಬಂದು ಸರ್ಪ ಭಾಷೆಯಲ್ಲಿಯೇ ಆ ಮಹಾಸರ್ಪದ ಸಂಗಡ ಮಾತನಾಡಿದ ಮೇಲೆ, ಆ ಸರ್ಪವು ವ್ಯಾಸರಾಜರ ಶರೀರವನ್ನು ಬಿಟ್ಟು ಹೊರಟು ಹೋಯಿತು. ನೆರೆದಿದ್ದ ಜನರಿಗೆ ಶ್ರೀಪಾದರಾಜರು ಶ್ರೀಪದ್ಮನಾಭತೀರ್ಥರು ಸರ್ಪಾಕಾರ ದಿಂದ ಬಂದು ಶ್ರೀವ್ಯಾಸರಾಜರನ್ನು ಅನುಗ್ರಹಿಸಿದ್ದಾರೆ ಎಂದು ತಿಳಿಸಿದರು.

ಈ ವಿಷಯವು ಶ್ರೀಪಾದರಾಜಮಠದ ಶ್ರೀಶ್ರೀನಿಧಿತೀರ್ಥರು ತಮ್ಮಿಂದ ರಚಿತವಾದ ಶ್ರೀಪಾದರಾಜಗುಣವರ್ಣನದಲ್ಲಿ. (ಪದ್ಯಮಾಲೆ—ಶ್ಲೋಕ–3ರಲ್ಲಿ) ಹೀಗೆ ವರ್ಣಿಸಿದ್ದಾರೆ.

"ಶ್ರೀವ್ಯಾಸರಾಜಫಣಿಬಂಧನಿವಾರಕಾಯ
ತದ್ಭಾಷಯೈವ ಫಣಿರಾಜಸುತೋಷಕಾಯ |
ಸೌವರ್ಣರತ್ನಖಚಿತೋಜ್ವಲಕುಂಡಲಾಯ
ಶ್ರೀಪಾದರಾಜಗುರುವೇಽಸ್ತು ನಮಃ ಶುಭಾಯ ||"

ಇಂಥ ಪರಮ ಪೂಜ್ಯರಾದ ಶ್ರೀಪದ್ಮನಾಭತೀರ್ಥರು, ಕ್ರಿಶ 1313ರಲ್ಲಿ ಶ್ರೀಮದಾಚಾರ್ಯರು ಅದೃಶ್ಯರೂಪದಲ್ಲಿ ಉಡುಪಿಯಿಂದ ವಿಶಾಲಬದರಿಗೆ ಪ್ರಯಾಣ ಮಾಡಿದ ನಂತರ, ಶ್ರೀಮದಾಚಾರ್ಯರ ವೇದಾಂತಸಾಮ್ರಾಜ್ಯಾಧಿ ಪತಿಗಳಾಗಿ ಮಹತ್ಕಾರ್ಯಗಳನ್ನು ಸಾಧಿಸಿ ಹಂಪೆ ಬಳಿ ತುಂಗಾಭದ್ರಾನದಿಯ ನಡುಗಡ್ಡೆಯಾದ ಈಗಿನ ನವವೃಂದಾನವನದಲ್ಲಿ ಕ್ರಿ. ಶ. 1317 ರಲ್ಲಿ ರಕ್ತಾಕ್ಷಿ

ಸಂವತ್ಸರ ಮಾರ್ಗಶಿರ ಕೃಷ್ಣ ಅಮಾವಾಸ್ಯೆ ದಿನ ಬೃಂದಾವನಸ್ಥರಾದರು. ಮಾಧ್ವಯತಿಗಳಲ್ಲಿ ಈ ಮಹನೀಯರು ವೃಂದಾವನಸ್ಥರಾಗಿ ಇಂದಿಗೆ 664 ವರ್ಷಗಳು. ಇವರದೇ ಪ್ರಥಮ ವೃಂದಾವನ ಆಗಿದೆ. ಜನತೆಯು ಇವರನ್ನು ಈ ರೀತಿ ಸ್ಮರಿಸುತ್ತಿದೆ.

ಪೂರ್ಣಪ್ರಜ್ಞಕೃತಂ ಭಾಷ್ಯಮಾದೌ ತದ್ಭಾವಪೂರ್ವಕಂ ।
ಯೋಽವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗೀನೇ ॥

ಶ್ರೀನರಹರಿತೀರ್ಥರು : ಇವರ ಪೂರ್ವಾಶ್ರಮದ ಹೆಸರು ಶ್ಯಾಮ ಶಾಸ್ತ್ರಿಗಳು. (ರಾಮಶಾಸ್ತ್ರಿಗಳು) ಗಂಜಾಂ ಪ್ರಾಂತ್ಯದ ಚಿಕಾಕೋಲು ಗ್ರಾಮವೇ ಇವರ ಜನ್ಮಸ್ಥಳ. ಇವರ ತಂದೆ-ನರಸಿಂಹಭಟ್ಟೋಪಾಧ್ಯಾಯರು. ಕಳಿಂಗ ದೇಶದ ರಾಜರಿಗೆ ವಂಶಪಾರಂಪರ್ಯವಾಗಿ ಬಂದ ಪ್ರಧಾನಮಂತ್ರಿಗಳು. ಬಾಲ್ಯ ಪ್ರಭೃತಿ ಇವರು. ಸ್ವವಂಶ ಸಂಪ್ರದಾಯವನ್ನು ಅನುಸರಿಸಿ ಸಕಲ ಲೌಕಿಕ ವೈದಿಕ ಶಾಸ್ತ್ರಗಳನ್ನು ಅಧ್ಯಯನ ಮಾಡಿ, ಅವುಗಳಲ್ಲಿ ಪ್ರವೀಣರಾಗಿದ್ದರು. ಪ್ರೌಢಾವಸ್ಥೆ ಯಲ್ಲಿ ಇವರು ಕಳಿಂಗ (ಒರಿಸ್ಸಾ) ದೇಶದ ಪ್ರಥಮ ಭಾನುದೇವನಾಮಕ ರಾಜನ ಮಂತ್ರಿಗಳಾಗಿದ್ದರು. ಸನಾತನ ಧರ್ಮ ರೀತಿಯಿಂದ ಪ್ರಜೆಗಳನ್ನು ಕಾಪಾಡು ತ್ತಿದ್ದರು. ಹೀಗಿರುವಾಗ ಒಂದು ಸಮಯದಲ್ಲಿ ಯುದ್ಧರಂಗದಲ್ಲಿ ಶತ್ರುಗಳ ಸಂಗಡ ವೀರಾವೇಶದಿಂದ ಹೋರಾಡಿ, ಶತ್ರುಗಳನ್ನು ಜಯಿಸಿ ದೇವಾಲಯ ಗಳನ್ನೂ ಪ್ರಜೆಗಳನ್ನೂ ರಕ್ಷಿಸಿದರು. ಈ ವಿಷಯದಲ್ಲಿ ಶ್ರೀಕೂರ್ಮದ ಶಕ 1203ನೇ ವರ್ಷ ಶಿಲಾಶಾಸನದ 6-7 ಶ್ಲೋಕಗಳೇ ಪ್ರಮಾಣವು. ಇದಾದ ನಂತರ ಮಂತ್ರಿ ಪದವಿಯನ್ನು ಪರಿತ್ಯಜಿಸಿ ಶ್ರೀಮದಾನಂದತೀರ್ಥಭಗವತ್ಪಾದಾ ಚಾರ್ಯರಿಂದ ವಾದದಲ್ಲಿ ಪರಾಜಿತರಾಗಿ ಅವರ ಶಿಷ್ಯರಾಗಿ ಅವರಿಂದಲೇ ಸಂನ್ಯಾಸಾಶ್ರಮವನ್ನು ಹೊಂದಿ ನರಹರಿತೀರ್ಥರೆಂಬ ಯತಿನಾಮವನ್ನೂ ಪಡೆದರು.

ಗುರುಗಳ ಆಜ್ಞೆ ಪ್ರಕಾರ ಕಳಿಂಗ ದೇಶಕ್ಕೆ ಪುನಃ ಬಂದಾಗ, ಮೊದಲನೆ ಭಾನುದೇವರಾಜನು ಸ್ವರ್ಗಸ್ಥನಾಗಿದ್ದನು. ಚಾಲುಕ್ಯವಂಶದಲ್ಲಿ ಜನಿಸಿದ

ಆತನ ಪತ್ನಿ (ಮಹಾರಾಣಿ) ಯಲ್ಲಿ ಎರಡನೆಯ ನರಸಿಂಹರಾಜನೆಂಬ ಮಗುವು ಹುಟ್ಟಿದ್ದನು. ರಾಜಪುತ್ರನು ಶೈಶವಾವಸ್ಥೆಯಲ್ಲಿದ್ದನು. ಆ ಕಾಲದಲ್ಲಿ ಅಲ್ಲಿದ್ದ ಮಂತ್ರಿಗಳು ಮತ್ತು ಸದ್ಗೃಹಸ್ಥರ ಪ್ರಾರ್ಥನೆಯ ಮೇರೆಗೆ, ಆ ಜನರ ವಿಶ್ವಾಸಕ್ಕೆ ಪಾತ್ರರಾದ ಇವರು ರಾಜಪ್ರತಿನಿಧಿಯಾಗಿ, ಸಂನ್ಯಾಸಾಶ್ರಮಕ್ಕೆ ಚ್ಯುತಿ ಬಾರದಂತೆ, ರಾಜ್ಯವನ್ನು ಪಾಲಿಸುತ್ತಿದ್ದರು. ರಾಜಪುತ್ರ ಎರಡನೆಯ ನರಸಿಂಹರಾಜನು ಪ್ರೌಢಾವಸ್ಥೆಗೆ ಬಂದ ನಂತರ, ಆತನ ಹದಿನೆಂಟನೆಯ ವಯಸ್ಸಿನಲ್ಲಿ, ಮಹೋತ್ಸವ ಪೂರ್ವಕವಾಗಿ ಅವನ ರಾಜ್ಯವನ್ನು ಅವನಿಗೇ ಹಿಂತಿರುಗಿಸಿದರು. ಕೃತಜ್ಞನಾದ ರಾಜಪುತ್ರನು, ನರಹರಿತೀರ್ಥರನ್ನು ರಾಜ್ಯಕೋಶಾಗಾರದಲ್ಲಿ ಯಾವ ವಸ್ತುವನ್ನಾದರೂ ಉಪಾಯನವಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ಅವನ ಪ್ರಾರ್ಥನೆಯಂತೆ ಕೋಶಾಗಾರದಲ್ಲಿದ್ದ ಶ್ರೀಮೂಲರಾಮ ಮತ್ತು ಸೀತಾದೇವಿಯ ಪ್ರತಿಮೆಗಳನ್ನು ತೆಗೆದುಕೊಂಡು, ಶಕ 1239, ಕಾರ್ತಿಕಶುಕ್ಲ ದ್ವಾದಶಿಯಲ್ಲಿ, ಉಡುಪಿಯಲ್ಲಿದ್ದ ಶ್ರೀಮದಾನಂದತೀರ್ಥರಿಗೆ ಸಮರ್ಪಿಸಿದರು. ಅವರು ಆ ಪ್ರತಿಮೆಗಳನ್ನು 80 ದಿನಗಳ ಪರ್ಯಂತ ಪೂಜಿಸಿದರು, ಅನಂತರ ಅವನ್ನು ಶ್ರೀಪದ್ಮನಾಭತೀರ್ಥರಿಗೆ ಕೊಟ್ಟು, ಅವರು ತಮ್ಮ ಅನಂತರ ನರಹರಿತೀರ್ಥರಿಗೆ ಕೊಡಬೇಕೆಂದು ಹೇಳಿದರು.

ಕರ್ನಾಟಕದಾಸ ಸಾಹಿತ್ಯದ ಮೂಲಪುರುಷರು ಇವರು. ಇವರು ರಚಿಸಿದ ಒಂದೆರಡು ದೇವರನಾಮವು ದೊರಕಿದೆ. ಇವರು ವಿಜಯನಗರದ ಸಾಮ್ರಾಜರಿಂದ ಬಹುಮಾನಿತರಾಗಿ, ಅವರಿಗೆ ಉಪದೇಶಕರಾಗಿದ್ದರು. ಇವರ ಮುದ್ರಿಕೆಯು "ರಘುಕುಲತಿಲಕ" "ನರಹರಿ", "ನೃಹರಿರಘುಪತಿ" ಎಂದೂ ಇದೆ.

ಕಳಿಂಗದೇಶದ ಗಜಪತಿರಾಜ್ಯಾಧೀಶ ಮೊದಲನೆಯ ನರಸಿಂಹರಾಜನ ಮೃತ್ಯುಕಾಲ ಕ್ರಿ.ಶಕ. 1264. ಅವನ ನಂತರ, ಅವನ ಮಗ ಮೊದಲನೆ ಭಾನುದೇವ 15 ವರ್ಷಗಳು ರಾಜ್ಯವಾಳಿ ಕ್ರಿ.ಶಕ 1279ರಲ್ಲಿ ಮೃತನಾದನು. ಇವನ ನಂತರ ಇವನ ಮಗ ಎರಡನೆಯ ನರಸಿಂಹರಾಜನು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದನು ಎಂದು ಶಾಸನಗಳಾಧಾರದಿಂದ ತಿಳಿಯುವುದು. ನರಹರಿತೀರ್ಥರು

ಇವನಿಗೆ ಕ್ರಿ. ಶಕ. 1293 ರಲ್ಲಿ ರಾಜ್ಯವನ್ನು ಹಿಂತಿರುಗಿಸಿ ಪಟ್ಟಾಭಿಷೇಕ ಮಾಡಿದರು. ಇವನು ಕ್ರಿ.ಶ. 13[illegible]6ರಲ್ಲಿ ಕಾಲವಾದನು. ಶ್ರೀನರಹರಿತೀರ್ಥರ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಕ್ರಿ. ಶಕ. 1324ರಲ್ಲಿ. ಕ್ರಿ.ಶಕ. 1333ರಲ್ಲಿ ಇವರ ವೃಂದಾವನ ಪ್ರವೇಶ.

ಶ್ರೀನರಹರಿತೀರ್ಥರು ಮಹಾ ರಾಜಕಾರಣಪಟುಗಳು. ತಾವು ಮಾಡಿದ ಅದ್ಭುತಕಾರ್ಯಗಳನ್ನೆಲ್ಲ ಶಿಲಾಶಾಸನಗಳ ಮೂಲಕ ಪ್ರಸಿದ್ಧಿ ಪಡಿಸಿದ್ದಾರೆ. ಸಿಂಹಾಚಲನಾಥನಿಗೆ ನಾನಾ ವಿಧವಾದ ದಾನಗಳನ್ನು ಮಾಡಿದ್ದಾರೆ. ಉತ್ಕಲ ಮಾತ್ಸ್ಯವಂಶೀಯನಾದ ಜಯಂತನಾಮಕಮಾಂಡಲಿಕನು, ನರಹರಿತೀರ್ಥರ ಆಜ್ಞಾನುಸಾರ, ದಾನ ಮಾಡಿದನೆಂದು ಶಿಲಾ ಲೇಖನಗಳಿವೆ. ಶ್ರೀನರಹರಿ ತೀರ್ಥರು ಸಿಂಹಾಚಲದಲ್ಲಿ "ನರಹರಿಮಠ" ವನ್ನು ಸ್ಥಾಪಿಸಿ, ಅದರ ಯೋಗ ಕ್ಷೇಮ ನಿರೀಕ್ಷಣೆಗಾಗಿ, ತಮ್ಮ ಶಿಷ್ಯರಾದ ಜಗನ್ನಾಥತೀರ್ಥರನ್ನು ನಿಯಮಿಸಿ ದರು. ಈ ಜಗನ್ನಾಥತೀರ್ಥರು ದೇವಸ್ಥಾನಕ್ಕಾಗಿ ಅನೇಕ ದಾನಗಳನ್ನು ಕೊಟ್ಟಿರುತ್ತಾರೆಂದು ಕ್ರಿ. ಶಕ. 1373ರ ಶಾಸನದಿಂದ ತಿಳಿದುಬರುತ್ತದೆ. ಹಗಲೂ ರಾತ್ರಿ ಶ್ರಮಿಸಿ, ನರಹರಿತೀರ್ಥರು, ತಮ್ಮ ಶಿಷ್ಯರ ಮೂಲಕ ಕಳಿಂಗ ದೇಶದಲ್ಲೆಲ್ಲ ಶ್ರೀಮಧ್ವಸಿದ್ಧಾಂತ ಪ್ರಚಾರವನ್ನು ವಿಸ್ತರಿಸಿದರು. ತಮ್ಮ ತಪಶ್ಚರ್ಯಾದಿ ವರ್ಚಸ್ಸಿನಿಂದಲೂ ಅನೇಕ ರಾಜರನ್ನು ಮಧ್ವಮತಾವಲಂಬಿ ಗಳಾಗಿ ಮಾಡಿದರು.

ಅನೇಕ ಶಿಲಾಶಾಸನಗಳ ಅವಲೋಕನದಿಂದ ನರಹರಿತೀರ್ಥರ ರಾಜ್ಯ ಭಾರ ಕ್ರಮವು ಅತ್ಯಂತ ವ್ಯವಸ್ಥಿತ ರೀತಿಯಲ್ಲಿತ್ತೆಂದು ತಿಳಿದು ಬರುತ್ತದೆ. ಮತ್ಸ್ಯವಂಶದ ಅನೇಕ ರಾಜರು ಇವರ ಪಾದಪದ್ಮಾರಾಧಕರಾಗಿದ್ದರು. ಇವರು ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾಗಿದ್ದ ಮೇಲೆ, ಪಂಪಾ ಕ್ಷೇತ್ರ ಸಮೀಪದ ಗಜಗಹ್ವರ (ಕರಿಕೋಣ–ಆನೆಗೊಂದಿ) ಪುರದಲ್ಲಿ ಅಲ್ಲಿನ ಜಂಬುಕೇಶ್ವರ ರಾಜನ (ಕ್ರಿ.ಶ. 1297–1334) ಪ್ರಾರ್ಥನಾನುಸಾರವಾಗಿ, ರಾಜ್ಯತಂತ್ರಪ್ರವೀಣರೂ, ಜ್ಞಾನವೃದ್ಧರೂ, ವಯೋವೃದ್ಧರೂ, ವೇದ ವೇದಾಂತ ಪ್ರವೀಣರೂ ಆದ ಇವರು ಆ ರಾಜ್ಯದ ಕ್ಷೇಮ ಚಿಂತನೆಗಾಗಿ, ಆ

ರಾಜನಿಗೆ ಕಾಲ ಕಾಲದಲ್ಲಿ ಉಪದೇಶಿಸುತ್ತಾ, ಸಜ್ಜನರೂ ಗುರುಗಳೂ ಆದ ಶ್ರೀಪದ್ಮನಾಭತೀರ್ಥರ ಸಹಿತವಾಗಿ ಅಲ್ಲಿಯೇ ವಾಸಮಾಡುತ್ತಿದ್ದರು.

ಶ್ರೀನರಹರಿತೀರ್ಥರ ವಿಷಯದಲ್ಲಿ ಆರು ಶಿಲಾಶಾಸನಗಳು ದೊರಕಿವೆ. ಎರಡು ಸಂಸ್ಕೃತ ಭಾಷೆಯಲ್ಲಿವೆ. ನಾಲ್ಕು ತೆಲಗು ಭಾಷೆಯಲ್ಲಿವೆ.

ಈ ಮಹನೀಯರು ಹಂಪೆಯ ಚಕ್ರತೀರ್ಥದ ಬಳಿ ತುಂಗಾಭದ್ರಾ ನದಿಯ ತೀರದಲ್ಲಿ ಕ್ರಿ. ಶ, 1294 ಪುಷ್ಯ ಬಹುಳ ಸಪ್ತಮಿ ವೃಂದಾವನಸ್ಥರಾದರು.1

ಶ್ರೀನರಹರಿತೀರ್ಥರು ಸರ್ವಮೂಲದ ದಶಪ್ರಕರಣಗಳಿಗೂ ಟೀಕೆಗಳನ್ನು ರಚಿಸಿದ್ದಾರೆಂದು ಪ್ರತೀತಿ ಇದೆ. ಎಲ್ಲವೂ ಈಗ ಉಪಲಭ್ಯವಿಲ್ಲ-ಲಭ್ಯವಿರುವ ಟೀಕೆಗಳ ಆದ್ಯಂತ ಭಾಗಗಳು ಇಲ್ಲಿ ಸೂಚಿತವಾಗಿವೆ. ಇವರ ಟೀಕೆಗಳಿಗೆ ಪ್ರಾಚೀನ ಟೀಕೆಗಳೆಂದು ಪ್ರಸಿದ್ಧಿಯಿದೆ.

1) ಯಮಕಭಾರತ ಟೀಕಾ-(ಕೃಷ್ಣಪ್ರಕಾಶಿಕಾ)

ಆದಿ. ಶ್ರೀಶಂ ಗುರೂಣಾಂಗುರುಮಾದ್ಯಯೋನಿಂ
ವೇದ್ಯೈಕವೇದ್ಯಂ ನಿಖಿಲೇಶ್ವರೇಶ್ವರಮ್ ।
ನಮಾಮಿ ವಿಷ್ಣುಂ ಜಗದೇಕವಂದ್ಯಂ
ಕೇಶಾದಿಭಿಃ ಪ್ರಾಪ್ಯತಮಂ ಸುನಿತ್ಯಮ್ ॥

ಅಂತ್ಯ. ದಶಮತಿಸ್ವಾಮಿತಮತಿನಾವಿರಚಿತಾ ಭಾರತನಿರ್ಣಯಸ್ಯ ಟೀಕಾ ।
ಸುರವರನಹಿತುಷ್ಟ್ಯೈ ನರಹರಿವರನಾಮಿನಾ ರಚಿತಾ
ಶ್ರೀಮನ್ನೃಹರಿತೀರ್ಥಾರ್ಯಮುಖಾಂಭೋಜವಿನಿಸ್ಸೃತಮ್
ಪ್ರೀಯತಾಂ ಸನ್ಮಧುಕರೈಃ ಕೃಷ್ಣಲೀಲಾಮೃತಂ ಶುಭಮ್ ॥

---

1) ಈ ವಿಷಯಗಳು, ವೇದಾಂತಶಿರೋಮಣಿ, ವೇದಾಂತ ಚೂಡಾಮಣಿ, ನ್ಯಾಯಶಿರೋಮಣಿ, ವಿದ್ಯಾಲಂಕಾರೇತ್ಯಾದ್ಯನೇಕಬಿರುದಾಂಕಿತ ಶ್ರೀ ಗುತ್ತಲ ಹಯಗ್ರೀವಾಚಾರ್ಯರಿಂದ ಸಂಗ್ರಹೀತವಾದ ಯಮಕ ಭಾರತ-ಟೀಕಾಪಂಚಕಾಮೃತದ ಭೂಮಿಕೆಯಿಂದ ಉದ್ಧೃತವಾಗಿವೆ. ಇವರಿಗೆ ಕೃತಜ್ಞತಾಪೂರ್ವಕ ಧನ್ಯವಾದಗಳು. -ಲೇ.

ಇತಿಶ್ರೀ ಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ ಶ್ರೀಮನ್ಮಹಾ ಭಾರತತಾತ್ಪರ್ಯಾನುಕ್ರಮಣಿಕಾ ಕೃಷ್ಣಪ್ರಕಾಶಿಕಾ ಸಮಾಪ್ತಾ.

ಈ ಮಹನೀಯರು ಯಮಕಭಾರತಕ್ಕೆ ವಾಕ್ಯರೂಪ ಟೀಕೆಯನ್ನೂ ರಚಿಸಿದ್ದಾರೆ.

ಆದಿ. ಶ್ರೀಕಾಂತಂ ಪರಮೇಷ್ಟ್ಯದ್ವೈಪತಮುಹಂ ಸಂನಮ್ಯ ಕೃಷ್ಣಾಭಿಧಂ
ವ್ಯಾಸಂ ಸತ್ಪ್ರತಿಬಿಂಬಪೂರ್ಣಸುಮತಿಂ ಶ್ರೀಪದ್ಮನಾಭಾದಿಕಾನ್ ।
ಸದ್ವಿದ್ಯಾಗುರುಮಾತ್ಮನಶ್ಚ ಕೃಪಯಾ ತೇಷಾಂ ಯಥಾಬೋಧತಃ
ಕುರ್ವೇ ಸಂಗಮನಂಸುಭಾರತಪದ್ಯೈಷ್ಟೀಕಾ ಪದಾನಾಂ ಶುಭಮ್ ॥

ಅಂತ್ಯ. ದಶಮತಿನಾಮಿತಮತಿನಾ ವಿರಚಿತಾ ಭಾರತನಿರ್ಣಯಸ್ಯ ಟೀಕಾ ।
ಸುರವರ ನರಹರಿತುಷ್ಟ್ಯೈ ನರಹರಿವರನಾಮಿನಾ ರಚಿತಾ ॥

೩. ಗೀತಾಭಾಷ್ಯ ಪ್ರಾಚೀನಟೀಕಾ :

ಆದಿ. ದೇವೋऽಪಿದ್ಯೋತನಾದ್ಯಃ ಸುರವಿಪ್ರವಿಜಯಾದುಚ್ಚಕಾಂತ್ಯಾ ಸ್ತುತೋऽಯಂ
ದೇವೈಸ್ತೈರಾವತ್ಮೆ ಭಕ್ತ್ಯೈರ್ವ್ಯವಹಿತಕರಣಾತ್ ಸರ್ವಗತ್ಯಾ ಚ ರತ್ಯಾ।
ಸರ್ವೈದೋಷೈರ್ವಿಹೀನೈಸ್ತ್ವಮಿತಗುಣತನುಃ ಸರ್ವಸಾಮರ್ಥ್ಯಪೂರ್ಣಃ
ಶ್ರೀಮನ್ನಾರಾಯಣಸ್ತಂ ಶ್ರುತಿನುತಿಪರಮಂ ಕೃಷ್ಣಗೀತಂ ನಮಾಮಿ॥

ಅಂತ್ಯ. ಉಪಲಭ್ಯವಿಲ್ಲ.

೪. ಅನುವ್ಯಾಖ್ಯಾನ ಪ್ರಾಚೀನ ಟೀಕಾ :

ಕುಂಭಕೋಣದಲ್ಲಿ ಮುದ್ರಿತವಾಗಿರುವ ಶ್ರೀಮನ್ನ್ಯಾಯಸುಧಾ ಪುಸ್ತಕ ಪುಟ–38 ಅನಂಕ-ಪಂಕ್ತಿ 8ರಲ್ಲಿ "ತೇನಾನಿಷ್ಟಂ ಕಥಂ ಭೂಯಾತ್" ಎಂಬ ವಾಕ್ಯದ ವ್ಯಾಖ್ಯಾನಾವಸರದಲ್ಲಿ "ಕೇಚಿತ್ತೇ ತವಾನಿಷ್ಟಂ ಕಥಂ ಭವೇದಿತಿ ವ್ಯಾಚಕ್ಷತೇ ತಚ್ಛ್ರನಪಾದಾದಾವಿತಿ ಪ್ರತಿಕ್ಷೇಧಸ್ಯನಞಾ ನಿರ್ದಿಷ್ಟ ಮನಿಷ್ಟಮ ನಿತ್ಯಮಿತಿ ಸಮಾಧಾನಮವಧೇಯಂ." ಇಲ್ಲಿ ಸೂಚಿತವಾಗಿರುವ ಕೇಚಿತ್

ಪಕ್ಷವು ಪ್ರಾಚೀನ ಟೀಕೆಯ ಅನುವಾದವು. ಈ ಪ್ರಾಚೀನ ಟೀಕೆಯು ನರಹರಿ ತೀರ್ಥರಿಂದ ರಚಿತವಾದ ಅನುವ್ಯಾಖ್ಯಾನದ ಪ್ರಾಚೀನ ಟೀಕೆಯೆಂದು ತರ್ಕಿಸ ಬೇಕಾಗಿದೆ. ಈಗ ಈ ಗ್ರಂಥವು ಉಪಲಬ್ಧವಿಲ್ಲ.

ನರಹರಿತೀರ್ಥರ ವೃಂದಾವನವು ಆನೆಗೊಂದಿ ಪಂಪಾಕ್ಷೇತ್ರಗಳ ನಡುವೆ ತುಂಗಭದ್ರೆಯ ದಡದಲ್ಲಿ, ಒಂದು ಎತ್ತರವಾದ ಕಲ್ಲುಗುಂಡುಗಳ ದಿನ್ನೆಯ ಮೇಲಿದೆ. ಮಳೆಗಾಲ ಬಿಟ್ಟರೆ ಉಳಿದ ಸಮಯದಲ್ಲಿ ಇಲ್ಲಿಗೆ ಹೋಗಿ ದರ್ಶನ ಮಾಡಿಕೊಂಡು ಬರಬಹುದಾಗಿದೆ. ಇದು ಪದ್ಮನಾಭತೀರ್ಥರ ಅನಂತರ ನಮಗೆ ದೊರಕಿರುವ ಎರಡನೆಯ ವೃಂದಾವನವಾಗಿದೆ.

ಇವರನ್ನು ಜನರು ಹೀಗೆ ಸ್ಮರಿಸುತ್ತಾರೆ.

ಭೂದೇವೀತನಯಾಸಕ್ತಃ ರಘ್ವೀಶಪದಮಾನಸಃ ।<br>
ನೃಹರ್ಯಾಖ್ಯಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥<br>
ಸಸೀತಾ ಮೂಲರಾಮಾರ್ಚಾ ಕೋಶೆ ಗಜಪತೇಃ ಸ್ಥಿತಾ ।<br>
ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿಭಿಕ್ಷವೇ ॥

**ಶ್ರೀಮಾಧವತೀರ್ಥರು :** ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯ ರಲ್ಲಿ ಶ್ರೀಮಾಧವತೀರ್ಥರು ಮೂರನೆಯವರು. ಇವರ ಪೂರ್ವಾಶ್ರಮದ ಹೆಸರು ವಿಷ್ಣುಶಾಸ್ತ್ರಿ ಎಂದು.[1] ಇವರು ಉತ್ತರದೇಶದ ಯಜುರ್ವೇದಿ ಬ್ರಾಹ್ಮಣರು ಶ್ರೀಮಧ್ವಾಚಾರ್ಯರಿಗೆ ಬೇರೆ ಬೇರೆ ದೇಶಗಳಿಂದ ಬಂದ ಅನೇಕ ಜನ ಸಂನ್ಯಾಸಿ ಶಿಷ್ಯರಿದ್ದರೆಂದು ಸುಮಧ್ವವಿಜಯ ಗ್ರಂಥದಿಂದ ತಿಳಿಯುತ್ತದೆ. 'ಅಮಿತಬೋಧಸ್ಯಾನೇಕೇ ಯತೀಂದ್ರಾ ಬಹುದೇಶಜಾಃ' ಎಂದೂ ನಾರಾಯಣ ಪಂಡಿತಾಚಾರ್ಯರು ತಿಳಿಸಿದ್ದಾರೆ. ಇಂಥವರಲ್ಲಿ ಶ್ರೀಮಾಧವ ತೀರ್ಥರೂ ಒಬ್ಬರಾಗಿದ್ದರು.

---

1) ಇವರಿಗೆ ಕೃಷ್ಣಶಾಸ್ತ್ರಿ ಎಂದು ಹೆಸರು ಇದ್ದಂತೆ ಗುರುಚರ್ಯಾ ಗ್ರಂಥ ತಿಳಿಸುತ್ತದೆ—"ತತಃ ಕರ್ಣಾಟಕಂ ಮಿತಿ ಶಬ್ದಿತಂ ಕೃಷ್ಣಶಾಸ್ತ್ರಿಣಂ"

ಮಾಧವತೀರ್ಥರು ಪಟ್ಟಕ್ಕೆ ಬಂದಾಗ ಕರ್ನಾಟ ದೇಶದ ಇತಿಹಾಸದಲ್ಲೂ ಅದೊಂದು ಸಂಧಿಕಾಲ. ಕಂಪಿಲರಾಯರ ದುರ್ಗವು ಮುಸಲ್ಮಾನರ ದಾಳಿಯಿಂದ ನಾಶವಾಗಿತ್ತು. ಕುಮಾರರಾಮನೂ ಯುದ್ಧದಲ್ಲಿ ಮಡಿದಿದ್ದನು. ಭಾವ ಸಂಗಮನ ಮಕ್ಕಳಾದ ಹಕ್ಕ ಬುಕ್ಕರು ಯವನರಸೆರೆಯಲ್ಲಿದ್ದರು. ಆ ಸಮಯದಲ್ಲಿ ಆನೆಗೊಂದಿಯ ಜಂಬುಕೇಶ್ವರರಾಯನು ಸ್ವತಂತ್ರನಾಗಿದ್ದನು. ಯವನರ ದುರಾಕ್ರಮಣವನ್ನು ತಡೆಯಲಾರದಷ್ಟು ದುರ್ಬಲನಾಗಿದ್ದನು. ಈ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯದ ಅಂಕುರಾರ್ಪಣ ಮಾಡಲು ವಿದ್ಯಾರಣ್ಯರಂತೆ ಕ್ರಿಯಾಶಕ್ತಿಪಂಡಿತರೂ ಪದ್ಮನಾಭತೀರ್ಥರೂ ನರಹರಿ ತೀರ್ಥರೂ ಜನತೆಯಲ್ಲಿ ನವಜಾಗೃತಿಯನ್ನುಂಟು ಮಾಡಲು ತೊಡಗಿದ್ದರು. ಈ ಪ್ರಯತ್ನ ಫಲಿಸಿ (ಕ್ರಿ. ಶ. 1303-1337) ವಿಜಯನಗರದ ಸಾಮ್ರಾಜ್ಯವು ಹಂಪಾ ಕ್ಷೇತ್ರದಲ್ಲಿ ಭುವನೇಶ್ವರಿಯ ಕೃಪೆಯಿಂದ ಮೈತಾಳಿತು.

ಶ್ರೀಮಾಧವತೀರ್ಥರು ವೈಷ್ಣವರಾಗಿದ್ದುದರಿಂದ ವಿದ್ಯಾರಣ್ಯದ ಅಭಿಮಾನಿಗಳು ಅವರ ವಿದ್ವತ್ತನ್ನು ಸಹಿಸದೆ, ವಿಜಯನಗರವನ್ನು ತೊರೆಯುವಂತೆ ಕುಯುಕ್ತಿಗಳನ್ನು ಮಾಡಿದರು.

ಮಾಧವತೀರ್ಥರು ಪೂರ್ವಾಶ್ರಮದಲ್ಲಿ ವಿಷ್ಣುಶಾಸ್ತ್ರಿ ಎಂಬ ಹೆಸರಿನಿಂದ ಗೋದಾವರೀ ತೀರದಲ್ಲಿ ಪ್ರಸಿದ್ಧ ವಿದ್ವಾಂಸರಾಗಿದ್ದರು. ಇವರು ಯಜುರ್ವೇದಿಗಳು ಎಂಬುದಕ್ಕೆ ಶ್ಲೋಕಾಧಾರವಿದೆ.[1]

ಇವರು ವಿಜಯನಗರವನ್ನು ಬಿಟ್ಟು ಹೊರಟ ಮೇಲೆ ಪಾಂಡುರಂಗ ಕ್ಷೇತ್ರವಾದ ಪಂಢರಪುರ ಪ್ರಾಂತ್ಯದಲ್ಲಿ ಸಂಚರಿಸುತ್ತಿದ್ದಾಗ ಮಣೂರೆಂಬ ಗ್ರಾಮಕ್ಕೆ ಆಗಮಿಸಿದರು. ಅಲ್ಲಿ ಧ್ರುವರಾಜನಿಂದ ಪ್ರತಿಷ್ಠಿಸಲ್ಪಟ್ಟಿದ್ದ ಶ್ರೀಕೇಶವದೇವರನ್ನು ನೋಡಿ ಬಹುವಾಗಿ ಆಕರ್ಷಿತರಾದರು.

---

1) ಅಥಾಗತ್ಯ ಯಜುರ್ವೇದೀ ವಿಷ್ಣುಶಾಸ್ತ್ರೀ ಸಮೇತ್ಯ ತಂ
ಮಮಾಪಿ ದೇಹಿ ಸನ್ಯಾಸಮಿತಿ ಮಧ್ವಮಯಾಚತ ।
ತಸ್ಮೈ ದತ್ವಾ ತು ಸನ್ಯಾಸಂ ಪೂರ್ಣಪ್ರಜ್ಞೋಽನುಕಂಪಯಾ
ದದೌ ಮಾಧವತೀರ್ಥೋಽಯ ಮಿತಿನಾಮ ಸ ಭೂತಲೇ ॥

ಮಣೂರು ಒಂದು ಜೈನಕ್ಷೇತ್ರವಾಗಿತ್ತು ಅಲ್ಲಿ ಜೈನರ ಒಂದು ವಿಶ್ವ ವಿದ್ಯಾನಿಲಯ ನಡೆಯುತ್ತಿತ್ತು. ಅದರ ಕುಲಪತಿಯಾಗಿದ್ದ ಪದ್ಮರಾಜ ಪಂಡಿತನೆಂಬ ವಿದ್ವಾಂಸನು ವಿಶ್ವವಿದ್ಯಾಲಯವನ್ನು ಮುಚ್ಚಿ ರಾಜಧಾನಿಯಾಗಿದ್ದ ವಿಜಯ ನಗರವನ್ನು ಸೇರಿದ್ದನು. ಇಂಥ ಸಮಯದಲ್ಲಿ ಸಕಲ ವೇದಾಗಮಗಳನ್ನು ಬಲ್ಲ ಮಾಧವತೀರ್ಥರಂಥ ಉದ್ದಾಮ ಪಂಡಿತರನ್ನು ಊರಿನ ಜನತೆ ಸ್ವಾಗತಿಸಿ ಕುಲಪತಿ ಪದವಿಯನ್ನು ಸ್ವೀಕರಿಸಿ ಅಲ್ಲೇ ನಿಲ್ಲಲು ಪ್ರಾರ್ಥಿಸಿದರು. ಅವರು ಕೇಶವದೇವರ ದಿವ್ಯ ಸನ್ನಿಧಿಯನ್ನು ಬಿಟ್ಟು ಹೋಗಲಾಗದೆ ಅಲ್ಲೇ ನೆಲೆಸಿದರು. ಅವರು ನಾಲ್ಕು ವೇದಗಳಿಗೂ ದ್ವೈತಪರವಾದ ವ್ಯಾಖ್ಯಾನವನ್ನೂ ಒಂದು ಧರ್ಮಶಾಸ್ತ್ರ ಗ್ರಂಥವನ್ನೂ ಇಲ್ಲಿದ್ದಾಗ ರಚಿಸಿದರು.1 ಅವರು ಸುಮಾರು ಹದಿನೇಳು ವರ್ಷಗಳವರೆಗೆ ವೇದಾಂತ ರಾಜ್ಯವನ್ನು ಆಳಿ ಸಜ್ಜನರಿಗೆ ಮಾರ್ಗ ದರ್ಶನ ಮಾಡಿ ಭೀಮಾತೀರದ ಮಣೂರು ಕ್ಷೇತ್ರದಲ್ಲಿಯೇ ಹರಿಪಾದ ಸೇರಿ ದರು. ಈಗ ಇವರ ವೃಂದಾವನವನ್ನು ಅಲ್ಲಿ ನೋಡಬಹುದಾಗಿದೆ.2

ಇವರ ನಂತರ ವೇದಾಂತ ಸಿಂಹಾಸನವನ್ನೇರಿದ ಅಕ್ಷೋಭ್ಯತೀರ್ಥರು ಮಾಧವತೀರ್ಥರನ್ನೇ ಹೊಗಳಿ ಶ್ರದ್ಧಾಂಜಲಿ ಅರ್ಪಿಸಿದ್ದಾರೆ.

ಮಾಧವಾಂಘ್ರಿಯುಗಾಸಕ್ತಾ ಮಾಧವಾಖ್ಯಮುನೀಶ್ವರಾಃ ।
ಅದಧುರ್ಮಧ್ವತೀರ್ಥಂ ಯೇ ದದ್ಯುಸ್ತೇಽಭಿಷ್ಟ ಸಂತತಿಂ ॥

**ಶ್ರೀಅಕ್ಷೋಭ್ಯತೀರ್ಥರು :** ಅಕ್ಷೋಭ್ಯತೀರ್ಥರ ಪೂರ್ವಾಶ್ರಮದ ಹೆಸರು ಗೋವಿಂದಭಟ್ಟರೆಂದು ಹೇಳುತ್ತಾರೆ. ಇವರು ದೇವಗಿರಿ ರಾಜ್ಯದ

---

1) ಮಾಧ್ವರ ದುರ್ದೈವದಿಂದ ಶ್ರೀಮಾಧವತೀರ್ಥರ ಯಾವ ಕೃತಿಗಳೂ ಉಪಲಬ್ಧವಿರುವುದಿಲ್ಲ.

2) ಶ್ರೀಮಾಧವತೀರ್ಥರ ವೃಂದಾವನವು ಭೀಮಾನದಿ ತೀರದಲ್ಲಿ ಇದ್ದುದಾಗಿಯೂ ಆನಂತರ ಈಗಿರುವ ಸ್ಥಳಕ್ಕೆ-ವೇದೇಶತೀರ್ಥರ ಬೃಂದಾವನ ಸಮೀಪದಲ್ಲಿ ಇರುವ ಸ್ಥಳಕ್ಕೆ-ಬದಲಾಯಿತೆಂದು ಹೇಳುತ್ತಾರೆ.

ಮಂಗಳವೇಡೆಯ ರಾಜಮನೆತನಕ್ಕೆ ಸೇರಿದವರು. ಪಾಷ್ಟಿಕ ಮನೆತನದವರು. ಇವರು ವೇದಾಧ್ಯಯನಸಂಪನ್ನರು. ಬಾಲ್ಯದಲ್ಲಿಯೇ ವೈರಾಗ್ಯ ಹುಟ್ಟಿ ಅವಧೂತಚರ್ಯೆಯಲ್ಲಿ ಇದ್ದು ಕೊಂಡು ಯೋಗ್ಯ ಗುರುಗಳಾಗಿ ಶೋಭಿಸುತ್ತಿದ್ದರು. ಇವರ ಸೋದರ ಧುಂಡೀರಾಜನ ಪುತ್ರನೇ ಧೋಂಡೋರಘುನಾಥ. ಇವರೇ ಮುಂದೆ ಜಯತೀರ್ಥರೆಂಬ ಹೆಸರಿನಲ್ಲಿ ಪ್ರಸಿದ್ಧರಾದರು. ಒಮ್ಮೆ ಕಣ್ವತೀರ್ಥದಲ್ಲಿ ಸಮುದ್ರ ಸ್ನಾನಕ್ಕೆ ಹೋದಾಗ, ಶ್ರೀಮಧ್ವಾಚಾರ್ಯರ ಆದೇಶದಂತೆ, ಪ್ರಕ್ಷುಬ್ಧಗೊಂಡಿದ್ದ ಸಮುದ್ರದಲ್ಲಿ ಮುಳುಗಿ ಸ್ನಾನ ಮಾಡಿದರಂತೆ. ಅವರ ಧೈರ್ಯ ಸ್ಥೈರ್ಯವನ್ನು ನೋಡಿದ ಶ್ರೀಮದಾಚಾರ್ಯರು ಅವರಿಗೆ ಸಂನ್ಯಾಸಾಶ್ರಮವನ್ನಿತ್ತು, ಅಕ್ಷೋಭ್ಯತೀರ್ಥರೆಂಬ ಯತಿನಾಮವನ್ನೇ ನೀಡಿದರಂತೆ.

ಅಕ್ಷೋಭ್ಯತೀರ್ಥರು (ಕ್ರಿ. ಶ. 1350–1365) ವಿದ್ಯಾರಣ್ಯರೊಡನೆ (ಕ್ರಿ. ಶ. 13(3 – 1387) ವಾದ ಮಾಡಲು ಅವರ ಆಹ್ವಾನವನ್ನು ಸ್ವೀಕರಿಸಿ ಮುಳಬಾಗಿಲು ಕ್ಷೇತ್ರಕ್ಕೆ ಬಂದರು. ಮುಳಬಾಗಿಲು ವಿಜಯನಗರದ ಮೂಡಲು ಬಾಗಿಲೆನಿಸಿತ್ತು. ಅಲ್ಲಿ ಶ್ರೀಮಧ್ವಾಚಾರ್ಯರೊಡನೆ ಬಂದಿದ್ದಾಗ ಅಕ್ಷೋಭ್ಯತೀರ್ಥರು ಒಂದು ಬಂಡೆಗಲ್ಲಿನಮೇಲೆ ಅಂಗಾರದಿಂದ ರೇಖೆಗಳನ್ನು ಬರೆದು ಹೋಗಿದ್ದರು. ಅದರಲ್ಲಿ ಯೋಗಾನರಸಿಂಹಸ್ವಾಮಿ ಮೂಡಿ ಬಂದಿದ್ದನು. ಅಕ್ಷೋಭ್ಯತೀರ್ಥರ ಪ್ರಾರ್ಥನೆಯಂತೆ ಗಂಗಾಮಾತೆ ಅಲ್ಲಿನ ನರಸಿಂಹತೀರ್ಥದಲ್ಲಿ ಬಂದು ನೆಲೆಸಿದ್ದಳು. ಪಾಂಡವರ ಅರ್ಜುನನು ಅಲ್ಲಿನ ಪ್ರಾಣದೇವರನ್ನು ಪ್ರತಿಷ್ಠಿಸಿ ಪೂಜಿಸಿದ್ದನು. ಅಲ್ಲಿ ಸೋಮೇಶ್ವರ ದೇವಸ್ಥಾನವೂ ಅಷ್ಟೇ ಪ್ರಾಚೀನವಾಗಿತ್ತು. ಇಂಥ ಧಾರ್ಮಿಕ ರಾಜಕೀಯ, ಸಾಂಸ್ಕೃತಿಕ ಕ್ಷೇತ್ರವಾಗಿದ್ದ ಮುಳಬಾಗಿಲ ಬಳಿಯ ಹಂಚಿಕಲ್ಲು ಬೆಟ್ಟದ ಬಳಿ ವಿದ್ಯಾರಣ್ಯರಿಗೂ ಅಕ್ಷೋಭ್ಯತೀರ್ಥರಿಗೂ ತತ್ತ್ವಮಸಿಶ್ರುತಿಯ ಬಗ್ಗೆ ವಾಕ್ಯಾರ್ಥ ನಡೆಯಿತು. ಇದರಲ್ಲಿ ತೀರ್ಪುಗಾರರಾಗಿ ಶ್ರೀವೈಷ್ಣವ ಮತದ ಆಚಾರ್ಯ ಪುರುಷರಾಗಿದ್ದ ವೇದಾಂತ ದೇಶಿಕಾಚಾರ್ಯರು ಇದ್ದರು.

ಈ ಶ್ರುತಿ ವಾಕ್ಯಕ್ಕೆ ಸಮಸ್ತತಾರ್ಕಿಕ ವಿದ್ವಚ್ಚಕ್ರವರ್ತಿ ರಾಜೇಂದ್ರತೀರ್ಥರ

ಶಿಷ್ಯರಾದ ಷಡ್ದರ್ಶನೀವಲ್ಲಭ ವಿಷ್ಣುದಾಸಾಚಾರ್ಯರು, ಭೇದಪರವಾಗಿ ಇಪ್ಪತ್ತು ಅರ್ಥಗಳನ್ನು ಹೇಳಿದ್ದಾರೆ.1

ಈ ವಾಕ್ಯಾರ್ಥದಲ್ಲಿ ವಿದ್ಯಾರಣ್ಯರು ಪರಾಭವಗೊಂಡರು. ಈ ಸಂದರ್ಭದಲ್ಲಿ ಗೆದ್ದ ಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು ಗೌರವದಿಂದ ನೋಡಿ ಸನ್ಮಾನಿಸಿದರು. ಈ ಘಟನೆಯ ಸ್ಮರಣಾರ್ಥ ಅಲ್ಲಿ ಒಂದು ಕಲ್ಲಿನ ವಿಜಯಸ್ತಂಭವನ್ನು ನಿಲ್ಲಿಸಿದರು 2 ಅವರು ಕೆಲಕಾಲ ತುಂಗಭದ್ರಾ ಸಂಗಮ ಕ್ಷೇತ್ರವಾದ ಚಿಂತಾಮಣಿ ನರಸಿಂಹ ಕ್ಷೇತ್ರದಲ್ಲಿ ಕಳೆದರು. ಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು ಪರಾಭವಗೊಳಿಸುವ ಆಸೆಯಿಂದ ಶ್ರೀನರಸಿಂಹಸ್ವಾಮಿಯನ್ನು ಕುರಿತು ತಪಸ್ಸು ಮಾಡಿ ಎರಡು ನೇರಳೆ ಹಣ್ಣುಗಳನ್ನು ಪ್ರಸಾದ ರೂಪವಾಗಿ ಪಡೆದಿದ್ದರಂತೆ.

ಅಕ್ಷೋಭ್ಯತೀರ್ಥರು ತಮ್ಮ ಜೀವಿತದ ಮಹತ್ಕಾರ್ಯ ಈಡೇರಿದಮೇಲೆ ಸರ್ವಜ್ಞಸಿಂಹಾಸನಕ್ಕೆ ಯೋಗ್ಯನಾದ ಉತ್ತರಾಧಿಕಾರಿಯನ್ನು ಹುಡುಕುತ್ತಿರುವಾಗ ಭೀಮಾತೀರದ ಸಂಧ್ಯಾವಳಿಯಲ್ಲಿ ಪೂರ್ವಾಶ್ರಮದ ಧೋಂಡೋರಾಯನನ್ನು ನೋಡಿದರು. ಆ ಸಮಯದಲ್ಲಿ ಅವನು ಬೇಟೆಯಿಂದ ಹಿಂದಿರುಗುತ್ತಿದ್ದ. ಬಾಯಾರಿಕೆಯಾಗಿತ್ತು. ರಘುನಾಥ ಕುದುರೆಯ ಮೇಲೆ ಕುಳಿತೇ ನೀರಿಗೆ ಬಾಯಿ ಹಚ್ಚಿ ನೀರು ಕುಡಿದನು. ಇದನ್ನು ನೋಡಿ ಕುದುರೆಯ ಮೇಲೆ

---

1) ಕಥ್ಯಂತೇ ದ್ವಿಪಶಾ ಹ್ಯರ್ಥಾಶ್ಛಂದೋಗಾನಾಂ ಶ್ರುತೇಸ್ತಂ ।
ವಿದಾಂಕುರ್ವಂತು ವಿದ್ವಾಂಸಃ ಸತ್ಯಾಂ ಜೀವೇಶಯೋರ್ಭಿದಾಮ್ ॥
ಉಡುಪಿ ಮುದ್ರಣ-ಪಾದರತ್ನಾವಲಿ-ಪುಟ-59 ದ್ವಿತೀಯ ಸರದಲ್ಲಿ.

2) ಇಂದಿಗೂ ಈವಿಜಯ ಸ್ತಂಭವನ್ನು ಮುಳಬಾಗಲ ಸಮೀಪದ ಹುಂಚಿಕಲ್ಲು ಬೆಟ್ಟದ ಮೇಲೆ ನೋಡಬಹುದು :—
ಈ ವಿಜಯಸ್ತಂಭದಲ್ಲಿ

ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಂ ಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥

ಎಂಬುದಾಗಿ ಬರೆಯಲಾಗಿದೆ.

ಕುಳಿತು ಪಶುವಿನಂತೆ ನೀರು ಕುಡಿಯುವವನು ಯಾರು? ಎಂದು ಕೇಳಿದರು.1 ಪಶು ಎಂಬ ಶಬ್ದ ಕಿವಿಗೆ ಬೀಳುತ್ತಲೇ ದೋಂಡೋ ರಘುನಾಥರಾಯನಿಗೆ ತಾನು ಶ್ರೀಮದಾಚಾರ್ಯರ ಒಳಿ ಎತ್ತಾಗಿದ್ದು ಸೇವೆ ಸಲ್ಲಿಸಿರುವುದಾಗಿಯೂ, ಇಂದ್ರಾಂಶವೆಂದೂ,ಒಂದು ಮಹತ್ಕಾರ್ಯ ಸಾಧನೆಗಾಗಿ ಹುಟ್ಟಿರುವುದಾಗಿಯೂ ಅವನ ಸ್ಮೃತಿ ಪಟಲದ ಮೇಲೆ ಮಿಂಚಿ ಹೋಯಿತು. ಈ ಪೂರ್ವ ಸ್ಮರಣೆಯಿಂದ ವಿರಕ್ತರಾಗಿ ಅವನು ಅಕ್ಷೋಭ್ಯತೀರ್ಥರಿಂದ ಸಂನ್ಯಾಸವನ್ನು ಸ್ವೀಕರಿಸಿ ಜಯ ತೀರ್ಥರೆಂಬ ಯತಿನಾಮವನ್ನೇ ಪಡೆದನು.

ಇವರು ಮುಂದೆ ಶ್ರೀಮದಾಚಾರ್ಯರ ಗ್ರಂಥಗಳಿಗೆ ಅಪೂರ್ವ ಟೀಕೆ ಗಳನ್ನು ರಚಿಸಿ ಟೀಕಾಕೃತ್ಪಾದರೆಂಬ ಗೌರವದ ಹೆಸರಿಗ ಪಾತ್ರರಾದರು.

ಜಯತೀರ್ಥರು (ಕ್ರಿ.ಶ. 1365-1388) ಶ್ರೀಮದಾಚಾರ್ಯರ ಆಶಯ ವನ್ನು ಪೂರೈಸಿ ದ್ವೈತ ಸಿದ್ಧಾಂತದ ನೆಲೆಗಟ್ಟಿನ ಮೇಲೆ ಸುಂದರವಾದ ವೇದಾಂತ ಸೌಧವನ್ನು ತಮ್ಮ ಕೃತಿ ರತ್ನಗಳಿಂದ ನಿರ್ಮಿಸಿದರು. ಇಂಥ ಶಿಷ್ಯರನ್ನು ಪಡೆದ ಅಕ್ಷೋಭ್ಯತೀರ್ಥರೇ ಧನ್ಯರು !

ಅಕ್ಷೋಭ್ಯತೀರ್ಥರು ಮಲಖೇಡದಲ್ಲಿ ತಾವು ಬೃಂದಾವನಸ್ಥರಾಗುವ ಮೊದಲು, ತಾವು ಪೂಜಿಸುತ್ತ ಬಂದಿದ್ದ ಶ್ರೀಮದಾಚಾರ್ಯರ ಕರಾರ್ಚಿತ ರಾಮ ಸೀತಾ ಲಕ್ಷ್ಮಣನರಸಿಂಹ ದೇವರ ಪ್ರತಿಮೆಗಳನ್ನು ತ್ರೈಲೋಕ್ಯ ಭೂಷಣತೀರ್ಥರೆಂಬುವರಿಗೆ ಇತ್ತು ಇಂದಿನ ಬಾಳಗಾರು ಆರ್ಯ ಅಕ್ಷೋಭ್ಯ ತೀರ್ಥ ಮಠಕ್ಕೆ ಮೂಲ ಪುರುಷರಾದರು. ಕೂಡ್ಲಿಯ ಆರ್ಯ ಅಕ್ಷೋಭ್ಯ ತೀರ್ಥರ ಮಠ ಇದರ ದ್ವಂದ್ವ ಮಠ, ಇವರು ಶಿವಮೊಗ್ಗ ಜಿಲ್ಲೆಯ ಖಿಳಂಗಿರಿ ಎಂಬ ಊರಿನಲ್ಲಿ ಒಂದು ಪ್ರಾಣದೇವರನ್ನು ಪ್ರತಿಷ್ಠಿಸಿದರು. ಇವರ ಪಾಂಡಿತ್ಯ ತಪಸ್ಸುಗಳನ್ನು ಜಯತೀರ್ಥರು ತಾವು ರಚಿಸಿದ ಶ್ರೀಮನ್ನ್ಯಾಯ ಸುಧಾ, ತತ್ತ್ವಪ್ರಕಾಶಿಕಾ, ಗೀತಾಭಾಷ್ಯಪ್ರಮೇಯದೀಪಿಕಾ ಮುಂತಾದ ಗ್ರಂಥಗಳಲ್ಲಿ ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

---

1) "ಕಿಂ ಪಶುಃಪೂರ್ವದೇಹೇ ?"

ಹೀಗೆ ಶ್ರೀಮದಾಚಾರ್ಯರ ನಾಲ್ವರೂ ಸಾಕ್ಷಾತ್ ಶಿಷ್ಯರು ಶ್ರೀಮಧ್ವಾಚಾರ್ಯರು ಆರಂಭಿಸಿದ ಭಗವತ್ಕಾರ್ಯದಲ್ಲಿ ಸಾಧಕರಾಗಿ ಸಕಲ ಮಾಧ್ವ ಸಮಾಜದ ಕೃತಜ್ಞತೆ ಗೌರವಗಳಿಗೆ ಪಾತ್ರರಾಗಿದ್ದಾರೆ.

ಶ್ರೀಅಕ್ಷೋಭ್ಯತೀರ್ಥರು ರಚಿಸಿರುವ ವೇದಸಾರ ಸ್ತೋತ್ರದಲ್ಲಿ ಶ್ರೀಮಧ್ವ ಮತದ ಮುಖ್ಯ ಪ್ರಮೇಯಗಳು ಸಂಗ್ರಹಿಸಲ್ಪಟ್ಟಿವೆ. ಈ ಸ್ತೋತ್ರವು ಹೀಗಿದೆ :—

ಸ್ಮರ ಕೃಷ್ಣಂ ಭಜ ಹರಿಂ ನಮ ವಿಷ್ಣುಂ ಶ್ರಯಾಚ್ಯುತಂ ।
ತ್ಯಜ ಕಾಮಂ ಜಹಿ ಕ್ರೋಧಂ ಜಹಿ ಮೋಹಂ ಭವಾಲಯಮ್ ॥೧॥

ಶ್ರೀಕೃಷ್ಣನನ್ನು ಸ್ಮರಿಸು, ಹರಿಯನ್ನು ಭಜಿಸು, ವಿಷ್ಣುವನ್ನು ನಮಸ್ಕರಿಸು ನಾಶರಹಿತನಾದ ಪರಮಾತ್ಮನನ್ನು ಆಶ್ರಯಿಸು. ಸಂಸ್ಕೃತಿಗೆ ಮೂಲವಾದ ಕಾಮಕ್ರೋಧಮೋಹಗಳನ್ನು ಬಿಡು.

ಶೃಣು ಶೌರಿಕಥಾಃ ಪುಣ್ಯಾಃ ಪಶ್ಯ ಶ್ರೀಪತಿವಿಗ್ರಹಮ್ ।
ಜಿಘ್ರ ಶ್ರೀಪಾದತುಲಸೀಃ ಸ್ಪೃಶ ವೈಕುಂಠವಲ್ಲಭಮ್ ॥೨॥

ಮಂಗಳಕರವಾದ ಶ್ರೀಕೃಷ್ಣನ ಚರಿತ್ರೆಯನ್ನು ಕೇಳು. ಶ್ರೀಯಃಪತಿಯ ವಿಗ್ರಹವನ್ನು ನೋಡು. ಪರಮಾತ್ಮನಿಗೆ ಅರ್ಪಿತವಾದ ತುಲಸಿಯನ್ನು ಆಘ್ರಾಣಿಸು. ವೈಕುಂಠಾಧಿಪತಿಯಾದ ವಿಷ್ಣುವನ್ನು ಸ್ಪರ್ಶ ಮಾಡು.

ಭುಂಕ್ಷ್ವ ಕೇಶವನೈವೇದ್ಯಂ ತಿಷ್ಠ ಮಾಧವಮಂದಿರೇ ।
ಜಪ ನಾರಾಯಣಮನು ಪಠ ತನ್ನಾಮ ಮಂಗಳಮ್ ॥೩॥

ಪರಮಾತ್ಮನಿಗೆ ಸಮರ್ಪಿತವಾದ ಅನ್ನವನ್ನು ಭುಜಿಸು. ಮಾಧವನ ಮಂದಿರದಲ್ಲಿ ವಾಸ ಮಾಡು. ಯಾವಾಗಲೂ ನಾರಾಯಣನನ್ನು ಜಪಿಸು. ಮಂಗಳಕರವಾದ ಪರಮಾತ್ಮನ ನಾಮಗಳನ್ನು ಉಚ್ಚರಿಸು.

ಪಾಹಿ ಪ್ರಪನ್ನಜನತಾಂ ಬ್ರೂಹಿ ತಥ್ಯಂ ಹಿತಂ ನೃಣಾಮ್ ।
ದೇಹಿ ಕಾಂಕ್ಷಿತಮರ್ಥಿಭ್ಯೋ ಯಾಹಿ ಸಜ್ಜನಸಂಗತಿಮ್ ॥೪॥

ಆಶ್ರಿತರನ್ನು ಕಾಪಾಡು. ಜನರಿಗೆ ಹಿತವೂ ಸತ್ಯವೂ ಆದದ್ದನ್ನೇ ಹೇಳು. ಸಜ್ಜನರ ಸಹವಾಸ ಹೊಂದು. ಯಾಚಕರಿಗೆ ಅಪೇಕ್ಷಿಸಿದ್ದನ್ನು ಕೊಡು. ಸಜ್ಜನ ಸಹವಾಸವನ್ನು ಹೊಂದು.

ಕುರು ಭೂತದಯಾ ನಿತ್ಯಂ ಚರ ಧರ್ಮಮಹರ್ನಿಶಮ್ ।
ಜಾನೀಹಿ ನಿತ್ಯಮಾತ್ಮಾನಂ ಅವೇಹ್ಯನ್ಯದ್ಧಿ ನಶ್ವರಮ್ ॥೫॥

ಸದಾ ಭೂತದಯಾಪರನಾಗಿರು. ಯಾವಾಗಲೂ ಧರ್ಮವನ್ನು ಮಾಡು. ಸದಾ ಪರಮಾತ್ಮನನ್ನು ಧ್ಯಾನಿಸು. ಅವನನ್ನು ಶಾಶ್ವತವೆಂದು ತಿಳಿ. ಅವನ ಹೊರತು ಎಲ್ಲವನ್ನೂ ನಶ್ವರವೆಂದು ತಿಳಿ.

ಪಂಚಶ್ಲೋಕೀಮಿಮಾಂ ಶಶ್ವತ್ ಪಠ ಧಾರಯ ಚಿಂತಯ ।
ಏತಾವಾನ್ ಸರ್ವವೇದಾರ್ಥಃ ಸಮಾಸೇನ ನಿರೂಪಿತಃ ॥೬॥

ಈ ಐದು ಶ್ಲೋಕಗಳನ್ನು ಯಾವಾಗಲೂ ಹೇಳುತ್ತಿರು, ಧ್ಯಾನಿಸುತ್ತಿರು, ಚಿಂತಿಸುತ್ತಿರು. ಇದೇ ಸಮಸ್ತ ವೇದದ ಅರ್ಥವು.

ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥೭॥

ಶ್ರೀಮನ್ನಾರಾಯಣನಿಗೆ ಸಮಾನವಾದ ವಸ್ತು ಹಿಂದೆ ಹುಟ್ಟಿಲ್ಲ. ಈಗ ಇಲ್ಲ. ಮುಂದೆಯೂ ಇರುವುದಿಲ್ಲ. ಅಂದರೆ ಪರಮಾತ್ಮನು ಮಾತ್ರವೇ ಸರ್ವೋತ್ತಮನೆಂದು ತಿಳಿ. ಈ ಸತ್ಯವಾಕ್ಯದಿಂದಲೇ ಲೋಕದಲ್ಲಿ ಸಮಸ್ತ ಅರ್ಥಗಳನ್ನೂ ಸಾಧಿಸುತ್ತೇನೆ. ಇವರನ್ನು ಹೀಗೆ ಸ್ಮರಿಸುತ್ತಾರೆ–

ಶ್ರೀಮದ್ರಮಾರಮಣ ಸದ್ಗುರುಪಾದ ಸಂಗೀ
ವ್ಯಾಖ್ಯಾನಿನಾದದಲಿತಾಖಿಲ ದುಷ್ಟ ದರ್ಪಮ್ ।
ದುರ್ವಾದಿವಾರಣ ವಿದಾರಣ ದಕ್ಷದೀಕ್ಷಾ–
ಮಕ್ಷೋಭ್ಯತೀರ್ಥ ಮೃಗರಾಜಮಹಂ ನಮಾಮಿ ॥

**ಇತರ ಗೃಹಸ್ಥ ಹಾಗೂ ಸಂನ್ಯಾಸಿ ಶಿಷ್ಯರು :**

ಶ್ರೀಮದಾಚಾರ್ಯರು ವೈಷ್ಣವ ಧರ್ಮದ ಕೇಂದ್ರಬಿಂದುಗಳಾಗಿ, ಶಿಲ್ಪ ಶಾಸ್ತ್ರದಂತೆ ಪಂಚಲೋಹದಿಂದ ಹದಿನೇಳು ಪ್ರತಿಮೆಗಳನ್ನು ಮಾಡಿಸಿ,

ಅವನ್ನು ಎಂಟು ಜನ ಗೃಹಸ್ಥಾಶ್ರಮಿಗಳಿಗೂ, ಎಂಟು ಯತಿಗಳಿಗೂ ಪೂಜಿಸಲು ಕೊಟ್ಟರು. ನರಹರಿತೀರ್ಥರು ಕಳಿಂಗ ರಾಜ್ಯದಿಂದ ತಂದೊಪ್ಪಿಸಿದ್ದ ಬ್ರಹ್ಮಕರಾರ್ಚಿತವಾದ ಶ್ರೀಮೂಲರಾಮ ಮತ್ತು ಸೀತಾದೇವಿಯುಕ್ತ ಪ್ರತಿಮೆಗಳನ್ನೂ, ಶ್ರೀದಿಗ್ವಿಜಯ ರಾಮಚಂದ್ರ ದೇವರನ್ನೂ ತಾವು ನಿತ್ಯಾರ್ಚನೆಗೆ ಇರಿಸಿಕೊಂಡರು.

ಈ ಪ್ರತಿಮೆಗಳು ತಾಮ್ರದ ಛಾಯೆ ಉಳ್ಳವು, ಶ್ರೀಸೀತಾ ಪ್ರತಿಮೆಗೆ ತುರುಬಿರುವುದು: ಶ್ರೀರಾಮಪ್ರತಿಮೆಯ ಒಂದೊಂದು ಕೈಯಲ್ಲಿ ಮೂರು ಮೂರು ಕಂಕಣ ಬಂಧಗಳಿವೆ. ಪಾದದ ತಳದಲ್ಲಿ ಕಮಲದ ಗದ್ದುಗೆಯಿದೆ. ಸೀತಾದೇವಿಯ ಪ್ರತಿಮೆಯು ಶ್ರೀರಾಮನ ಪ್ರತಿಮೆಗಿಂತ ಚಿಕ್ಕದು.

ಈ ಮೂರ್ತಿಗಳ ಲಕ್ಷಣಗಳನ್ನು ಮಾರ್ಕಂಡೇಯಪುರಾಣದಲ್ಲೂ, ಪುಷ್ಕರಪ್ರಭಾ, ವಾಶಿಷ್ಠ ರಾಮಾಯಣಗಳಲ್ಲೂ ವರ್ಣಿಸಲಾಗಿದೆ.

ಆಚಾರ್ಯರು ಶ್ರೀಲಕ್ಷ್ಮೀನಾರಾಯಣನನ್ನು ಪೂರ್ವಾಲಯಮಠದ ಶ್ರೀನಿವಾಸ ಬಲ್ಲಾಳರಿಗೂ, ಶ್ರೀ ವರಾಹದೇವರನ್ನು ಪಶ್ಚಿಮಾಲಯಮಠದ ವ್ಯಾಸರಾಯಬಲ್ಲಾಳರಿಗೂ, ನಾರಾಯಣ ಪ್ರತಿಮೆಯನ್ನು ಪಂಡಿತರೆಂಬುವರಿಗೂ, ಕೇಶವ ದೇವರ ಪ್ರತಿಮೆಯನ್ನು ರಂಕಿಯ ಮಠದ ವೆಂಕಟರಮಣ ಉಪಾಧ್ಯಾಯರಿಗೂ, ಶ್ರೀಹಸ್ತಗತ ಲಕ್ಷ್ಮೀನೃಸಿಂಹ ದೇವರ ಪ್ರತಿಮೆಯನ್ನು ಕರ್ಣವ ಮಠದ ತ್ರಿವಿಕ್ರಮ ಪಂಡಿತಾಚಾರ್ಯರಿಗೂ, ಶ್ರೀವಿಠಲಮೂರ್ತಿಯನ್ನು ಕುಂಜರಾಜ ಮಠದ ವೆಂಕಟರಮಣಪಂಡಿತರಿಗೂ; ಶ್ರೀಗೋಪಾಲಕೃಷ್ಣ ವಿಗ್ರಹವನ್ನು ಮಂಜನಾತಿ ಮಠದ ಹರಿಪಂಡಿತರಿಗೂ, ಶ್ರೀಅನಂತಪದ್ಮನಾಭೇಶ್ವರ ಸ್ವಾಮಿಯ ವಿಗ್ರಹವನ್ನು ಹೂವಿನಕೆರೆ ಮಠದ ಅಧ್ಯಾಪಕರಿಗೂ ಕೊಟ್ಟರು.

ಇದೇ ಪ್ರಕಾರವಾಗಿ ೧) ಫಲಿಮಾರು ಮಠದ ಶ್ರೀ ಹೃಷಿಕೇಶತೀರ್ಥರಿಗೆ ಶ್ರೀರಾಮ ದೇವರನ್ನೂ, ೨) ಅದಮಾರು ಮಠದ ಶ್ರೀನರಸಿಂಹತೀರ್ಥರಿಗೆ ಶ್ರೀಕಾಲೀಯಮರ್ದನಚತುರ್ಭುಜಕೃಷ್ಣನನ್ನೂ, ೩) ಕೃಷ್ಣಾಪುರದ ಶ್ರೀಜನಾರ್ಧನತೀರ್ಥರಿಗೆ ಶ್ರೀಕಾಲೀಯಮರ್ದನ ದ್ವಿಭುಜ ಕೃಷ್ಣನನ್ನೂ,

೪) ಪುತ್ತಿಗೆ ಮಠದ ಶ್ರೀಉಪೇಂದ್ರತೀರ್ಥರಿಗೆ ಶ್ರೀವಿಠಲದೇವರನ್ನೂ, ೫) ಶಿರೂರು ಮಠದ ಶ್ರೀವಾಮನತೀರ್ಥರಿಗೆ ಶ್ರೀಯೋಗಧಾರಕ ವಿಠಲ ದೇವರನ್ನೂ, ೬) ಸೋದೆಯ ಮಠದ ಶ್ರೀವಿಷ್ಣುತೀರ್ಥರಿಗೆ ಶ್ರೀಭೂವರಾಹ ದೇವರನ್ನೂ, ೭) ಕಾಣೂರು ಮಠದ ಶ್ರೀರಾಮತೀರ್ಥರಿಗೆ ಶ್ರೀನರಸಿಂಹ ದೇವರನ್ನೂ, ೮) ಪೇಜಾವರಮಠದ ಶ್ರೀ ಅಧೋಕ್ಷಜತೀರ್ಥರಿಗೆ ಶ್ರೀ ವಿಜಯವಿಠಲ ದೇವರನ್ನೂ ಅನುಗ್ರಹಿಸಿದರು.

ಈ ಅಷ್ಟಮಠದ ಯತಿಗಳಲ್ಲಿ ಶ್ರೀವಿಷ್ಣುತೀರ್ಥರು ಶ್ರೀಮದಾಚಾರ್ಯರ ಪೂರ್ವಾಶ್ರಮದ ಸೋದರರು. ಇವರಿಗೆ ತಂದೆ ತಾಯಿ ತೀರಿಕೊಂಡ ಮೇಲೆ, ಬಾಲ್ಯದಿಂದಲೂ ವೈರಾಗ್ಯ ಹೊಂದಿದ್ದ ಇವರು ಶ್ರೀಮಧ್ವಾಚಾರ್ಯರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರು. ವಿಷ್ಣುತೀರ್ಥರು ಮೊದಲು ಹರಿಶ್ಚಂದ್ರ ಬೆಟ್ಟದಲ್ಲೂ, ಅನಂತರ ಕುಮಾರಾದ್ರಿಯಲ್ಲೂ ಸಾಧನೆಗೆ ಕುಳಿತು ತಪಸ್ಸನ್ನು ಮಾಡಿದರು. ಉತ್ತಮ ಚೇತನರಾಗಿದ್ದ ಇವರಿಗೆ ಶೀಘ್ರವಾಗಿ ಅಪರೋಕ್ಷಜ್ಞಾನವುಂಟಾಯಿತು. ಅವರು ಗುರುಗಳ ಅನುಗ್ರಹದಿಂದ ಬೇಗನೆ ಭಗವಂತನ ಸಾಕ್ಷಾತ್ಕಾರ ಪಡೆದರು. ಇವರು ಮುಂದೆ ಕಲಿಯುಗ ದಲ್ಲಿ ಧರ್ಮವು ಖಿಲವಾಗಿ ತತ್ತ್ವವಾದವು ಕಣ್ಮರೆಯಾದಾಗ ಮತ್ತೆ ತಮ್ಮ ತಪಸ್ಸಿನಿಂದ ಎಚ್ಚೆತ್ತು, ಲೋಕದಲ್ಲಿ ಪ್ರಕಟರಾಗಿ ಶ್ರೀಮಧ್ವಾಚಾರ್ಯರ ಸರ್ವಮೂಲಗ್ರಂಥಗಳನ್ನು ಪ್ರಚಾರಕ್ಕೆ ತರುವರೆಂದೂ ಪ್ರತೀತಿ ಇದೆ. ಇವರೇ ಇಂದಿನ ಶ್ರೀವಾದಿರಾಜಮಠವೆಂದು ಪ್ರಖ್ಯಾತವಾದ ಸೋದೆ ಪೀಠಕ್ಕೆ ಮೂಲ ಪುರುಷರಾದರು.

ಆಚಾರ್ಯರು ಮಧ್ಯಗೇಹಭಟ್ಟರು ಪೂಜಿಸುತ್ತಿದ್ದ ಶ್ರೀನೃಸಿಂಹದೇವರ ವಿಗ್ರಹವನ್ನು ನರಸಿಂಹತೀರ್ಥರಿಗೆ ಕೊಟ್ಟರು. ತಮ್ಮ ಗುರುಗಳು ಪೂಜಿಸು ತ್ತಿದ್ದ ಶ್ರೀರಾಮದೇವರ ಪ್ರತಿಮೆಯನ್ನು ಭೀಮನಕಟ್ಟೆ ಮಠದ ಸತ್ಯತೀರ್ಥ ರಿಗೆ ಅನುಗ್ರಹಿಸಿದ್ದರು.

—ಹೀಗೆ ಶ್ರೀಮಧ್ವಾಚಾರ್ಯರು ದ್ವೈತಸಾಮ್ರಾಜ್ಯದ ಧರ್ಮಾಚರಣೆಗೆ ಬೇಕಾದ ತಳಗಟ್ಟನ್ನು ನಿರ್ಮಿಸಿ ಭಕ್ತಿಯ ಸ್ಫೂರ್ತಿಯು ಬತ್ತಿ ಹೋಗದ

ಚಿಲುಮೆಯನ್ನಾಗಿಸಿ, ಜ್ಞಾನಗಂಗೆಯನ್ನು ಸರ್ವತ್ರ ಹರಿಸಿದರು.1

ಇದು ಶ್ರೀಮಧ್ವಾಚಾರ್ಯರು ಲೋಕಕ್ಕೆ ಮಾಡಿದ ಮಹದುಪಕಾರ.

## ವೃಷಭೇಂದ್ರ ಉವಾಚ

ಶ್ರೀಮದಾಚಾರ್ಯರು ಲೋಕೋಪಕಾರಾರ್ಥವಾಗಿ ಅನುಗ್ರಹಿಸಿರುವ ಸಚ್ಛಾಸ್ತ್ರವೆನಿಸಿದ ಸರ್ವಮೂಲ ಗ್ರಂಥಗಳಿಗೆ ಅವರ ಕಾಲದಲ್ಲೇ ತ್ರಿವಿಕ್ರಮ ಪಂಡಿತಾಚಾರ್ಯರು, ಪದ್ಮನಾಭತೀರ್ಥರು · ನರಹರಿತೀರ್ಥರು ಮುಂತಾದ ಮಹನೀಯರು ವ್ಯಾಖ್ಯಾನಗಳನ್ನು ರಚಿಸಿ, ಆಚಾರ್ಯರ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ತಿಳಿಯಲು ಸಹಾಯ ಮಾಡಿದ್ದಾರೆ. ಮುಂದೆ ಅವತರಿಸಿದ ಇಂದ್ರಾಂಶ ಸಂಭೂತರಾದ ಟೀಕಾಚಾರ್ಯರೆಂದೇ ಪ್ರಸಿದ್ಧರಾಗಿರುವ ಶ್ರೀಜಯತೀರ್ಥರೂ, ಶ್ರೀಪಾದರಾಜರೂ, ಶ್ರೀವ್ಯಾಸರಾಜರೂ, ಶ್ರೀವಾದಿರಾಜರೂ ಅವರ ನಂತರ ಬಂದ ಶ್ರೀರಾಘವೇಂದ್ರತೀರ್ಥರೂ ಶೇಷಚಂದ್ರಿಕಾಚಾರ್ಯರೂ, ಭಾಷ್ಯ ದೀಪಿಕಾಚಾರ್ಯರೂ, ಅಮೋಘವಾದ ಟೀಕೆ ಟಿಪ್ಪಣಿಗಳನ್ನು ರಚಿಸಿ ಆಚಾರ್ಯರ ತತ್ತ್ವಸುಧೆಯನ್ನು ಪಂಡಿತ ಯೋಗ್ಯರಾದ ಪಾಮರರಿಗೆಲ್ಲಾ ದೊರಕುವಂತೆ ಮಾಡಿದ್ದಾರೆ.

---

1) ಸಪ್ತತ್ರಿಂಶನ್ಮಿತೈರ್ಗ್ರಂಥೈಃ ಖ್ಯಾಪಯನ್ ಸ್ವಕೃತೈರ್ಮತಮ್ ।
ದದೌ ತುರ್ಯಾಶ್ರಮಂ ತುಷ್ಟಃ ಚತುರ್ಭ್ಯಃ ಸಂಸ್ಕೃತಿವಿದೇ ॥
ತತ್ರಾದ್ಯೋ ಪದ್ಮನಾಭಾಖ್ಯಃ ದ್ವಿತೀಯೋ ನೃಹರಿಃ ಸ್ಮೃತಃ ।
ತೃತೀಯೋ ಮಾಧವಶ್ಚೈವಾಕ್ಷೋಭ್ಯತೀರ್ಥಶ್ಚತುರ್ಥಕಃ ॥
ಚತ್ವಾರೋ ವೇದಶಾಸ್ತ್ರೇಷು ಸಮರ್ಥಾಃ ಶಾಸ್ತ್ರಿಣಃ ಪುರಾ ।
ಸುಯೋಗ್ಯಾಪ್ಯಯೋಗ್ಯಾನಾಂ ಸಂಘಾದ್ದುಃ ಶಾಸ್ತ್ರಿಣೋsಭವನ್ ॥

ಗುರುಕಥಾ ಕಲ್ಪತರು—ಸರ್ಗ-3 ಶ್ಲೋಕ 1-3

ಇವರಲ್ಲಿ ಶ್ರೀಜಯತೀರ್ಥರು ಮಾಡಿದ ಕಾರ್ಯವು ಅಮೋಘವಾದುದು. ಅವರು ಶ್ರೀಮದಾಚಾರ್ಯರ ಸದ್ಗ್ರಂಥಗಳೆಂಬ ಕೃತಿಗಳನ್ನು ತಮ್ಮ ವ್ಯಾಖ್ಯಾನ ರೂಪವಾದ ಟೀಕೆಗಳಿಂದ ಅಲಂಕರಿಸಿದ್ದಾರೆ.

ಶ್ರೀಜಯತೀರ್ಥರು ನೇರವಾಗಿ ಶ್ರೀಮಧ್ವಾಚಾರ್ಯರ ಶಿಷ್ಯಪರಂಪರೆಗೆ ಸೇರಿದವರು. ಅವರಿಂದ ಐದನೇಯವರು.

ಶ್ರೀಮದಾಚಾರ್ಯರು ತಮ್ಮ ದ್ವೈತವೇದಾಂತ ವಿದ್ಯಾ ಸಾಮ್ರಾಜ್ಯವನ್ನು ಆಳಲು ಶ್ರೀಪದ್ಮನಾಭತೀರ್ಥರು, ಶ್ರೀನರಹರಿತೀರ್ಥರು, ಶ್ರೀಮಾಧವ ತೀರ್ಥರು, ಶ್ರೀಅಕ್ಷೋಭ್ಯತೀರ್ಥರು ಇವರನ್ನು ಅನುಕ್ರಮವಾಗಿ ನಿಯಮಿಸಿದರು.

ಶ್ರೀಅಕ್ಷೋಭ್ಯತೀರ್ಥರ ಉತ್ತರಾಧಿಕಾರಿಗಳೇ ಜಯತೀರ್ಥರು. ಇವರು ತಮ್ಮ ಅಮೃತಸದೃಶ ಟೀಕೆಗಳಿಂದ ಶ್ರೀಟೀಕಾಕೃತ್ಪಾದರೆಂಬ ಕೀರ್ತಿಗೆ ಪಾತ್ರರಾಗಿದ್ದಾರೆ.

ಇವರ ಪೂರ್ವಾಶ್ರಮದ ಹೆಸರು ಶ್ರೀಧೋಂಡೂರಘುನಾಥರಾಯರೆಂದು. ಇವರು ದೇಶಪಾಂಡೆ ಮನೆತನಕ್ಕೆ ಸೇರಿದ್ದರು. ಒಳ್ಳೆ ವಿದ್ವಾಂಸರಾಗಿದ್ದರು. ಮಂಗಳವೇಡೇ ಪ್ರಾಂತ್ಯದಲ್ಲಿ ದೇಸಾಯಿಗಳಾಗಿದ್ದರು. ಇವರಿಗೆ ರಾಜ್ಯಾಡಳಿತ ತಿಳಿದಿದ್ದಂತೆ ಅಶ್ವಸವಾರಿ ಮುಂತಾದ ಯುದ್ಧಕಲೆಯೂ ತಿಳಿದಿತ್ತು.

ಒಂದು ದಿನ ದೇಶಪಾಂಡೆ ಧೋಂಡೂರಾಯರು ತಮ್ಮ ಕುದುರೆಯ ಮೇಲೆ ಸವಾರಿ ಹೊರಟಿದ್ದರು. ಅವರು ಪಂಡರಪುರದ ಸಮೀಪದ ಭೀಮರಥೀ ನದಿಯ ಬಳಿಗೆ ಬಂದಾಗ ಬಾಯಾರಿಕೆಯಾಯಿತು.

ಅವರಿಗೆ ಕುದುರೆಯಿಂದ ಇಳಿದು ನದಿಯ ನೀರನ್ನು ಕೈಗಳಿಂದ ಕುಡಿಯುವಷ್ಟು ವ್ಯವಧಾನವಿರಲಿಲ್ಲ. ಕುದುರೆಯನ್ನು ನೀರಿನಲ್ಲಿಯೇ ನಿಲ್ಲಿಸಿ, ಅದರ ಮೇಲೆ ಕುಳಿತುಕೊಂಡೇ ತಲೆಯನ್ನು ಬಾಗಿಸಿ, ನದಿಯ ನೀರನ್ನು ಬಾಯಿಯಿಂದಲೇ ಪಶುವಿನಂತೆ ಕುಡಿದರು.

ಎದುರು ದಡದಲ್ಲಿದ್ದುಕೊಂಡು ಇದನ್ನು ನೋಡುತ್ತಿದ್ದ ಶ್ರೀಅಕ್ಷೋಭ್ಯ ತೀರ್ಥರು ಆಶ್ಚರ್ಯದಿಂದ ತಮ್ಮ ಶಿಷ್ಯರಿಗೆ ಒಂದು ಶ್ಲೋಕವನ್ನು ಹೇಳಿದರು.

ಶ್ರಿತಪರಿಜನಯೂಥಃ ಶ್ರೀಮದಕ್ಷೋಭ್ಯತೀರ್ಥ
ಸ್ತುರಗಮಧಿವಸರಿಂತಂ ವಾರಿ ಗೋವತ್ಪಿಬಂತಂ ।
ನೃಪಸುತಮಭಿವೀಕ್ಷ್ಯ ಛಾತ್ರವರ್ಗಂ ತದೋಚೇ
ಯ ಇಹ ಪಿಬತಿ ಪಾಥಃ ಕಿಂ ಪಶುಃಪೂರ್ವ ದೇಹೇ ॥1

ಈ ಶ್ಲೋಕ ಧೋಂಡೂರಾಯರ ಕಿವಿಗೆ ಬಿದ್ದುದೇ ತಡ, ಅವರಿಗೆ ತಮ್ಮ ಪೂರ್ವಜನ್ಮದ ಸಮಸ್ತ ವಿವರಗಳೂ ನೆನಪಾದವು. ತಾವು ದ್ವಾಪರ ಯುಗದಲ್ಲಿ ಇಂದ್ರಾಂಶಸಂಭೂತರಾದ ಅರ್ಜುನರಾಗಿದ್ದುದು, ಅನಂತರ ಶಾಪದ ಫಲವಾಗಿ ಶ್ರೀಮದಾಚಾರ್ಯರ ಕಾಲದಲ್ಲಿ ಪಶುವಾಗಿ-ವೃಷಭವಾಗಿ-ಅವರ ಸರ್ವಮೂಲ ಗ್ರಂಥಗಳನ್ನು ಹೊತ್ತು ತಿರುಗಿದುದೂ, ಅವರ ವಿಶೇಷ ಅನುಗ್ರಹದ ಫಲವಾಗಿ ಈ ಜನ್ಮದಲ್ಲಿ ತಾವು ಶ್ರೇಷ್ಠವಾದ ವಿಪ್ರವಂಶದಲ್ಲಿ ಹುಟ್ಟಿ, ಸಕಲ ವಿದ್ಯಾ ಪಾರಂಗತರಾಗಿ ದೇಸಾಯಿಗಳಾಗಿರುವುದು— ಈ ಎಲ್ಲ ಸಂಗತಿಗಳೂ ಅವರೆದುರಿಗೆ ಮಿಂಚಿನಂತೆ ಸುಳಿದು ಹೋದವು.

ಧೋಂಡೂರಾಯರಿಗೆ ಅಕ್ಷೋಭ್ಯತೀರ್ಥರ ಒಂದೇ ಒಂದು ಶಬ್ದ –ಪಶು ಎಂಬ ಶಬ್ದ–ಅವರಿಗೆ ಹಿಂದಿನ ಜನ್ಮದ ವಿವರಗಳನ್ನು ನೆನಪಿಸಿ ಅವರ ಇಂದಿನ ಜೀವಿತ ಕಾರ್ಯವನ್ನು ಜ್ಞಾಪಿಸಿತು.

ಕೂಡಲೇ ಸ್ವಸ್ವರೂಪದ ಬಗೆಗೆ ತಿಳಿವಳಿಕೆಯನ್ನೂ, ಅಪರೋಕ್ಷ ಜ್ಞಾನ ವನ್ನೂ ಪಡೆದ ಅವರು ಗೃಹಸ್ಥಾಶ್ರಮವನ್ನು ತ್ಯಜಿಸಿ ಅಕ್ಷೋಭ್ಯತೀರ್ಥ ಗುರು ಗಳಿಂದ ಸಂನ್ಯಾಸ ದೀಕ್ಷೆ ಪಡೆದು ಜಯತೀರ್ಥ ಮುನಿಗಳಾದರು.

ಹೀಗೆ ವೃಷಭವೊಂದು ಮಹಾನುಭಾವರಾಗಿ ಪರಿವರ್ತಿತವಾದ ಕಥೆ ಒಂದು ಅದ್ಭುತ ರೋಮಾಂಚನಕಾರಕ ಕಥೆಯಾಗಿತ್ತು.

---

1) ಜ. ವಿ. ಸರ್ಗ–1 ಶ್ಲೋಕ–7

ಪರಂಪರೆಯಿಂದ ಬಂದ ಕಥೆಯಂತೆ ಜಯತೀರ್ಥರು ಇಂದ್ರಾಂಶ ಸಂಭೂತರಾದ ಅರ್ಜುನರಾಗಿ ಶ್ರೀಕೃಷ್ಣನನ್ನು ದ್ವಾಪರಯುಗದಲ್ಲಿ ಸೇವಿಸಿದ್ದರು.

ಪರಮಾತ್ಮನಾದ ಶ್ರೀಕೃಷ್ಣನು ಭಕ್ತಶ್ರೇಷ್ಠನಾದ ಅರ್ಜುನನಿಗೆ ಸಾರಥಿಯಾಗಿ ಕುರುಕ್ಷೇತ್ರ ಯುದ್ಧದಲ್ಲಿ ವೈರಿಮರ್ದನ ಮಾಡಿದನಷ್ಟೆ.

ಭಗವಂತನ ಈ ದುಷ್ಟಶಿಕ್ಷಣ, ಶಿಷ್ಟಪರಿಪಾಲನೆಯ ಕಾರ್ಯದಲ್ಲಿ ಅರ್ಜುನನು ಪ್ರಮುಖ ಪಾತ್ರ ವಹಿಸಿದ್ದನು. ಶ್ರೀಕೃಷ್ಣನು ಪಾಂಡವರನ್ನು 'ಮಮಪ್ರಾಣಾ ಹಿ ಪಾಂಡವಾಃ' ಎಂದು ತಿಳಿದು ಅವರ ಕಷ್ಟಗಳಲ್ಲಿ ನೆರವಾಗಿದ್ದನು.

ಕುರುಕ್ಷೇತ್ರಯುದ್ಧವೆಲ್ಲ ಮುಗಿದ ಮೇಲೆ ಜ್ಞಾನಿಯಾದ ಅರ್ಜುನನಿಗೆ ಒಮ್ಮೆ ಅಹಂಕಾರ ಬಂತಂತೆ. ದುರ್ಯೋಧನಾದಿಗಳನ್ನು ಗೆದ್ದು ಜಯ ಸಂಪಾದಿಸಿದವನು ತಾನೇ ಎಂಬ ಹೆಮ್ಮೆ ಉಂಟಾಯಿತಂತೆ. ತನ್ನ ಗಾಂಢೀವ ಧನುಸ್ಸಿನ ಬಗೆಗೆ ಅಭಿಮಾನ ತಳೆದನಂತೆ. ತನಗೆ ಈ ಜಯ ದೊರಕಿಸಿಕೊಳ್ಳಲು ಭೀಮ ಮತ್ತು ಶ್ರೀಕೃಷ್ಣರ ಸಹಾಯ ದೊರೆತುದುದನ್ನು ಮರೆತು ಬಿಟ್ಟನಂತೆ.

ಕಪಿಧ್ವಜನ ಗರ್ವ, ಅಹಂಕಾರ, ಅಟ್ಟಹಾಸಗಳನ್ನು ನೋಡಿ ರಥದ ಧ್ವಜದಲ್ಲಿದ್ದ ಶ್ರೀಮಾರುತಿಯು.

"ಹೇ ಪಶೋ ! ಎಂಥ ಅಜ್ಞಾನಿ ನೀನು ! ನಿನ್ನ ಜಯಕ್ಕೆ ಕಾರಣರಾದವರನ್ನು ಮರೆತು ಆತ್ಮಶ್ಲಾಘನೆ ಮಾಡಿಕೊಳ್ಳುತ್ತಿರುವ ನೀನು ಪಶು ಸಮಾನನಲ್ಲವೇ ?"—ಎಂದು ಮೂದಲಿಸಿದನು.

ಸರ್ವಜ್ಞನಾದ ಮಾರುತಿಯ ಬಾಯಲ್ಲಿ ಬಂದ ಪಶು ಎಂಬ ಶಬ್ದವನ್ನು ಕೇಳಿ ಅರ್ಜುನನ ಅಹಂಕಾರವು ರಂಧ್ರ ಬಿದ್ದ ಮಡಿಕೆಯ ನೀರಿನಂತೆ ತಕ್ಷಣವೇ ಸೋರಿಹೋಯಿತು. ಅವನು ಮಾರುತಿಯ ಕ್ಷಮೆ ಯಾಚಿಸಿದನು. ಎಷ್ಟೆಂದರೂ ಅವನು ಇಂದ್ರಾಂಶಸಂಭೂತನಲ್ಲವೆ ? ಶ್ರೀಕೃಷ್ಣಸ್ವಾಮಿಯ ಭಕ್ತಶ್ರೇಷ್ಠನಲ್ಲವೇ ? ನಾರಾಯಣನ ಸಖನಾದ ನರನಲ್ಲವೇ ?

"ಆಯ್ಯಾ, ಪಾರ್ಥ, ನಾನು ಆಡಿದ ಮಾತು ವ್ಯರ್ಥವಾಗುವುದಿಲ್ಲ. ನೀನು ಕಲಿಯುಗದಲ್ಲಿ ಭಗವತ್ಕಾರ್ಯಸಾಧಕನಾಗಿ ಶ್ರೀಮಧ್ವಾಚಾರ್ಯರ ಸಹಾಯಕ್ಕೆ ಒದಗಬೇಕೆಂಬುದು ಶ್ರೀಹರಿಯ ಸಂಕಲ್ಪ. ನೀನು ಆ ಜನ್ಮದಲ್ಲಿ ವೃಷಭನಾಗಿದ್ದುಕೊಂಡು ಸಚ್ಛಾಸ್ತ್ರಗಳನ್ನು ಕೇಳಿ ಕೃತಾರ್ಥನಾಗು. ಶ್ರೀಮಧ್ವಾಚಾರ್ಯರ ಗ್ರಂಥಗಳನ್ನು ಹೊರುತ್ತಾ ಅವರ ಸಖನಾಗಿ, ಒಡನಾಡಿಯಾಗಿ ಬಾಳುವೆ ಅದರ ಮುಂದಿನ ಜನ್ಮದಲ್ಲಿ 'ಪಶು' ಎಂಬ ಶಬ್ದದಿಂದ ನಿನ್ನ ಪೂರ್ವ ಜನ್ಮ ಸ್ಮರಣೆಯುಂಟಾಗಿ ಆಚಾರ್ಯರ ಸದ್ಗ್ರಂಥಗಳಿಗೆ ನೀನು ಟೀಕೆಗಳನ್ನು ರಚಿಸುವಿ" ಎಂದು ಮುಖ್ಯಪ್ರಾಣನು ಅಪ್ಪಣೆ ಕೊಡಿಸಿದನು.

ಅದರಂತೆ ಕಲಿಯುಗದಲ್ಲಿ ಶ್ರೀಮದಾಚಾರ್ಯರು ಜನ್ಮವೆತ್ತಿದಾಗ, ಅರ್ಜುನನು ಶಾಪಗ್ರಸ್ತನಾಗಿ ಪಶುರೂಪದಲ್ಲಿ ಹುಟ್ಟಿ ವೃಷಭನಾಗಿ ಶ್ರೀಮದಾಚಾರ್ಯರ ಗ್ರಂಥಗಳನ್ನು ಹೊತ್ತು ಅವರ ಸೇವೆ ಸಲ್ಲಿಸುತ್ತಿದ್ದನು.

ಈ ವೃಷಭ ಶ್ರೀಮದಾಚಾರ್ಯರಿಗೆ ದೊರೆತುದೇ ಒಂದು ಆಶ್ಚರ್ಯ ಕಥೆ.

ಆಚಾರ್ಯರು ಉತ್ತರಭಾರತದ ಕ್ಷೇತ್ರಯಾತ್ರೆಯನ್ನು ಕೈಗೊಂಡಿದ್ದರಷ್ಟೆ.

ಈ ಸಮಯದಲ್ಲಿ ತಮಗೆ ಬೇಕಾದ ಅಪೂರ್ವ ಗ್ರಂಥಗಳನ್ನು ಅಲ್ಲಲ್ಲಿ ಸಂಗ್ರಹಿಸುತ್ತಾ ನಡೆದಿದ್ದರು.

ಅವರು ಹೀಗೆ ತಮ್ಮ ಪ್ರಯಾಣ ಕಾಲದಲ್ಲಿ ನೂರಾರು ಶ್ರೇಷ್ಠ ಗ್ರಂಥಗಳನ್ನು ಅರಮನೆ, ಗುರುಪೀಠ, ಪಂಡಿತರು, ವಿದ್ವಾಂಸರಿಂದ ಪಡೆದುಕೊಂಡಿದ್ದರು. ಇವುಗಳನ್ನು ಉಡುಪಿಗೆ ಹೇಗೆ ತೆಗೆದುಕೊಂಡು ಹೋಗುವುದೆಂದು ಯೋಚಿಸುತ್ತಿರುವಾಗ ಗಂಗಾತೀರದಲ್ಲಿ ಗೂಳಿಯೊಂದು ಅವರ ಕಣ್ಣಿಗೆ ಬಿದ್ದಿತು.

ಶ್ರೀಮದಾಚಾರ್ಯರು ಆ ದಿನ ಗಂಗಾನದಿಯನ್ನು ದಾಟಬೇಕಾಗಿತ್ತು.

ಗಂಗಾನದಿಯನ್ನು ದಾಟಲು ದೋಣಿಗಳು ಇರಲಿಲ್ಲ. ಆಚಾರ್ಯರು ಈ ದಡದಿಂದ ಆ ದಡಕ್ಕೆ ಹೋಗಲೇಬೇಕಾಗಿತ್ತು.

ಶ್ರೀಮಧ್ವಾಚಾರ್ಯರು ತಮ್ಮ ಆರಾಧ್ಯದೈವನಾದ ಶ್ರೀಹರಿಯನ್ನು ಸ್ಮರಿಸಿ, ಜಲಸ್ತಂಭನ ವಿದ್ಯೆಯಿಂದ ನೀರಿನ ಮೇಲೆ ನಡೆದುಕೊಂಡೇ ಇನ್ನೊಂದು ದಡವನ್ನು ಸೇರಿದರು. ಅವರು ಹೀಗೆ ನೀರಿನ ಮೇಲೆ ನಡೆದರೂ ಅವರ ವಸ್ತ್ರಗಳು ಮಾತ್ರ ಒದ್ದೆಯಾಗಲೇ ಇಲ್ಲ.

ಈ ಪವಾಡ ನೋಡಿ ಶಿಷ್ಯರಿಗೆಲ್ಲ ಅತ್ಯಾಶ್ಚರ್ಯವಾಯಿತು.

ಆಚಾರ್ಯರು ಎದುರು ದಡಕ್ಕೆ ಬಂದಾಗ ಅಲ್ಲಿ ಒಂದು ಅಚಿಂತ್ಯಾದ್ಭುತ ಘಟನೆ ನಡೆಯಿತು.

ಅಲ್ಲಿ ಒಂದು ಕೊಬ್ಬಿದ ಗೂಳಿಯು ತನ್ನ ಪಾಡಿಗೆ ತಾನು ಹುಲ್ಲನ್ನು ಮೇಯುತ್ತಿತ್ತು. ಅದನ್ನು ಅಲ್ಲಿನ ಗ್ರಾಮಸ್ಥರು ದೇವರಿಗೆಂದು ಬಿಟ್ಟಿದ್ದರು. ಈ ಕೊಬ್ಬಿದ್ದ ಮೀಸಲು ಗೂಳಿಯನ್ನು ನೋಡಿ, ಕೆಲವು ಮುಸಲ್ಮಾನ ಸೈನಿಕರು ಅದನ್ನು ಸೆರೆ ಹಿಡಿದು ಅದರ ಕಥೆಯನ್ನು ಮುಗಿಸಿಬಿಡಲು ನಿಶ್ಚಯಿಸಿದ್ದರು.

ಅದು ಗಂಗಾತಟದಲ್ಲಿ ಮೇಯುತ್ತಿದ್ದಾಗ, ಯಾರೂ ಇಲ್ಲದ ಸಮಯವನ್ನು ಸಾಧಿಸಿ, ಅದರ ಮೇಲೆ ಅವರು ಎರಗಿ ಅದನ್ನು ಹಗ್ಗದಿಂದ ಕಟ್ಟಿ ಎಳೆದೊಯ್ಯುವ ಸಾಹಸದಲ್ಲಿದ್ದರು.

ಇದನ್ನು ದೂರದಿಂದಲೇ ನೋಡಿದ ಪರಮಕರುಣಾಳುಗಳಾದ ಶ್ರೀಮದಾಚಾರ್ಯರು ಗಂಗಾನದಿಯನ್ನು ದಾಟಿ ಆ ತುರುಷ್ಕ ಸೈನಿಕರೊಡನೆ ಸೆಣಸಾಡುತ್ತಿದ್ದ ಗೂಳಿಯನ್ನು ರಕ್ಷಿಸಲು ಸಂಕಲ್ಪಿಸಿದರು.

ಅವರು ಅಲ್ಲಿಗೆ ಬಂದವರೇ,

"ಅಯ್ಯಾ ಸೈನಿಕರೇ, ಈ ಸಾಧುವಾದ ದೇವರ ಗೂಳಿಯನ್ನು ಏಕೆ ವೃಥಾ ಹಿಂಸಿಸುತ್ತಿದ್ದೀರಿ? ಅದನ್ನು ಅದರ ಪಾಡಿಗೆ ಮೇಯಲು ಬಿಟ್ಟು ಬಿಡಿ" —ಎಂದರು.

"ಸ್ವಾಮಿ, ನಿಮ್ಮ ಕೆಲಸ ನೀವು ನೋಡಿಕೊಳ್ಳಿ! ಈ ಗೂಳಿ ನಮ್ಮದು. ನಮಗೆ ಇದು ಆಹಾರವಾಗಿ ದೊರಕಿದೆ. ಇದನ್ನು ಎಳೆದೊಯ್ಯದೆ ಬಿಡೆವು" ಎಂದರು.

ಆ ಸೈನಿಕ ಮುಖಂಡನು ತನ್ನ ಕತ್ತಿಯನ್ನು ಝಳಪಿಸುತ್ತಾ ಗೂಳಿಯನ್ನು ನೋಡಿದನು.

ಆಚಾರ್ಯರು "ಹಾಗೋ" ಎಂದು ಹೇಳುತ್ತಾ ನೆಲದ ಮೇಲೆ ಬಿದ್ದಿದ್ದ ಹುಡಿ ಮಣ್ಣನ್ನು ತೆಗೆದುಕೊಂಡು ಅವರತ್ತ ತೂರಿದರು.

ಆ ದುಷ್ಟಸೈನಿಕರು ಸಮ್ಮೋಹಕ್ಕೆ ಒಳಗಾದವರಂತೆ ನೆಲದ ಮೇಲೆ ಪ್ರಜ್ಞಾಶೂನ್ಯರಾಗಿ ಬಿದ್ದರು.

ಶ್ರೀಮದಾಚಾರ್ಯರು ಬಂಧನದಲ್ಲಿದ್ದ ಗೂಳಿಯನ್ನು ಬಿಡಿಸಿದರು. ಅದು ಆಚಾರ್ಯರು ಮಾಡಿದ ಉಪಕಾರವನ್ನು ಸ್ಮರಿಸುವಂತೆ ಅವರ ಹಿಂದೆಯೇ ಅನುಸರಿಸಿ ಹೋಯಿತು.

ಹೀಗೆ ಆಚಾರ್ಯರು ತಮ್ಮನ್ನು ಹಿಂಬಾಲಿಸಿ ಬಂದ ಗೂಳಿಯನ್ನು— ವೃಷಭವನ್ನು—ಸಂಗಡಿಗನೆಂದು ತಿಳಿದು, ತಾವು ಸಂಗ್ರಹಿಸಿದ್ದ ಗ್ರಂಥಗಳನ್ನು ಅದರ ಬೆನ್ನಿನ ಮೇಲೆ ಹೇರಿ, ಅದರ ಪಶು ಜನ್ಮವನ್ನು ಸಾರ್ಥಕಗೊಳಿಸಿದರು.

ಇಂಥ ವೃಷಭವನ್ನು, ಶ್ರೀಮದಾಚಾರ್ಯರ ಕೆಲವು ಅಜ್ಞಾನಿ ಶಿಷ್ಯರು ದ್ವೇಷಿಸುವಂಥ ಒಂದು ಪ್ರಸಂಗ ನಡೆಯಿತು.

ಒಂದು ದಿನ ಅನಂತಾಸನಸ್ವಾಮಿಯ ದೇವಾಲಯದ ಅಂಗಳದಲ್ಲಿ ಶ್ರೀಮದಾಚಾರ್ಯರು ಎಂದಿನಂತೆ ತಮ್ಮ ಪ್ರವಚನವನ್ನು ನಡೆಸುತ್ತಿದ್ದರು. ವೃಷಭವು ಅಲ್ಲಿಯೇ ಮಲಗಿ ಗುಟರು ಹಾಕುತ್ತಾ ಆಚಾರ್ಯರ ವಾಣಿಯನ್ನೇ ಆಲೈಸುತ್ತಿತ್ತು.

ಆಚಾರ್ಯರು ಪ್ರವಚನ ಮುಗಿದ ಮೇಲೆ ಎಂದಿನಂತೆ ಶಿಷ್ಯರನ್ನು ಕುರಿತು "ನಿಮಗೆ ಸಂದೇಹಗಳೇನಾದರೂ ಇದ್ದರೆ ಪ್ರಶ್ನೆ ಕೇಳಬಹುದು"— ಎಂದು ಅಪ್ಪಣೆ ಕೊಡಿಸಿದರು.

ಆಗ ಅಲ್ಲಿದ್ದ ಒಬ್ಬ ಶಿಷ್ಯನು,

"ಗುರುದೇವಾ, ತಮ್ಮ ಈ ಸದ್ಗ್ರಂಥಗಳು, ಟೀಕೆ ಟಿಪ್ಪಣಿ ವ್ಯಾಖ್ಯಾನ ಗಳಿಲ್ಲದೆ ಪಾಮರರಿಗೆ ಅರ್ಥವಾಗುವುದು ಕಷ್ಟ. ಇವುಗಳಿಗೆ ವ್ಯಾಖ್ಯಾನಗಳನ್ನು

ತಮ್ಮ ಶಿಷ್ಯರಲ್ಲಿ ಯಾರಿಂದಲಾದರೂ ರಚಿಸಿದರೆ ನಮ್ಮಂತಹ ಪಾಮರ ಅಜ್ಞಾನಿಗಳಿಗೆ ಮಹದುಪಕಾರವಾಗುತ್ತದೆ"—ಎಂದನು.

ಆಚಾರ್ಯರು ಕ್ಷಣಕಾಲ ಯೋಚಿಸಿ,

"ನಮ್ಮ ಅವತಾರಕಾರ್ಯ ಮುಗಿದ ಮೇಲೆ, ನಾವು ನಮ್ಮ ಸ್ವಸ್ಥಳಕ್ಕೆ ಹಿಂದಿರುಗಿದ ಮೇಲೆ, ಈ ಸರ್ವಮೂಲ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ರಚಿಸುವ ಶಿಷ್ಯನೊಬ್ಬನು ಹುಟ್ಟುತ್ತಾನೆ. ಅವನಿಂದ ನೀವು ಅಪೇಕ್ಷಿಸಿದ ಕಾರ್ಯ ಸಾಧನೆಯಾಗುತ್ತದೆ"—ಎಂದು ಹೇಳಿದರು.1

"ಆ ಮಹಾನುಭಾವನು ಯಾರು? ಆವನು ಇಲ್ಲಿ ಇದ್ದಾನೆಯೇ?"

"ಇದ್ದಾನೆ ಮಾತ್ರವಲ್ಲ. ನೀವೆಲ್ಲ ಅವನನ್ನು ದಿನನಿತ್ಯವೂ ಕಾಣುತ್ತಿದ್ದೀರಿ; ಆದರೆ ಅವನಲ್ಲಿ ಇಷ್ಟು ಶಕ್ತಿ ಇದೆ ಎಂಬುದು ನಿಮಗೆ ಅಜ್ಞಾನದಿಂದ ತಿಳಿದಿಲ್ಲ ಅಷ್ಟೆ."

---

1) ಮಘವಾ ವೃಷಭಾಕೃತಿಂ ವಹನ್ನಶೃಣೋತ್ಪುಸ್ತಕಭಾರಮಾವಹನ್ ।
ಸುಖತೀರ್ಥಮುನೇಶ್ಚ್ಯುಕ್ತಾನ್ನಿಖಿಲಾರ್ಥಾನ್ ಶ್ರುತಿಭಾವಸಂಮತಾನ್ ॥

ಇತಿ ತತ್ರ ಬಿಡೌಜಸಿ ಸ್ವಕಾಂ ಪ್ರಕೃತಿಂ ಸಾಧು ನಿಗೂಹ್ಯ ತಸ್ಥುಷಿ ।
ಭುವಿ ಶಿಷ್ಯಗಣಸ್ಸ ಏಕದಾ ನಿಜಗಾದ ಸ್ವಗುರುಂ ವಚೋ ಮುದಾ ॥

ಚರಿತಂ ವಿವೃತಿಂ ಭವತ್ಕೃತೌ ಕಮನುಜ್ಞಾಪಯತೀಹ ಸಂಹತೌ ।
ಅಪಿ ಗೂಹಿತಭಾವಸಂತತೌ ತ್ರಿದಶಾಗಮ್ಯಸದರ್ಥವಿಸ್ತೃತೌ ॥

ಗದಿತಂ ನಿಶಮಯ್ಯ ತದ್ವಚಃ ಪ್ರಹಸನ್ಪ್ರಾಹ ಜಗದ್ಗುರುರ್ವಚಃ ।
ವೃಷಭಶ್ಚರಿಕರ್ತಿ ಮತ್ಕೃತೇರಿತಿ ಟೀಕಾಂ ಶ್ರುತಿಸೂತ್ರಸಂಗತೇಃ ॥

ಅಥ ಶಾಪಮಮೋಕ್ಷ್ಯ ಶಿಷ್ಯಕೈಃ ಘಣಿದಮ್ಯೋ ವಿನಿಯತಾವಿತಿ ಸ್ವಕೈಃ ।
ವೃಷಭಂ ಸ ವಿಮೋಚ್ಯ ಶಾಪತೋಽಭ್ಯುದಜೀಜೀವದನಾಕುಲಂ ತತಃ ॥

ಯತಿರಾಟ್ದ್ವ್ಯಧಿಕಾಂ ದಶಸ್ತುತಿಂ ಪುರತೋಽಂತೇವಸತಾಂ ಸ್ವಸತ್ಕೃತಿಂ ।
ವೃಷಭೇಣ ಸುಖಾದವಾಚಯದ್ಭುವಿ ಮೋದಂ ಸುಜನಾನನೀನಯತ್ ॥

(ಜಯತೀರ್ಥವಿಜಯ—ವ್ಯಾಸತೀರ್ಥರಚಿತ—ಸರ್ಗ 1—ಶ್ಲೋಕ 46–51)

"ಅವನು ಯಾರು ?" ಎಲ್ಲರೂ ಕೇಳಿದರು.

ತಾವೇ ಆ ವ್ಯಕ್ತಿಗಳಾಗಿರಬಹುದೆಂದು ನಿರೀಕ್ಷಿಸಿ ಶಿಷ್ಯರೆಲ್ಲರೂ ಒಂದೇ ಉಸಿರಿನಲ್ಲಿ ಕೇಳಿದರು. ಅವರ ಮುಖಗಳನ್ನೆಲ್ಲಾ ನೋಡುತ್ತಾ,

"ನೀವು ಯಾರೂ ಅಲ್ಲ. -ವ್ಯಾಖ್ಯಾಸ್ಯತ್ಯೇಷ ಗೋರಾಟ್". ಈ ಕಾರ್ಯವನ್ನು ಈ ವೃಷಭ ಮಾಡುತ್ತದೆ"-ಎಂದು ಹೇಳಿ ವೃಷಭವನ್ನು ಅನುಗ್ರಹಿಸುವಂತೆ ಆಚಾರ್ಯರು ಅದನ್ನು ನೋಡುತ್ತ ಕುಳಿತರು.

ಶಿಷ್ಯರಿಗೆಲ್ಲ ಅತೀವ ನಿರಾಶೆ ಅಸಮಾಧಾನಗಳಾದವು. ಅವರು ಇವನ್ನು ತೋರಿಸಿಕೊಳ್ಳದೆ ಅಲ್ಲಿಂದ ಎದ್ದು ಹೊರಟುಹೋದರು.

ಮಾರನೆಯ ದಿನ ಆಚಾರ್ಯರು ಪದ್ಧತಿಯಂತೆ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ವೃಷಭವನ್ನು ಕಾಣಲು ಕೊಟ್ಟಿಗೆಗೆ ಹೋಗಿ ನೋಡಿದಾಗ ಎಂದಿನಂತೆ ಆಚಾರ್ಯರನ್ನು ಕಾಣುತ್ತಲೇ ಎದ್ದು ನಿಲ್ಲುತ್ತಿದ್ದ ವೃಷಭವು ಎದ್ದು ನಿಲ್ಲಲಿಲ್ಲ.

ಅದು ಗೋಣನ್ನು ನೆಲಕ್ಕೆ ಚೆಲ್ಲಿ ನಿಶ್ಚೇಷ್ಟಿತವಾಗಿ ನೆಲದ ಮೇಲೆ ಕಾಲು ಚಾಚಿ ಮಲಗಿತ್ತು.

ವಿಷಪ್ರಾಶನವಾದಂತೆ ಅದರ ಮೈ ನೀಲಿ ಬಣ್ಣಕ್ಕೆ ತಿರುಗಿತ್ತು. ಬಾಯಿಂದ ನೊರೆ ಬರುತ್ತಿತ್ತು. ಯಾರೋ ಆ ವೃಷಭನಿಗೆ ಅಪಚಾರ ಬಗೆದಿದ್ದರು. ಅದಕ್ಕೆ ಮುಂದಿನ ಜನ್ಮದಲ್ಲಿ ಬರುವ ದಿವ್ಯ ಪಟ್ಟವನ್ನು ತಿಳಿದು ಸಹಿಸದೆ ಅದನ್ನು ಆ ರಾತ್ರಿ ಒಂದು ವಿಷಸರ್ಪದಿಂದ ಕಚ್ಚಿಸಿದ್ದರು. ಅದು ಮೃತವಾಗಿತ್ತು.

ಇದನ್ನು ನೋಡಿ ಶ್ರೀಮದಾಚಾರ್ಯರಿಗೆ ತುಂಬಾ ದುಃಖವಾದಂತೆ ಆಯಿತು.

ಶ್ರೀಮದಾಚಾರ್ಯರು ಕೂಡಲೆ ದ್ವಾದಶಸ್ತೋತ್ರವನ್ನು ಪಠಿಸಿದರು.

ಅದೇನು ಆಶ್ಚರ್ಯ ! ಶ್ರೀಮದಾಚಾರ್ಯರ ಧ್ವನಿಯನ್ನು ಕೇಳುತ್ತಲೇ ಆ ವೃಷಭವು ದೀರ್ಘನಿದ್ರೆಯಿಂದ ಎಚ್ಚರಗೊಂಡಂತೆ, ತನ್ನ ಕಾಲುಗಳನ್ನು

ಕೊಡವೃತ್ತಾ ಎದ್ದು ನಿಂತಿತು ; ಆಚಾರ್ಯರ ಪಾದಗಳನ್ನು ನಮಸ್ಕರಿಸುವಂತೆ ಆವನ್ನು ಪ್ರೀತಿಯಿಂದ ನೆಕ್ಕಿತು.

ಅಷ್ಟರಲ್ಲಿ ಈ ಸುದ್ದಿ ತಿಳಿದು, ಆಚಾರ್ಯ ಶಿಷ್ಯರೆಲ್ಲರೂ ಅಲ್ಲಿ ನೆರೆದರು. ಆಗ ಆಚಾರ್ಯರ ಶಿಷ್ಯರು ತಾವು ಮಾಡಿದ ಈ ಅಕೃತ್ಯಕ್ಕಾಗಿ ವಿಷಾದಿಸಿ ಕ್ಷಮೆ ಬೇಡಿದರು. ಆಚಾರ್ಯರು ಉದಾರ ಬುದ್ಧಿಯಿಂದ ಕ್ಷಮಿಸಿದರು.

ದ್ವಾಪರಯುಗದಲ್ಲಿ ನಾರದಮಹರ್ಷಿಗಳಿಂದ ಶ್ರೀಮನ್ನಾರಾಯಣನ ಮಹಿಮೆಗಳನ್ನು ಕೇಳಿದ್ದ, ಇಂದ್ರಾಂಶಸಂಭೂತಅರ್ಜುನನಾಗಿ ಹುಟ್ಟಿದ್ದ ಜೀವ, ಈ ಜನ್ಮದಲ್ಲಿ ಶ್ರೀಮದಾಚಾರ್ಯರ ದಿವ್ಯ ವಾಣಿಯನ್ನು ಪ್ರತಿನಿತ್ಯವೂ ಶ್ರವಣ ಮಾಡುತ್ತಾ ಮುಕ್ತಾತ್ಮವಾಗಿತ್ತು.

ವೃಷಭವನ್ನು ಅನುಗ್ರಹಿಸಿದ ಶ್ರೀಮದಾಚಾರ್ಯರ ಅಚಿಂತ್ಯಾದ್ಭುತ ಶಕ್ತಿಯನ್ನು ನೋಡಿ ಜನ ಆವಾಕ್ಕಾದರು. ಪವಾಡಸದೃಶ ಈ ಘಟನೆಯನ್ನು ನೋಡಿ ಅಲ್ಲಿದ್ದವರೆಲ್ಲರೂ ಮನಃಪೂರ್ವಕರಾಗಿ ಶ್ರೀಮದಾಚಾರ್ಯರನ್ನು ಕೊಂಡಾಡಿದರು.

## ಕರ್ಮನಿರ್ಣಯ ಗ್ರಂಥ ರಚನೆ

ಶ್ರೀಮಧ್ವಾಚಾರ್ಯರು ತಮ್ಮ ಪ್ರವಾಸ ಕಾಲದಲ್ಲಿ ಉಚ್ಚಭೂತಿ ಈಗಿನ ಧರ್ಮಸ್ಥಳದ ಸಮೀಪದ ಉಜ್ರೆ ಎಂಬ ಗ್ರಾಮಕ್ಕೆ ಬಂದಿದ್ದರು.[1]

---

1) ಸ ಗ್ರಾಮಂ ಪರಮಪಿ ಯಾತ ಉಚ್ಚಭೂತಿಂ
ವಿದ್ವಾಂಸಃ ಕ್ವಕುಹರಕೂಪದರ್ದುರಾಭಾಃ ।
ಇತ್ಯೂಚೇ ಮದಮಪಿಮಾನಿನೋऽಖಿಲಜ್ಞ
ಮ್ಮನ್ಯಸ್ಯ ಕ್ಷಪಯಿತುಮೇವ ತಜ್ಜನಸ್ಯ ॥
ಮ॥ ವಿ॥ ಸರ್ಗ-16 ಶ್ಲೋಕ-41

ಅಲ್ಲಿ ವೇದಪಾರಂಗತರಾದ ಅನೇಕ ಅದ್ವೈತಮತದ ಪಂಡಿತರು ಇದ್ದರು. ಆದರೆ ಅವರಿಗೆ ತಮ್ಮನ್ನು ಬಿಟ್ಟರೆ ವೇದಗಳ ಕರ್ಮಕಾಂಡಾರ್ಥಗಳನ್ನು ಹೇಳುವವರು ಬೇರೆ ಯಾರೂ ಇಲ್ಲವೇ ಇಲ್ಲವೆಂಬ ಅಹಂಕಾರದಿಂದ ಬಂದಿದ್ದರು. ಸಾಧ್ಯವಾದರೆ ಆಚಾರ್ಯರನ್ನು ವಾದದಲ್ಲಿ ಸೋಲಿಸಿ ಅಪಮಾನ ಮಾಡಿ ಕಳುಹಿಸಬೇಕೆಂದೂ ಕೂಪಮಂಡೂಕರಂತಿದ್ದ ಆ ವಿದ್ವಾಂಸರು ಆಲೋಚಿಸಿದರು.

ಅದರಂತೆ ಕೊಕ್ಕಡವೆಂಬ ಗ್ರಾಮಕ್ಕೆ ಬಂದಿದ್ದ ಶ್ರೀಮಧ್ವಾಚಾರ್ಯರಿಗೆ ತಮ್ಮ ಗ್ರಾಮವಾದ ಉಚ್ಚಭೂತಿಗೂ ಬರಲು ಅವರು ಆಹ್ವಾನಿಸಿದರು.

ಕೊಕ್ಕಡಲ್ಲಿ ಒಂದು ಧನ್ವಂತರಿ ದೇವಾಲಯವಿತ್ತು. ಅದನ್ನು ಇಡೆಪಡಿತ್ತಾಯ ಎಂಬ ಭಕ್ತನು ನೋಡಿಕೊಳ್ಳುತ್ತಿದ್ದನು. ಅವನು ಶ್ರೀಕೃಷ್ಣನ ಮಹಾಭಕ್ತ. ಅವನು ಬಾಲ್ಯದಲ್ಲಿಯೇ ಕಣ್ಣುಗಳ ಕಳೆದುಕೊಂಡು ಕುರುಡನಾಗಿದ್ದನು.

ಯಾರೋ ಅವನಿಗೆ ಧನ್ವಂತರಿಯ ದೇವಾಲಯವನ್ನು ಕಟ್ಟಿಸಲು ಹೇಳಿದ್ದರು. ಇದರಿಂದ ಕಣ್ಣು ಬರುವುದೆಂದೂ ತಿಳಿಸಿದ್ದರು. ಅವರ ಮಾತನ್ನು ನಂಬಿ ಶ್ರದ್ಧೆ ಉಕ್ಕಿ, ಅವನು ಧನ್ವಂತರಿದೇವನಿಗೆ ಒಂದು ಮಂದಿರವನ್ನು ಕಟ್ಟಿಸಿ ಧನ್ವಂತರಿದೇವನ ವಿಗ್ರಹವನ್ನೂ ಪ್ರತಿಷ್ಠಿಸಿದ್ದನು.

ಅವನು ಕುರುಡನಾಗಿದ್ದರೂ ಹಸ್ತಗಳನ್ನು ಮುಟ್ಟಿದ ಕೂಡಲೇ, ಕೇವಲ ಸ್ಪರ್ಶಜ್ಞಾನದಿಂದಲೇ ಬಂದವರ ಭೂತಭವಿಷ್ಯವರ್ತಮಾನ ವಿಷಯಗಳನ್ನು ಹೇಳ ಬಲ್ಲವನಾಗಿದ್ದನು. ಹೀಗಾಗಿ ಅವನಿಂದ ತಮ್ಮ ಭವಿಷ್ಯವನ್ನು ತಿಳಿಯಲು ಬಹು ಜನ ಬರುತ್ತಿದ್ದರು. ಅವರು ಕೊಡುತ್ತಿದ್ದ ಕಿರುಕಾಣಿಕೆಗಳನ್ನು ಕೂಡಿಸಿ ಇಡೆಪಡಿತ್ತಾಯನು ಧನ್ವಂತರಿ ದೇವರ ಮಂದಿರವನ್ನು ನಿರ್ಮಿಸಿದ್ದನು.

ಅವನಿಗೆ ಈ ದೇವಾಲಯದಲ್ಲಿ ಬಾಲಗೋಪಾಲಕೃಷ್ಣನ ಮೂರ್ತಿಯನ್ನೂ ಸ್ಥಾಪಿಸಬೇಕೆಂಬ ಉತ್ಕಟವಾದ ಹಂಬಲವಿತ್ತು.

ಶ್ರೀಕೃಷ್ಣನು ದೇವಕೀ ನಂದನನಾದರೂ, ಯಶೋದೆಗೆ ಪುತ್ರಸುಖವನ್ನು ಕೊಟ್ಟಿದ್ದನು. ಅವನಿಗೆ ಹೆತ್ತತಾಯಿಗಿಂತ ಸಾಕುತಾಯಿಯೇ ಪ್ರಿಯಳಾಗಿದ್ದಳು.

ಆದರೆ ಶ್ರೀಕೃಷ್ಣನು ಬೆಳೆದು ದೊಡ್ಡವನಾದಮೇಲೆ ದೇವಕೀದೇವಿಯು ಶ್ರೀಕೃಷ್ಣನ ಬಾಲಲೀಲೆಗಳನ್ನು ನೋಡಬಯಸಿದಳು. ಸ್ವಾಮಿಯು ಅವಳ ಸಲುವಾಗಿ ಮತ್ತೊಮ್ಮೆ ತನ್ನ ಬಾಲಲೀಲೆಗಳನ್ನು ತೋರಿಸಿದನು. ಆಗಿನ ರೂಪವನ್ನು ಆ ತಾಯಿ ತನ್ನ ಮಾನಸ್ಸಿನಲ್ಲಿ ಅಚ್ಚೊತ್ತಿದಂತೆ ಮೂಡಿಸಿಕೊಂಡಿದ್ದಳು. ಕೃಷ್ಣನನ್ನು ಅದೇ ರೂಪದಲ್ಲಿ ಪೂಜಿಸಲು ದೇವಶಿಲ್ಪಿಯಾದ ವಿಶ್ವಕರ್ಮನಿಂದ ಒಂದು ಬಾಲಕೃಷ್ಣನ ಮೂರ್ತಿಯನ್ನು ಶಾಲಗ್ರಾಮಶಿಲೆಯಿಂದ ಮಾಡಿಸಿ ಪೂಜಿಸುತ್ತಿದ್ದಳು.

ಆ ಮೂರ್ತಿಯನ್ನು ಕಾಲಕರ್ಮ ಸಂಯೋಗದಿಂದ ಶ್ರೀಮಧ್ವಾಚಾರ್ಯರು ಉಡುಪಿಗೆ ತಂದು ಪ್ರತಿಷ್ಠಿಸಿದ್ದಾರೆಂಬ ವಾರ್ತೆಯನ್ನು ಕೇಳಿದ ದಿವದಿಂದಲೂ ಈ ಭಕ್ತನಿಗೆ ಆಚಾರ್ಯರನ್ನೂ, ಶ್ರೀಕೃಷ್ಣಮೂರ್ತಿಯನ್ನೂ, ತನ್ನ ಮನಸ್ಸಿನ ನೇತ್ರಗಳಿಂದಲೇ ಕಲ್ಪಿಸಿಕೊಂಡು ಭಕ್ತಿಯ ಆನಂದಭಾಷ್ಪವನ್ನು ಕೃತಜ್ಞತೆಯ ಕಾಣಿಕೆಯಾಗಿ ಅರ್ಪಿಸುತ್ತಿದ್ದನು.

ಇಂಥ ಅಂಧನಾದ ಈ ಭಕ್ತನ ಮೊರೆಯನ್ನು ಕೇಳಿ, ಅನುಗ್ರಹಿಸಲು ಬಂದಂತೆ ಶ್ರೀಮದಾಚಾರ್ಯರು ಕೊಕ್ಕಡಗ್ರಾಮಕ್ಕೆ ತಮ್ಮ ಶಿಷ್ಯಪರಿವಾರದೊಂದಿಗೆ ಬಂದಿದ್ದರು.

ಇಡೆಪಡಿತ್ತಾಯನು ಶ್ರೇಷ್ಠ ಭಕ್ತನಾಗಿದ್ದರೂ ಕಡು ಬಡವನಾಗಿದ್ದನು. ಶ್ರೀಮದಾಚಾರ್ಯರು ತನ್ನನ್ನು ನೋಡಲು ತಾನಿದ್ದೆಡೆಗೆ ಬಂದುದನ್ನು ಕೇಳಿ ಸಂತೋಷದಿಂದ ಕುಣಿದಾಡಿದನು. ಅವನು ಶ್ರೀಮದಾಚಾರ್ಯರ ದೇಹವನ್ನು ಮುಟ್ಟಿ ಅವರು ಸಾಕ್ಷಾತ್ ವಾಯುದೇವರೆಂದೇ ಭಾವಿಸಿ ಅವರನ್ನು ಕೊಂಡಾಡಿದನು.

ಅವನ ಜ್ಞಾನನೇತ್ರದ ಮುಂದೆ ಹನುಮಭೀಮಮಧ್ವರ ಮೂರು ರೂಪಗಳೂ ವರ್ತಿಸುತ್ತಿದ್ದವು. ಭಗವಂತನಾದ ಶ್ರೀಹರಿಗೇ ಸೇವೆ ಸಲ್ಲಿಸುತ್ತಿರುವಂತೆಯೂ ಗೋಚರವಾಯಿತು.

ಅವನ ಪಾಲಿಗೆ ಶ್ರೀಹರಿಯಾದರೂ ಶ್ರೀಕೃಷ್ಣನ ರೂಪದಲ್ಲಿಯೇ ಕಡಗೋಲು ನೇಣು ಹಿಡಿದ ಪುಟ್ಟ ಬಾಲಕನ ರೂಪದಲ್ಲಿ ಕಾಣಿಸಿದ್ದನು.

"ಅಯ್ಯಾ ಭಕ್ತಶ್ರೇಷ್ಠ, ನಿನಗೆ ನಾನು ಕಣ್ಣಿನ ದೃಷ್ಟಿ ಬರುವಂತೆ ಮಾಡುತ್ತೇನೆ. ನೀನು ಉಪಾಸಿಸುತ್ತಿರುವ ಉಡುಪಿ ಶ್ರೀಕೃಷ್ಣನನ್ನು ಕಣ್ಣಾರ ನೋಡಿ ಆನಂದಿಸು"

—ಎಂದು ಹೇಳಿ ಆಚಾರ್ಯರು ಅವನ ಕಣ್ಣುಗಳ ಮೇಲೆ ತಮ್ಮ ಕೈಯಾಡಿಸಿದರು.

ಶ್ರೀಮದಾಚಾರ್ಯರ ಕೈ ಇಡೆಪಡಿತ್ತಾಯನಿಗೆ, ತಗಲುತ್ತಲೇ ಅವನಿಗೆ ಹೋಗಿದ್ದ ದೃಷ್ಟಿ ಮರಳಿ ಬಂದಿತು.

ಅವನ ಕಣ್ಣಿಗೆ ಉಡುಪಿಯಲ್ಲಿ ಮಧ್ವಸರೋವರದ ಬಳಿ ವಿರಾಜಮಾನನಾಗಿದ್ದ ಮುದ್ದುಕೃಷ್ಣನು ಕಾಣಿಸಿಕೊಂಡನು. ಅಲ್ಲಿ ಸ್ವಾಮಿಗೆ ನಡೆಯುತ್ತಿದ್ದ ಪೂಜೆ ನೈವೇದ್ಯ ಮಂಗಳಾರತಿಗಳನ್ನೆಲ್ಲಾ ನೋಡಿದನು.

ಅಲ್ಲಿ ನೆರದಿದ್ದ ಭಕ್ತರ ಜೊತೆಯಲ್ಲಿ ತಾನೂ ಸೇರಿ ಸ್ವಾಮಿಯನ್ನು ಹಾಡಿ ಹೊಗಳಿ ನಲಿದನು. ಉಘೇ ಎಂದು ಜಯಘೋಷವನ್ನೂ ಮಾಡಿದನು.

ಅವನ ದೈವೀಸಂತೋಷವನ್ನು ನೋಡಿ ಶ್ರೀಮದಾಚಾರ್ಯರೂ ಸಹ ಸಂತೋಷಪಟ್ಟರು. ಅಷ್ಟರಲ್ಲಿ ಇಡೆಪಡಿತ್ತಾಯನು—

"ಸ್ವಾಮಿ, ತಮ್ಮ ದಯೆಯಿಂದ ನಾನು ಶ್ರೀಹರಿವಾಯುಸ್ವರೂಪರ ಮಂಗಳಮೂರ್ತಿಗಳನ್ನು ನೋಡಿದೆ. ಹೀಗೆ ನೋಡಿದ ಪವಿತ್ರವಾದ ಈ ಕಣ್ಣುಗಳನ್ನು ಲೋಕದ ಜೀವನವನ್ನು ನೋಡಿ ಅಪವಿತ್ರ ಮಾಡಿಕೊಳ್ಳಲು ನಾನು ಇಚ್ಛಿಸುವುದಿಲ್ಲ. ದಯವಿಟ್ಟು ನನ್ನನ್ನು ತಾವು ಮೊದಲಿನಂತೆ ಅಂಧನನ್ನಾಗಿಯೇ ಮಾಡಬೇಕೆಂದು ಪ್ರಾರ್ಥಿಸುತ್ತೇನೆ"

—ಎಂಬ ವಿಚಿತ್ರ ಬೇಡಿಕೆಯನ್ನು ವಿನಮ್ರವಾಗಿ ವಿಜ್ಞಾಪಿಸಿದನು.

ಶ್ರೀಮದಾಚಾರ್ಯರು ಅವನ ಶ್ರದ್ಧಾಭಕ್ತಿಯನ್ನು ನೋಡಿ ಮೂಕರಂತೆ ಆದರು. ಹಿಂದಣ ಜನ್ಮದಲ್ಲಿ ಜ್ಞಾನಿಯಾಗಿದ್ದು, ಯಾವುದೋ ಒಂದು ಅಲ್ಪ ಅಪಚಾರವೆಸಗಿ, ಈ ಜನ್ಮದಲ್ಲಿ ಕುರುಡನಾಗಿ ಹುಟ್ಟಿದ್ದ ಇಡೆಪಡಿತ್ತಾಯನನ್ನು ಅವರು ಅನುಗ್ರಹಿಸಿ, ಅವನಿಗೆ ಶಾಶ್ವತವಾದ ಮುಕ್ತಿಯನ್ನು ದೊರಕಿಸಿ ಕೊಡಲು ನಿಶ್ಚಯಿಸಿದರು.

ಅನಂತರ ಶ್ರೀಮದಾಚಾರ್ಯರು ಧನ್ವಂತರಿದೇವರಿಗೆ ತಾವೇ ಪೂಜೆ ಮಾಡಿ ನೈವೇದ್ಯವನ್ನೂ ಮಾಡಿ ಅದನ್ನು ಸ್ವೀಕರಿಸಿ ಸೇರಿದ್ದ ಭಕ್ತಕೋಟಿಗೂ ಭೋಜನ ಮಾಡಿಸಿ ಆಶೀರ್ವದಿಸಿ ಅನುಗ್ರಹಿಸಿದರು.

ಅಲ್ಲಿ ಮಾಡಿದ್ದ ಅಡಿಗೆಯು ಕೇವಲ ನಾಲ್ಕೈದು ಮಂದಿಗೆ ಮಾತ್ರವಿತ್ತು. ಅವರು ಅಡಿಗೆಯ ಮೇಲೆ ತುಳಸಿದಳ, ತೀರ್ಥಗಳನ್ನು ಹಾಕಿದ ಕೂಡಲೇ ಅದು ಅನಂತವಾಗಿ ಬೆಳೆದು, ಇಡೀ ಗ್ರಾಮದ ಸಹಸ್ರಾರು ಮಂದಿ ಊಟ ಮಾಡಿ ದಣಿದರೂ ಇನ್ನೂ ಪಾತ್ರೆಯಲ್ಲಿ ಅನ್ನವು ಮಿಕ್ಕಿತ್ತು. ಶ್ರೀಮದಾಚಾರ್ಯರು ಈ ಭಕ್ತನ ಸಲುವಾಗಿ ದ್ರೌಪದಿಯ ಅಕ್ಷಯ ಪಾತ್ರೆಯನ್ನು ತಂದಿದ್ದರೆಂದು ಭಕ್ತರು ಹೊಗಳಿದರು.1 ಹಾಗೆಯೇ ಶ್ರೀಮಂತರ ಮನೆಯಲ್ಲಿ ಮಾಡಿದ್ದ ನೂರಾರು ಜನಕ್ಕೆ ಸಾಕಾಗುವ ಅಡಿಗೆಯನ್ನು ತಾವು ಒಬ್ಬರೇ ಉಣ್ಣುತ್ತಿದ್ದರು.

ಶ್ರೀಮದಾಚಾರ್ಯರು ಅಲ್ಲಿ ಆ ಸಂಜೆ ಬೀಡುಬಿಟ್ಟು ಶ್ರೀಕೃಷ್ಣಭಕ್ತಿಯನ್ನು ಕುರಿತು ಪ್ರವಚನ ಮಾಡಿದರು.

ಮಾರನೆಯ ದಿನ ಅವರು ಉಚ್ಚಭೂತಿ(ಉಜ್ರೆ)ಗ್ರಾಮದ ಅದ್ವೈತಶಾಸ್ತ್ರ ಪಂಡಿತರಿಂದ ಬಂದಿದ್ದ ಆಹ್ವಾನವನ್ನು ಸ್ವೀಕರಿಸಿ ಅವರ ಊರಿಗೆ ಪ್ರಯಾಣ ಬೆಳೆಸಿದರು. ಅಲ್ಲಿನ ಆ ವಿದ್ವಾಂಸರು ಶ್ರೀಮದಾಚಾರ್ಯರನ್ನು ಹೇಗಾದರೂ ಮಾಡಿ ಗೆಲ್ಲಬೇಕೆಂದು ಸಂಕಲ್ಪಿಸಿದ್ದರು. ಆಚಾರ್ಯರಿಗೆ ವೇದಮಂತ್ರ ಮಾತ್ರ ತಿಳಿದಿದೆ. ಆದರೆ ಅವರು ಸನ್ಯಾಸಿಗಳು. ಅವರಿಗೆ ಯಜ್ಞ ಮಾಡುವ ಅಧಿಕಾರವಿಲ್ಲ, ಆದುದರಿಂದ ವೈದಿಕ ಯಜ್ಞ ಯಾಗಗಳ ವಾದದಲ್ಲಿ

---

1) ನಿಸ್ಸ್ವಾನಾಂ ಕತಿಪಯಭುಕ್ತಿಯುಕ್ತಭಕ್ತಂ
ಭಕ್ತಾನಾಂ ವ್ಯಥಿತ ಚತುರ್ಗುಣಂ ದಯಾಲುಃ ।
ಭುಂಕ್ತೇಸ್ಮ ತ್ರಿದಶನರೋಪಭೋಜ್ಯಮನ್ನಂ
ಸಂಪ್ರೀತ್ಯೈ ಸಧನವತಾಂ ಬೃಹತ್ಪ್ರಬೋಧಃ ॥

ಮ ॥ ವಿ ॥ ಸರ್ಗ-16 ಶ್ಲೋಕ-47

ಕಾರ್ಯದ ಬಗೆಗೆ ಅವರನ್ನು ಪ್ರಶ್ನಿಸಿದರೆ ಉತ್ತರ ಹೇಳಲಾಗದೆ ಸೋಲೊಪ್ಪುತ್ತಾರೆ. ಆಗ ಆಚಾರ್ಯರನ್ನು ಅವಮಾನಗೊಳಿಸಿ, ಜಯಪತ್ರ ಬರೆಸಿಕೊಳ್ಳಬಹುದು—ಎಂದೆಲ್ಲ ಅವರು ಮನಸ್ಸಿನಲ್ಲಿಯೇ ಮಂಡಿಗೆಯನ್ನು ತಿನ್ನುತ್ತಿದ್ದರು.

ಶ್ರೀಮದಾಚಾರ್ಯರು ಉಚ್ಚಭೂತಿ ಬಂದ ಕೂಡಲೇ ಕೊಕ್ಕಡಕ್ಕೂ, ಉಚ್ಚಭೂತಿಗೂ ಇದ್ದ ಶ್ರದ್ಧಾಭಕ್ತಿ ವ್ಯತ್ಯಾಸ ಕಣ್ಣಿಗೆ ಸ್ಪಷ್ಟವಾಗಿ ಗೋಚರಿಸಿತು. ಅವರು ಅಲ್ಲಿನ ದೇವಾಲಯದಲ್ಲಿ ಇಳಿದುಕೊಂಡು ತಮ್ಮ ಪೂಜಾದಿಗಳನ್ನು ಮುಗಿಸಿ ಶಾಸ್ತ್ರಪ್ರವಚನದಲ್ಲಿ ನಿರತರಾದರು.

ಸಂಜೆಯಾಗುತ್ತಿದ್ದಂತೆ ಊರಿನ ಸಜ್ಜನ ಹಿರಿಯರು ಬಂದು ಆಚಾರ್ಯರ ದರ್ಶನ ಮಾಡಿ ಹೋದರು. ಅವರು ಅಲ್ಲಿ ಆಚಾರ್ಯರಿಗೆ ಯಾವುದಕ್ಕೂ ಕೊರತೆಯಾಗದಂತೆ ವ್ಯವಸ್ಥೆ ಮಾಡಿಯೂ ಹೋದರು.

ಆದರೆ ಅಲ್ಲಿನ ಅದ್ವೈತಮತದ ವಿದ್ವಾಂಸರು ಬಂದು ಆಚಾರ್ಯರನ್ನು ಭೇಟಿ ಮಾಡಲಿಲ್ಲ. ಉದಾಸೀನರಾಗಿಯೇ ಇದ್ದರು.

ಆಚಾರ್ಯರು ಎಂದಿನಂತೆ ಆ ಊರಿನ ನಿವಾಸಿಗಳಿಗೆ ಪುರಾಣಪ್ರವಚನ ಮಾಡಲು ಕುಳಿತಾಗ, ಎಲ್ಲವೂ ಪೂರ್ವಯೋಜಿತ ಕಾರ್ಯಕ್ರಮದಂತೆ ಒಬ್ಬೊಬ್ಬರಾಗಿ ಆ ಗ್ರಾಮದ ಅದ್ವೈತ ಪಂಡಿತರು ಬಂದು ಸಭೆಯಲ್ಲಿ ಆಚಾರ್ಯರ ಮುಂದೆ ಕುಳಿತರು.

ಆ ಗೋಷ್ಠಿಯು ವಿಸರ್ಜನೆಯಾದರೂ ಈ ಅದ್ವೈತಶಾಸ್ತ್ರ ಪಂಡಿತ ಗೋಷ್ಠಿ ಮಾತ್ರ ಏಳಲೇ ಇಲ್ಲ.

ಅವರನ್ನು ನೋಡಿ ಆಚಾರ್ಯರು,

"ನೀವು ಏನೋ ಪ್ರಶ್ನೆ ಕೇಳಲು ಬಂದವರಂತೆ ತೋರುತ್ತಿದೆ. ನಿಮಗೆ ಏನಾದರೂ ಸಂಶಯಗಳಿದ್ದರೆ, ಸಂಕೋಚಪಡದೆ ಕೇಳಬಹುದು"—ಎಂದು ಅಪ್ಪಣೆ ಕೊಡಿಸಿದ್ದರು.

"ಸ್ವಾಮಿ, ತಾವು ಸರ್ವಜ್ಞಾಚಾರ್ಯರೆಂದು ಹೆಸರು ಗಳಿಸಿದ್ದೀರಿ. ಅಲ್ಲದೆ ತಮಗೆ ವೇದಾಗಮಗಳಲ್ಲಿ ತಿಳಿಯದೆ ಇರುವುದು ಯಾವುದೂ ಇಲ್ಲ. ದಯವಿಟ್ಟು ನಮ್ಮ ಸಂದೇಹಗಳನ್ನು ಪರಿಹರಿಸಿ, ಕೃಪೆ ಮಾಡಬೇಕು"— ಎಂದು ದುರ್ವಿನಯದಿಂದ ಪ್ರಾರ್ಥಿಸಿದರು. 1

"ಆಗಲಿ ನಮಗೆ ತಿಳಿದಂತೆ, ತಿಳಿದಷ್ಟು ನಿಮಗೆ ಹೇಳುತ್ತೇವೆ. ನಿಮ್ಮ ಪ್ರಶ್ನೆ ಯಾವುದು ಕೇಳಿ."

"ಸ್ವಾಮಿ, ನಾವು ಒಂದು ಯಜ್ಞವನ್ನು ಮಾಡಲು ಯೋಚಿಸಿದ್ದೇವೆ. ವೇದಗಳಲ್ಲಿ ಯಜ್ಞವನ್ನು ಕುರಿತು ಅನೇಕ ಸಂಗತಿಗಳು ಹೇಳಲ್ಪಟ್ಟಿವೆ. ಒಂದಕ್ಕೊಂದು ಆ ಪಾತತಃ ವಿರುದ್ಧವೆನಿಸುವ ಮಂತ್ರಗಳೂ ಇವೆ. ಹೀಗಾಗಿ ನಾವು ಗೊಂದಲದಲ್ಲಿ ಬಿದ್ದಿದ್ದೇವೆ. ವೇದಗಳಲ್ಲಿ ಬರುವ ಕರ್ಮಕಾಂಡದಲ್ಲಿ 'ಛಂದಸಾಂವೈ' ಎಂದು ಆರಂಭವಾಗುವ ಋಕ್ಕುಗಳಿಗೆ ಏನು ಅರ್ಥ ಹೇಳಿರಿ ?" ಎಂದು ವಿನಯ ನಟಿಸಿ ಪ್ರಾರ್ಥಿಸಿದರು.

ಶ್ರೀಮದಾಚಾರ್ಯರು ಈ ಋಕ್ಕುಗಳಿಗೆ ಸೂಕ್ತವಾದ ಅರ್ಥವನ್ನು ಹೇಳಿದರು. ಅಲ್ಲದೆ ಬ್ರಹ್ಮನು ಯಜ್ಞದ ಆರನೆಯ ದಿನ ವಿಧಿಸಿದ ವೇದದ ಮುಖ್ಯಾರ್ಥವನ್ನೂ "ನಾರಾಶಂಸೀ" ಇತ್ಯಾದಿ ಮಂತ್ರಗಳ ವಿವರಣೆಯನ್ನೂ ಹೇಳಿದರು.

---

1) ಸರ್ವಜ್ಞೋಽಪ್ಯಯಮಧಿಕಂ ನ ಯಜ್ಞಭಂಗೀ
ಸಂವಿತ್ತೇ ಯತಿರಿತಿ ಬದ್ಧನಿಶ್ಚಯೋಽಸೌ ।
ಆಭ್ರಾಂತಂ ಪರಿಷದಿ ಮತ್ಸರಾದಪೃಚ್ಛ-
ತ್ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಂ ॥
ಪಾಂಡಿತ್ಯಂ ಪರಮವೇಕ್ಷ್ಯ ತಸ್ಯ ತಾದೃಕ್
ಸಂಘರ್ಷಕ್ಷುಭಿತಮನಾ ವಿಸಕ್ಷಸಂಘಃ ।
ನಾರ್ಥಃ ಸ್ಯಾದಯಮಿತಿ ವರ್ಣಯನ್ನಥ ತ್ವಂ
ತಂ ಬ್ರೂಹೀತ್ಯುರುಮತಿನೇರಿತೋಽದ್ರವದ್ದ್ರಾಕ್ ॥
ಮ ॥ ವಿ ॥ ಸರ್ಗ–16 ಶ್ಲೋಕ 43–44

ಪ್ರತಿವಾದಿಗಳು ಆಚಾರ್ಯರ ಕರ್ಮಕಾಂಡದಲ್ಲಿನ ಅಪ್ರತಿಮ ಪಾಂಡಿತ್ಯವನ್ನೂ ನೋಡಿ ಬೆರಗಾದರು.

ಆದರೂ ಬೇಕೆಂದೇ ಅವರನ್ನು ವಿತಂಡಾವಾದಕ್ಕೆ ಎಳೆಯಲು "ಆಚಾರ್ಯರೇ, ನೀವು ಹೇಳಿದ ಅರ್ಥವು ಸರಿಯಲ್ಲ"—ಎಂದರು.

"ಹಾಗಿದ್ದರೆ, ಅದರ ಸರಿಯಾದ ಅರ್ಥವನ್ನು ನೀವೇ ಹೇಳಿ."

—ಎಂದು ಆಚಾರ್ಯರು ಹೇಳಿದಾಗ ಅವರು ನಿರುತ್ತರರಾದರು. ಮತ್ತೊಬ್ಬನು ವಿಷಯಾಂತರ ಪ್ರಸ್ತಾಪಿಸಿ,

"ಸ್ವಾಮಿ, ತಾವು ಹೇಳಿದ ಮಂತ್ರಗಳ ಮಹಾನಾಮ್ನಿ ಬ್ರಾಹ್ಮಣ ಖಂಡದ ಮಂತ್ರಭಾಗದ ಅರ್ಥವನ್ನು ಹೇಳಿ" ಎಂದನು.

"ಈ ಮಂತ್ರದಲ್ಲಿ ಮಹಾನಾಮ್ನೀ ಎಂಬ ಋಕ್ಕುಗಳಿಗೆ ಪ್ರಚೇತನ, ಪ್ರಚೇತಯ, ಆಯಾಹಿಪಿಬಮತ್ಸ್ವ, ಕ್ರತು ಛಂದ ಋತಂ ಬೃಹತ್, ಸುಮ್ನ ಆಧೇಹಿ ನೋ ವಸೋ—ಎಂಬ ಉಪಸರ್ಗಗಳು ಅಂದರೆ ಅವಯವಗಳು ಇವೆ. ಅವುಗಳ ಅರ್ಥ ಹೀಗಿದೆ"—ಎಂದು ಮಹಾನಾಮ್ನೀ ಋಕ್ಕುಗಳ ಅರ್ಥವನ್ನು ವಿವರಿಸಿ ಹೇಳಿದರು. ಈ ವಾದ ವಿವಾದವೇ ಮುಂದೆ ಕರ್ಮ ನಿರ್ಣಯವೆಂಬ ಗ್ರಂಥವಾಯಿತು.

ಈ ವಾದವಿವಾದದಲ್ಲಿ ಶ್ರೀಮದಾಚಾರ್ಯರನ್ನು ಗೆಲ್ಲಲಾಗದೆ ಆ ಅದ್ವೈತ ಶಾಸ್ತ್ರ ವಿದ್ವಾಂಸರು ಮುಖವನ್ನು ಜನರಿಗೆ ತೋರಿಸಲು ಇಷ್ಟಪಡದೆ, ತಲೆಗೆ ಮುಸುಕು ಹೊದ್ದು ಅರ್ಧರಾತ್ರಿಯಲ್ಲಿಯೇ ಅಲ್ಲಿಂದ ಓಡಿಹೋದರು.

ಅದನ್ನು ನೋಡಿದವರಿಗೆ ಆಕಾಶದಲ್ಲಿ ಹುಣ್ಣಿಮೆಯ ದಿನ ಪೂರ್ಣ ಚಂದ್ರೋದಯವಾದಾಗ ನಾಯಿಗಳು ಕೆಟ್ಟ ಧ್ವನಿಯಿಂದ ಊಳಿಟ್ಟು, ಕಡೆಗೆ ಬಾಲಗಳನ್ನು ಮುದುರಿಕೊಂಡು ಓಡಿ ಹೋದಂತೆ ಭಾಸವಾಯಿತು.

ಆಸ್ತಿಕ ಜನರು, ಚಂದ್ರನ ಆಹ್ಲಾದವೆಂಬ ಕಾಂತಿಯಿಂದ ಅರಳುತ್ತಿದ್ದ, ಶ್ರೀಮದಾಚಾರ್ಯರ ಪಾದಪದ್ಮದಿಲೆಗಳಿಗೆ ಭಕ್ತಿಯಿಂದ ಎರಗಿದರು.

ಶ್ರೀಮದಾಚಾರ್ಯರು ಸಂತೃಪ್ತರಾಗಿ ಅವರನ್ನು ಆಶೀರ್ವದಿಸಿ ಅನುಗ್ರಹಿಸಿ ಕಳುಹಿಸಿ ಕೊಟ್ಟರು. ಸ್ವರ್ಗದಲ್ಲಿ ದೇವತೆಗಳು ಅಪ್ಸರ ಸ್ತ್ರೀಯರು ಮತ್ತು ಗಂಧರ್ವರಿಂದ ಕೂಡಿ ಸಂತೋಷದಿಂದ ನರ್ತಿಸಿ ಗಾನಮಾಡಿದರು.1

# ಶ್ರೀಮಧ್ವಾಚಾರ್ಯರ ಬದರಿಕಾಶ್ರಮಗಮನ

ಶ್ರೀಮಧ್ವಾಚಾರ್ಯರಿಗೆ ಈಗ ಎಪ್ಪತ್ತೊಂಭತ್ತನೆಯ ವರ್ಷ ಕಾಲಿಟ್ಟಿತ್ತು. ಪಿಂಗಳನಾಮ ಸಂವತ್ಸರ (ಕ್ರಿ. ಶ. 1317) ಮಾಘ ಶುದ್ಧ ನವಮಿ ಆರಂಭವಾಗಿತ್ತು. ದಿಗ್ವಿಜಯ ಕ್ರಮದಿಂದ ಮಂಜೇಶ್ವರದ ಸಮೀಪದ ಪಶ್ಚಿಮ ಸಮುದ್ರ ತೀರದಲ್ಲಿರುವ ಕಣ್ವತೀರ್ಥ ಕ್ಷೇತ್ರಕ್ಕೆ ಬಂದರು. ಈ ಕಣ್ವತೀರ್ಥವು ಉಡುಪಿಗೆ ನಲವತ್ತಾರು ಮೈಲಿ ದೂರದಲ್ಲಿದೆ. ಇಲ್ಲಿ ಕಣ್ವಋಷಿಗಳು ತಪಸ್ಸು ಮಾಡಿ ಸಿದ್ಧಿಯನ್ನು ಪಡೆದರಂತೆ. ಅವರು ಶಕುಂತಲೆಯನ್ನು ಪಡೆದುದೂ ಇಲ್ಲಿಯೇ. ಅವಳನ್ನು ದುಷ್ಯಂತಮಹಾರಾಜನು ಗಾಂಧರ್ವ ರೀತಿಯಿಂದ ವಿವಾಹವಾಗಿ, ಭರತನನ್ನು ಮಗನನ್ನಾಗಿ ಪಡೆದನು. ಅವನಿಂದಾಗಿ ಈ ನಾಡಿಗೆ ಭಾರತವೆಂಬ ಹೆಸರು ಬಂತು ಎಂದು ಹೇಳುತ್ತಾರೆ.

ಈ ಕ್ಷೇತ್ರದಲ್ಲಿ ಕಣ್ವ ಋಷಿಗಳು ಶ್ರೀರಾಮನನ್ನು ಕುರಿತು ತಪಸ್ಸು ಮಾಡಿದ್ದರೆಂದೂ ಸ್ಥಳಪುರಾಣವಿದೆ. ಇದಲ್ಲದೆ ಕಣ್ವಮಹರ್ಷಿಗಳಿಂದಲೇ

---

ಇತ್ಥ್ಯಾಚೇ ಧರಣಿಸುರೇಣ ಕೇವಲಂ ನೋ
ಮಾಧ್ವೀಯಂ ವಿವಿಧಕಥಾ ಕಥಾಸು ಮಾನ್ಯಾ ।
ಸಾಕ್ಷಾದಪ್ಯಮರವರ್ಯೈರುದೀರ್ಯಮಾಣಾ
ಗಂಧರ್ವೈರ್ದ್ಯುಸದಸಿ ತನ್ಮುದೇ ಜಗೇಽಸೌ ॥
ಮ ॥ ವಿ ॥ ಸರ್ಗ–16 ಶ್ಲೋಕ–49

ಪ್ರತಿಷ್ಠಿತವಾದ ಗೋಪಾಲಕೃಷ್ಣನ ಸುಂದರ ಬಾಲಮೂರ್ತಿಯು ಪ್ರಸಿದ್ಧವಾಗಿದೆ. ಶ್ರೀಮದಾಚಾರ್ಯರು ಆಗಾಗ ಇಲ್ಲಿಗೆ ಬಂದು ಚಾತುರ್ಮಾಸ್ಯ ಕಳೆಯುತ್ತಿದ್ದರು. ಇಲ್ಲಿಗೆ ಬಂದಾಗಲೆಲ್ಲ ಅವರು ತಾಂತ್ರ್ಯವೆಂಬ ಮಠದಲ್ಲಿ ಇಳಿದುಕೊಳ್ಳುತ್ತಿದ್ದರು.

ಶ್ರೀಮಧ್ವಾಚಾರ್ಯರ ಪರಮ ಪ್ರಿಯ ಶಿಷ್ಯರಾಗಿದ್ದ ಲಿಕುಚವಂಶದ ತ್ರಿವಿಕ್ರಮ ಪಂಡಿತರು ಮತ್ತು ಶಂಕರ ಪಂಡಿತರು ಇಲ್ಲಿನ ಸಮೀಪದ ವಿಷ್ಣುಮಂಗಲ ಗ್ರಾಮಕ್ಕೆ ಸೇರಿದ್ದರು. ಈ ಎಲ್ಲ ಕಾರಣದಿಂದ ಶ್ರೀಮದಾಚಾರ್ಯರಿಗೆ ಈ ಕ್ಷೇತ್ರವು ಅತ್ಯಂತ ಪ್ರಿಯವಾಗಿತ್ತು.

ಇಲ್ಲಿಗೆ ಬಂದಾಗ ಒಮ್ಮೆ ಊರಿನ ಜನಕ್ಕೆ ಶ್ರೀಮದಾಚಾರ್ಯರು ಬ್ರಹ್ಮಸೂತ್ರಭಾಷ್ಯವನ್ನು ಸರಳ ಶೈಲಿಯಲ್ಲಿ ಉಪನ್ಯಾಸ ಮಾಡಿದ್ದರು. ಅಲ್ಲಿ ಅವರು ಚಾತುರ್ಮಾಸ್ಯಕ್ಕೆ ಒಮ್ಮೆ ತಂಗಿದ್ದಾಗ ಸೂರ್ಯಗ್ರಹಣವೊದಗಿತು. ಆಚಾರ್ಯರು ಈ ಸಮಯದಲ್ಲಿ ಭಕ್ತರು ಮತ್ತು ಶಿಷ್ಯರೊಡಗೂಡಿ ಸಮುದ್ರಸ್ನಾನ ಮಾಡಿದರು. ಅಲ್ಲದೆ ಇನ್ನೊಂದು ದೃಷ್ಟಿಯಿಂದಲೂ ಈ ಕಣ್ವತೀರ್ಥವು ಆಚಾರ್ಯರಿಗೆ ಪರಮ ಪ್ರಿಯವಾಗಿತ್ತು.

ಇಲ್ಲಿನ ಕೊಳದ ಬಳಿ ಒಂದು ವಿಶಾಲವಾದ ಅಶ್ವತ್ಥ ವೃಕ್ಷವಿದೆ. ಇದರ ಕಟ್ಟೆಯ ಮೇಲೆ ಕುಳಿತುಕೊಂಡೇ ಶ್ರೀಮದಾಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣನ ಪರ್ಯಾಯ ಪೂಜೆಯ ವ್ಯವಸ್ಥೆಗೆ ಒಂದು ನಿಶ್ಚಿತ ರೂಪ ಕೊಟ್ಟಿದ್ದರು.

ದ್ವಾರಕೆಯಿಂದ ಬಂದಿದ್ದ ಶ್ರೀಕೃಷ್ಣನಿಗೆ ಶ್ರೀಮದಾಚಾರ್ಯರು ಒಂದು ಮಂದಿರವನ್ನು ಬಲ್ಲಾಳರ ನೆರವಿನಿಂದ ನಿರ್ಮಿಸಿ, ನಿತ್ಯಪೂಜೆಗೆ ವ್ಯವಸ್ಥೆ ಮಾಡಿದ್ದರಷ್ಟೇ. ಅವರು ತಮ್ಮ ಬಳಿಗೆ ಬಂದು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ್ದ ಶಿಷ್ಯರಲ್ಲಿ ಎಂಟು ಮಂದಿಗೆ ಎರಡೆರಡು ತಿಂಗಳಿಗೆ ಇಬ್ಬಿಬ್ಬರಂತೆ ಕೃಷ್ಣನ ಪೂಜೆ ಮಾಡುವ ಪರ್ಯಾಯ ವ್ಯವಸ್ಥೆ ಮಾಡಿದರು.

ಈ ಇಬ್ಬರು ಸ್ವಾಮಿಗಳು ಯಾರು ಯಾರಿರಬೇಕು ? ಈ ದ್ವಂದ್ವ ಮಠಗಳು ಯಾವುವು ? ಈ ಸಮಸ್ಯೆ ಬರಲು ಶ್ರೀಮದಾಚಾರ್ಯರು ಎಂಟು ಮಂದಿ ಸಂನ್ಯಾಸಿಗಳಲ್ಲಿ ಇಬ್ಬಿಬ್ಬರು ಈ ಕಟ್ಟೆ ಇಳಿದು ಹೋಗಲು ಆಜ್ಞೆ

ಮಾಡಿದರಂತೆ. ಹೀಗೆ ಕಟ್ಟಿ ಇಳಿದ ಇಬ್ಬಿಬ್ಬರದು ದ್ವಂದ್ವ ಪೀಠಗಳೆಂದು ನಿರ್ಣಯಿಸಿದರಂತೆ.1

ಶ್ರೀಮದಾಚಾರ್ಯರಿಂದ ಎಂಟನೆಯವರಾದ ಪೇಜಾವರ ಮಠಕ್ಕೆ ಸೇರಿದ ಶ್ರೀವಿಜಯಧ್ವಜತೀರ್ಥರೆಂಬುವರು ಶ್ರೀಭಾಗವತಕ್ಕೆ ಪದರತ್ನಾವಲಿ ಎಂಬ ವ್ಯಾಖ್ಯಾನ ಮಾಡಿದ್ದು ಈ ಕಣ್ವತೀರ್ಥ ಗ್ರಾಮದಲ್ಲೇ. ಒಮ್ಮೆ ಬಿರುಗಾಳಿ ಯಿಂದ ಮರವು ಗದ್ದಲ ಮಾಡಲು ವಿಜಯಧ್ವಜರು ತಮ್ಮ ಬೆರಳನ್ನು ತೋರಿ ಸಲು ಗಿಡದ ಎಲೆಗಳು ಸ್ತಬ್ಧವಾದವಂತೆ. ಈಗಲೂ ಈ ಮರದ ಎಲೆಗಳು ಎಂಥ ಬಿರುಗಾಳಿಯಲ್ಲೂ ಶಬ್ದ ಮಾಡುವುದಿಲ್ಲವೆಂದು ಹೇಳುತ್ತಾರೆ.

ಇಂಥ ಪವಿತ್ರ ಪುಣ್ಯಕ್ಷೇತ್ರದಲ್ಲಿ ಶ್ರೀಮದಾಚಾರ್ಯರು ಕೆಲವು ದಿನ ಗಳನ್ನು ಕಳೆದು, ಅನಂತರ ಉಡುಪಿಯ ಶ್ರೀಅನಂತಾಸನಸ್ವಾಮಿಯ ಮಂದಿರ ದಲ್ಲಿದ್ದ ತಮ್ಮ ನಿವಾಸಕ್ಕೆ ಕೊನೆಯ ಸಾರಿ ಹಿಂದಿರುಗಿದರು.

ಶ್ರೀಅನಂತಾಸನಸ್ವಾಮಿಯ ಈ ಮಂದಿರದಲ್ಲಿ ಸುಮಾರು ಎಪ್ಪತ್ತು ವರ್ಷ ಗಳ ಹಿಂದೆ, ಅವರು ಇನ್ನೂ ಒಂಭತ್ತು ವರ್ಷದ ಬಾಲಕರಾಗಿದ್ದಾಗ ಶ್ರೀಅಚ್ಯುತಪ್ರೇಕ್ಷರೆಂಬ ಭಾಗವತಸಂಪ್ರದಾಯದ ಯತಿಶ್ರೇಷ್ಠರಿಂದ ಸಂನ್ಯಾಸಾ ಶ್ರಮವನ್ನು ಸ್ವೀಕರಿಸಿದ್ದರು.

ಅವರು ಪೂರ್ಣಪ್ರಜ್ಞರಾದ ಮೇಲೆ ನೂರಾರು ಶಿಷ್ಯರಿಗೆ ಸಂನ್ಯಾಸಾಶ್ರಮ ನೀಡಿದ್ದರು. ಸಾವಿರಾರು ಮಂದಿಗೆ ವಿದ್ಯಾದಾನ ಮಾಡಿದ್ದರು. ಪ್ರಾಯಃ ಅವರೆಲ್ಲರನ್ನು ಅದ್ವೈತಮತವನ್ನು ಖಂಡಿಸಿ ದ್ವೈತಮತ ಪ್ರಸಾರ ಮಾಡಲು ಕಳುಹಿಸಿದ್ದರು. ಅವರು ತಮ್ಮ ದೀರ್ಘ ಪ್ರವಾಸದಲ್ಲಿ ಅನೇಕ ಗೃಹಸ್ಥರಿಗೂ ವೈಷ್ಣವದೀಕ್ಷೆ ಅನುಗ್ರಹಿಸಿದ್ದರು. ಜ್ಞಾನಪೂರ್ವಕವಾದ ಭಕ್ತಿಯೇ ಪರಮಾತ್ಮನ

---

ವಶೀಕೃತಹೃಷೀಕಾಶ್ಚ ಜನನಾದ್ಯುಪಮರ್ದಿನಃ ।
ನರಸಿಂಹಪದಾಧಾರಾ ಅಭ್ಯಸ್ತೋಪೇಂದ್ರನಾಮಕಾಃ ॥

ಆದೀರ್ಘಾನ್ಯಾಭಿಧಾನಾ ಯೇ ಶ್ರೀಮದ್ರಾಮಪದಾಶ್ರಮಾಃ ।
ಅಪ್ರತ್ಯಕ್ಷಗುಣೋದ್ರಿಕ್ತಾ ಭಕ್ತಿವೈರಾಗ್ಯಸಾಗರಾಃ ॥

ಮ ॥ ವಿ ॥ ಸರ್ಗ-15 ಶ್ಲೋಕ-128-129

ಅನುಗ್ರಹರೂಪ ಮುಕ್ತಿಗೆ ದಾರಿ ಎಂದು ಉಪದೇಶಿಸಿ ಹರಿದಾಸ ದೀಕ್ಷೆಯನ್ನೂ ಕೊಟ್ಟಿದ್ದರು.

ಈ ಭಕ್ತಿಪಂಥಕ್ಕೆ ಅನ್ನ ಬ್ರಹ್ಮನಾದ ಶ್ರೀಕೃಷ್ಣನೇ ಆರಾಧ್ಯ ದೈವ. ಇವನನ್ನು ಬಿಟ್ಟರೆ ನಾದ ಬ್ರಹ್ಮನಾದ ಪಂಡರಪುರದ ವಿಠಲನೂ, ಕಾಂಚನ ಬ್ರಹ್ಮನಾದ ತಿರುಪತಿಯ ವೆಂಕಟೇಶ್ವರನೂ ಭಕ್ತರ ಪಾಲಿಗೆ ಇಷ್ಟಾರ್ಥಗಳನ್ನು ಈಡೇರಿಸುವ ಕಾಮಧೇನು ಕಲ್ಪವೃಕ್ಷಗಳು.

ಉಡುಪಿಯಲ್ಲಿ ಶ್ರೀಮಧ್ವಾಚಾರ್ಯರು ಶ್ರೀಅನಂತಾಸನಸ್ವಾಮಿಯ ಮಂದಿರದ ಬಲ ಬದಿಯ ಕಟ್ಟೆಯ ಮೇಲೆ ಪ್ರತಿ ದಿನ ಯಾವುದಾದರೊಂದು ಗ್ರಂಥದ ಮೇಲೆ ಪ್ರವಚನ ನಡೆಸುತ್ತಿದ್ದರು ; ಇಲ್ಲವೇ ಶಿಷ್ಯರಿಗೆ ಪಾಠ ಹೇಳಿ ಕೊಡುತ್ತಿದ್ದರು.

ಶ್ರೀಮದಾಚಾರ್ಯರನ್ನು ಸಂದರ್ಶಿಸಲು ಬಂದವರು ಅವರನ್ನು ಕೂಡಲೆ ಕಾಣಬಹುದಾಗಿದ್ದುದು ಈ ಸ್ಥಳದಲ್ಲಿಯೇ.

ಪಿಂಗಳನಾಮ ಸಂವತ್ಸರದ ಮಾಘ ಶುದ್ಧ ನವಮಿ ಹತ್ತಿರವಾಗ ತ್ತಿದ್ದಂತೆ ಶ್ರೀಮದಾಚಾರ್ಯರಿಗೆ ಈ ಲೋಕದಲ್ಲಿ ತಾವು ಮಾಡಬೇಕಾಗಿದ್ದ ಕಾರ್ಯ ಮುಗಿದಂತೆಯೂ, ವೇದವ್ಯಾಸದೇವರಿಂದ ಮೇಲಿಂದ ಮೇಲೆ ಬದರಿಗೆ ಬರುವಂತೆಯೂ ಅಂತಃಪ್ರೇರಣೆಯಾಗುತ್ತಿತ್ತು.

ತಮ್ಮ ಅವತಾರದ ಕಾರ್ಯವು ಮುಗಿಯಿತೆಂದೂ ತಾವು ಇನ್ನು ಮುಂದೆ ವಿಶಾಲಬದರಿಗೆ ಹೋಗಿ ಅಲ್ಲಿ ತಮ್ಮ ಗುರುಗಳ ಬಳಿ ಶಾಸ್ತ್ರಾಧ್ಯಯನ ಮಾಡಿ ಕೊಂಡು ಇರಬೇಕೆಂದು ಶ್ರೀಮದಾಚಾರ್ಯರು ಯೋಚಿಸುತ್ತಿದ್ದರು.

ಶ್ರೀಆಚಾರ್ಯರು ತಮ್ಮ ಅಂತರಂಗದ ಶಿಷ್ಯರಿಗೆ ಈ ಮಾತನ್ನು ಅವಕಾಶ ದೊರೆತಾಗಲೆಲ್ಲಾ ಸೂಚಿಸುತ್ತಾ ಬಂದಿದ್ದರು.

ಸುಮಾರು ಅರ್ಧ ಶತಮಾನಕ್ಕೂ ಮೀರಿ ದೀರ್ಘಕಾಲ ಜೊತೆಯಲ್ಲಿದ್ದು, ಗುರುವಾಗಿ, ಬಂಧುವಾಗಿ, ಇಷ್ಟದೈವವಾಗಿ ತಮ್ಮನ್ನು ರಕ್ಷಿಸಿದ್ದ ಈ ದಿವ್ಯ ಮೂರ್ತಿಯು ತಮ್ಮನ್ನು ಆಗಲುತ್ತಾರೆಂಬುದನ್ನು ಶಿಷ್ಯರು ಯೋಚಿಸಿರಲೇ ಇಲ್ಲ.

ಅವರು ಗುರುಗಳ ಈ ಮಾತನ್ನು ಅಷ್ಟಾಗಿ ವಿಶೇಷ ಗಮನಕ್ಕೆ ತೆಗೆದು ಕೊಂಡಿರಲಿಲ್ಲ.

ಇದ್ದಕ್ಕಿದ್ದಂತೆ ಆ ದಿನ ಶ್ರೀಮದಾಚಾರ್ಯರಿಗೆ ಕಡೆಯ ಬಾರಿಗೆ ಐತರೇಯಾ ಉಪನಿಷದ್ಭಾಷ್ಯವನ್ನು ಪ್ರವಚನ ಮಾಡಬೇಕೆಂದು ಇಂದ್ರಾದಿ ದೇವತೆಗಳು ಬಂದು ಪ್ರಾರ್ಥಿಸಿದಂತೆ ಬೋಧೆಯಾಯಿತು.

ಶ್ರೀಮದಾಚಾರ್ಯರು ಐತರೇಯಉಪನಿಷದ್ಭಾಷ್ಯವನ್ನು ಪ್ರವಚನ ಮಾಡಲು ನಿಶ್ಚಯಿಸಿದರು.

ಈ ಉಪನಿಷತ್ತಿನಲ್ಲಿ ಶ್ರೀವಿಷ್ಣುವಿನ ಸರ್ವೋತ್ತಮತ್ವವೂ ಮತ್ತು ಮಹಿಮೆಯೂ ಹೇಳಲ್ಪಟ್ಟಿದೆ. ಇದನ್ನು ಶ್ರೀಮದಾಚಾರ್ಯರ ಬಾಯಲ್ಲಿ ಕೇಳಿ ಪುನೀತರಾಗಲು ದೂರದ ಊರುಗಳಿಂದಲೂ ಭಕ್ತ ಜನರು ಬಂದು ಸಮುದ್ರದಂತೆ ನೆರೆಯ ತೊಡಗಿದರು.

ಆಚಾರ್ಯರು ಅನನುಕರಣೀಯವಾದ, ಸರಳವಾದ ಶೈಲಿಯಲ್ಲಿ ಈ ಉಪನಿಷತ್ತಿನ ಸಾರವನ್ನು ನೀಡುತ್ತಾ ಹೊರಟರು. ವಿವರಿಸಲು ಪ್ರಾರಂಭಿಸಿದರು.

ಗ್ರಂಥ ಸಮಾಪನೆಯಲ್ಲಿ ಅವರು ಗಂಭೀರವಾದ ವಾಣಿಯಿಂದ ಹೇಳಿದರು—

ಪೂರ್ಣಾಗಣ್ಯಗುಣೋದಾರಧಾಮ್ನೇ ನಿತ್ಯಾಯ ವೇಧಸೇ ।
ಅಮಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ ॥

ಶ್ರೀಮನ್ಮಹಾವಿಷ್ಣುವಿಗೆ ಜ್ಞಾನಾನಂದಾದಿ ಅಪರಿಮಿತ ಗುಣ ಪರಿಪೂರ್ಣತ್ವವು ಇದೆ. ಇದನ್ನು ತಿಳಿಸಿಕೊಡುವುದಕ್ಕಾಗಿಯೂ, ಅವನು ಸರ್ವಜಗತ್ಕರ್ತನೆಂಬುದನ್ನು ಸಮರ್ಥಿಸುವುದಕ್ಕಾಗಿಯೂ ಸರ್ವಜ್ಞತ್ವವನ್ನು ಹೇಳಿದೆ. ನಿಶ್ಚಿತಜ್ಞಾನವು ಆನಂದದ ಅಭಿವೃದ್ಧಿಗೆ ಕಾರಣವಾದುದರಿಂದ ಇಲ್ಲಿ ಅದನ್ನು ಕುರಿತು ಒತ್ತಿ ಹೇಳಿದೆ.

ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ ।
ನಾಶಶ್ಚತುರ್ವಿದೋ ಜ್ಞೇಯಸ್ತದಭಾವೋ ಹರೇಸ್ಸದಾ ॥

ನಶ್ವರತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ—ಹೀಗೆ ಚತುರ್ವಿಧ ನಾಶದಿಂದ ಬಿಡುಗಡೆ ಹೊಂದಲು ಶ್ರೀಹರಿಯನ್ನೆ ಆಶ್ರಯಿಸಿ ಶಮದ ಮಾದಿಗಳಿಂದ ಭಕ್ತಿಪೂರ್ವಕವಾಗಿ ಅವನನ್ನು ಸೇವಿಸಿ ಶಾಶ್ವತವಾದ ಮುಕ್ತಿ ಯನ್ನು ಪಡೆಯಿರಿ ಎಂದು ಹೇಳುತ್ತಿದ್ದಂತೆ, ಆಚಾರ್ಯರ ದಿವ್ಯ ವಾಣಿಯನ್ನು ಕೇಳಿ ಅಲ್ಲಿದ್ದವರೆಲ್ಲ ಆನಂದಭಾಷ್ಪ ಸುರಿಸಿದರು.

ಈ ಐತರೇಯ ಉಪನಿಷತ್ತಿನ ಭಾಷ್ಯವನ್ನು ಕೇಳಲು ಬಂದಿದ್ದ ಇಂದ್ರಾದಿ ದೇವತೆಗಳು ಶ್ರೀಮದಾಚಾರ್ಯರ ಪರಮ ಮಂಗಳ ವಾಣಿಯನ್ನು ಕೇಳಿ ಪುಳಕಿತ ರಾಗಿ ಪುಷ್ಪವೃಷ್ಟಿ ಕರೆದರು.

ನೋಡ ನೋಡುತ್ತಿದ್ದಂತೆ ಈ ಪುಷ್ಪವೃಷ್ಟಿಯು ಆಕಾಲದಲ್ಲಿ ಬೀಳುವ ಮಳೆಯಂತೆ ದಟ್ಟವಾಯಿತು. ಅದರಿಂದ ಹೊರಟ ಸುಗಂಧವು ಆಚಾರ್ಯರ ಕೀರ್ತಿಯಂತೆ ದಿಕ್ಕು ದಿಕ್ಕುಗಳನ್ನೂ ವ್ಯಾಪಿಸಿತು.

ಆಚಾರ್ಯರು, ಪ್ರವಚನ ಮುಗಿದರೂ ಕಣ್ಮುಚ್ಚಿ ಪದ್ಮಾಸನ ಹಾಕಿ ಕೊಂಡು ಯೋಗಮುದ್ರೆಯಲ್ಲಿ ಶ್ರೀಮನ್ನಾರಾಯಣಧ್ಯಾನಪರರಾಗಿ ಕುಳಿತೇ ಇದ್ದರು.

ಇಂದ್ರಾದಿ ದೇವತೆಗಳು ಇನ್ನೂ ಅವರ ಮೇಲೆ ಪುಷ್ಪವೃಷ್ಟಿಯನ್ನು ಸುರಿಸುತ್ತಲೇ ಇದ್ದರು ; ದೇವದುಂದುಭಿಗಳು ಮೊಳಗುತ್ತಲೇ ಇದ್ದವು.

ಭಕ್ತಜನರು ಉಘೇ ಎಂದು ಹಾಡಿ ಹೊಗಳುತ್ತಲೇ ಇದ್ದರು.

ಈ ದಿವ್ಯ ಹೂಮಳೆ ನಿಂತ ಮೇಲೆ ಭಕ್ತಜನರಿಗೆ ಆಚಾರ್ಯರು ಕಾಣಿಸಲೇ ಇಲ್ಲ. ಅವರು ಪ್ರವಚನ ಮಾಡುತ್ತಿದ್ದ ಸ್ಥಳಕ್ಕೂ ಬಂದು ನೋಡಿದರು. ಅಲ್ಲಿನ ಹೂವಿನ ರಾಶಿಯಲ್ಲಿ ಶ್ರೀಮದಾಚಾರ್ಯರ ಪ್ರಾಕೃತದೇಹವು ಕಣ್ಮರೆ ಯಾಗಿತ್ತು !

ಶಿಷ್ಯರಿಗೆ ಆಗ ತಿಳಿಯಿತು :

ಶ್ರೀಮಧ್ವಾಚಾರ್ಯರು ತಮ್ಮ ಬಾಳಿನ ಇಹಲೀಲೆಯನ್ನು ಪರಿಸಮಾಪ್ತಿ ಗೊಳಿಸಿ, ಶ್ರೀವೇದವ್ಯಾಸದೇವರ ಬಳಿಗೆ ಹೋಗಿದ್ದಾರೆ ಎಂಬ ವಿಷಯ.

ಕುಳಿತಿದ್ದ ಭಕ್ತವೃಂದಕ್ಕೆ ಅವತಾರಪುರುಷನೊಬ್ಬನ ಬದುಕಿನ ಲೀಲೆ ಸಮಾಪ್ತಿಯಾಯಿತೆಂದು ಆಗ ತಿಳಿಯಿತು.

ಹನುಮದ್ಭೀಮಮಧ್ವಾವತಾರಿಯಾಗಿದ್ದ ಶ್ರೀಮುಖ್ಯಪ್ರಾಣನು ಲೋಕ ಲೀಲೆಯನ್ನು ಮುಗಿಸಿ, ಭಗವಂತನು ತನಗೆ ಆಜ್ಞಾಪಿಸಿದ್ದ ಪವಿತ್ರಕಾರ್ಯವನ್ನು ಪೂರ್ತಿಗೊಳಿಸಿ ಸ್ವಸ್ಥಾನವನ್ನು ಸೇರಿದನೆಂದು ಅಲ್ಲಿದ್ದ ಜನರು ತಿಳಿದರು.

ಅವರು ಶ್ರೀಮದಾಚಾರ್ಯರ ಉಪಕಾರವನ್ನು ನೆನೆನೆನೆದು ಕೃತಜ್ಞತೆ ಯಿಂದ ಕಂಬನಿ ಮಿಡಿದರು; ಆನಂದೋದ್ರೇಕದಿಂದ ಕುಣಿದಾಡಿದರು.

ಇಂದಿಗೂ ಉಡುಪಿಯ ಶ್ರೀಅನಂತಾಸನಸ್ವಾಮಿ (ಅನಂತೇಶ್ವರ) ಯ ದೇವಾಲಯಕ್ಕೆ ಹೋದವರು ಶ್ರೀಮಧ್ವಾಚಾರ್ಯರು ಅದೃಶ್ಯರಾದ ಸ್ಥಳವನ್ನು ನೋಡಬಹುದು.

ಈ ಸ್ಥಳದಲ್ಲಿ ವಿಷ್ಣುತೀರ್ಥರ ಮಠದ ಶ್ರೀವಾದಿರಾಜರು ಸಣ್ಣ ಗುಡಿ ಯೊಂದನ್ನು ಕಟ್ಟಿಸಿ ಅಲ್ಲಿ ಆಚಾರ್ಯರು ಪ್ರವಚನಕ್ಕೆ ಕುಳಿತುಕೊಳ್ಳುತ್ತಿದ್ದ ಸ್ಥಳಕ್ಕೆ ವಿಶೇಷ ಸಂದರ್ಭಗಳಲ್ಲಿ ಪೂಜೆಯ ವ್ಯವಸ್ಥೆ ಮಾಡಿದರು. ಗುಡಿಯ ದ್ವಾರದ ಮೇಲ್ಭಾಗದಲ್ಲಿ ಅವರೇ ಮಾಡಿಸಿಟ್ಟ ಶ್ರೀಮಧ್ವಾಚಾರ್ಯರ ಒಂದು ಸುಂದರ ಶಿಲಾಪ್ರತೀಕವಿದೆ. ಇದನ್ನು ಗುಡಿಯಲ್ಲಿ ಸ್ಥಾಪಿಸ ಬೇಕೆಂದಿದ್ದರಂತೆ. ವಾದಿರಾಜರಿಗೆ ಸ್ವಪ್ನದಲ್ಲಿ, ತಾವೇ ಅಲ್ಲಿ ಸ್ವಯಂ ಸನ್ನಿಹಿತರಾಗಿ ಇರುವುದ ರಿಂದ ಶಿಲಾಮೂರ್ತಿಯ ಪ್ರತಿಷ್ಠಾಪನೆಯ ಅಗತ್ಯವಿಲ್ಲವೆಂದು ಆಚಾರ್ಯರು ಅಪ್ಪಣೆ ಕೊಡಿಸಿದರಂತೆ. ಈಗ ಅದನ್ನು ದ್ವಾರದ ಮೇಲ್ಭಾಗದಲ್ಲಿ ಗೋಡೆ ಯಲ್ಲಿ ಪ್ರತಿಷ್ಠಿಸಿದ್ದಾರೆ.

ವ್ಯಾಖ್ಯಾನ ಮುದ್ರೆಯಲ್ಲಿರುವ ಶ್ರೀಮದಾಚಾರ್ಯರ ಈ ಮೂರ್ತಿ ಅತ್ಯಂತ ಸುಂದರವಾಗಿದೆ. ಇಂದಿಗೂ ಉಡುಪಿಗೆ ಹೋದವರು ಶ್ರೀಕೃಷ್ಣನ ದರ್ಶನಕ್ಕೆ ಹೋಗುವಂತೆ, ಶ್ರೀಮದಾಚಾರ್ಯರು ಅದೃಶ್ಯರಾದ ಸ್ಥಳದ ದರ್ಶ ನಕ್ಕೂ ಹೋಗಿ ಕೈ ಮುಗಿದು ಬರುತ್ತಾರೆ.

ಶ್ರೀಮದಾಚಾರ್ಯರ ಪ್ರತೀಕದ ಮುಂದೆ ನಿಂತರೆ, ಆಚಾರ್ಯರು ಸಾರಿದ ವಿಷ್ಣು ಭಕ್ತಿಯ ಆವೇಶ ಭಾವುಕರ ಮೈ ತುಂಬುತ್ತದೆ.

ನಾಕೀಂದ್ರಾಪ್ತಮವನಿಭಾಗಮಾವಸಂತಂ
ಸುಶ್ಲೋಕೈರಪಿ ಭುವನಾನಿ ಭೂಷಯಂತಂ ।
ನೇಮುಃ ಖಾದುಪನಿಷದಂ ತದೈತರೇಯಂ
ವ್ಯಾಖ್ಯಾಂತಂ ವಿವಿಧವಿಶಿಷ್ಟಶಿಷ್ಯಮಧ್ಯೇ ॥
ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್
ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ॥
ಇತಿ ನಿಗದಿತವಂತಸ್ತತ್ರ ವೃಂದಾರಕೇಂದ್ರಾ
ಗುರುವಿಜಯಮಹಂ ತಂ ಲಾಲಯಂತೋ ಮಹಾಂತಮ್ ।
ವವೃಷುರಖಿಲದೃಶ್ಯಂ ಪುಷ್ಪವಾರಂ ಸುಗಂಧಂ
ಹರಿದಯಿತಪರಿಷ್ಠೇ ಶ್ರೀಮದಾನಂದತೀರ್ಥೇ ॥
(ಮ॥ ವಿ॥ ಸರ್ಗ-16 ಶ್ಲೋಕ 54-57-58)

ಐತರೇಯ ಉಪನಿಷತ್ತಿನ ಸಂದೇಶವು ಅಂತಃಕರಣದಲ್ಲಿ ಹೊಳೆಯಾಗಿ ಹರಿಯುತ್ತದೆ; ಅವರು ಭಕ್ತಿರಸದ ಗಂಗಾಜಲದಲ್ಲಿ ತೇಲಿ, ಆನಂದದ ರಸದಲ್ಲಿ ಮುಳುಗುತ್ತಾರೆ.

ಯೋ ವಿಪ್ರಲಂಭವಿಪರೀತಮತಿಪ್ರಭೂತ-
ವಾದಾನ್ನಿರಸ್ಯ ಕೃತವಾನ್ ಭುವಿ ತತ್ತ್ವವಾದಂ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತ-
ಮಾನಂದತೀರ್ಥಮುನಿವರ್ಯಮಹಂ ನಮಾಮಿ ॥

॥ ಶ್ರೀಕೃಷ್ಣಾರ್ಪಣಮಸ್ತು ॥